# ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ

(ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ

ಮಾರ್ಗದರ್ಶಕರು
ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬
೨೦೧೩

# ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ

(ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ



ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೩

## ಪ್ರಮಾಣ ಪತ್ರ

ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕಿ
ಶಾಂತಾ ಎನ್. ಎಲ್.
ಶಾಂತವ್ವ ನಾಗಪ್ಪ ಲಕ್ಕ್ಮೇಶ್ವರ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ:

## ದೃಢೀಕರಣ ಪತ್ರ

ಶ್ರೀಮತಿ ಶಾಂತವ್ವ ನಾಗಪ್ಪ ಲಕ್ಷ್ಮೇಶ್ವರ ಅವರು ಯಮನೂರು ಗ್ರಾಮ: ಸಾಂಸ್ಕೃತಿಕ ಸಂಕಥನ ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಪ್ರೌಢಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ:

## ಕೃತಜ್ಞತೆಗಳು

ಒಂದು ಕಾಲಕ್ಕೆ ಜನಪದ ಗೀತೆಗಳ ಕಾಲಕ್ಕಷ್ಟೇ ಸೀಮಿತವಾಗಿದ್ದ ಕರ್ನಾಟಕ ಜಾನಪದ ಕ್ಷೇತ್ರ ಕಾಲಕಳೆದಂತೆ ಅದರ ಅಧ್ಯಯನ ಇತರ ಅಂಶಗಳ ಕಡೆಗೂ ಗಮನಹರಿಸಿತು. ಸಂಸ್ಕೃತಿಗೆ ಸಂಬಂಧಿಸಿದ ಅಧ್ಯಯನಗಳು ಇಂದು ವಿಶೇಷವಾಗಿ ಕಂಡುಬರುತ್ತವೆ. ಹೀಗೆ ಅಧ್ಯಯನ ಮಾಡುವಾಗ ನಗರ ಜಾನಪದದ ವಿಶೇಷ ಅರಿವುಳ್ಳ ಇಂದಿನ ದಿನಗಳಲ್ಲೂ, ಗ್ರಾಮೀಣ ಜಾನಪದ ತನ್ನ ಆಕರ್ಷಣೆಯನ್ನು ಕಳೆದುಕೊಂಡಿಲ್ಲ. ಅಂತಹ ಗ್ರಾಮೀಣ ಪ್ರದೇಶವಾದ ಯಮನೂರು ಗ್ರಾಮದ ಸಾಂಸ್ಕೃತಿಕ ಸಂಶೋಧನೆ ಮಾಡಿದ ಮಹಾಪ್ರಬಂಧ ಇದಾಗಿದೆ.

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಮತ್ತು ನನ್ನ ವಿದ್ಯಾಗುರುಗಳಾದ ಡಾ.ಎ.ಮುರಿಗೆಪ್ಪ ಹಾಗೂ ಡಾ.ಹಿ.ಚಿ.ಬೋರಲಿಂಗಯ್ಯ ಅವರಿಗೆ, ಮಾನ್ಯ ಕುಲಸಚಿವರುಗಳಾದ ಶ್ರೀ ಎಸ್.ಎಸ್.ಪೂಜಾರ್, ಡಾ.ಮಂಜುನಾಥ ಬೇವಿನಕಟ್ಟಿ ಹಾಗೂ ಡಾ.ಟಿ.ಪಿ.ವಿಜಯ್ ಅವರುಗಳಿಗೆ ತುಂಬು ಹೃದಯದ ಕೃತಜ್ಞತೆಗಳು. ಆಡಳಿತ ವರ್ಗದ ಇತರ ಎಲ್ಲ ಹಿರಿಯರಿಗೆ, ಅಧ್ಯಯನಾಂಗದ ನಿರ್ದೇಶಕರುಗಳಾದ ಡಾ.ವೀರೇಶ ಬಡಿಗೇರ ಹಾಗೂ ಡಾ.ಎಫ್.ಟಿ.ಹಳ್ಳಿಕೇರಿ ಹಾಗೂ ಡಾ.ಅಶೋಕಕುಮಾರ ರಂಜೇರೆ ಅವರುಗಳಿಗೆ, ಮುಖ್ಯಸ್ಥರಾದ ಡಾ.ಮೊಗಳ್ಳಿ ಗಣೇಶ್ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನ ಕ್ರಮವನ್ನು ಬೋಧಿಸಿ ಅಧ್ಯಯನಕ್ಕೆ ಪೂರಕವಾದ ವಿಚಾರಗಳನ್ನು ಚರ್ಚಿಸುತ್ತಾ ಹತ್ತು ಹಲವಾರು ಆಲೋಚನಾ ಕ್ರಮಗಳನ್ನು ತಿಳಿಸಿ ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಮಹಾಪ್ರಬಂಧ ರಚಿಸಲು ಪ್ರೀತಿಯಿಂದ, ಅತ್ಯಂತ ಸಹನೆಯಿಂದ ಮಾರ್ಗದರ್ಶನ ಮಾಡಿದ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೆ ಹೃದಯಪೂರ್ವಕ ಕೃತಜ್ಞತೆಗಳು ಹಾಗೂ ಅವರಿಗೆ ನಾನು ಯಾವಾಗಲೂ ಚಿರಋಣಿ.

ಅಧ್ಯಯನಕ್ಕೆ ಪೂರಕವಾದ ವಿಷಯವನ್ನು ಚರ್ಚೆಯ ಮೂಲಕ ವಿಭಿನ್ನ ರೀತಿಯ ನಿಲುವುಗಳನ್ನು ತಿಳಿಸಿದ ವಿಭಾಗದ ವಿದ್ವಾಂಸರುಗಳಾದ ಡಾ.ಸ.ಚಿ.ರಮೇಶ, ಡಾ.ಹೆಬ್ಬಾಲೆ ಕೆ.ನಾಗೇಶ್, ಡಾ.ಸಿ.ಟಿ. ಗುರುಪ್ರಸಾದ್ ಅವರಿಗೂ ನನ್ನ ನೆನೆಕೆಗಳು.

ಜೀವನದ ಯಶಸ್ಸಿನ ಹಾದಿಗೆ ಹಗಲಿರುಳು ಶ್ರಮಿಸಿದ ಹಾಗೂ ಸದಾ ಆಶೀರ್ವಾದ ಸಹಕಾರ ನೀಡಿ ನನ್ನ ಅಧ್ಯಯನಕ್ಕೆ ಸಂಪೂರ್ಣ ಪ್ರೋತ್ಸಾಹವನ್ನು ನೀಡಿದ ಪೂಜ್ಯ ತಂದೆ ತಾಯಿಯವರಾದ ದಿ.ನಾಗಪ್ಪ ಹಾಗೂ ರಾಚಮ್ಮ ಲಕ್ಮೇಶ್ವರ ಇವರಿಗೆ ನನ್ನ ಅನಂತ ನಮನಗಳು.

ಮಹಾಪ್ರಬಂಧದ ಹಲವು ತಾತ್ವಿಕ ವಿಚಾರಗಳನ್ನು ಕಲ್ಪಿಸಿಕೊಟ್ಟ ಡಾ.ಕೆ.ಆರ್.ದುರ್ಗಾದಾಸ್ ಹಾಗೂ ಡಾ.ಎಸ್.ಎಂ.ವೃಷಬೇಂದ್ರಸ್ವಾಮಿ, ಶ್ರೀ ರಮೇಶ ನಾಯಕ ಹಾಗೂ ನನ್ನ ಮಹಾಪ್ರಬಂಧ ರಚನೆಯ

ಸಂದರ್ಭದಲ್ಲಿ ನನಗುಂಟಾದ ಸಮಸ್ಯೆ ಪರಿಹರಿಸಿ ಆಗಾಗ ನಾನು ಕೇಳಿದ ಪ್ರಶ್ನೆಗೆ ಸಹಕರಿಸಿ ಉತ್ತರ ನೀಡಿದ ಖ್ಯಾತ ಸಂಶೋಧಕ ನಿವೃತ್ತ ಕುಲಪತಿಗಳಾದ ನನ್ನ ವಿದ್ಯಾಗುರುಗಳಾದ ಡಾ.ಎಂ.ಎಂ.ಕಲಬುರ್ಗಿ ಇವರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ನಾನು ಪಿಎಚ್.ಡಿ. ಮಾಡಲು ಪ್ರೇರಕರಾದ ಸ್ಫೂರ್ತಿದಾಯಕರಾದ ಶಿಕ್ಷಣ ಪ್ರೇಮಿಗಳಾದ, ಸದಾ ನನ್ನನ್ನು ಅಧ್ಯಯನದಲ್ಲಿ ತೊಡಗಿಕೊಳ್ಳುವಂತೆ ಮಾಡಿದ ಉತ್ಸಾಹದ ಚಿಲುಮೆಯಂತಿರುವ ನನ್ನ ವಿದ್ಯಾಗುರುಗಳು, ಶ್ರೀ ಅಮೃತೇಶ್ವರ ಶಿಕ್ಷಣ ಸಂಸ್ಥೆ, ಅಣ್ಣಿಗೇರಿ ಆಡಳಿತಾಧಿಕಾರಿಗಳಾದ ಶ್ರೀ ಆರ್.ಎ.ದೇಸಾಯಿಯವರ ಅನಂತ ಪ್ರೀತಿಗೆ ನಾನು ಚಿರಋಣಿ.

ಸದಾ ನನ್ನ ಶ್ರೇಯಸ್ಸನ್ನೇ ಬಯಸುತ್ತ ನನ್ನ ಅಧ್ಯಯನಕ್ಕೆ ಪ್ರೋತ್ಸಾಹಿಸುತ್ತಾ ಸಂಪೂರ್ಣವಾದ ಸಹಾಯ ಸಹಕಾರ ನೀಡಿದ ನನ್ನ ಪ್ರೀತಿಯ ಪತಿ ಶ್ರೀ ಪಾಂಡುರಂಗ ಅವರಿಗೂ ನನ್ನ ಮುದ್ದು ಮಕ್ಕಳಾದ ಕುಮಾರಿ ವರ್ಷ, ಮಗ ಹರ್ಷ ಇವರನ್ನು ನಾನು ಪ್ರೀತಿಯಿಂದ ಇಲ್ಲಿ ಸ್ಮರಿಸುವೆ.

ನನ್ನ ಶಿಕ್ಷಣ ಸಂಸ್ಥೆಯ ಮಾನ್ಯ ಪ್ರಾಚಾರ್ಯರು ನನ್ನ ವಿದ್ಯಾಗುರುಗಳಾದ ಶ್ರೀ ಎನ್.ಜಿ.ಗದ್ದಿಗೌಡರ ಹಾಗೂ ನನ್ನ ಅಧ್ಯಯನಕ್ಕೆ ಸಹಕರಿಸಿದ ಉಪಪ್ರಾಚಾರ್ಯರಾದ ಶ್ರೀಮತಿ ಎಸ್.ಬಿ. ಅಗಸಿಮನಿಯವರಿಗೂ ಹಾಗೂ ನನ್ನ ಎಲ್ಲ ಸಹೋದ್ಯೋಗಿಗಳನ್ನು ಇಲ್ಲಿ ಸ್ಮರಿಸದೇ ಇರಲಾರೆ. ನನ್ನ ಸಹೋದ್ಯೋಗಿಗಳಾದ ಶ್ರೀ ಎನ್.ಎಸ್.ಮೇಲ್ಮರಿ ಹಾಗೂ ಜಿ.ವಾಯ್.ಕೊರವರ ಅವರಿಗೂ ನನ್ನ ಕೃತಜ್ಞತೆಗಳು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಯಮನೂರಿನ ಜನತೆ ನನ್ನೊಂದಿಗೆ ಸದಾ ಸ್ನೇಹಹಸ್ತ ಚಾಚಿ, ಸಹಕರಿಸಿ, ನಾನು ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ, ನನಗೆ ಬೇಕಾದ ಮಾಹಿತಿಯನ್ನು ಕೊಡುತ್ತಾ ಇಂತಹದೊಂದು ಪ್ರಬಂಧ ರೂಪುಗೊಳ್ಳಲು ನೆರವಾಗಿದ್ದಾರೆ. ಇವರಿಗೂ ನನ್ನ ಆತ್ಮೀಯ ನಮನಗಳು.

ನನ್ನ ಅಧ್ಯಯನಕ್ಕೆ ಬೇಕಾದ ಪೂರಕ ಮಾಹಿತಿಯನ್ನು ಒದಗಿಸಿದ ಸಹೋದರರಾದ ಡಾ.ಸುರೇಶದೊಡ್ಡಮನಿ ಹಾಗೂ ಶ್ರೀ ಬಿ.ಎಲ್.ಕುಂಬಾರ ಮತ್ತು ಅಮೃತ ನರಗುಂದ, ನಾನು ಪ್ರಬಂಧ ಬರೆಯುವಾಗ ಸಣ್ಣಪುಟ್ಟ ಸಹಾಯ ಮಾಡಿದ ನನ್ನ ಅಕ್ಕನ ಮಗಳಾದ ಪ್ರಭಾವತಿ ಹಾಗೂ ನನ್ನ ಅಧ್ಯಯನಕ್ಕೆ ಪ್ರೋತ್ಸಾಹಿಸಿದ ಅತ್ತೆ ಮಾವಂದಿರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಸದಾ ಒದಗಿಸುತ್ತಾ ಬಂದಿರುವ ನಮ್ಮ ಕಾಲೇಜಿನ ಗ್ರಂಥಪಾಲಕರು, ನನ್ನ ವಿದ್ಯಾರ್ಥಿಯೂ ಆದ ಶ್ರೀ ವ್ಹಿ.ಕೆ.ಹೂಗಾರ ಇವರಿಗೂ ವಿಶೇಷವಾದ ಧನ್ಯವಾದಗಳು. ವಿಭಾಗದ ಶ್ರೀ ಅಜಿತ್ ಹಾಗೂ ಶ್ರೀ ಎಂ.ಬಿ.ಬಂಗಾರಪ್ಪ ಅವರುಗಳಿಗೆ ಹಾಗೂ ಮಹಾಪ್ರಬಂಧವನ್ನು ಗಣಕಯಂತ್ರದಲ್ಲಿ ಸಂಯೋಜಿಸಿಕೊಟ್ಟ ಕೆ.ವೀರೇಶ ಅವರಿಗೆ ನನ್ನ ಕೃತಜ್ಞತೆಗಳು.

ಶಾಂತವ್ವ ನಾಗಪ್ಪ ಲಕ್ಮೇಶ್ವರ

## ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

### ೧. ಪೀಠಿಕೆ

ಸಂಸ್ಕೃತಿ ಎಂಬ ಶಬ್ದ ಇತ್ತೀಚೆಗೆ ಬಹುಮುಖವಾದ ಅರ್ಥವನ್ನು ಪಡೆದು ಬೆಳೆಯುತ್ತಾ ಬಂದಿದೆ. ಮಾನವ ಸಮುದಾಯಧ ಸಂಪ್ರದಾಯಗಳಿಂದ ಹಿಡಿದು, ವೈಯಕ್ತಿಕವಾದ ಆಚರಣೆಗಳವರೆಗೂ ಅದರ ವ್ಯಾಪ್ತಿ ವಿಸ್ತಾರವಾಗಿದೆ. ಸಂಸ್ಕೃತಿ ಅರ್ಥ ಬಹುವ್ಯಾಪಕವಾಗಿ ಬೆಳೆಯುತ್ತಾ ಹೋಯಿತು. ಹೊಸ ಹೊಸ ಅರ್ಥಗಳನ್ನು ಒಳಗೊಂಡಿದೆ. ಸಮಷ್ಟಿ ಜೀವನದ ಅಂತರಂಗದ ಸಾಧನೆಗೆ, ಸಹಕಾರಿಯಾದ ಸಾಮಗ್ರಿಗಳು ಎಂಬ ಅರ್ಥದಿಂದ ಹಿಡಿದು ವ್ಯಷ್ಟಿ ಜೀವನದ ವಿಕಾಸಕ್ಕೆ ಕಾರಣವಾದ ಸಾಮರಸ್ಯದ ಸಂಸ್ಕಾರ ಎಂಬ ಅರ್ಥವನ್ನು ಪಡೆದುಕೊಂಡಿದೆ.

ಸಂಸ್ಕೃತಿ ಅರ್ಥ ಹೀಗಿದ್ದರೂ ಅದು ನಿಶ್ಚಿತವಾದುದಲ್ಲ. ಕಾಲದಿಂದ ಕಾಲಕ್ಕೆ ಬದಲಾದ ಸಂದರ್ಭ ಸನ್ನಿವೇಶಗಳಲ್ಲಿ ಸಂಸ್ಕೃತಿಯನ್ನು ಅರ್ಥೈಸಿಕೊಳ್ಳಬೇಕಾಗಿರುವುದರಿಂದ ಇದ್ರರ ಬಗೆಗೆ ವಿವಿಧ ರೀತಿಯ ಪರಿಕಲ್ಪನೆಗಳು, ಸಂಸ್ಕೃತಿಯನ್ನು ಅರ್ಥೈಸುವ ವ್ಯಕ್ತಿಯ ದೃಷ್ಟಿಕೋನವನ್ನು ಅವಲಂಬಿಸಿರುವುದರಿಂದ ಸಂಸ್ಕೃತಿ ಎಂಬುದು ಜನಜೀವನದ ಅಂತರಂಗದ ಅನುಭವ ಎಂಬ ಅಂಶ ಗೋಚರಿಸುತ್ತದೆ. ಆಯಾ ಪ್ರದೇಶದ ಆಯಾ ಭಾಷೆಯ, ಆಯಾ ಧರ್ಮದ ಜನಗಳು, ತಮ್ಮ ಬಹುಮುಖ ಸಮಸ್ಯೆಗಳಿಗೆ ಉತ್ತರವನ್ನು ಕಾಣಬಯಸುವ ಅಂತರಂಗದ ಸಾಧನೆಯೇ ಸಂಸ್ಕೃತಿಯ ಮೂಲ ಸಾಮಗ್ರಿಯಾಗಿಬಿಡುತ್ತದೆ.

ಸಂಸ್ಕೃತಿ ಎಂಬುದು ಮನುಷ್ಯನನ್ನು ಪ್ರಾಣಿ ಸಮಾಜದಿಂದ ಪ್ರತ್ಯೇಕಗೊಳಿಸಿ, ಮನುಷ್ಯ ಸಮಾಜದ ಆ ವರ್ತನೆಗಳನ್ನು ವಿವರಿಸುವ ವಿಶಿಷ್ಟವಾದ ಒಂದು ಪರಿಕಲ್ಪನೆಯಾಗಿದೆ. ಒಳ್ಳೆಯ ಸಂಸ್ಕೃತಿಯಿಂದ ವ್ಯಕ್ತಿ ಒಳ್ಳೆಯದನ್ನು, ಉದಾತ್ತವಾದುದನ್ನು ಪ್ರೀತಿಸುವುದನ್ನು ಕಲಿಯುತ್ತಾನೆ. ಅಂದರೆ ಯಾವುದರಲ್ಲಿ ನಾವು ಸೌಂದರ್ಯವನ್ನು ಕಾಣಲು ಸಮರ್ಥರಾಗುತ್ತೇವೆಯೋ ಅದೇ ನಮ್ಮ ಸಂಸ್ಕೃತಿಯ ಮಟ್ಟವನ್ನು ನಿರ್ಧರಿಸುತ್ತದೆ.

ಸಂಸ್ಕೃತಿಯೆಂಬುದು ಸೂತ್ರರೂಪದಲ್ಲಿ ಹಿಡಿದಿಡಲಾಗದ ವಿರಾಟಶಕ್ತಿ. ಇದು ಹಂತಹಂತವಾಗಿ ವಿಕಾಸಗೊಳ್ಳುತ್ತದೆ. ಪದರ ಪದರವಾಗಿ ಜೀವನವನ್ನು ವ್ಯಾಪಿಸುತ್ತದೆ. ಸಂಸ್ಕೃತಿಯೆಂಬುದು ಅಂತರಂಗದ ವಿಕಾಸವಾಗಿದೆ. ಆ ವಿಕಾಸಕ್ಕೆ ಕಾರಣವಾದ ಸಾಮಾಜಿಕ ಪರಿಕರಗಳು ಹಾಗೂ ನುಡಿದಂತೆ ನಡೆಯುವುದೇ ಸಂಸ್ಕೃತಿ. ಸಮಾಜದೊಡನೆ ಸಹಬಾಳ್ವೆಯ ಸೌಜನ್ಯದ ಮಾರ್ಗವೇ ಸಂಸ್ಕೃತಿ. ಶೀಲದ ಸೌಭಾಗ್ಯವೇ ಸಂಸ್ಕೃತಿ.

ಆತ್ಮಶಿಕ್ಷಣವೇ ಸಂಸ್ಕೃತಿ. ಹೀಗಾಗಿ ನಮ್ಮ ಉಡುಗೆ-ತೊಡುಗೆಗಳಲ್ಲಿ ನಡೆ-ನುಡಿಗಳಲ್ಲಿ ಆಚಾರ-ವಿಚಾರಗಳಲ್ಲಿ, ಹಬ್ಬ-ಹರಿದಿನಗಳಲ್ಲಿ, ನಮ್ಮ ಪ್ರತಿಯೊಂದು ಕಾರ್ಯಚಟುವಟಿಕೆಯಲ್ಲಿ ಸಂಸ್ಕೃತಿಯ ಪ್ರಭಾವ ತೋರಿಬರುತ್ತದೆ.

ಇಷ್ಟೇ ಅಲ್ಲದೇ ಸಂಸ್ಕೃತಿಯ ಸ್ವಭಾವದ ಮೇಲೆ ಭೌಗೋಳಿಕ ಸನ್ನಿವೇಶಗಳು ಗಮನಾರ್ಹವಾದ ಪ್ರಭಾವವನ್ನು ಬೀರಿರುತ್ತವೆ. ಆರ್ಥಿಕ, ರಾಜಕೀಯ, ಸಾಮಾಜಿಕ ಸಂದರ್ಭಗಳು ಸಂಸ್ಕೃತಿಯ ಬದಲಾವಣೆಗೆ ತೀವ್ರತರವಾದ ಚಾಲನೆಯನ್ನು ನೀಡುತ್ತವೆ. ಪ್ರತಿಯೊಂದು ಸಂಸ್ಕೃತಿಯು ತಾನು ಎದುರಿಸಬೇಕಾದ ಬದುಕಿನ ಸಮಸ್ಯೆಗಳನ್ನು ನಿರ್ವಹಿಸಿಕೊಳ್ಳಲು ಒಂದು ಮೂಲ ಮನೋಭಾವವನ್ನು ಆರಿಸಿಕೊಳ್ಳುತ್ತದೆ. ಒಮ್ಮೆ ಮೂಲ ಮನೋಭಾವವು ಸಹಕಾರಿಯಾಗಿರಬಹುದು, ಸಂಪ್ರದಾಯವಾಗಿರಬಹುದು, ದ್ವೇಷಸಾಧನೆಯಾಗಿರಬಹುದು.

ಒಟ್ಟಿನಲ್ಲಿ ಸಂಸ್ಕೃತಿ ಎಂದರೆ ಸಮಾಜದ ವ್ಯವಹಾರದಲ್ಲಿ ಕಂಡುಬರುವ ಸಂಪ್ರದಾಯ, ಆಚಾರ - ವಿಚಾರಗಳನ್ನು, ಆಹಾರ-ವಿಹಾರ, ಉಡುಗೆ-ತೊಡುಗೆಗಳನ್ನು ವೈವಿಧ್ಯಪೂರ್ಣ ಚಟುವಟಿಕೆಗಳನ್ನು ಮನದಟ್ಟು ಮಾಡುತ್ತದೆ. ಏಕೆಂದರೆ ಸಂಸ್ಕೃತಿ ಸಾಮಾಜಿಕ ಪ್ರಕ್ರಿಯೆಯಾಗಿದ್ದು, ಸಮಾಜವು ಭೌಗೋಳಿಕ ಸನ್ನಿವೇಶ, ಸಮಯ ಸಂದರ್ಭಗಳನ್ನು ಅವಲಂಬಿಸಿರುತ್ತದೆಯಾದ್ದರಿಂದ ಪ್ರಾದೇಶಿಕವಾಗಿ, ಪ್ರತಿಯೊಂದು ಪ್ರದೇಶದ ಸಂಸ್ಕೃತಿಯ ವೈವಿಧ್ಯಗಳನ್ನು ತಿಳಿಯಬೇಕಾದರೆ ಅಲ್ಲಿಯ ಸಮುದಾಯ, ಭಾಷೆ, ಧರ್ಮ, ಸಾಮಾಜಿಕ ಪದ್ಧತಿ, ನೀತಿ, ಅನುಕಂಪ, ಕಟ್ಟುಪಾಡುಗಳು, ಸಹನೆ, ಸಹಬಾಳ್ವೆ, ಸಾಂಸ್ಕೃತಿಕ ವಿಶಿಷ್ಟತೆಗಳು, ನ್ಯಾಯತತ್ಪರತೆ, ಸಾಂಸ್ಕೃತಿಕ ಪಲ್ಲಟಗಳ ವಿಶಾಲ ಚಿತ್ರಪಟ ಮುಂತಾದ ಅಂಶಗಳನ್ನು ತಿಳಿಯಬೇಕಾದುದು ಅತ್ಯವಶ್ಯಕ. ಈ ದೃಷ್ಟಿಯಿಂದ ಯಮನೂರು ಗ್ರಾಮವನ್ನು ಅಧ್ಯಯನಕ್ಕೆ ಅಳವಡಿಸಿಕೊಂಡು ಅದರ ವ್ಯಾಪ್ತಿಯಲ್ಲಿ ಕಂಡುಬರುವ ಸಾಂಸ್ಕೃತಿಕ ವೈಶಿಷ್ಟ್ಯತೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಯಮನೂರು ನವಲಗುಂದದಿಂದ ೫.ಕಿ.ಮೀ. ದೂರದಲ್ಲಿದೆ. ಇದು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಹಿರಿಮೆಯನ್ನು ಹೊತ್ತು ನಿಂತ ಒಂದು ಧಾರ್ಮಿಕ ಮತ್ತು ಕಲಾತ್ಮಕ ನೆಲೆಯಾಗಿದೆ. ಸಿದ್ಧಾರೂಢ ಸನ್ನಿಧಿಯಿಂದ ಹುಬ್ಬಳ್ಳಿಯು ಪವಿತ್ರ ತಾಣವಾದಂತೆ, ರಾಜಾಭಾಗಸವಾರ ಯೋಗಿ ಚಕ್ರತೀರ್ಥ ಚಾಂಗದೇವರ ನೆಲೆಯಿಂದ ಯಮನೂರು ಪವಿತ್ರ ಕ್ಷೇತ್ರವೆನಿಸಿದೆ.

ಯಮನೂರು ಹಲವು ವಿಶಿಷ್ಟ ಧಾರ್ಮಿಕ ಐತಿಹಾಸಿಕ ಹಿನ್ನಲೆಯುಳ್ಳ ಸಾಂಸ್ಕೃತಿಕ ಕೇಂದ್ರವೂ ಹೌದು. ಇದರ ವ್ಯಾಪ್ತಿಯಲ್ಲಿ ದೊರೆಯುವ ಸಂಬಂಧಪಟ್ಟ ಪಳೆಯುಳಿಕೆಗಳು, ಸ್ಥಳನಾಮಗಳು ಸಂಪ್ರದಾಯ, ಮತಾಚರಣೆಗಳು, ಒಂದು ಕಾಲದ ಸಂದರ್ಭ ಮನೋಧರ್ಮವನ್ನು ತೆರೆದಿಡುತ್ತವೆ. ಈ ವಿವರಗಳನ್ನು ಆಧರಿಸಿ ಯಮನೂರು ಗ್ರಾಮವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಯಮನೂರು ಗ್ರಾಮ ರಾಜಾ ಭಾಗಸವಾರನ ಸಮಾಧಿಯಿಂದ ಪ್ರಸಿದ್ಧಿಯಲ್ಲಿದೆ. ಬೆಣ್ಣೆಹಳ್ಳದಿಂದ ಸು.ಅರ್ಧ ಕಿ.ಮೀ. ದೂರದಲ್ಲಿರುವ ಈ ಊರು ಮಾರ್ತಂಡ ಮುನಿಗಳು ತಪಸ್ಸು ಮಾಡಿದ ತಪೋಭೂಮಿಯಾಗಿದ್ದು, ಈ ಸಮಾದಿಗೆ ಹಿಂದೂ, ಮುಸ್ಲಿಂರೆನ್ನದೇ ಸಕಲರು ನಡೆದುಕೊಳ್ಳುತ್ತಾರೆ. ಪ್ರತಿವರ್ಷ ಜರುಗುವ ಜಾತ್ರೆ, ಉರುಸಿಗೆ ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯನ್ನು

ಒಳಗೊಂಡಂತೆ ಬಳ್ಳಾರಿ, ರಾಯಚೂರು, ಬಿಜಾಪುರ, ಬಾಗಲಕೋಟೆ ಹಾಗೂ ಇನ್ನು ಅನೇಕ ಜಿಲ್ಲೆಗಳಿಂದ ಜನರು ಸಹಸ್ರ ಸಂಖ್ಯೆಯಲ್ಲಿ ಬಂದು ತಮ್ಮ ವಿವಿಧ ಹರಕೆ, ಆಚರಣೆ ಹಾಗೂ ಬೇಡಿಕೆಗಳನ್ನು ಈಡೇರಿಸಿಕೊಂಡು ಹೋಗುತ್ತಾರೆ. ಅಲ್ಲದೇ ನೆರೆಯ ರಾಜ್ಯಗಳಾದ ಆಂಧ್ರಪ್ರದೇಶದಿಂದ ಅನೇಕ ಜನರು ಈ ಪುಣ್ಯಭೂಮಿಗೆ ಬಂದು ಹೋಗುತ್ತಾರೆ.

ಕಲಾತ್ಮಕವಾದ, ಐತಿಹಾಸಿಕವಾದ ಪರಂಪರೆಯನ್ನು ಹೊಂದಿರುವುದರ ಜೊತೆಗೆ ಧಾರ್ಮಿಕ ಮತ್ತು ಲೌಕಿಕ ಮೂರ್ತಿಗಳು, ಲೌಕಿಕ ಕಟ್ಟಳೆಗಳು, ಶಾಸನಗಳು, ಐತಿಹ್ಯಗಳು, ಬೆಣ್ಣೆಹಳ್ಳ, ಇಂದಿನ ನಾಲಾಗಳು, ಕೆರೆಗಳು, ಬಾವಿಗಳು, ಮಣ್ಣು, ಸಸ್ಯ, ಪ್ರಾಣಿವೈವಿಧ್ಯ ಹೇರಳವಾದ ಲಿಖಿತ ಮತ್ತು ಮೌಖಿಕ ಮಾಹಿತಿ ಇಂತಹ ಹತ್ತು ಹಲವಾರು ಅಂಶಗಳನ್ನು ಮೈಗೂಡಿಸಿಕೊಂಡಿರುವ ಯಮನೂರು ಸಹಜವಾಗಿಯೇ ನನ್ನನ್ನು ಸೂಜಿಗಲ್ಲಿನಂತೆ ಆಕರ್ಷಿಸಿತು. ಇಂತಹ ವೈಶಿಷ್ಟ್ಯತೆಯನ್ನು ಹೊಂದಿರುವ ಯಮನೂರಿನ 'ಚಾಂಗದೇವರ ಬಗೆಗೆ' ಹಾಗೂ ಹಿಂದೂ ಮುಸ್ಲಿಂ ಭಾವೈಕ್ಯತೆಯ ಕೇಂದ್ರ ಯಮನೂರು ಇವುಗಳ ಬಗೆಗೆ ಅಧ್ಯಯನ ನಡೆದಿದೆ. ಹಾಗೂ ಕೆಲವು ಬಿಡಿ ಲೇಖನಗಳು, ಕಿರು ಹೊತ್ತಿಗೆಗಳು, ಹೊರಬಂದಿವೆಯಾದರೂ ಇಲ್ಲಿನ ವಿಶಿಷ್ಟ ಐತಿಹಾಸಿಕ ಪರಂಪರೆಯ ಜೊತೆ ಜೊತೆಗೆ ಸಾಗಿ ಬಂದ ಜನಪದರ ಕುರಿತಾದ ಜಾನಪದೀಯ ಅಧ್ಯಯನ ನಡೆದಿಲ್ಲ. ಒಂದು ನಾಡಿನ ಸಂಸ್ಕೃತಿಯನ್ನು ಮೈವೆತ್ತಿ ನಿಲ್ಲಿಸಿರುವುದು ಆ ಪ್ರದೇಶದ ಆ ನಾಡಿನ ಜಾನಪದ ಅಂಶಗಳು. ಜನರ ಮೂಲಭೂತ ಆ ಸಂಸ್ಕೃತಿಯ ಅಂಶಗಳು ಹಾಗೂ ಜನಪದರ ಐತಿಹಾಸಿಕ, ಪೌರಾಣಿಕ ಪ್ರಜ್ಞೆ, ಗ್ರಾಮಮಟ್ಟದಲ್ಲಿ ಇದ್ದ ಯಮನೂರು, ಸಾಮಾಜಿಕ, ಭೌಗೋಳಿಕ, ಧಾರ್ಮಿಕ, ಆರ್ಥಿಕ ಮುಂತಾದ ಸ್ಥಿತ್ಯಂತರಗಳಿಗೊಳಗಾಗಿ ನಗರೀಕರಣದ ಸಂಕ್ರಮಣಾವಸ್ಥೆಯಲ್ಲಿದೆ. ಭಾರತದ ಗ್ರಾಮಗಳ ಬಗ್ಗೆ ಶಾಸ್ತ್ರೋಕ್ತವಾದ ಅಧ್ಯಯನದ ಅಗತ್ಯವಿರುವಂತೆ ಬೆಳೆಯುತ್ತಿರುವ ಅಥವಾ ಸಂಕ್ರಮಣಾವಸ್ಥೆಯಲ್ಲಿರುವ ಪಟ್ಟಣಗಳಲ್ಲಿನ ಜನಪದರ ಸಂಸ್ಕೃತಿಯ ಬಗೆಗಿನ ಅಧ್ಯಯನ ಅಷ್ಟೇ ಅಗತ್ಯವೆನಿಸಿದೆ. ಈ ಎಲ್ಲಾ ಪ್ರಮುಖ ಅಂಶಗಳನ್ನು ಗಮನಿಸಿದಾಗ ಯಮನೂರಿನ ಬಗೆಗಿನ ಇತಿಹಾಸವನ್ನು ಅನುಲಕ್ಷಿಸಿ ಒಂದು ಸಮಗ್ರವಾದ ಜಾನಪದೀಯ ಅಧ್ಯಯನ ನಡೆಯಬೇಕಾದ ಅಗತ್ಯತೆ ಕಂಡುಬಂದಿತು. ಆದಕಾರಣ ಈ ಎಲ್ಲಾ ಪ್ರಮುಖ ಅಂಶಗಳನ್ನು ಹಿನ್ನಲೆಯಾಗಿರಿಸಿಕೊಂಡು "ಯಮನೂರು ಗ್ರಾಮ ಒಂದು ಸಾಂಸ್ಕೃತಿಕ ಸಂಕಥನ" ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಂಡು ಯಮನೂರಿನ ಪರಿಸರದ ಮೇಲೆ ಸ್ವಲ್ಪ ಮಟ್ಟಿಗೆ ಬೆಳಕನ್ನು ಚೆಲ್ಲುವಂತಹ ಪುಟ್ಟ ಪ್ರಯತ್ನವನ್ನು ಈ ಮೂಲಕ ನಾನು ಮಾಡಿದ್ದೇನೆ.

ಐತಿಹಾಸಿಕ, ಸಾಂಸ್ಕೃತಿಕ, ಧಾರ್ಮಿಕ ಇತ್ಯಾದಿ ಮೂಲಾಂಶಗಳ ನೆಲೆಯನ್ನು ಕಂಡುಕೊಳ್ಳಲು ಈವರೆಗೆ ನಡೆದ ಅಧ್ಯಯನಗಳನ್ನು ಪರಾಮರ್ಶಿಸಿದಾಗ ಇವುಗಳೆಲ್ಲವು ಲಿಖಿತ ಮತ್ತು ಭೌತಿಕ ಆಧಾರಗಳ ಮೇಲೆ ರಚನೆಯಾಗಿರುವುದು ಸ್ಪಷ್ಟವಾಗಿರುತ್ತದೆ. ಆದರೆ ಈ ನಾಡಿನ ಕಥೆಯೇ ಬೇರೆ. ಈ ಗ್ರಾಮದ ಚರಿತ್ರೆ ಇಲ್ಲಿನ ಜನರ ನಾಲಿಗೆಗಳಲ್ಲಿ ದಾಖಲಾಗಿರುತ್ತದೆ. ಅಂತಹ ಮೌಖಿಕ ದಾಖಲೆಗಳು ಲಿಖಿತ ದಾಖಲೆಗಳಷ್ಟೇ ಮಹತ್ವದ್ದಾಗಿವೆ. ಅಷ್ಟೇ ಅಲ್ಲ ಸಂಸ್ಕೃತಿ ಅಧ್ಯಯನದ ದೃಷ್ಟಿಯಿಂದ ಪ್ರಮುಖ ಆಕರಗಳೂ ಆಗಿವೆ. ಆದರೆ ವಸಾಹತೀಕರಣಕ್ಕೊಳಪಟ್ಟ ವಿದ್ವಾಂಸರು ಚರಿತ್ರೆ, ಸಂಸ್ಕೃತಿ ಪರಂಪರೆಯನ್ನು ನಿರ್ಲಕ್ಷಿಸತೊಡಗಿದ್ದಾರೆ. ಈ ಬಗೆಯ ನಿರ್ಲಕ್ಷತೆಯಿಂದಾಗಿ ಅನೇಕ ಬಗೆಯ ತೊಂದರೆಗಳನ್ನು ಎದುರಿಸಬೇಕಾಗುತ್ತದೆ. ಆಡಳಿತ

ನಡೆಸುವವರ ಜೊತೆಗೆ ತಮ್ಮನ್ನು ಗುರುತಿಸಿಕೊಂಡ ಅಕ್ಷರಸ್ಥರು ಬಹುಸಂಖ್ಯಾತರಿಂದ ಸಹಜವಾಗಿ ದೂರ ಉಳಿಯುತ್ತಾರೆ. ಸಾಮಾನ್ಯವಾಗಿ ರಾಜರುಗಳು ನಡೆಸಿದ ಆಡಳಿತ, ವೈಭವ, ಯುದ್ಧಗಳು, ಕೆತ್ತಿಸಿದಮೂರ್ತಿ ಶಿಲ್ಪಗಳು, ನಡೆಸಿದ ಸಮಾರಂಭಗಳು, ಕಟ್ಟಿಸಿದ ದೇವಸ್ಥಾನಗಳು, ಕೊಟ್ಟ ದಾನ ದತ್ತಿ, ಹೋರಾಡಿ ಮಡಿದ ವೀರಯೋಧರ ಉಲ್ಲೇಖಗಳಿಗೆ ಮಾತ್ರ ಸೀಮಿತವಾಗುತ್ತವೆ. ದೇವಸ್ಥಾನ ಕಟ್ಟಿಸಿದವರ ವಿವರಗಳು ಬರುತ್ತವೆಯೇ ಹೊರತು ಕಟ್ಟಿದವರ ವಿವರಗಳಿಲ್ಲ. ರಾಜಮಹಾರಾಜರ ಬದುಕು ಬರಹಗಳ ವಿವರಗಳು ಬರುತ್ತವೆಯೇ ಹೊರತು ರಾಜರ ಅಧೀನದಲ್ಲಿ ಬಾಳಿಬದುಕಿದ ಜನಪದರ ಸಂಸ್ಕೃತಿಯ ವಿವರಗಳಿಲ್ಲ. ಬಹುಸಂಖ್ಯಾತ ಪ್ರಜೆಗಳು/ಜನಸಾಮಾನ್ಯರು 'ಮತ್ತು ಅವರ ಬದುಕು, ಭಾವನೆ, ಕಲೆ, ಧರ್ಮ, ದೈವ, ಐತಿಹಾಸಿಕ ಪ್ರಜ್ಞೆ ಸಾಹಿತ್ಯ ಇತ್ಯಾದಿಗಳು ಪೂರ್ಣವಾಗಿ ನಿರಾಕರಣೆಗೆ ಒಳಪಟ್ಟಿವೆ. ಇವರದೇ ಆದಂತಹ ಚರಿತ್ರೆ ಇದ್ದರೂ ದಾಖಲಾಗದೇ ಹೋಗುತ್ತದೆ.

ಒಂದು ಪ್ರದೇಶದ ಜನ ಅಲ್ಲಿಯ ಸಂಸ್ಕೃತಿಯನ್ನು, ಚರಿತ್ರೆಯನ್ನು, ಪರಂಪರೆಯನ್ನು ಇನ್ನೂ ಸಾಕಷ್ಟು ಅಂಶಗಳನ್ನು ಮೌಖಿಕ ರೂಪದಲ್ಲಿ ಬಳಸಿಕೊಂಡು ಬಂದಿರುತ್ತಾರೆ. "ಮಾತೆ ಮುತ್ತು ಮಾತೆ ಮೃತ್ಯು" ಎಂಬ ಗಾದೆಯಿಂದ ಜನಪದರ ಮಾತಿನ ಬದ್ಧತೆ ಅಳೆಯಬಹುದು. ಲಿಖಿತ ಮಾಹಿತಿ ಒದಗಿಸುವಷ್ಟು ನಿಖರ ಮಾಹಿತಿಯನ್ನು ಮೌಖಿಕ ಪರಂಪರೆಯು ಒದಗಿಸುತ್ತಾ ಬಂದಿದೆ. "ಆನೆ ಬಂತೊಂದಾನೆ ಬಿಜಾಪುರ ಆನೆ..." ಇದು ಕೇವಲ ಚಿಕ್ಕಮಕ್ಕಳನ್ನು ಸಂತೋಷಪಡಿಸಲಿಕ್ಕೆ ಮಾತ್ರ ಹುಟ್ಟಿಕೊಂಡ ಹಾಡಲ್ಲ. ಬಿಜಾಪುರ ಅರಸರ, ಧಾಳಿಕೋರ ಅರಾಜಕ ಪ್ರವೃತ್ತಿ, ಸ್ಥಳೀಯ ಅಸಾಹಯಕ ಪರಿಸ್ಥಿತಿಯ ವಿವರಗಳನ್ನೊದಗಿಸುತ್ತದೆ. ಇತಿಹಾಸದ ಇಂತಹ ಇನ್ನೂ ಅನೇಕ ನೆನಪುಗಳನ್ನು ಮಾತಿನ ಮೂಲಕ ಸುರಕ್ಷಿತವಾಗಿ ರಕ್ಷಿಸಿಕೊಂಡು ಬಂದಿದ್ದಾರೆ. ಬಹಳ ಕುತೂಹಲದ ಅಂಶವೆಂದರೆ, ಕೆಲವು ಸಂದರ್ಭಗಳಲ್ಲಿ ಮೌಖಿಕ ಮತ್ತು ಲಿಖಿತ ಸಾಮಗ್ರಿಗಳಲ್ಲಿ ಸಾಮ್ಯತೆ ಕಂಡುಬರುವುದಿಲ್ಲ. ಹಾಗೆಂದ ಮಾತ್ರಕ್ಕೆ ಮೌಖಿಕ ಮಾಹಿತಿಯನ್ನು ನಾವು ಕಡೆಗಣಿಸಲು ಬರುವುದಿಲ್ಲ. ಇದು ಅಧ್ಯಯನದ ಉದ್ದೇಶವೂ ಅಲ್ಲ.

ಪ್ರಸ್ತುತ ಅಧ್ಯಯನದ ವಿಷಯ ಯಮನೂರು ಗ್ರಾಮದ ಸಾಂಸ್ಕೃತಿಕ ಸಂಕಥನವಾಗಿದೆ. ಯಮನೂರು ಸಂಕ್ರಮಣಾವಸ್ಥೆಯಲ್ಲಿರುವ ಒಂದು ಪುಟ್ಟ ಗ್ರಾಮವಾದರೂ ಅಧ್ಯಯನಕ್ಕೆ ಯೋಗ್ಯವೆನಿಸಿದೆ. "ಯಾವುದೇ ಒಂದು ಊರಿನ ಗ್ರಾಮೀಣ ಬದುಕು ಇಂದು ತನ್ನದೇ ಆದ ಮೂಲ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿಲ್ಲ. ನಾಗರೀಕತೆಯ ಪ್ರಭಾವದಿಂದ ನಿರಂತರ ಬದಲಾಗುತ್ತಲೇ ಇದೆ. ಇಂತಹ ಸಂದರ್ಭದಲ್ಲಿ ನಾಗರೀಕನ ಆಂತರ್ಯದಲ್ಲಿ ಆದಿಮಾನವ ಹುದುಗಿದ್ದಾನೆ. ಹಬ್ಬ, ಆಚರಣೆ, ನಂಬಿಕೆ, ಸಂಪ್ರದಾಯಗಳ ರೂಪದಲ್ಲಿರುವ ನಾಗರೀಕತೆಯನ್ನು ತೆರೆದು ನೋಡಿದರೆ ಅಲ್ಲೊಬ್ಬ ಅನಾಗರಿಕ ಕಾಣುತ್ತಾನೆ" ಎಂದು ಡಾ.ಎಂ.ಚಿದಾನಂದಮೂರ್ತಿಯವರು ಹೇಳಿದ್ದಾರೆ.

ಡಾ.ಹಿರೇಮಲ್ಲೂರ ಈಶ್ವರನ್ ಅವರು ಭಾರತದ ಹಳ್ಳಿಗಳು ಈ ನಾಡಿನ ಪ್ರಾಚೀನ ಸಂಸ್ಕೃತಿಯಲ್ಲಿ ಅಡಕವಾಗಿರುವ ಅಪೂರ್ವಮೌಲ್ಯಗಳನ್ನು ಕಾಲಪುರುಷನ ಕ್ರೂರ ದಬ್ಬಾಳಿಕೆಯಿಂದ ರಕ್ಷಿಸಿಕೊಂಡು ಬಂದಿವೆ. ಶೀಘ್ರಗತಿಯಲ್ಲಿ ಬದಲಾಗುತ್ತಿರುವ ಈ ಕಾಲದಲ್ಲಿ ಕೂಲಂಕುಷವಾಗಿ ಶಾಸ್ತ್ರೋಕ್ತವಾಗಿ ಅಭ್ಯಾಸಿಸಿ ಅವುಗಳ ಮಹತ್ವವನ್ನು ರೂಪಿಸುವ ಅವಶ್ಯಕತೆ ಎಂದಿಗಿಂತಲೂ ಈಗ ಹೆಚ್ಚಾಗಿದೆ ಎಂದಿದ್ದಾರೆ.

ಇಷ್ಟಾಗಿಯೂ ನಿರೀಕ್ಷಿತ ಪ್ರಮಾಣದಲ್ಲಿ ಗ್ರಾಮಗಳ ಅಧ್ಯಯನ ನಡೆದಿರುವುದಿಲ್ಲ. ಆಗಿರುವ ಕೆಲವು ಅಧ್ಯಯನಗಳು ತಮ್ಮಮ್ಮವೇ ಮಿತಿಗಳಿಗೆ ಒಳಪಟ್ಟಿವೆ. ಆದ್ದರಿಂದ ಅಲ್ಪಪ್ರಮಾಣದ ಕೊರತೆಯನ್ನು ತುಂಬಿಕೊಡುವ ಉದ್ದೇಶದಿಂದ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ.

ಭಾರತದ ಹಳ್ಳಿಗಳನ್ನು ಅವುಗಳ ವಿಸ್ತೀರ್ಣ, ಭೂಮಿಯ ಹಂಚಿಕೆ, ಆರ್ಥಿಕ ಸ್ಥಿತಿಗತಿ, ಜಾತಿ ಮೊದಲಾದ ಅಂಶಗಳ ಆಧಾರದ ಮೇಲೆ ಸಣ್ಣ, ಮಧ್ಯಮ ಹಾಗೂ ದೊಡ್ಡಗ್ರಾಮುಗಳೆಂದು ವಿಭಜಿಸಬಹುದೆಂದು ತಜ್ಞರ ಅಭಿಪ್ರಾಯವಾಗಿದೆ. ಈ ದೃಷ್ಟಿಯಿಂದ ನೋಡಿದಾಗ 'ಯಮನೂರು' ಒಂದು ಸಣ್ಣ ಗ್ರಾಮ, ಇಲ್ಲಿ ಶ್ರೀಮಂತರು, ಬಡವರು, ಬಡತನ ರೇಖೆಗಿಂತ ಕೆಳಗಿನವರು ಹೀಗೆ ಎಲ್ಲ ವರ್ಗದ ಜನ ಈ ಗ್ರಾಮದಲ್ಲಿದ್ದಾರೆ.

ಭಾರತದ ಹಳ್ಳಿಗಳ ಪ್ರಾಚೀನತೆಯನ್ನು ಖಚಿತವಾಗಿ ಗುರುತಿಸುವುದು ಕಷ್ಟ. ಆದರೆ ಯಮನೂರು ಗ್ರಾಮದ ಪ್ರಾಚೀನತೆಯನ್ನು ನಮಗೆ ಸಿಕ್ಕ ಸಾಕ್ಷ್ಯಾಧಾರಗಳ ಮೂಲಕ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಶಾಸನಗಳು, ಕೈಫಿಯತ್ತುಗಳು ಕೂಡ ಮಾಹಿತಿ ಒದಗಿಸಿವೆ. ಬದಲಾಗುತ್ತಿರುವ ಗ್ರಾಮೀಣ ಸಮಾಜದ ಸ್ಥಿತಿ, ರಾಜಕೀಯ, ಆರ್ಥಿಕ ಸಂದರ್ಭಗಳನ್ನು ಗಮನಿಸಿದಾಗ ಈ ಊರು ಅಧ್ಯಯನಕ್ಕೊಂದು ಮಾದರಿಯಾಗಿದೆ. ಅಂತೆಯೇ ಜಾನಪದ ದೃಷ್ಟಿಯಿಂದ ನೋಡಿದಾಗಲೂ ಈ ಮಾತು ಅಷ್ಟೇ ನಿಜವಾಗುತ್ತದೆ. ಬೌದ್ಧಿಕವಾಗಿ ೨೧ನೇ ಶತಮಾನಕ್ಕೆ ದಾಪುಗಾಲಿಟ್ಟಿರುವ ಈ ದಿನಗಳಲ್ಲೂ ಭೌತಿಕವಾಗಿ ಇಲ್ಲಿನ ಜನ ಯಾವ ಕಾಲಮಾನದಲ್ಲಿದ್ದಾರೆ. ಅವರ ಹಿಂದಿನ ಹಾಗೂ ಈಗಿನ ಆಚಾರ ವಿಚಾರಗಳೇನು? ಇವರ ಮನಸ್ಸನ್ನಾಳುವ ಶಕ್ತಿಗಳು ಯಾವುವು? ಹೊರಗಿನ ಮತ್ತು ಒಳಗಿನ ಒತ್ತಡಗಳು ಯಾವುವು? ಅದರಿಂದಾಗುವ ಪರಿಣಾಮವೇನು? ಜಾನಪದದ ಸ್ವರೂಪವೇನು? ವೈವಿಧ್ಯವೇನು? ಕರ್ನಾಟಕ ಜಾನಪದ ಅಧ್ಯಯನಕ್ಕೆ ಇಲ್ಲಿನ ವಿವರಗಳ ಅಧ್ಯಯನ ಹೇಗೆ ಸಹಕಾರಿಯಾದೀತು? ಇತ್ಯಾದಿ ಅಂಶಗಳ ಪರಿಶೀಲನೆಯನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ.

"ಯಮನೂರು ಗ್ರಾಮದ ಸಾಂಸ್ಕೃತಿಕ ಸಂಕಥನ"ವೆಂದರೆ ಇಡೀ ಗ್ರಾಮದ ಕುರಿತ ಅಧ್ಯಯನವಾಗಿದೆ. ಯಮನೂರು ಅನೇಕ ದೃಷ್ಟಿಗಳಿಂದ ವಿಶಿಷ್ಟವಾದ ಪ್ರದೇಶವಾಗಿದೆ. ಆಧುನಿಕತೆಯ ಪ್ರಭಾವ ಸ್ವಲ್ಪಮಟ್ಟಿಗಾದರೂ ಈಗಲೂ ಅನೇಕ ವಿಶಿಷ್ಟವಾದ ಸಾಂಸ್ಕೃತಿಕ ಧಾರ್ಮಿಕ ವಿಚಾರಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡು ಕಾಪಾಡಿದೆ. ಇದರ ಮಹತ್ವವೆಂದರೆ ಎಷ್ಟೆಲ್ಲಾ ಆಧುನಿಕತೆಯ ಪ್ರಭಾವದ ಹಿನ್ನಲೆಯಲ್ಲಿಯೂ ಇಲ್ಲಿನ ಹಬ್ಬ ಹರಿದಿನಗಳು ಜಾತ್ರೆ ಉತ್ಸವ, ಉರುಸು ಇನ್ನೂ ಮುಂತಾದ ಕ್ಷೇತ್ರದಲ್ಲಿ ತನ್ನ ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿದೆ. ಇಲ್ಲಿನ ಬೆಣ್ಣೆಹಳ್ಳ, ಚಾಂಗದೇವರ ದೇವಾಲಯ, ಮಸೀದಿ ದೇವಾಲಯಗಳು, ಸುತ್ತಮುತ್ತಲ ಗ್ರಾಮದ ಐತಿಹಾಸಿಕತೆ ಇತ್ಯಾದಿಗಳು ಓದುಗರ, ನೋಡುಗರ ಮನಸ್ಸನ್ನು ಸೂರೆಗೊಳ್ಳುತ್ತವೆ.

ಇಷ್ಟೆಲ್ಲಾ ವೈಶಿಷ್ಟ್ಯತೆ, ವೈವಿಧ್ಯತೆ, ವಿಶೇಷತೆಗಳು ಇದ್ದರೂ ಯಮನೂರು ಪ್ರದೇಶದ ಸಮಗ್ರ ಸಾಂಸ್ಕೃತಿಕ ವಿಚಾರಗಳನ್ನು ಒಳಗೊಂಡಂತೆ ಯಾವುದೇ ಅಧ್ಯಯನ ಇದುವರೆಗೂ ನಡೆದಿಲ್ಲ. ಹೀಗಾಗಿ ಅಂಥದೊಂದು ಕೊರತೆಯನ್ನು ನೀಗಿಸುವ ಪ್ರಯತ್ನವೇ ನನ್ನ ಸಂಶೋಧನೆಯ ಬಹುಮುಖ್ಯ ಉದ್ದೇಶವಾಗಿದೆ.

ಈ ಗ್ರಾಮದಲ್ಲಿ ವಿವಿಧ ಜಾತಿ, ಜನಾಂಗ, ಧರ್ಮದ ಜನ ನೆಲೆಸಿದ್ದಾರೆ. ಈ ದೃಷ್ಟಿಯಿಂದ ಜಾತ್ಯಾತೀತ ಪ್ರದೇಶವೆಂದು ಕರೆಯಬಹುದಾದರೂ ಸಾಂಪ್ರದಾಯಿಕವಾಗಿ ಜಾತಿ ಪದ್ಧತಿ ಹಾಗೆಯೇ ಉಳಿದಿದೆ. ಆಧುನಿಕತೆಯ ಅನುಕೂಲಗಳ ಕಾರಣವಾಗಿ ಸಾಮುದಾಯಿಕ ಜೀವನ ಪದ್ಧತಿ ಬದಲಾಗಿದ್ದು, ಜಾತಿಯ ಬಂಧಗಳು ಸಡಿಲಗೊಂಡಿದ್ದರೂ ಅಂತರಂಗದಲ್ಲಿನ ಅಸಮಾಧಾನಗಳಿಂದಾಗಿ ಜನರಲ್ಲಿನ ವಿಶ್ವಾಸ ನಂಬಿಕೆಗಳು ದೂರವಾಗಿವೆ. ಸಾಮಾಜಿಕ ವಿಘಟನೆ, ತಾರತಮ್ಯಗಳ ನಡುವೆಯೂ ಸಾಂಸ್ಕೃತಿಕವಾಗಿ ಸಾಮರಸ್ಯದ ಮನೋಭಾವಗಳು ಜೀವನ ವಿಧಾನವನ್ನು ರೂಪಿಸುತ್ತವೆ. ಹೀಗಾಗಿ ಬದಲಾದ ಸನ್ನಿವೇಶಗಳನ್ನು ಪರಿಶೀಲಿಸುವುದು ಅಧ್ಯಯನದ ಅಗತ್ಯಗಳಲ್ಲಿ ಮುಖ್ಯವಾಗಿದೆ.

ಜನಪದ ಕಲೆ, ಸಾಹಿತ್ಯ ಮುಂತಾದ ವಿವಿಧ ಸಂಸ್ಕೃತಿಗಳು ಆಧುನಿಕತೆಯ ಫಲವಾಗಿ ತನ್ನ ನೆಲದಲ್ಲಿಯೇ ಅನ್ಯವಾಗಿ ಅನಾಥವಾಗಿ ಕಣ್ಮರೆಯಾಗುತ್ತಿರುವ ಸ್ಥಿತಿ ಬಂದೊದಗಿದೆ. ಅಷ್ಟೇ ಅಲ್ಲದೆ, ಆಧುನಿಕ ಜೀವನ ವಿಧಾನಗಳಿಗೆ, ಹೊಂದಿಕೊಳ್ಳಲಾಗದ ಅಥವಾ ಹೊಂದಿಕೊಳ್ಳಲು ಸಾಮರ್ಥ್ಯವಿಲ್ಲದ ಅಸಹಾಯಕ ಸ್ಥಿತಿಗತಿಗಳು, ಇಂದಿನ ಸಾಮಾಜಿಕ ಜೀವನದ ಸ್ಥಿತಿಯಾಗಿರುವುದರಿಂದ ಅವುಗಳನ್ನು ಕುರಿತ ಅಧ್ಯಯನ ಅಗತ್ಯವಾಗಿದೆ.

ಇತಿಹಾಸ, ಕಲೆ, ಧರ್ಮ ಮುಂತಾದ ಸಾಂಸ್ಕೃತಿಕ ಅಂಶಗಳನ್ನು ಭೂವೈಶಿಷ್ಟ್ಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ವಿಷಯದ ವ್ಯಾಪ್ತಿ, ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಯಮನೂರು. ಯಮನೂರು ಒಂದು ಚಿಕ್ಕ ಗ್ರಾಮವಾಗಿದೆ. ಇದು ಭೌಗೋಳಿಕವಾಗಿ ಒಂದು ಎಲ್ಲೆಕಟ್ಟಿಗೆ ಸೀಮಿತವಾಗಿದ್ದರೂ ಇಲ್ಲಿನ ಇತಿಹಾಸ, ಧರ್ಮ, ಭಾಷೆ, ಕಲೆ ವಿವಿಧ ಜಾತಿ ಜನಾಂಗಗಳು ಆಚರಣೆ, ನಂಬಿಕೆ, ವಿಧಿ ನಿಷೇಧಗಳು, ಸಂಪ್ರದಾಯಗಳು, ಜಾತ್ರೆ ಹಬ್ಬ ಹರಿದಿನಗಳು, ಉರುಸು ಮತ್ತು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಕುರಿತದ್ದಾಗಿದೆ. ಪ್ರತಿಯೊಂದು ವಿಷಯವನ್ನು ಪ್ರತ್ಯೇಕವಾದ ಅಧ್ಯಯನಕ್ಕೆ ಒಳಪಡಿಸುವುದು ಪ್ರಬಂಧದ ವ್ಯಾಪ್ತಿಯಲ್ಲಿ ಅಸಾಧ್ಯವಾದುದು. ನಿರ್ದಿಷ್ಟಪಡಿಸಿಕೊಂಡಿರುವ ವ್ಯಾಪ್ತಿಯಲ್ಲಿನ ಸಾಂಸ್ಕೃತಿಕ ಅಂಶಗಳನ್ನು ಅಧಿಕೃತವಾದ ದಾಖಲೆಗಳು ಮತ್ತು ಕ್ಷೇತ್ರಕಾರ್ಯದ ಮೂಲಕ ದೊರೆತಿರುವ ಮಾಹಿತಿಯನ್ನಾಧರಿಸಿದ ಅಧ್ಯಯನವಾಗಿದ್ದು, ಅವುಗಳನ್ನು ಬೇರೆ ಬೇರೆ ಅಧ್ಯಯನಗಳನ್ನಾಗಿ ವಿಂಗಡಿಸಿ ಮಹಾಪ್ರಬಂಧವನ್ನು ಸಿದ್ಧಗೊಳಿಸಲಾಗಿದೆ.

**ಆಕರ ಸಾಮಗ್ರಿ**

ಒಂದು ನಾಡಿನ ಚರಿತ್ರೆಯನ್ನು ತಿಳಿದುಕೊಳ್ಳಲು ಅನೇಕ ಬಗೆಯ ಆಕರ ಸಾಮಗ್ರಿಗಳ ಮೊರೆಹೋಗುವುದು ಅನಿವಾರ್ಯ. ಒಂದು ನಾಡಿನ ಇತಿಹಾಸ ರಚನೆಗೆ ಸಂಬಂಧಿಸಿದ ಮಾಹಿತಿಯನ್ನು ಪ್ರಮುಖವಾಗಿ ಪ್ರಾಚ್ಯವಸ್ತು ಮತ್ತು ಸಾಹಿತ್ಯಿಕ ಆಕರಗಳು ಒದಗಿಸುತ್ತವೆ. ಪ್ರಾಚ್ಯವಸ್ತುಗಳಲ್ಲಿ ಶಾಸನ, ನಾಣ್ಯ ಹಾಗೂ ಸ್ಮಾರಕಗಳು ಸೇರ್ಪಡೆಯಾದರೆ, ಸಾಹಿತ್ಯಿಕ ಆಕರಗಳಲ್ಲಿ ದೇಶಿಯ ಮತ್ತು ವಿದೇಶಿಯ ಬರವಣಿಗೆಗಳು ಮುಖ್ಯವಾಗುತ್ತವೆ. ಪ್ರಸ್ತುತ "ಯಮನೂರು ಸಾಂಸ್ಕೃತಿಕ ಸಂಕಥನ" ಅಧ್ಯಯನದಲ್ಲಿ ಛಾಯಾಚಿತ್ರಗಳು, ವಕ್ತೃಗಳು ಮುಖ್ಯವಾಗಿ ಕ್ಷೇತ್ರಕಾರ್ಯ ಈ ಎಲ್ಲ ಮೂಲಗಳ ನೆರವನ್ನು ಪಡೆಯಲಾಗಿದೆ.

## ಅಧ್ಯಯನದ ಕ್ರಮ

ಇಂತಹ ಅಧ್ಯಯನಗಳಿಗೆ ಪಟ್ಟಿಕೆ ಮಾಡಿಕೊಳ್ಳುವ ಕ್ರಮ ಪ್ರಸಿದ್ಧವಾದುದು. ಯಮನೂರಿನಲ್ಲಿ ಲಭ್ಯವಿರುವ ಸಾಹಿತ್ಯಕೃತಿ ಜನರಿಂದ ದೊರೆತ ಮಾಹಿತಿಗಳನ್ನು ಸಂಗ್ರಹಮಾಡಿ, ಆಯಾ ವಿಷಯಗಳಿಗೆ ಸಂಬಂಧಪಟ್ಟ ವಿಷಯಪಟ್ಟಿಕೆಗಳನ್ನು ತಯಾರಿಸಿಕೊಳ್ಳಲಾಯಿತು. ಕ್ಷೇತ್ರಕಾರ್ಯದ ಮೂಲಕ ಕಂಡುಬಂದ ದೇವಾಲಯಗಳ ಅಧ್ಯಯನದೊಂದಿಗೆ ಅವುಗಳ ಭಾವಚಿತ್ರಗಳ ಸಹಾಯದಿಂದ ಸಂಗ್ರಹಿಸಿದ ವಿಷಯಗಳನ್ನು ಪಟ್ಟಿಕೆಗಳಲ್ಲಿ ದಾಖಲಿಸಲಾಯಿತು. ಕ್ಷೇತ್ರಕಾರ್ಯದ ಮೂಲಕ ಕಂಡುಬಂದ ದೇವಾಲಯಗಳು, ಜಾತ್ರೆ, ಉರುಸು, ಜೀವನಾವರ್ತನದ ಆಚರಣೆ, ವಾರ್ಷಿಕಾವರ್ತನದ ಆಚರಣೆಗಳ ಅವಲೋಕನ ಭಾವಚಿತ್ರಗಳನ್ನು ಸಂಗ್ರಹಿಸಿ ವಿಷಯಾನುಕ್ರಮದಲ್ಲಿ ಹೊಂದಿಸಿಕೊಳ್ಳಲಾಯಿತು. ಅವುಗಳಿಂದ ಈ ನಾಡಿನ ಜನಜೀವನದೊಂದಿಗೆ ಅಲ್ಲಿನ ಚರಿತ್ರೆ ಸಾಂಸ್ಕೃತಿಕ ನೆಲೆ ಬೆಲೆಯನ್ನರಿಯಲು ಸಾಧ್ಯವಾಯಿತು.

ನಮ್ಮ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಮಾದರಿಯಲ್ಲಿ ಬಂದ ಸಂಶೋಧನಾ ಮಹಾಪ್ರಬಂಧಗಳಲ್ಲಿ ಡಾ.ಎಚ್.ಮಲ್ಲಿಕಾರ್ಜುನ ಅವರ ಚೇಳಗುರಿಕೆ ಎರ್ರಿತಾತ: ಸಾಂಸ್ಕೃತಿಕ ಸಂಕಥನ ಹಾಗೂ ಡಾ.ರಾಮಣ್ಣ ಸಿದರಾಯಪ್ಪ ದೊಡ್ಡನಿಂಗಪ್ಪಗೋಳ ಅವರ ಕೊಟ್ಟಲಗಿ: ಗ್ರಾಮ ಸಾಂಸ್ಕೃತಿಕ ಸಂಕಥನ, ಕನಕಗಿರಿ ಒಂದು ಸಾಂಸ್ಕೃತಿಕ ಸಂಕಥನ ಮುಂತಾದವುಗಳಿಂದ ಪೂರಕ ಮಾಹಿತಿಯನ್ನು ಸಂಗ್ರಹಿಸಿ, ಸಂದರ್ಭಕ್ಕನುಸಾರವಾಗಿ ಬಳಸಿಕೊಳ್ಳಲಾಗಿದೆ. ಹೀಗಾಗಿ ಅಧ್ಯಯನಕ್ಕೆ ಸಂಬಂಧಪಟ್ಟ ಗ್ರಂಥವಾರು ಕ್ಷೇತ್ರಕಾರ್ಯದ ಮೌಖಿಕಾಧಾರಗಳನ್ನು ಸಂಗ್ರಹಿಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

## ೨. ಅಧ್ಯಯನದ ವ್ಯಾಪ್ತಿ

ಯಾವುದೇ ಒಂದು ವಿಷಯಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕ ಅಧ್ಯಯನ ನಡೆಸಬೇಕಾದರೆ ಅದರ ಆಳ ಹರವುಗಳನ್ನು, ವಿಸ್ತಾರವನ್ನು ತಿಳಿದುಕೊಂಡೆ ಅಧ್ಯಯನ ನಡೆಸಬೇಕಾಗುತ್ತದೆ. ಹಾಗಾಗಿ ಈ ಅಧ್ಯಯನದಲ್ಲಿ ಒಂದು ವ್ಯಾಪ್ತಿಯನ್ನು ನಿರ್ಮಿಸಿಕೊಂಡು, ಅನುಕೂಲಕ್ಕಾಗಿ ಹಲವು ಭಾಗಗಳನ್ನಾಗಿ ವಿಂಗಡಿಸಿದ್ದೇನೆ. ಈ ಮಹಾಪ್ರಬಂಧವು ಒಟ್ಟು ೦೮ ಅಧ್ಯಾಯಗಳನ್ನು ಒಳಗೊಂಡಿದ್ದು, ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಎಂದಿದ್ದು, ಇದರಲ್ಲಿ ಅಧ್ಯಯನದ ಅಗತ್ಯ ಸ್ವರೂಪದೊಂದಿಗೆ ಮೂಲ ಆಕರ ಸಾಮಾಗ್ರಿ ಮತ್ತು ಅಧ್ಯಯನ ಕ್ರಮವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ "ಭೌಗೋಳಿಕ ಮತ್ತು ಚಾರಿತ್ರಿಕ" ಎಂದಿದ್ದು ಇದರಲ್ಲಿ ಗ್ರಾಮದ ಭೂವಿವರ, ವಾಯುಗುಣ, ಅರಣ್ಯ ಸಂಪತ್ತು, ಜೀವಸಂಕುಲ, ಸಾರಿಗೆ ಸಂಪರ್ಕ, ಗ್ರಾಮದ ಅಂಕಿ ಅಂಶಗಳ ಕೋಷ್ಟಕ ಹಾಗೂ ಚಾರಿತ್ರಿಕ ಹಿನ್ನಲೆ ಯಮನೂರು ಸ್ಥಳನಾಮ ಪದ ನಿಷ್ಪತ್ತಿ, ಗ್ರಾಮದ ಪ್ರಾಚೀನತೆ, ಸುತ್ತ ಮುತ್ತಲ ಗ್ರಾಮಗಳು ಮತ್ತು ವೈಶಿಷ್ಟ್ಯ ಮುಂತಾದವನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ "ಸಾಮಾಜಿಕ ಜೀವನ" ಎಂಬುದಾಗಿ ಮಾಡಿಕೊಂಡು ಇದರಲ್ಲಿ ಗ್ರಾಮದಲ್ಲಿನ ಸಮುದಾಯಗಳು ಕುಟುಂಬ ಪದ್ಧತಿ, ಮನೆಗಳ ಮಾದರಿ, ಆಹಾರಪದ್ಧತಿ, ಉಡುಗೆ-ತೊಡುಗೆ, ಜನಪದ ವೈದ್ಯ, ನ್ಯಾಯವ್ಯವಸ್ಥೆ, ಅತಿಥಿ ಸತ್ಕಾರ, ಆರ್ಥಿಕ ವ್ಯವಸ್ಥೆ, ಜನಪದ ಆಟಗಳು, ಜನಪದ ಕಲೆಗಳು ಮುಂತಾದವುಗಳನ್ನು ಗಮನಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಆಚರಣೆಗಳು' ಎಂದಿದ್ದು ಜೀವನಾವರ್ತನದ ಆಚರಣೆಗಳೆಂದರೇನು ಅವುಗಳಾದ ಸೀಮಂತ, ಜನನ, ನಾಮಕರಣ, ಮದುವೆ, ಜವುಳ, ಋತುಮತಿ, ಶವಸಂಸ್ಕಾರ ಮೊದಲಾದ ಇತರ ಸಂಪ್ರದಾಯಗಳು ಹಾಗೂ ವಾರ್ಷಿಕಾವರ್ತನ ಆಚರಣೆಗಳೆಂದರೇನು ಅವುಗಳಾದ ದೀಪಾವಳಿ, ಯುಗಾದಿ, ಕಾರಹುಣ್ಣಿಮೆ, ದಸರಾ, ಹೋಳಿಹಬ್ಬ ಮುಂತಾದ ಆಚರಣೆಗಳನ್ನು ಸವಿವರವಾಗಿ ಗಮನಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಭಾಷೆ ಮತ್ತು ಸಾಹಿತ್ಯಕ್ಕೆ ಮೀಸರಿಸಲಾಗಿದೆ. ಅಲ್ಲಿನ ಪರಿಸರದಲ್ಲಿನ ಭಾಷೆ ಶಿಷ್ಟ್ಯ ಸಾಹಿತ್ಯ, ಜನಪದ ಸಾಹಿತ್ಯ, ಜನಪದ ಗೀತೆಗಳು, ಕಥೆಗಳು, ಗಾದೆ, ಒಡಪುಗಳು, ಒಗಟುಗಳು ಮೊದಲಾದ ಗ್ರಾಮದ ಜನಪದರ ಸಾಹಿತ್ಯವನ್ನು ವಿಸ್ತೃತವಾದ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ "ಯಮನೂರಿನ ಚಾಂಗದೇವರ ಪವಾಡ ಸಾದೃಶ್ಯಗಳು" ಇದರಲ್ಲಿ ಪವಾಡ ಎಂದರೇನು, ಚಾಂಗದೇವರ ವಿವಿಧ ಪವಾಡಗಳನ್ನು ಉಲ್ಲೇಖಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ "ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳು" ಇದರಲ್ಲಿ ಯಮನೂರಿನ ಗ್ರಾಮದ ಜನರ ಜೀವನ ವಿಧಾನ, ಉಡುಗೆ ತೊಡಿಗೆ, ಜಾತಿಯಲ್ಲಿನ ಬದಲಾವಣೆ, ಆ ಬದಲಾವಣೆಯಿಂದಾದ ಅನುಕೂಲ, ಅನಾನುಕೂಲಗಳನ್ನು ಕೂಲಂಕುಷವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಎಂಟರಲ್ಲಿ ಸಮಾರೋಪದ ಕುರಿತು ಒಟ್ಟು ಅಧ್ಯಯನದ ನೋಟ, ಅಧ್ಯಯನದ ಫಲಿತಗಳು, ಚಿತ್ರಸಂಪುಟಗಳು ಇವುಗಳನ್ನು ಒಳಗೊಂಡಿದೆ.

ಹೀಗೆ ಈ ಮಹಾಪ್ರಬಂಧ ರಚನೆಗೆ ಬೇಕಾಗಿರುವ ಪೂರಕವಾದ ಸಾಮಗ್ರಿಗಳನ್ನು ಇತರ ಗ್ರಾಮಾಧ್ಯಯನ ಕೃತಿಗಳಿಂದ, ಸ್ಥಳೀಯರಿಂದ, ಯಮನೂರಿನ ಬಗೆಗೆ ಈಗಾಗಲೇ ಪ್ರಕಟವಾಗಿರುವ ಕೃತಿಗಳಿಂದ ಸಂಗ್ರಹಿಸಲಾಗಿದೆ. ಆ ವಿಷಯವನ್ನು ಅಧ್ಯಯನದ ಪೂರಕವಾಗಿ ಪ್ರಾಸಂಗಿಕವಾಗಿ ವಿಷಯದ ಸಮಗ್ರವಾದ ಚರ್ಚೆಯ ಖಚಿತತೆಗಾಗಿ ಬಳಸಿಕೊಂಡಿದ್ದೇವೆಯೇ ವಿನಃ ಅಧ್ಯಯನ ನನ್ನ ವ್ಯಾಪ್ತಿಗೆ ಮೀರಿದ್ದು ಎಂಬುದು ನನ್ನ ನಂಬಿಕೆ. ಸಾಂಸ್ಕೃತಿಕ ಅಧ್ಯಯನ ವಿಚಾರಗಳ ಬಗೆಗೆ ಹೇಳಬೇಕಾದ ಇನ್ನೊಂದು ವಿಷಯ ಏನೆಂದರೆ ಇಷ್ಟೇ ಮಿತಿಯ ಒಳಗಡೆಯು ರಚನೆಗೊಂಡ ನನ್ನ ಈ ಸಂಶೋಧನೆ ಸಮಗ್ರ ಅಧ್ಯಯನದ ಪ್ರಯತ್ನವೇ ಹೊರತು, ಸಂಪೂರ್ಣ ಅಧ್ಯಯನವಲ್ಲ ಎಂಬುದನ್ನು ವಿನಯಪೂರ್ವಕವಾಗಿ ತಿಳಿಯಬಯಸುತ್ತೇನೆ. ಕಾರಣ ಸಾಂಸ್ಕೃತಿಕ ವಿಚಾರಗಳ ವ್ಯಾಪ್ತಿ ಬಹಳ ವಿಸ್ತಾರವಾದುದು ಎನ್ನುವುದರ ಅರಿವು ನನಗಿದೆ.

## ಅಧ್ಯಾಯ ಎರಡು

# ಯಮನೂರು ಸ್ಥಳ ಪರಿಚಯ

ಭಾರತದೇಶ ಧರ್ಮ ಪರಂಪರೆಯುಳ್ಳ ನಾಡು ಇತಿಹಾಸ ಪೂರ್ವಕಾಲದಿಂದ ಇಂದಿನವರೆಗೂ ಇದು ನಿರಂತರವಾಗಿ ನಡೆದುಕೊಂಡು ಬಂದಿದೆ. ಕಾಲಕಾಲಕ್ಕೆ ಸಾಧು ಸಂತರು ಪುಣ್ಯ ಪುರುಷರು ಜನ್ಮ ತಾಳುವ ಮೂಲಕ ಧರ್ಮ ಜಾಗೃತಿ ಮೂಡಿಸಿ ಜನರಲ್ಲಿ ಸಾತ್ವಿಕ ಭಾವನೆ ಉಂಟಾಗುವಂತೆ ಮಾಡಿದರು. ಪರಿಣಾಮ ಬೌದ್ಧಧರ್ಮ, ಜೈನಧರ್ಮ, ಕ್ರೈಸ್ತಧರ್ಮ, ಇಸ್ಲಾಂಧರ್ಮಗಳು ಏಳಿಗೆ ಹೊಂದಿದವು. ನಂತರ ಭಕ್ತಿಪಂಥ ಸಾಮಾಜಿಕ ಧಾರ್ಮಿಕ ಸುಧಾರಣಾ ಚಳುವಳಿಗಳಂಥ ಧಾರ್ಮಿಕ ಆಂದೋಲನಗಳು ಜನರಲ್ಲಿ ಭಕ್ತಿ ಏಕಾಗ್ರತೆ ಹಾಗೂ ನೈತಿಕ ಮೌಲ್ಯಗಳು ಬೆಳೆಯುವಂತೆ ಮಾಡಿದವು. ಇತಿಹಾಸದ ಪುಟಗಳನ್ನು ತಿರುವಿದಾಗ ಹಳ್ಳಿಗಳು ಏಳಿಗೆ ಹೊಂದುವಲ್ಲಿ ಐತಿಹಾಸಿಕ ಹಿನ್ನೆಲೆಯುಳ್ಳ ಇಲ್ಲವೆ ಮಹಾಪುರುಷರ ಜೀವನ ವೃತ್ತಾಂತಗಳು ಪ್ರಮುಖ ಅಂಶಗಳಾಗಿ ಗೋಚರಿಸುತ್ತವೆ. ಪ್ರಸ್ತುತ ಅಧ್ಯಯನ ವಸ್ತುಕೂಡ ಇದೆ ಆಗಿದ್ದರೂ ಸಂಪೂರ್ಣ ಗ್ರಾಮದ ಇತಿಹಾಸ ಮತ್ತು ಚಿತ್ರಣವನ್ನು ಒಳಗೊಂಡಿದೆ.

**ಸ್ಥಳನಾಮ ಪದನಿಷ್ಪತ್ತಿ**

ಈ ಹಿನ್ನಲೆಯಲ್ಲಿ ಸ್ಥಳನಾಮಗಳನ್ನು ಕುರಿತು ವಿವೇಚಿಸುವುದಕ್ಕಿಂತ ಮೊದಲು ಸ್ಥಳನಾಮಗಳನ್ನು ಕುರಿತು ವಿವೇಚಿಸುವುದಕ್ಕಿಂತ ಮೊದಲು ಸ್ಥಳನಾಮವೆಂದರೇನು? ಎಂಬುದನ್ನು ಕುರಿತ ಕ್ರಮಗಳನ್ನು ಅಧ್ಯಯನಕ್ಕೆ ಒಳಪಡಿಸುವುದು ಅಗತ್ಯವೆನಿಸುತ್ತದೆ.

ಸ್ಥಳನಾಮವೆಂದರೆ ಊರಿನ ಹೆಸರು ಎಂದು ಅರ್ಥೈಸುವುದಾದರೆ ಅಂತಹ ಊರುಗಳು, ಪುರ, ಹಟ್ಟಿ, ಊರು, ಹಳ್ಳಿ, ಗ್ರಾಮ, ವಾಡಿ, ಹಾಳ, ಕೆರೆ, ಬಾದ, ಕೊಪ್ಪ ಮೊದಲಾದ ಉತ್ತರಾರ್ಧ ಘಟಕಗಳನ್ನು ಒಳಗೊಂಡಿರುತ್ತದೆ. ಈ ಘಟಕಗಳಿಗೆ ಯಾವುದೇ ವಿಷಯ ಪ್ರಸ್ತಾಪವಿರದು. ಭಾಷಿಕ ದೃಷ್ಟಿಯಿಂದ ಧಾರವಾಡ ಜಿಲ್ಲೆಯಲ್ಲಿ ಬರುವ ಕೆಲವು ಊರುಗಳನ್ನು ಈ ಘಟಕಗಳ ಅಡಿಯಲ್ಲಿ ವಿಂಗಡಿಸಿ ಅವುಗಳ ರೂಪ ಮತ್ತು ಧ್ವನಿ ವ್ಯತ್ಯಾಸವಿರುವುದನ್ನು ಕಾಣಬಹುದು. ಯಾವುದೇ ಒಂದು ಸಮುದಾಯದ ಸ್ಥಳನಾಮದಿಂದ ಆ ಅಭಿರುಚಿ. ಅನುಭವ, ಸೃಜನಶೀಲ ಶಕ್ತಿಗಳನ್ನು ಅರಿಯಬಹುದು. ಸ್ಥಳನಾಮಗಳಿಗೆ ಅವುಗಳದೇ ಆದ ಅರ್ಥವಿರುತ್ತದೆ. ಅರ್ಥರಹಿತವಾದ ಸ್ಥಳನಾಮಗಳು ಇರುವುದಿಲ್ಲ. ಊರುಗಳಿಗೆ ಆಯಾ ಹೆಸರುಗಳು ಪ್ರಾಪ್ತವಾಗಲು ಇಂಥದೇ ಕಾರಣಗಳು ಇವೆಯೆಂದು ಖಚಿತವಾಗಿ ಬೊಟ್ಟು ಮಾಡಿ ಹೇಳಲಿಕ್ಕೆಬಾರದು. ಆದರೂ ಕೆಲವು ಊರುಗಳಿಗೆ ಹೆಸರು ಬರಲು ಇರುವ ಕಾರಣಗಳನ್ನು ಗುರುತುಮಾಡಬಹುದು. ಧಾರವಾಡ ಜಿಲ್ಲೆಯಲ್ಲಿ ಕಂಡುಬರುವಂತಹ ಊರುಗಳಿಗೆ ಆ ಹೆಸರುಗಳು ಹೇಗೆ ಬಂದವು? ಎಂಬುದನ್ನು ಅಧ್ಯಯನ ಮಾಡಿದರೆ ಆಯಾ ಊರಿನ ಹಿನ್ನಲೆಯನ್ನು, ಸಂಸ್ಕೃತಿಯನ್ನು ಅಧ್ಯಯನ ಮಾಡಿದಂತಾಗುತ್ತದೆ. ಭಾಷಿಕ

ದೃಷ್ಟಿಯಿಂದ ಅಧ್ಯಯನ ಮಾಡಿದಾಗಲಂತೂ ಆ ಊರಿನ ಹೆಸರಿನ ಮೇಲೆ ಹೊಸಬೆಳಕು ಚೆಲ್ಲಿದಂತಾಗುತ್ತದೆ. ಧಾರವಾಡ ಜಿಲ್ಲೆಯಲ್ಲಿ ಅನೇಕ ಹಳ್ಳಿಗಳು ಜನವಸತಿ ಇರುವ ಗ್ರಾಮಗಳಾಗಿದ್ದು ಅವುಗಳಲ್ಲಿ ಕೆಲವು ಪ್ರಮುಖ ಊರುಗಳ ಸ್ಥಳನಾಮಗಳು, ನಿಷ್ಪತ್ತಿ ಅವುಗಳ ಮಹತ್ವ ಕುರಿತು ವಿವೇಚಿಸಲಾಗಿದೆ.

**ಊರು**

ಇದು ಅಚ್ಚದ್ರಾವಿಡ ಪದವಾಗಿದೆ. ಊರುಗಳಿಂದ ಕೊನೆಗೊಳ್ಳುವ ಸ್ಥಳಗಳು ಗಾತ್ರದಲ್ಲಿ ಸಾಮಾನ್ಯವಾಗಿ ಚಿಕ್ಕವಾಗಿರುತ್ತವೆ. ಅಂತಹ ವಿಶೇಷತೆಯನ್ನೇನು ಅವುಗಳು ಒಳಗೊಂಡಿರುವುದಿಲ್ಲ. ಇಲ್ಲಿ ನಿರ್ದಿಷ್ಟ ಮತ್ತು ವಾರ್ಗಿಕ ಘಟಕಗಳು ಸೇರುವಾಗ ಸ್ವರೈಕ್ಯ ಹೊಂದುವುದನ್ನು ಕಾಣಬಹುದು.

**ಪುರ**

ಪುರಪದದಿಂದ ಕೊನೆಗೊಳ್ಳುವ ಸ್ಥಳಗಳು ಊರಿಗಿಂತ ಗಾತ್ರದಲ್ಲಿ ದೊಡ್ಡವಿರುತ್ತವೆ.

**ಹಳ್ಳಿ**

ಹಳ್ಳಿಯಿಂದ ಕೊನೆಗೊಳ್ಳುವ ಸ್ಥಳಗಳು ಊರುಗಳಿಗಿಂತ ಗಾತ್ರದಲ್ಲಿ ಚಿಕ್ಕವಾಗಿರುತ್ತವೆ. ಹತ್ತಾರು ಮನೆಗಳು ಒಂದೆಡೆ ಇದ್ದರೆ ಅಂದು ಒಂದು ಹಳ್ಳಿಯಾಗುತ್ತದೆ.

**ಗ್ರಾಮ**

ಗ್ರಾಮ ಎನ್ನುವ ಪದವು ಸಂಸ್ಕೃತ ಪದವಾಗಿದೆ. ಇದು ಸಾಮಾನ್ಯವಾಗಿ ಊರುಗಳ ಹೆಸರಿನ ಕೊನೆಗೆ ಬರುವಂಥದ್ದು. ಈ ಗ್ರಾಮಗಾಂವ್ ಆಗುತ್ತದೆ. ಈ ಗಾಂವ್ ಪದವು ಹಿಂದಿ ಅಥವಾ ಮರಾಠಿಯಲ್ಲಿ ಊರು ಎನ್ನುವ ಅರ್ಥವನ್ನು ಕೊಡುತ್ತದೆ. ಮರಾಠಿಯ ಪ್ರಭಾವ ಧಾರವಾಡ ಜಿಲ್ಲೆಯಲ್ಲಿ ಇರುವುದರಿಂದ ಕೆಲ ಹಳ್ಳಿಗಳು ಗಾಂವ್‌ನಿಂದ ಅಂತ್ಯಗೊಳ್ಳುತ್ತವೆ. ಒಂದೊಂದು ಸಲ ಇಲ್ಲಿಯ ಅರ್ಥ ಸ್ವರೂಪವಾದ 'ವ್'ಬಿಟ್ಟು ಹೋಗಿ ಕೇವಲ 'ಗಾ' ಉಳಿಯುತ್ತದೆ.

**೨.೧. ಭೌಗೋಳಿಕ ಹಿನ್ನೆಲೆ**

ಭೌಗೋಳಿಕ ಅಂಶಗಳ ಆಧಾರದ ಮೇಲಿಂದ ಕರ್ನಾಟಕವನ್ನು ಪ್ರಾಕೃತಿಕವಾಗಿ ವಿಭಾಗಿಸಿದಾಗ ಪ್ರಸ್ತುತ ಯಮನೂರು ಬೆಳವಲನಾಡಿನ ನದಿ ಬಯಲು ಪ್ರದೇಶದಲ್ಲಿ ಕಂಡುಬರುತ್ತದೆ. ಮಲಪ್ರಭಾ, ತುಂಗಭದ್ರ, ಬೆಣ್ಣಿಹಳ್ಳ ಮಾಕನ ಹಳ್ಳ ಮುಂತಾದವು ಹರಿಯುವ ಮೂಲಕ ಇಲ್ಲಿನ ಭೂಮಿಯನ್ನು ಫಲವತ್ತಾಗಿ ಮಾಡಿವೆ. ಅಲ್ಲದೆ ದೈನಂದಿನ ಉಪಯೋಗಕ್ಕಾಗಿ ಸಣ್ಣಕೆರೆ ಹಾಗೂ ದೊಡ್ಡಕೆರೆಯ ನೀರನ್ನು ಉಪಯೋಗಿಸಲಾಗುತ್ತದೆ. ಇಲ್ಲಿನ ಭೂಮಿಯ ಸ್ವರೂಪವನ್ನು ಗಮನಿಸಿದಾಗ ಕಪ್ಪು ಮಿಶ್ರಿತ ಮೆಕ್ಕಲು ಮಣ್ಣು ಅಧಿಕ ಪ್ರಮಾಣದಲ್ಲಿರುವುದು ಗೋಚರಿಸುತ್ತದೆ. ಇದು ಹೆಚ್ಚು ಫಲವತ್ತಾಗಿರುವುದರಿಂದ ನೀರಾವರಿ ಪ್ರಯೋಜನ ಪಡೆಯಲಾಗಿದೆ. ಮಲಪ್ರಭಾ ಕಾಲುವೆಯು ಕೂಡ ಇದಕ್ಕೆ ಸಹಕಾರಿಯಾಗಿದೆ. ಇದರೊಂದಿಗೆ ಸಾಧಾರಣ ಭೂಮಿಯಲ್ಲಿ ಒಣ ಬೇಸಾಯವು ಕೂಡ ಅಭಿವೃದ್ಧಿ ಹೊಂದಿದೆ. ಇಂತಹ ನದಿ ಬಯಲು ಪ್ರದೇಶವು ಕರ್ನಾಟಕದ ಅರಸು ಮನೆತನಗಳು ಏಳಿಗೆ ಹೊಂದಲು ಸಹಕಾರಿಯಾಗಿದೆ.

ಏಕೆಂದರೆ ರಾಜಧಾನಿಗಳ ಬೆಳವಣಿಗೆಗೆ ನದಿ ಪಾತ್ರಗಳು ತೊಟ್ಟಿಲಿನೋಪಾದಿಯಾಗಿದ್ದವು, ಆರ್ಥಿಕ ಅಭಿವೃದ್ಧಿಯ ಜೊತೆಗೆ ಸಾಂಸ್ಕೃತಿಕ ಪ್ರಗತಿಗೂ ಇಂಥ ನದಿ ಬಯಲುಗಳೆ ಕಾರಣೀಭೂತವಾಗಿವೆ.

ಯಮನೂರ ಗ್ರಾಮವು ತಾಲ್ಲೂಕು ನವಲಗುಂದದಿಂದ ಪಶ್ಚಿಮಕ್ಕೆ ೫ಕಿ.ಮೀ. ದೂರದಲ್ಲಿದೆ. ಜಿಲ್ಲಾ ಕೇಂದ್ರ ಧಾರವಾಡದಿಂದ ೪೬ ಕಿ.ಮೀ. ದೂರದಲ್ಲಿದೆ. ಧಾರವಾಡ ಸೋಲಾಪುರ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿವೆ. ಯಮನೂರು ಉತ್ತರಕ್ಕೆ ಪಡೆಸೂರ, ಪೂರ್ವಕ್ಕೆ ಕುಮಾರಗೊಪ್ಪ ದಕ್ಷಿಣಕ್ಕೆ ಅರೆಕುರಹಟ್ಟಿ ಮತ್ತು ಪಶ್ಚಿಮಕ್ಕೆ ತಿರ್ಲಾಪುರ ಗ್ರಾಮಗಳನ್ನು ಮೇರೆಗಳನ್ನಾಗಿ ಹೊಂದಿದೆ. ಯಮನೂರ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವುದರಿಂದ ಉತ್ತಮ ಸಾರಿಗೆ ವ್ಯವಸ್ಥೆ ಇದೆ. ಏಕೆಂದರೆ ಯಮನೂರ ಒಂದು ಧಾರ್ಮಿಕ ಹಾಗೂ ಭಾವೈಕ್ಯತೆಯ ಸ್ಥಳವಾಗಿದೆ. ಸಾಮಾನ್ಯ ಹಾಗೂ ವೇಗದೂತ ಸಾರಿಗೆ ವಾಹನಗಳು ಸಹ ಇಲ್ಲಿ ನಿಲುಗಡೆಯಾಗುತ್ತವೆ. ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ೩೦೦ ಮಿ.ಮಿ.ಕೃಷಿ ಚಟುವಟಿಕೆಯ ಜೊತೆಗೆ ವೃತ್ತಿ ಆಧಾರಿತ ಕುಲಕಸಬು ಹಾಗೂ ಗುಡಿ ಕೈಗಾರಿಕೆಗಳು ಸಹ ಅಸ್ತಿತ್ವದಲ್ಲಿವೆ. ವಿವಿಧ ಸಮುದಾಯಗಳಿಗೆ ಸೇರಿದ ಒಟ್ಟು ೧೭೧೫ ಕುಟುಂಬಗಳಿವೆ. ೨೦೧೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೮೨೩೪ರಷ್ಟಿದೆ. ಅದರಲ್ಲಿ ೫೮೪ ಪರಿಶಿಷ್ಟ ಜಾತಿ ೪೫೭ ಪರಿಶಿಷ್ಟ ಪಂಗಡ ೪೨೩೦ರಷ್ಟು ಅಲ್ಪಸಂಖ್ಯಾತರು ಜೊತೆಗೆ ಹಿಂದುಳಿದ ಮತ್ತು ಇತರೆ ವರ್ಗಕ್ಕೆ ಸೇರಿದ ಜನರು ಇಲ್ಲಿ ನೆಲೆಸಿದ್ದಾರೆ.

### ೧. ನದಿ ಹಳ್ಳ ಕೆರೆ ಬಾವಿ

ಯಮನೂರು ಪ್ರದೇಶದ ಉತ್ತರಕ್ಕೆ ಮಲಪ್ರಭಾ ನದಿ ಹರಿಯುತ್ತದೆ. ದಕ್ಷಿಣಕ್ಕೆ ಇರುವ ಮಾಕನ ಹಳ್ಳವು ಪಶ್ಚಿಮದಿಂದ ಪೂರ್ವಕ್ಕೆ ಪ್ರವಹಿಸುತ್ತದೆ. ಮಲಪ್ರಭಾ ಬಲದಂಡೆ ಕಾಲುವೆಯು ಇಲ್ಲಿ ಹಾದು ಹೋಗಿರುವುದರಿಂದ ಅದರ ನೀರನ್ನು ಕುಡಿಯಲು ಹಾಗೂ ನೀರಾವರಿಗೆ ಬಳಸಿಕೊಳ್ಳಲಾಗಿದೆ. ನೀರಿನ ಇತರೆ ಮೂಲಗಳಾಗಿ ಸಣ್ಣ ಕೆರೆ, ದೊಡ್ಡ ಕೆರೆ ಹರಿದು ಮಲಪ್ರಭಾ ನದಿಯನ್ನು ಸೇರುತ್ತವೆ. ತೊರೆಯಂತಿರುವ ಎರಡು ಹಳ್ಳಗಳು ಕೂಡಾ ಮುಂದೆ ಬೆಣ್ಣೆಹಳ್ಳವನ್ನು ಸೇರುತ್ತವೆ. ಒಂದಾನೊಂದು ಕಾಲದಲ್ಲಿ ಜಲದ ಮೂಲಗಳೆನಿಸಿದ್ದ ಬಾವಿಗಳು ಮಾತ್ರ ಈ ಭಾಗದಲ್ಲಿ ಕಂಡು ಬರುವುದಿಲ್ಲ.

### ೨. ಹವಾಗುಣ

ಪ್ರಸ್ತುತ ಅಧ್ಯಯನದ ಕೇಂದ್ರ ಸ್ಥಳ ಎನಿಸಿರುವ ಯಮನೂರ ಗ್ರಾಮವು ಬೆಳವಲ ನಾಡಿನಲ್ಲಿ ಕೇಂದ್ರೀಕೃತವಾಗಿರುವುದರಿಂದ ಹವಾಗುಣದಲ್ಲಿಯೂ ಸಹ ಭಿನ್ನತೆಯನ್ನು ಕಾಣಬಹುದಾಗಿದೆ. ಬೇಸಿಗೆಯಲ್ಲಿ ಬಿಸಿಲು ಒಣ ಹವೆ ಶೆಕೆ ಮತ್ತು ಆರ್ದ್ರತೆಯಿಂದ ಕೂಡಿರುತ್ತದೆ. ಚಳಿಗಾಲದಲ್ಲಿ ಸಮ ಪ್ರಮಾಣದಲ್ಲಿ ಚಳಿ ಆವರಿಸುತ್ತದೆ. ಆದರೆ ಮಳೆಗಾಲದಲ್ಲಿ ಮಾತ್ರ ಸಾಧಾರಣ ಮಳೆ ಬೀಳುತ್ತದೆ. ಆದ್ದರಿಂದ ನೀರಾವರಿ ಸೌಲಭ್ಯವನ್ನು ಕಂಡುಕೊಂಡು ಉತ್ತಮ ಬೆಳೆ ಬೆಳೆಯುವ ಪ್ರಯತ್ನ ಮಾಡುತ್ತಿದ್ದಾರೆ.

### ೩. ಮಣ್ಣಿನ ಸ್ವರೂಪ

ಈ ಭಾಗದ ಮಣ್ಣಿನ ಸ್ವರೂಪವನ್ನು ಗಮನಿಸಿದಾಗ ಕಪ್ಪು ಮಿಶ್ರಿತ ಮೆಕ್ಕಲು ಮಣ್ಣು ಹಾಗೂ ಸುಣ್ಣ ಮಿಶ್ರಿತ ಫಲವತ್ತು ರಹಿತ ಭೂ ಪ್ರದೇಶವು ಸಹ ಇಲ್ಲಿ ಕಂಡುಬರುತ್ತದೆ. ಈ ಪ್ರಕಾರದ ಮಣ್ಣಿನಲ್ಲಿ ಬಿತ್ತನೆ ಮಾಡಲು ಅಧಿಕ ಮಳೆ ಬೇಕು. ಆದರೆ ಈ ಭಾಗದಲ್ಲಿ ಮಳೆಯ ಪ್ರಮಾಣ ಕಡಿಮೆ. ಆದ್ದರಿಂದ ಬೆಳೆ ಕೂಡಾ ಅಷ್ಟಕ್ಕಷ್ಟೆ. ನೀರಾವರಿ ಸೌಲಭ್ಯವಿದ್ದಲ್ಲಿ ಮಾತ್ರ ಸಮೃದ್ಧ ಬೆಳೆಯನ್ನು ಕಾಣಬಹುದು.

೪. ಪ್ರಾಣಿ ಪಕ್ಷಿ ಸಂಕುಲ

ಸೃಷ್ಟಿಕರ್ತ ಬ್ರಹ್ಮನು ಮನುಷ್ಯರಂತೆ ಪ್ರಾಣಿ ಸಂಕುಲಕ್ಕೂ ಆದ್ಯತೆ ನೀಡಿದ್ದಾನೆ. ನಿಸರ್ಗದ ಕೃಪೆಯಿಂದ ಇವು ಕೂಡಾ ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಕೃಷಿ ಚಟುವಟಿಕೆ, ಹೈನುಗಾರಿಕೆ ಮತ್ತು ಸಾಕು ಪ್ರಾಣಿಗಳ ರೂಪದಲ್ಲಿ ಪ್ರಾಣಿ ಪಕ್ಷಿ ಸಂಕುಲವನ್ನು ಬಳಸಿಕೊಳ್ಳಲಾಗಿದೆ. ಪಶುಪಾಲನೆ ಸಾಧಾರಣವಾಗಿ ಅಭಿವೃದ್ಧಿ ಹೊಂದಿದೆ. ಹೈನುಗಾರಿಕೆಯೂ ಸಹ ಅಲ್ಪ ಪ್ರಮಾಣದಲ್ಲಿ ಮುಂದುವರೆದುಕೊಂಡು ಬಂದಿದೆ. ಎತ್ತುಗಳನ್ನು ಕೃಷಿ ಚಟುವಟಿಕೆಗಳಿಗೆ, ಎಮ್ಮೆ, ಆಕಳು, ಕುರಿ, ಆಡುಗಳನ್ನು ಹೈನುಗಾರಿಕೆಗೆ, ಬೆಕ್ಕು ನಾಯಿಯನ್ನು ಮನೆಯ ಕಾವಲಿಗೆ ಉಪಯೋಗಿಸಲಾಗುತ್ತದೆ. ಮೊಲ ಸಾಕಣೆ, ಕೋಳಿ ಸಾಕಣೆಯನ್ನು ಸಹ ಅಲ್ಲಲ್ಲಿ ಕಾಣಬಹುದು. ವೇದಕಾಲದಿಂದಲೂ ಹಸು (ಆಕಳು) ಪೂಜನೀಯ ಹಾಗೂ ಸಂಪತ್ತಿನ ಸಂಕೇತವೆನಿಸಿತ್ತು. ಈಗಲೂ ಇದನ್ನು ಕಾಣಬಹುದು. ಏಕೆಂದರೆ ಹಸುವಿನಲ್ಲಿ ಕಾಮಧೇನುವಿನ ಪ್ರತಿರೂಪವನ್ನು ಕಾಣುವುದರಿಂದ ಮತ್ತು ಅದರ ತಲೆಯಿಂದ ಬಾಲದವರೆಗೆ ೩೩ ಕೋಟಿ ದೇವಾನು ದೇವತೆಗಳು ಅಡಗಿರುತ್ತಾರೆಂಬ ಭಾವನೆ ಈಗಲೂ ಬೇರೂರಿದೆ. ಆದ್ದರಿಂದ ಗೃಹ ಪ್ರವೇಶ ಮುಂತಾದ ವಿಶೇಷ ಸಂದರ್ಭಗಳಲ್ಲಿ ಹಸುವಿಗೆ ಪ್ರಥಮ ಆದ್ಯತೆ ನೀಡಲಾಗುತ್ತದೆ. ಗಿಳಿ ಹಾಗೂ ಕೋತಿಗಳನ್ನು ವಿನೋದಕ್ಕಾಗಿ ಇಲ್ಲವೆ ಉಪಕಸುಬು ಆಗಿ ಕೈಗೊಳ್ಳಲಾಗುತ್ತದೆ. ಪಕ್ಷಿ ಸಂಕುಲವು ಸಹ ಇಲ್ಲಿ ಕಂಡುಬರುತ್ತದೆ. ಕಾಗೆ ಗುಬ್ಬಿ ಗೂಬೆ ಇತ್ಯಾದಿಗಳು ಸಾಮಾನ್ಯವಾಗಿವೆ. ಹಕ್ಕಿಗಳ ಚಿಲಿಪಿಲಿ ಇಂಚರ ಮನಸ್ಸಿಗೆ ಮುದ ನೀಡುತ್ತದೆ. ಆದರೆ ಮಾನವನು ದುರಾಸೆಯ ಫಲವಾಗಿ ಪ್ರಾಣಿ ಪಕ್ಷಿ ಸಂಕುಲ ವಿನಾಶದತ್ತ ಸಾಗಿದೆ. ಮನುಷ್ಯ ಸ್ವಾರ್ಥಿಯಾದಂತೆ ಎಲ್ಲವನ್ನು ಎಲ್ಲರಿಂದ ದೂರವಾಗುತ್ತಿದ್ದಾನೆ.

೫. ಓಣಿಗಳು ಕೇರಿಗಳು

ಎಲ್ಲಾ ಊರುಗಳಲ್ಲಿ ಇರುವಂತೆ ಇಲ್ಲಿಯೂ ಓಣಿಗಳು, ಕೇರಿಗಳು ಇವೆ. ಯಮನೂರಿನಲ್ಲಿ ಒಟ್ಟು ೬ ವಾರ್ಡುಗಳಿದ್ದು, ಈ ಎಲ್ಲಾ ವಾರ್ಡುಗಳಲ್ಲಿ ವಾಸಿಸುವ ಜಾತಿ, ಸಮುದಾಯಕ್ಕನುಗುಣವಾಗಿ ಓಣಿಗಳ ಹೆಸರುಗಳು ಹುಟ್ಟಿಕೊಂಡಿವೆ. ಅವು ಗೌಡ್ರ ಓಣಿ, ಆರ್‍ಯಾರ ಓಣಿ, ಕುರುಬರ ಓಣಿ, ಮೇಟಿಯರ ಓಣಿ, ಸ್ವಾಮಿಗಳ ಓಣಿ, ಕಂಬಿಯರ ಓಣಿ, ಬಾರಿಕೇರ ಓಣಿ, ನೀರಾವರಿ ಆಫೀಸ್, ಅಳಿಯರ ನಗರ, ಹರಿಜನರ ಓಣಿ, ಮರಾಠರ ಓಣಿ, ಬ್ರಾಹ್ಮಣರ ಓಣಿ ಮುಂತಾದವುಗಳು.

೬. ಮಳೆ

ತಾಲೂಕಿನಲ್ಲಿ ವಾರ್ಷಿಕ ಮಳೆಯ ಪ್ರಮಾಣ ಸರಾಸರಿ ೩೦೦ ಮಿ.ಮೀ.ಇದೆ. ಆದರೆ ೨೦೦೮ ರಿಂದ ೨೦೧೨ರ ವರೆಗಿನ ಅಂಕಿ ಅಂಶ ನೋಡಿದರೆ ಕಡಿಮೆ ಪ್ರಮಾಣದ ಮಳೆಯಾಗಿರುವುದು ಕಂಡುಬರುತ್ತದೆ. ಹೀಗಾಗಿ ಇತ್ತೀಚಿನ ದಿನಗಳಲ್ಲಿ ನವಲಗುಂದ ತಾಲೂಕು ಮೇಲಿಂದ ಮೇಲೆ ಬರಗಾಲ ಸ್ಥಿತಿಗೆ ತಲುಪುವುದನ್ನು ಕಾಣುತ್ತೇವೆ. ಮಲಪ್ರಭ ಬಲದಂಡೆ ಕಾಲುವೆಯಿಂದ ನೀರನ್ನು ಪಡೆದರೂ ಸಹ, ಹೆಚ್ಚಿನ ಭೂಮಿ ಒಣಬೇಸಾಯ ಇರುವುದರಿಂದ ಆಗಾಗ ಆರ್ಥಿಕ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ.

೭. ಜಲ ಸಂಪತ್ತು

ಯಮನೂರು ಗ್ರಾಮದಲ್ಲಿ ಮಲಪ್ರಭಾ ಬಲದಂಡೆ ಕಾಲುವೆಯ ನೀರಿನ ಲಭ್ಯತೆ ಇದೆ. ಆದರೂ ಒಣ ಭೂಮಿಯನ್ನು ಹೊಂದಿದೆ. ಏಕೆಂದರೆ ಮಲಪ್ರಭಾ ನದಿಯ ನೀರನ್ನು ಸಂಪೂರ್ಣವಾಗಿ ನವಲಗುಂದ ತಾಲೂಕಿನಾದ್ಯಂತ ಬಳಸಿಕೊಳ್ಳಲಾಗಿಲ್ಲ.

ಯಮನೂರು ಗ್ರಾಮದಲ್ಲಿ ಯಾವುದೇ ದೊಡ್ಡ ನದಿ ಹರಿದುಬರುವುದಿಲ್ಲ. ಬೆಣ್ಣಿಹಳ್ಳ ಮಾತ್ರ ಗ್ರಾಮದಲ್ಲಿ ಪ್ರವಹಿಸಿದ್ದು, ಪ್ರಮುಖವಾಗಿದೆ. ಈ ಬೆಣ್ಣೆಹಳ್ಳದ ನೀರನ್ನು ಗ್ರಾಮದ ಸಮುದಾಯದವರು ಪಂಪ್‌ಸೆಟ್‌ಗಳ ಮೂಲಕ ನೀರಾವರಿಗೆ ಬಳಸಿಕೊಳ್ಳುತ್ತಾರೆ.

ಈ ಗ್ರಾಮದಲ್ಲಿ ಸುಮಾರು ೪ ಹಳ್ಳಗಳು ಹರಿದರೂ ಕೇವಲ ಮಳೆಗಾಲದಲ್ಲಿ ಮಾತ್ರ ಕೆಲವು ದಿನ ಪ್ರವಹಿಸಿ ಸ್ವಲ್ಪ ಪ್ರಯೋಜನಕಾರಿಯಾಗಿವೆ. ಗ್ರಾಮದ ಜಲದಮಟ್ಟ ದಿನದಿಂದ ದಿನಕ್ಕೆ ಕುಸಿಯುತ್ತಿದ್ದು, ಕೇವಲ ಕಾಲುವೆಯ ಮೂಲಕ ಹರಿದಿರುವ ನೀರಿನಿಂದ ಕೊಳವೆ ಬಾವಿಗಳನ್ನು ಆಶ್ರಯಿಸಿ ಕೃಷಿ ಚಟುವಟಿಕೆಗಳನ್ನು ಹಮ್ಮಿಕೊಳ್ಳಬೇಕಾದ ಪರಿಸ್ಥಿತಿ ನಿರ್ಮಾಣವಾಗಿದೆ.

**೮. ಸ್ವಾಭಾವಿಕ ಸಸ್ಯವರ್ಗ**

ಸ್ವಾಭಾವಿಕ ಸಸ್ಯವರ್ಗದ ದೃಷ್ಟಿಯಿಂದ ನೋಡಿದಾಗ ನವಲಗುಂದ ತಾಲೂಕು ಗುಡ್ಡಗಾಡು ಪ್ರದೇಶವಾಗಿರುವುದರಿಂದ ಗ್ರಾಮವು ತೀವ್ರ ಕೊರತೆಯನ್ನು ಎದುರಿಸುತ್ತಿದೆ. ಗ್ರಾಮದಲ್ಲಿ ಯಾವುದೇ ದಟ್ಟವಾದ ಅರಣ್ಯಪ್ರದೇಶವಿಲ್ಲ. ಈ ಹಿನ್ನೆಲೆಯಲ್ಲಿ ಸ್ವಾಭಾವಿಕ ಸಸ್ಯವರ್ಗ ವಿರಳವಾಗಿರುವುದು ಕಂಡುಬರುತ್ತದೆ.

ಗ್ರಾಮದ ಅರಣ್ಯ ಪ್ರದೇಶವನ್ನು ಉಷ್ಣವಲಯದ ಶುಷ್ಕ ವಿಭಾಗಕ್ಕೆ ಸೇರಿಸಬಹುದು. ಈ ವಿಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ನೀರಿನ ಆಶ್ರಯವಿಲ್ಲದೇ ಬೆಳೆಯುವ ಮುಳ್ಳುಕಂಟಿ, ಜಾಲಿಗಿಡಗಳು, ಬೇವಿನಮರ, ಹುಣಸೆಮರ, ಅರಳಿಮರಗಳು, ಬನ್ನಿಮರಗಳು, ಅಲ್ಲಲ್ಲಿ ಒಂದೊಂದಾಗಿ ನೀಲಗಿರಿ ಹಾಗೂ ಸಾಗವಾನಿ ಮರಗಳು ಕಂಡುಬರುತ್ತವೆ. ಸಾಮಾಜಿಕ ಅರಣ್ಯಕ್ಕೆ ಸಂಬಂಧಿಸಿದಂತೆ ಸರ್ಕಾರಿ ಜಾಗದಲ್ಲಿ ಗಿಡಗಳನ್ನು ಬೆಳೆಸಲಾಗಿದೆ. ಪ್ರತಿವರ್ಷ ವನ ಮಹೋತ್ಸವ ಕಾರ್ಯಕ್ರಮದ ಮೂಲಕ ಗಿಡಮರ ಬೆಳೆಸುತ್ತಾರೆ.

**೯. ಚಿಕ್ಕ ಹಾಗೂ ಗುಡಿ ಕೈಗಾರಿಕೆಗಳು**

ಗ್ರಾಮದಲ್ಲಿ ಪ್ರಮುಖವಾಗಿ ಹೇಳಿಕೊಳ್ಳಬಹುದಂತ ಬೃಹತ್ ಕೈಗಾರಿಕೆಗಳಿರದಿದ್ದರೂ, ಚಿಕ್ಕ ಮತ್ತು ಗುಡಿ ಕೈಗಾರಿಕೆಗಳಿಗೆ ಕೊರತೆಯಿಲ್ಲ. ಗೃಹೋಪಯೋಗಿ ವಸ್ತುಗಳಾದ ಕಟ್ಟಿಗೆಯ ಆಧುನಿಕ ಕಿಟಕಿ ಬಾಗಿಲುಗಳನ್ನು ತಯಾರಿಸುವುದು. ಕಟ್ಟಿಗೆ ಕೊರೆಯುವ ಕಾರ್ಖಾನೆಗಳು ಮುಂತಾದ ಚಿಕ್ಕ ಕೈಗಾರಿಕೆಗಳನ್ನು ಗ್ರಾಮವು ಹೊಂದಿವೆ.

ಇನ್ನು ಗುಡಿ ಕೈಗಾರಿಕೆಗಳಾದ ಗ್ರಾಮದಲ್ಲಿ ೮-೧೦ ಕುಟುಂಬಗಳು ಬಡಗಿತನ ಮಾಡುತ್ತಾರೆ. ಕೆಲವರು ರೊಟ್ಟಿ ಮಾಡುತ್ತಾರೆ. ಶಾವಿಗೆ ತಯಾರಿಕೆ ಮುಂತಾದ ಉದ್ಯೋಗದಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ಇವರಿಗೆ ಸ್ಥಳೀಯವಾಗಿ ಅಗತ್ಯ ಮಾರುಕಟ್ಟೆ ಸೌಲಭ್ಯ ಇಲ್ಲದಿರುವುದರಿಂದ ಈ ಚಟುವಟಿಕೆಗಳು ಉತ್ತಮ ರೀತಿಯಲ್ಲಿ ನಡೆಯುತ್ತಿಲ್ಲ.

**೧೦. ಭೂ ರಚನೆ**

ಜಿಲ್ಲೆಯ ಈಶಾನ್ಯ ಭಾಗದಲ್ಲಿ ಕಲಾದಗಿ ಶಿಲಾ ಶ್ರೇಣಿಗೆ ಮರಳುಗಲ್ಲು ಹರಡಿದೆ. ಅದು ನರಗುಂದ ಮತ್ತು ನವಲಗುಂದ ಗುಡ್ಡಗಳ ನೆತ್ತಿಯ ಮೇಲೂ ಕಂಡು ಬರುತ್ತದೆ. ಲ್ಯಾಟರೈಟ್(ಜಂಬಿಟ್ಟಿಗೆ)

ಶಿಲೆ ಜಿಲ್ಲೆಯ ವಿವಿಧ ಭಾಗಗಳಲ್ಲಿ ಹರಡಿದೆ. ಆದರೆ ಅದು ಜಿಲ್ಲೆಯ ಪಶ್ಚಿಮ ಭಾಗದಲ್ಲಿ ವಿಶೇಷ. ಧಾರವಾಡ ಶಿಲಾ ಶ್ರೇಣಿಗೆ ಸೇರಿದ ಶಿಲೆಗಳು ಮುಖ್ಯವಾಗಿ ಜಿಲ್ಲೆಯ ಮಧ್ಯ, ಪಶ್ಚಿಮ ಮತ್ತು ದಕ್ಷಿಣ ಭಾಗಗಳಲ್ಲಿದೆ. ಗ್ರಾನೈಟ್ ಮತ್ತು ನೈಸ್ ಶಿಲೆಗಳು ಸಾಮಾನ್ಯವಾಗಿ ಬಯಲು ಪ್ರದೇಶಗಳಲ್ಲಿ ಹರಡಿವೆ.

### ೧೧. ಉಷ್ಣತೆ

ಗದಗದಲ್ಲಿ ದಾಖಲಾಗಿರುವ ಉಷ್ಣತೆಯ ಅಂಕಿ ಅಂಶಗಳು ಸಾಮಾನ್ಯವಾಗಿ ಜಿಲ್ಲೆಯ ಎಲ್ಲಾ ಪ್ರದೇಶಗಳಿಗೂ ಅನ್ವಯಿಸುತ್ತವೆ. ಫೆಬ್ರವರಿ ತಿಂಗಳಿನ ನಂತರ ಉಷ್ಣತೆಯು ಅತಿ ಶೀಘ್ರವಾಗಿ ಏರುತ್ತದೆ. ಏಪ್ರಿಲ್ ತಿಂಗಳು ಅತಿ ಹೆಚ್ಚು ಉಷ್ಣತೆ ಇರುವ ತಿಂಗಳಾಗಿದ್ದು, ಸರಾಸರಿ ದೈನಂದಿನ ಗರಿಷ್ಠ ಉಷ್ಣತೆಯು ೩೭.೩° ಸೆಲ್ಸಿಯಸ್ ಮತ್ತು ಸರಾಸರಿ ದೈನಂದಿನ ಕನಿಷ್ಠ ಉಷ್ಣತೆಯು ೨೨.೫°ಸೆಲ್ಸಿಯಸ್ ಮತ್ತು ಸರಾಸರಿ ದೈನಂದಿನ ಉಷ್ಣತೆಯು ೨೯.೯° ಸೆಲ್ಸಿಯಸ್ ಆಗಿದೆ. ಮೇ ಮತ್ತು ಜೂನ್ ತಿಂಗಳುಗಳ ರಾತ್ರಿಯ ವೇಳೆಯು ಏಪ್ರಿಲ್ ತಿಂಗಳಲ್ಲಿರುವಂತೆ ಇರುತ್ತದೆ. ಬೇಸಿಗೆಯ ಕಾಲದಲ್ಲಿ ಕೆಲವು ವೇಳೆ ದೈನಂದಿನ ಉಷ್ಣತೆಯು ೪೧° ಸೆಲ್ಸಿಯಸ್‌ವರೆಗೆ ತಲುಪುತ್ತದೆ. ಕೆಲವೊಮ್ಮೆ ಬೇಸಿಗೆ ಕಾಲದಲ್ಲಿ ಬೀಳುವ ಬಿರುಮಳೆಯಿಂದ ಉಷ್ಣತೆ ತಾತ್ಕಾಲಿಕವಾಗಿ ಕಡಿಮೆಯಾಗುವುದು ಕಂಡುಬರುತ್ತದೆ. ನೈರುತ್ಯ ಮಾರುತುಗಳು ಮಳೆಯನ್ನು ಸುರಿಸಲು ಜೂನ್ ತಿಂಗಳ ಆದಿಯಲ್ಲಿ ಪ್ರಾರಂಭಿಸುವವು. ಇದರಿಂದ ದೈನಂದಿನ ಉಷ್ಣತೆಯಲ್ಲಿ ಗಮನಾರ್ಹ ಇಳಿತ ಕಂಡುಬರುವುದು. ಸೆಪ್ಟೆಂಬರ್ ನಂತರ ಮತ್ತೆ ಉಷ್ಣತೆ ಏರಲು ಪ್ರಾರಂಭಗೊಂಡು ವಾರ್ಷಿಕದಲ್ಲಿ ಎರಡನೇ ಅತಿ ಹೆಚ್ಚು ಉಷ್ಣತೆಯ ಪ್ರಮಾಣ ಅಕ್ಟೋಬರ್ ತಿಂಗಳಲ್ಲಿ ಕಂಡುಬರುತ್ತದೆ.

ಸಾಮಾನ್ಯವಾಗಿ ಡಿಸೆಂಬರ್ ತಿಂಗಳಿನಲ್ಲಿ ಅತಿ ಕಡಿಮೆ ಉಷ್ಣತೆಯು ದಾಖಲಾಗುತ್ತದೆ.(೧೬.೫° ಸೆಲ್ಸಿಯಸ್). ಕೆಲವೊಂದು ದಿವಸಗಳಲ್ಲಿ ಡಿಸೆಂಬರ್‌ನಿಂದ ಪೆಬ್ರವರಿ ತಿಂಗಳ ಅವಧಿಯಲ್ಲಿ ದೈನಂದಿನ ಅತಿ ಕನಿಷ್ಠ ಉಷ್ಣತೆಯ ೧೧° ಸೆಲ್ಸಿಯಸ್ ತಲುಪುತ್ತದೆ. ಜಿಲ್ಲೆಯಲ್ಲಿ ಅತಿ ಹೆಚ್ಚಿನ ಗರಿಷ್ಠ ಉಷ್ಣತೆ ಗದಗದಲ್ಲಿ ದಾಖಲಾಗಿರುವಂತೆ ಮೇ ೧೫, ೧೯೩೩ರಂದು ೪೧.೭° ಸೆಲ್ಸಿಯಸ್ ಆಗಿದ್ದರೆ ಅತಿ ಕಡಿಮೆ ಕನಿಷ್ಠ ಉಷ್ಣತೆಯು ೨೬ನೇ ಡಿಸೆಂಬರ್ ೧೯೭೫ರಂದು ೧೦° ಸೆಲ್ಸಿಯಸ್ ಆಗಿದೆ. ಇದು ಈವರೆಗಿನ ಉಷ್ಣತೆಗೆ ಸಂಬಂಧಿಸಿದ ಮಾಹಿತಿಯಾಗಿದೆ.

### ೧೨. ಸಾರಿಗೆ ಮತ್ತು ಸಂಪರ್ಕ

ಸಾರಿಗೆ ಅನಾದಿಕಾಲದಿಂದಲೂ ಅನುಚಾನವಾಗಿ ಮುಂದುವರೆದುಕೊಂಡು ಬಂದಿದೆ. ವಸ್ತುವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಿದಂತೆ ಮನುಷ್ಯ ವರ್ಗವನ್ನು ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಕರೆದೊಯ್ಯುವಲ್ಲಿ ಸಾರಿಗೆ ಪ್ರಮುಖವೆನಿಸಿದೆ. ಪ್ರಾಚೀನ ಕಾಲದಲ್ಲಿ ಕುದುರೆಗಾಡಿ, ಎತ್ತಿನಗಾಡಿ ಇಲ್ಲವೆ ಬಂಡಿ ಮುಖ್ಯ ಸಾರಿಗೆ ಸಾಧನಗಳಾಗಿದ್ದವು. ಇಂದು ಮನುಷ್ಯಕುಲ ಯಾಂತ್ರಿಕ ಜೀವನಕ್ಕೆ ಒಗ್ಗಿಕೊಂಡಿರುವುದರಿಂದ ಪ್ರತಿಯೊಂದನ್ನು ತ್ವರಿತವಾಗಿ ತಲುಪಬೇಕೆಂಬ ಹಂಬಲ. ಆದ್ದರಿಂದಲೇ ತನ್ನ ಅನುಕೂಲಕ್ಕೆ ತಕ್ಕಂತೆ ವಿವಿಧ ವಾಹನಗಳ ಉಪಯೋಗವನ್ನು ಕಂಡುಕೊಂಡಿದ್ದಾನೆ. ಅಧ್ಯಯನದ ಕೇಂದ್ರವಾದ ಯಮನೂರ ಪ್ರಮುಖ ರಾಜ್ಯ ಹೆದ್ದಾರಿಗೆ ಹೊಂದಿಕೊಂಡಿರುವುದರಿಂದ ಸಾಮಾನ್ಯ ಹಾಗೂ ವೇಗದೂತ ಬಸ್ಸುಗಳು ಸೇರಿದಂತೆ ಸಾಕಷ್ಟು ವಾಹನ ಸೌಕರ್ಯವನ್ನು ಹೊಂದಿದೆ. ಧಾರವಾಡ, ಹುಬ್ಬಳ್ಳಿ,

ಬದಾಮಿ, ಬಾಗಲಕೋಟೆ, ಬಿಜಾಪುರ ಹಾಗೂ ಸೊಲ್ಲಾಪುರ ಮುಂತಾದ ದೂರದ ಸ್ಥಳಗಳಿಗೆ ಸಾಕಷ್ಟು ವಾಹನ ಸೌಲಭ್ಯವಿದೆ. ಆದ್ದರಿಂದಲೇ ದೂರದ ಮಹಾರಾಷ್ಟ್ರ ರಾಜ್ಯದಿಂದಲೂ ಯಾತ್ರಿಕರು ಭಾವೈಕ್ಯತೆಯ ಕೇಂದ್ರವೆನಿಸಿರುವ ಚಾಂಗದೇವರ ನೆಲೆ ಎನಿಸಿರುವ ಯಮನೂರಿಗೆ ಪ್ರತಿ ಗುರುವಾರ ಹಾಗೂ ಅಮವಾಸ್ಯೆಯ ದಿನಗಳಂದು ಅಧಿಕ ಸಂಖ್ಯೆಯಲ್ಲಿ ಆಗಮಿಸುತ್ತಾರೆ. ಆದರೆ ಎಷ್ಟೇ ವಾಹನ ಸೌಕರ್ಯವಿದ್ದರೂ ಮೂಲ ಸೌಲಭ್ಯಗಳಾದ ವಸತಿ, ನೀರು, ಶಿಕ್ಷಣ, ಆರೋಗ್ಯ, ರಸ್ತೆ, ಸ್ವಚ್ಛತೆ ಇತ್ಯಾದಿಗಳ ಕೊರತೆ ಗ್ರಾಮದ ಹಲವಾರು ಭಾಗದಲ್ಲಿ ಕಂಡುಬರುತ್ತದೆ. ಈ ಸಮಸ್ಯೆಯಿಂದಾಗಿಯೇ ಯಾತ್ರಿಕರು ಹಾಗೂ ಭಕ್ತಾದಿಗಳು ರಾತ್ರಿ ಪ್ರಯಾಣ ಕೈಗೊಂಡು ಬೆಳಗಿನ ಜಾವ ಚಾಂಗದೇವರ ಸನ್ನಿಧಿಗೆ ಆಗಮಿಸಿ ತಮ್ಮ ಹರಕೆಗಳೆನ್ನೆಲ್ಲ ತೀರಿಸಿಕೊಂಡು ಬಹುಬೇಗನೆ ಅಲ್ಲಿಂದ ಮರಳುತ್ತಾರೆ. ಈ ದಿಸೆಯಲ್ಲಿ ಗ್ರಾಮ ಪಂಚಾಯಿತಿಯವರು ತಾಲೂಕು ಕೇಂದ್ರದ ಸಹಾಯದಿಂದ ಮೂಲ ಸೌಕರ್ಯಗಳಿಗೆ ಆದ್ಯತೆ ನೀಡಿದರು. ಯಾತ್ರಿಕರ ಸಂಖ್ಯೆ ಹೆಚ್ಚಳಗೊಂಡು ಆದಾಯ ಬರುವುದರ ಜೊತೆಗೆ ಈ ಕ್ಷೇತ್ರದ ಜನಪ್ರಿಯತೆ ಮತ್ತಷ್ಟು ಹೆಚ್ಚುವುದರಲ್ಲಿ ಯಾವುದೇ ಸಂಶಯವಿಲ್ಲ.

### ೧೩. ಪ್ರಮುಖ ಬೆಳೆಗಳು

'ಕೃಷಿಯ ಮೂಲ ಋಷಿಯ ಮೂಲ ಹುಡುಕಬಾರದೆಂಬ' ಹೇಳಿಕೆಯಿದೆ. ಕೃಷಿಯ ಮೂಲವನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಕೃಷಿ ನಾಗರೀಕತೆಯಷ್ಟೇ ಪ್ರಾಚೀನವಾದದ್ದು. ಅದು ಮಾನವನ ಅತಿ ಪುರಾತನ ಉದ್ಯೋಗವೆಂದು ಪರಿಗಣಿಸಲ್ಪಟ್ಟಿದೆ. ಭೂಮಿ ರಚಿತವಾಗಿ ಅದರ ಮೇಲೆ ಸಸ್ಯ ಹಾಗೂ ಪ್ರಾಣಿ ವರ್ಗಗಳು ಕಾಣಿಸಿಕೊಂಡಾಗಿನಿಂದ ಇದುವರೆಗೆ ಆಗಿರುವ ಸ್ಥಿತ್ಯಂತರಗಳ ಕಥೆ ಕುತೂಹಲಕರವಷ್ಟೇ ಅಲ್ಲ. ಅದ್ಭುತವೂ ಆಗಿದೆ.

ಪ್ರಸ್ತುತ ಅಧ್ಯಯನಕ್ಕೊಳಪಟ್ಟ ಯಮನೂರು ಕಪ್ಪು ಮಿಶ್ರಿತ ಫಲವತ್ತತೆಯಿಂದ ಕೂಡಿದ ಬೆಳವಲನಾಡು ಎಂದೇ ಪ್ರಸಿದ್ಧವಾಗಿದೆ. ಅಲ್ಲದೆ ಇಲ್ಲಿನ ಜನರ ಮುಖ್ಯ ಕಸುಬು ಕೃಷಿಯೇ ಆಗಿರುವುದರಿಂದ ಆಹಾರ ಹಾಗೂ ವಾಣಿಜ್ಯ ಬೆಳೆಗಳನ್ನು ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಾರೆ. ಜೋಳ, ಗೋವಿನಜೋಳ(ಮೆಕ್ಕೆಜೋಳ), ಗೋಧಿ, ಕಡಲೆ, ಹೆಸರು, ತೊಗರಿ, ಅಲಸಂದಿ ಮುಂತಾದ ಆಹಾರದ ಬೆಳೆ ಹಾಗೂ ದ್ವಿದಳ ದಾನ್ಯಗಳು, ಈರುಳ್ಳಿ, ಹತ್ತಿ, ಮೆಣಸಿನಕಾಯಿ ಮುಂತಾದ ವಾಣಿಜ್ಯ ಬೆಳೆಗಳನ್ನು ಸಹ ಇಲ್ಲಿ ಬೆಳೆಯಲಾಗುತ್ತದೆ. ನೀರಾವರಿ ಸೌಲಭ್ಯವಿರುವ ಪ್ರದೇಶಗಳಲ್ಲಿ ತರಕಾರಿ, ಹಣ್ಣು, ಹಂಪಲು ಹಾಗೂ ಸೊಪ್ಪುಗಳನ್ನು ಸಹ ಬೆಳೆಯಲಾಗುತ್ತದೆ. ಎಣ್ಣೆ ಕಾಳುಗಳಾದ ಕುಸುಬೆ, ಅಗಸಿ, ಕಡಲೆ, ಎಳ್ಳು, ಔಡಲ, ಶೇಂಗಾ ಮುಂತಾದವುಗಳನ್ನು ಇಲ್ಲಿ ಬೆಳೆಯುತ್ತಾರೆ.

ಒಟ್ಟಿನಲ್ಲಿ ಹೆಚ್ಚು ಪ್ರಮಾಣವಲ್ಲದಿದ್ದರೂ ಕಡಿಮೆ ಪ್ರಮಾಣದಲ್ಲಿ ವಿವಿಧ ಪ್ರಕಾರದ ಬೆಳೆ ಬೆಳೆಯುವಲ್ಲಿ ಭೂ ತಾಯಿ ಹಿಂದೆ ಬಿದ್ದಿಲ್ಲ. ಏಕೆಂದರೆ ಸಾತ್ವಿಕ ಹಾಗೂ ಭಾವೈಕ್ಯತೆಯ ಕೇಂದ್ರವೆನಿಸಿರುವ ಯಮನೂರು ನೆಲ, ಜಲ, ಸಂಪನ್ಮೂಲಗಳನ್ನು ಒಳಗೊಂಡು ನಿಸರ್ಗದತ್ತವಾದ ಸಹಜ ಸೌಂದರ್ಯ ಕಂಗೊಳಿಸುತ್ತದೆ. ಶುದ್ಧ ಗಾಳಿ, ಬೆಳಕು ಹಾಗೂ ಇಲ್ಲಿಯ ಪರಿಸರ ನೋಡುಗರನ್ನು ಕೈ ಬೀಸಿ ಕರೆಯುವಂತೆ ಈ ಪುಣ್ಯ ನೆಲ ಮಾಡಿದೆ.

### ೨.೨. ಯಮನೂರಿನ ಐತಿಹಾಸಿಕ ಹಿನ್ನೆಲೆ

ನಂಬಿಕೆ ಮತ್ತು ಆಚರಣೆಗಳು ಒಂದು ನಿರ್ಧಿಷ್ಟ ನೆಲೆಗಟ್ಟಿನ ಮೇಲೆ ನಿಂತಿದ್ದು ಮುಂದಿನ ಆಗು ಹೋಗುಗಳಿಗೆ ಪ್ರತ್ಯಕ್ಷ ಅಂಶಗಳಾಗಿ ಪರಿಣಮಿಸುತ್ತವೆ. ದೇವಾಲಯಗಳನ್ನೇ ಆಶ್ರಯ ತಾಣಗಳಾಗಿ ಮಾಡಿಕೊಂಡು ಸಂಘಟಿತರಾಗಿರುವ ಯಾತ್ರಾರ್ಥಿಗಳು ಒಂದು ಸೀಮಿತ ಪರಂಪರೆಗೆ ನಾಂದಿ ಹಾಡುತ್ತಾರೆ. ಈ ವ್ಯವಸ್ಥೆ ನೂರಾರು ವರ್ಷಗಳಿಂದಲೂ ಅವ್ಯಾಹತವಾಗಿ ನಡೆದುಕೊಂಡು ಬಂದಿದ್ದು, ಈಗಲೂ ಮುಂದುವರೆದಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಹೆಚ್ಚಿನ ಪ್ರಮಾಣದಲ್ಲಿ ಆವಿಷ್ಕಾರಗೊಂಡಿದ್ದರೂ ಈ ವ್ಯವಸ್ಥೆಗೆ ದಕ್ಕೆ ಬಂದಿಲ್ಲ.

ಯಮನೂರು ಹೆಸರೆ ಸೂಚಿಸುವಂತೆ ಹಿಂದೂ-ಮುಸ್ಲಿಂ ಭಾವೈಕ್ಯತೆಯನ್ನು ಸಾರುವ ಸಮನ್ವಯ ಕೇಂದ್ರ. ವಿಜಾಪುರದ ಆದಿಲ್‌ಷಾಹಿ ಕಾಲದಿಂದಲೂ ಇದು ಪ್ರಸಿದ್ಧಿ ಪಡೆದಿದೆ. ಎಮ್ಮಿಗನೂರು, ಎಮ್ಮಿಹಟ್ಟಿ, ಎಮ್ಮಿಗಳ ತಾಣ ಇತ್ಯಾದಿ ಹೆಸರುಗಳಿರುವುದು ಜನರನ್ನು ಮೌಖಿಕವಾಗಿ ಸಂದರ್ಶಿಸಿದಾಗ ತಿಳಿದು ಬರುವ ಅಂಶಗಳು. ಈ ಭಾಗದಲ್ಲಿ ಈ ವೃತ್ತಿ ಇನ್ನೂ ಮುಂದುವರೆದಿದೆ. ಮತ್ತೊಂದು ಐತಿಹ್ಯದ ಪ್ರಕಾರ ಭಾಗಸವಾರ ಚಾಂಗದೇವನು 'ಯಮ'ನಿಗೆ ಸವಾಲೊಡ್ಡಿ ಪರಕಾಯ ಪ್ರವೇಶ ಮಾಡಿ ಯಮನಿಗೆ ಸವಾಲೊಡ್ಡಿದ್ದರಿಂದ ಈ ಸ್ಥಳಕ್ಕೆ ಯಮನೂರು ಎಂಬ ಹೆಸರು ಬಂದಿರಬಹುದು ಎಂದು ನಂಬಿಕೆಯಿದೆ. ದಕ್ಷಿಣದ ಷಾಹಿಸುಲ್ತಾನರಿಗೂ ಮತ್ತು ವಿಜಯ ನಗರ ಸಾಮ್ರಾಜ್ಯದ ಮಧ್ಯ ಕ್ರಿ.ಶ.೧೫೬೫ರಲ್ಲಿ ನಡೆದ ತಾಳೀಕೋಟೆ ಯುದ್ಧದ ಸಮಯದಲ್ಲಿ ಸವದತ್ತಿ ತಾಲೂಕು ಶಿರಸಂಗಿಯ ವಿಠ್ಠಪ್ಪನು ಸುಲ್ತಾನರಿಗೆ ಸಹಾಯ ಮಾಡುವ ಮೂಲಕ ಪ್ರಸ್ತುತ ಗ್ರಾಮವನ್ನು ಬಳುವಳಿಯಾಗಿ ಪಡೆದು ಅಭಿವೃದ್ಧಿಪಡಿಸಿ ಸಂಸ್ಥಾನಿಕನಾದನು. ಇದಕ್ಕೂ ಪೂರ್ವದಲ್ಲಿಯೇ ಸುಲ್ತಾನರೂ ಈ ಕ್ಷೇತ್ರಕ್ಕೆ ನಡೆದುಕೊಳ್ಳುತ್ತಿದ್ದರು.

ಮಾರ್ಕಂಡೇಯ ಋಷಿಯು ಯಮನನ್ನು ಸೋಲಿಸಿ ಸಾವನ್ನು ಗೆದ್ದು ಚಿರಂಜೀವಿಯಾದುದರಿಂದ ಈ ಸ್ಥಳಕ್ಕೆ 'ಯಮನೂರು' ಎಂದು ಹೆಸರು ಬಂದಿರಬಹುದೆಂದು ಹೇಳಲಾಗಿದೆ. ಕ್ರಿ.ಶ.೧೬೭೭ರಲ್ಲಿ ಛತ್ರಪತಿ ಶಿವಾಜಿ ಮಹಾರಾಜ ಭದ್ರಾಪೂರಕ್ಕೆ ಬಂದು ಲಿಂಗಪ್ಪ ಸಂಗಪ್ಪ ಎಂಬುವರನ್ನು ಗೌಡ ಕುಲಕರ್ಣಿಯನ್ನಾಗಿ ನೇಮಿಸಿ ರಾಯಗಡಕ್ಕೆ ಮರಳುವಾಗ ಈ ಕ್ಷೇತ್ರಕ್ಕೆ ದರ್ಶನ ಕೊಟ್ಟಿದ್ದರೆಂದು ದೃಷ್ಟಾಂತವಿದೆ. 'ಚಾಂಗದೇವ' ಎಂಬ ಸಂತರು ಇಲ್ಲಿಗೆ ಆಗಮಿಸಿ ತಮ್ಮ ತಪೋಶಕ್ತಿಯಿಂದ ಈ ಕ್ಷೇತ್ರವನ್ನು ತಪೋವನವನ್ನಾಗಿ ಮಾಡಿ ಕಾಯಿಲೆಯಿಂದ ನರಳುವವರನ್ನು ನೊಂದವರನ್ನು ಸಾಂತ್ವಾನಗೊಳಿಸುವ, ಗುಣಪಡಿಸುವದರ ಮೂಲಕ ಇದನ್ನು ಪುಣ್ಯ ಭೂಮಿಯಾಗಿ ಮಾರ್ಪಡಿಸಿದರು. ಮುಂದಿನ ದಿನಗಳಲ್ಲಿ ಶಿರಸಂಗಿಯ ದೇಸಾಯಿಯವರು ದೇವಸ್ಥಾನ ಹಾಗೂ ಅಲ್ಲಿನ ಪೂಜಾ ವಿಧಾನಗಳಿಗಾಗಿ ನಾಲ್ಕನೂರು (೪೦೦) ಎಕರೆ ಭೂಮಿಯನ್ನು ಉಂಬಳಿಯಾಗಿ ನೀಡಿದ್ದರು. ಹಾಗೂ ಬರ್ಗೆ ಮನೆತನದ ಅರ್ಚಕರು ಪ್ರತಿ ವರ್ಷ ದೇಸಾಯಿಯವರ ವಾಡೆಗೆ ತೆರಳಿ ಅವರಿಂದ ಸನ್ಮಾನಿತರಾಗಿ ಕಾಣಿಕೆ ಪಡೆದು ಬರುತ್ತಿದ್ದರು. ನರಗುಂದದ ಬಾಬಾಸಾಹೇಬರು ಸಹ ಈ ಕ್ಷೇತ್ರದ ಅಭಿವೃದ್ಧಿಗೆ ೧೦೦ ಎಕರೆ ಭೂಮಿಯನ್ನು ದತ್ತಿ ಬಿಟ್ಟ ಕುರಿತು ಉಲ್ಲೇಖವಿದೆ. ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ನಂತರ ವಿಕ್ಟೋರಿಯಾ ರಾಣಿಯ ಆಜ್ಞೆಯಂತೆ ಎಲ್ಲ ಸಂಸ್ಥಾನಗಳೂ ಅಧಿಕಾರ ಕಳೆದುಕೊಂಡು ಭಾರತೀಯ ಬ್ರಿಟಿಷ್ ಸಾಮ್ರಾಜ್ಯದಲ್ಲಿ ವಿಲೀನಗೊಂಡವು.

ಉಂಬಳಿಯಾಗಿ ಕೊಟ್ಟಿದ್ದ ಭೂಮಿಯನ್ನು ಬ್ರಿಟಿಷ್ ಅಧಿಕಾರಿಗಳು ವೈಸ್‌ರಾಯನ ಸೂಚನೆಯಂತೆ ವಶಪಡಿಸಿಕೊಂಡರು. ಆದರೆ ಸ್ಥಳೀಯ ಮುಖಂಡರ ಮನವಿಯಂತೆ ಬರ್ಗೆ ಕುಟುಂಬದವರೆ ಅರ್ಚಕ ವೃತ್ತಿಯಲ್ಲಿ ಮುಂದುವರೆದು ಕಾಣಿಕ ಸ್ವೀಕರಿಸಲು ಅವಕಾಶ ಕಲ್ಪಿಸಿದರು. ೧೮ನೇ ಶತಮಾನದ ಕೊನೆಯಲ್ಲಿ ಮೈಸೂರು ಹುಲಿ ಟಿಪ್ಪು ಸುಲ್ತಾನ ಅಪಾರ ಸೈನ್ಯದೊಂದಿಗೆ ಈ ಭಾಗದ ಹಂಪೆ, ಮುಂಡರಗಿ, ನರಗುಂದ, ನವಿಲುಗುಂದ, ಪ್ರದೇಶಗಳ ಮೇಲೆ ದಾಳಿ ನಡೆಸಿ ಅಪಾರ ಸಂಪತ್ತನ್ನು ಕೊಳ್ಳೆಹೊಡೆದು ಹುಬ್ಬಳ್ಳಿಗೆ ಹೋಗುವಾಗ ಈ ಸ್ಥಳಕ್ಕೆ ಆಗಮಿಸಿ ಇಲ್ಲಿನ ಪವಾಡಗಳನ್ನು ಆಲಿಸಿ ಶೃಂಗೇರಿ ಮಠಕ್ಕೆ ಕಾಣಿಕೆ ನೀಡಿ ಗೌರವಿಸಿದಂತೆ ಇಲ್ಲಿಯೂ ಕಾಣಿಕೆ ನೀಡಿ ಗೌರವಿಸಿದನು. ಹಿಂದೂ ಮುಸ್ಲಿಂರಲ್ಲಿ ಭಾವೈಕ್ಯತೆ ನೆಲೆಸುವಂತೆ ಮಾಡುವುದಕ್ಕಾಗಿ ಇಸ್ಲಾಂ ಧರ್ಮದ ಚಿನ್ಹೆಗಳಾದ ಪಂಜಾಗಳನ್ನು ಶ್ರೀ ಚಾಂಗದೇವರ ಮೇಲಿರಿಸಿ ಆಶೀರ್ವಾದ ಪಡೆದನು. ಆ ಪಂಜಾಗಳು ಈಗಲೂ ಪೂಜಿಸಲ್ಪಡುತ್ತಿವೆ. ಇಲ್ಲಿಗೆ ಆಗಮಿಸುವ ಭಕ್ತ ವೃಂದ ಜಾತಿ ಬೇಧ ಮಾಡದೆ ಸಮನ್ವಯ ಸಾಧಿಸುವಂತೆ ಆಜ್ಞಾಪಿಸಿದ.

ಶ್ರೀ ಬರ್ಜೇಶ ಮತ್ತು ಡಾ.ಜೆ.ಎಫ್.ಫ್ಲೀಟ್ ಅವರು ಸಂಪಾದಿಸಿದ Pali Sanskrit and old Kannada Inscriptions ಸಂಪುಟದ ೨೪ನೇ ಶಾಸನವು ಕ್ರಿ.ಶ.೧೧೩೨ರ ಕಾಲಕ್ಕೆ ಸೇರಿದ್ದು, ಈ ಶಾಸನದಲ್ಲಿ ಯೋಗಿ ಶ್ರೀಚಾಂಗದೇವರ ವಂಶಾವಳಿ, ಅವರ ಬಾಲ್ಯ ಜೀವನ, ಕರ್ನಾಟಕದ ಅರಸು ಮನೆತನ, ಸೇವುಣ ಅಥವಾ ಯಾದವ ವಂಶದವರು ಶ್ರೀ ಚಾಂಗದೇವ ಮಠಕ್ಕೆ ದಾನ ನೀಡಿದ ವಿವರಗಳನ್ನು ಒಳಗೊಂಡಿರುವುದರಿಂದ ಇದೊಂದು ಐತಿಹಾಸಿಕ ದಾಖಲೆಯಾಗಿದೆ. ಅಲ್ಲದೆ ಮಹಾರಾಷ್ಟ್ರದ ಸಂತ ಜ್ಞಾನದೇವ ಹಾಗೂ ಚಾಂಗದೇವ ಸಮಕಾಲೀನವರು ಎಂಬ ಅಂಶ "ಮಹಾರಾಷ್ಟ್ರ ಸಾರಸ್ವತ" ಗ್ರಂಥದಲ್ಲಿ ಉಲ್ಲೇಖವಿದೆ. ಶ್ರೀ ವಿನಾಯಕ ಭಾವೆಯವರು ಈ ಗ್ರಂಥದ ಲೇಖಕರು. ಆದ್ದರಿಂದ ಇದೂ ಕೂಡ ಮಹತ್ವದ ದಾಖಲೆಯಾಗಿದೆ.

ಚಾಂಗದೇವರ ಪೂರ್ವಜರು ಯಾದವ ವಂಶದ ಸೋವಿದೇವನ ಆಸ್ಥಾನದಲ್ಲಿ ಪರಿಚಾರಕರಾಗಿದ್ದ ವಿಷಯವನ್ನು ಮರಾಠಿ ಸಾಹಿತ್ಯದ ಸಮಕಾಲೀನ ದಾಖಲೆಗಳು ತಿಳಿಸುತ್ತವೆ. ಇದೂ ಕೂಡ ಯಮನೂರು ಚರಿತ್ರೆಯನ್ನು ತಿಳಿಯಲು ಸಹಕಾರಿಯಾಗಿದೆ. ಹೀಗೆ ಯೋಗಿ ಶ್ರೇಷ್ಠ ಚಾಂಗದೇವರು ನೆಲೆಸಿದ್ದರೆಂಬ ಪ್ರತೀತಿ ಇರುವ ಯಮನೂರು ಕ್ಷೇತ್ರಕ್ಕೆ ಎಲ್ಲ ಮತ ಪಂಥಗಳ ಜನರು ನಡೆದುಕೊಳ್ಳುತ್ತಿರುವುದು ಭಾವೈಕ್ಯತೆಯ ಹೆಗ್ಗುರುತು ಆಗಿದೆ. ಆದರೆ ಮುಸ್ಲಿಂ ಬಾಂಧವರು ಮಾತ್ರ ಇದನ್ನು ಒಂದು ಧಾರ್ಮಿಕ ಕೇಂದ್ರ, ಯಾತ್ರಾ ಸ್ಥಳ ಎಂಬ ಭಾವನೆಯಿಂದ ಆರಾಧಿಸುತ್ತಾರೆ.

ಚಾಂಗದೇವರು ಅಷ್ಟಾಂಗ ಯೋಗಗಳನ್ನು ಅರಗಿಸಿಕೊಂಡಿದ್ದರಿಂದ ದಿವ್ಯ ದೃಷ್ಟಿ ಪ್ರಾಪ್ತವಾಗಿತ್ತು. ಆದಿಲ್‌ಷಾಹಿಯವರ ಆಳ್ವಿಕೆಯಲ್ಲಿ ಚಾಂಗದೇವ ವಂಶದ ಮೌನೇಶ್ವರರು ಪಿಂಜಾರ ಹೆಣ್ಣು ಮಗಳಿಗೆ ಸಂತಾನ ಪ್ರಾಪ್ತಿಗೆಂದು ಆಶೀರ್ವಚನ ನೀಡಿದ್ದರ ಫಲವಾಗಿ ಜನಿಸಿದ ಖಾದರಲಿಂಗ ಎಂಬ ಸಂತರು ಸವಣೂರು ತಾಲೂಕ ಹುಲಗೂರಿನಲ್ಲಿ ಆಗಿ ಹೋಗಿದ್ದಾರೆ. ಈ ರೀತಿ ಸಮಕಾಲೀನ ಮಹಾತ್ಮರು ಸರ್ವ ಧರ್ಮ ಸಮನ್ವಯತೆಯನ್ನು ತರಲು ತಮ್ಮ ಜೀವಮಾನವನ್ನೇ ಧಾರೆಯರೆದಿದ್ದಾರೆ.

ಕ್ರಿ.ಶ.೧೭೮೪ರಲ್ಲಿ ಇಸ್ಲಾಂ ಧರ್ಮದ ಒಂದು ವರ್ಗ ಮುಳಗುಂದ ಮಹಲ ಸವದತ್ತಿ ನ್ಯಾಯಾಲಯದಲ್ಲಿ ಈ ಕ್ಷೇತ್ರ ತಮ್ಮದು ಹಾಗೂ ಇಲ್ಲಿನ ಅರ್ಚಕ ವೃತ್ತಿ ತಮಗೆ ಸೇರಿದ್ದೆಂದು

ಮೊಕದ್ದಮೆ ದಾಖಲಿಸಿದ್ದರು. ಇದಕ್ಕೆ ಪ್ರತಿಯಾಗಿ ಮೂಲ ಅರ್ಚಕರಾದ ಬರ್ಗೆ ಮನೆತನದವರು ತಮ್ಮಲ್ಲಿರುವ ದಾಖಲೆಗಳನ್ನು ಪರಿಶೀಲಿಸುವಂತೆ ಮನವಿ ಸಲ್ಲಿಸಿದರು. ವಾದ ವಿವಾದಗಳು ಹಾಗೂ ದಾಖಲೆಗಳನ್ನು ಪರಿಶೀಲಿಸಿದ ನಂತರ ನ್ಯಾಯಾಧೀಶರು ಬರ್ಗೆ ಮನೆತನದವರೆ ಮುಂದುವರೆಯಲಿ ಎಂದು ಆದೇಶ ನೀಡಿದ ಕುರಿತು ದಾಖಲೆಗಳಿವೆ. ಇಷ್ಟಕ್ಕೆ ತೃಪ್ತಿಯಾಗದ ಮುಸ್ಲಿಂ ವರ್ಗದವರು ದೇವಸ್ಥಾನದ ಅರ್ಚಕ ವೃತ್ತಿ ಕೋರಿ ಪುನಃ ವಿವಾದ ಎಬ್ಬಿಸಿದರು. ಕ್ರಿ.ಶ.೧೮೨೬ ನವಲಗುಂದ ತಾಲೂಕಿನ ಮಾಮಲೇದಾರ ಶ್ರೀ ಶ್ರೀರಾಮ್ ಅವರ ಆಜ್ಞೆಯಂತೆ ವಿಚಾರಣೆ ನಡೆದು ಯಮನೂರಿನ ಚನ್ನಪ್ಪಗೌಡ ಪಾಟೀಲ ಮತ್ತು ವೀರಪ್ಪಯ್ಯ ಕುಲಕರ್ಣಿಯವರು ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಿ ಚಾಂಗದೇವ ಗದ್ದಿಗೆಯ ಅರ್ಚಕ ವೃತ್ತಿಯು ಕ್ಷೇತ್ರೋಜಿ ಬರ್ಗೆಯವರ ವಂಶಸ್ಥರಿಗೆ ವಂಶ ಪಾರಂಪರ್ಯವಾಗಿ ಮುಂದುವರೆಯಬೇಕೆಂದು ಕೈಫಿಯತ್ತನ್ನು ಬರ್ಗೆ ಕುಟುಂಬದವರಿಗೂ ಮಾಮಾಲೇದಾರರಿಗೂ ಬರೆದುಕೊಟ್ಟರು. ಈ ದಾಖಲೆಯನ್ನು ಕ್ರಿ.ಶ.೧೮೨೩ರಲ್ಲಿ ಥ್ಯಾಕರೆ ಎಂಬ ಬ್ರಿಟಿಷ ಅಧಿಕಾರಿಯು ಚಾಂಗದೇವರ ಗದ್ದುಗೆಯ ಭೇಟಿಗೆ ಬಂದ ವಿಷಯದ ಜೊತೆಗೆ ಮರಾಠಾ ಪೇಶ್ವೆಗಳು ಹಾಗೂ ಟಿಪ್ಪುಸುಲ್ತಾನ ಈ ಪ್ರದೇಶವನ್ನು ಎಷ್ಟು ವರ್ಷ ಆಳ್ವಿಕೆ ನಡೆಸಿದರೆಂಬ ಸಮಗ್ರ ವಿವರಗಳನ್ನು ದಾಖಲಿಸಿರುವುದರಿಂದ ಇದಕ್ಕೆ ಐತಿಹಾಸಿಕ ಮಹತ್ವವಿದೆ.

**ಯಮನೂರಿನ ಧಾರ್ಮಿಕ ನಂಬಿಕೆಗಳು**

ಯಮನೂರಿನ ಆರಾಧ್ಯ ದೈವವೆನಿಸಿದ ಚಾಂಗದೇವರ ಗದ್ದುಗೆಗೆ ಪ್ರತಿದಿನ ಎರಡು ಸಲ ಪೂಜೆ ನಡೆಯುತ್ತದೆ. ಸೂರ್ಯೋದಯದ ನಂತರ ವಿಭೂತಿಯಿಂದ ತೊಳೆದು ಗಂಧ, ಪುಷ್ಪಗಳಿಂದ ಅಲಂಕರಿಸಿ ದೂಪ ದೀಪಗಳಿಂದ ಪೂಜೆಗೈಯುವರು. ಮಧ್ಯಾಹ್ನ ಸಿಹಿ ಭೋಜನ ತಯಾರಿಸಿ ಅನ್ನದೊಂದಿಗೆ ನೈವೇದ್ಯ ಮಾಡುವರು. ಈ ಸಮಯದಲ್ಲಿ ಹೂ ಹಣ್ಣುಗಳಿಂದ ಪೂಜಿಸುವರು. ಈ ವೇಳೆ ದೊಡ್ಡ ಸದ್ದಿನೊಂದಿಗೆ ನಗಾರೆ ಬಾರಿಸುವರು. ಚಾಂಗದೇವ ದೇವಾಲಯ ಹೆಬ್ಬಾಗಿಲನ್ನು ಹೊಂದಿದ್ದು, ಎಡಭಾಗದಲ್ಲಿರುವ ಬ್ರಹ್ಮನ ಮೂರ್ತಿಗೆ ಹಣ್ಣು ಕಾಯಿ ನೈವೇಧ್ಯದ ಜೊತೆಗೆ ಸಕ್ಕರೆ, ಪುಠಾಣಿ ಹಂಚುವರು. ಇದರಿಂದ ರಚ್ಚೆ ಹಿಡಿದು ಅಳುವ ಕಂದಮ್ಮಗಳು ಅಳುನಿಲ್ಲಿಸುತ್ತವೆ ಎಂಬ ನಂಬಿಕೆ ಇದೆ. ಹಾಗೂ ಕಂದಮ್ಮಗಳಿಗೆ ಅಂಟಿದ ಸಣ್ಣ ಪುಟ್ಟ ಖಾಯಿಲೆಗಳು ದೂರಾಗುವವು. ಈಗಲೂ ಇದು ಮುಂದುವರೆದಿದೆ. ಹೆಬ್ಬಾಗಿಲು ದಾಟಿ ಒಳ ಬಂದರೆ ಕ್ಷೇತ್ರೋಜಿಯವರ ಸಮಾಧಿ ಪಕ್ಕದಲ್ಲಿ ತುಳಸಿ ಗಿಡಗಳಿಂದ ಆವರಿಸಲ್ಪಟ್ಟ ನರಸೂಬಾಯಿಯವರ ವೃಂದಾನವನವಿದೆ. ಇದಕ್ಕೆ ಹೊಂದಿಕೊಂಡಂತೆ ಬೇವಿನ ಮರವಿದೆ. ಭೂತ, ಪ್ರೇತ ಪೀಡಿತರನ್ನು ಈ ಮರದ ಹತ್ತಿರ ಕರೆದುಕೊಂಡು ಹೋದರೆ ಬಾಧೆಯಿಂದ ಮುಕ್ತರಾಗುತ್ತಾರೆಂಬ ನಂಬಿಕೆಯಿದೆ. ಇದಕ್ಕೆ ಹೊಂದಿಕೊಂಡಂತೆ ವಿಶಾಲ ಪ್ರಾಂಗಣವಿದೆ. ಇದನ್ನು ದಾಟಿ ಒಳ ಬಂದರೆ ಚಾಂಗದೇವರ ಗದ್ದುಗೆ ಇದರ ಮೇಲೆ ಆಯುಧಗಳು, ಹುಲಿ, ಕುದುರೆಯ ಕಟ್ಟಿಗೆ ಮೂರ್ತಿಗಳು, ಪಂಜಾಗಳು ಹಾಗೂ ಭಕ್ತರು ಕಾಣಿಕೆ ರೂಪದಲ್ಲಿ ಕೊಟ್ಟ ಬೆಳ್ಳಿ ಬಂಗಾರದ ಆಭರಣಗಳಿವೆ. ಈ ಗದ್ದುಗೆಯ ಕೆಳ ಭಾಗದಲ್ಲಿ ನರಸಿಂಹ ಮೂರ್ತಿ ಇದೆ. ಈ ಮೂರ್ತಿಗೆ ಕ್ಷೇತ್ರೋಜಿ ಬರ್ಗೆಯವರು ಪ್ರತಿದಿನ ತಮ್ಮ ದೇಹದಿಂದ ೫ ಹನಿ ರಕ್ತ ತರ್ಪಣ ಗೈಯುತ್ತಿದ್ದರು. ತಮ್ಮ ನಂತರ ತಮ್ಮ ವಂಶಜರು ಈ ವಿಧಾನವನ್ನು ಮುಂದುವರೆಸುತ್ತಾರೆಂಬ ನಂಬಿಕೆ ಅವರಲ್ಲಿ ಇರಲಿಲ್ಲವಾದ್ದರಿಂದ ಮೂರ್ತಿ ಕಾಣದಂತೆ

ಅಮೃತ ಶಿಲೆಯಿಂದ ಮುಚ್ಚಿ ಅದಕ್ಕೊಂದು ಬಾಗಿಲು ಮಾಡಿಸಿ ಅದು ಶಾಶ್ವತ ಮುಚ್ಚಿರುವಂತೆ ನೋಡಿಕೊಂಡರು. ಈ ಕ್ಷೇತ್ರದಲ್ಲಿ ಸುಮಾರು ನೂರಾರು ವರ್ಷಗಳ ಹಿಂದೆ ಕುರಿ ಕೋಣಗಳಂಥ ಪ್ರಾಣಿ ಬಲಿಯು ನಡೆಯುತ್ತಿತ್ತು. ಇದರ ಮೂಲವನ್ನು ಕೆದಕಿದಾಗ ಚಾಂಗದೇವರ ಶಿಷ್ಯರಾಗಿದ್ದ ಠಕ್ಕರು ಶಾಪಕ್ಕೊಳಗಾಗಿ ಈ ರೀತಿ ಬಲಿಯಾಗುತ್ತಿದ್ದರೆಂಬ ಪ್ರತೀತಿ ಇದೆ. ಸ್ವಾತಂತ್ರ್ಯ ನಂತರ ಈ ರೀತಿಯ ರಕ್ತಪಾತ ನಿಷೇಧಿಸಲ್ಪಟ್ಟಿತು. ಪೂಜೆಗೈದ ನೀರನ್ನು ತುಳಸಿ ಕಟ್ಟೆಯ ಮಣ್ಣಿನಲ್ಲಿ ಮಿಶ್ರಣ ಮಾಡಿ ಮೈ ಕೈಗಳಿಗೆ ಲೇಪಿಸಿದರೆ ಚರ್ಮರೋಗಗಳು ವಾಸಿಯಾಗುವವು. ಪ್ರತಿ ವರ್ಷ ಫಾಲ್ಗುಣ ಮಧ್ಯ ಪಂಚಮಿಯಂದು ಜಾತ್ರೆ ನೆರವೇರುತ್ತದೆ. ಅಂದು ದೇವರು ಝುಂಡಾ, ಹಸ್ತಗಳನ್ನು ಅರ್ಚಕರು, ಊರಿನ ಪ್ರಮುಖರು ಸೇರಿ ವಾದ್ಯಗಳೊಂದಿಗೆ ಛತ್ರ ಚಾಮರ ಸಮೇತ ಮೆರವಣಿಗೆ ಮಾಡುತ್ತಾ ಊರಿನಿಂದ ಅರ್ಧ ಕಿ.ಮೀ. ದೂರದಲ್ಲಿರುವ ಬೆಣ್ಣಿಹಳ್ಳದಲ್ಲಿ ತೊಳೆದು ಆ ನೀರನ್ನು ಬಿಂದಿಗೆಗಳಲ್ಲಿ ದೇವಸ್ಥಾನಕ್ಕೆ ತಂದು ಆ ರಾತ್ರಿ ಹಣತೆಯಲ್ಲಿ ಹಾಕಿ ಬತ್ತಿಯನ್ನು ಅದ್ದಿ ಬೆಂಕಿ ಕಟ್ಟಿ ಸೋಕಿಸಿದರೆ, ನಂದಾ ದೀಪದಂತೆ ರಾತ್ರಿಯುದ್ದಕ್ಕೂ ಬೆಳಗುತ್ತದೆ. ಇದಕ್ಕೆ ಮುಸ್ಲಿಂ ಬಾಂಧವರು 'ಉರುಸ್' ಎನ್ನುವರು. ನಂತರ ಭಕ್ತರು ಬೆಣ್ಣೆ ಹಳ್ಳದಲ್ಲಿ ಸ್ನಾನ ಮಾಡಿ ನೈವೇದ್ಯ ಅರ್ಪಿಸಿ ಕಾಣಿಕೆ ಕೊಡುತ್ತಾರೆ. ಖಾಯಿಲೆಯಿಂದ ನರಳುವವರು ಹಳ್ಳದಲ್ಲಿ ಮಿಂದು ದೇವರ ವಿಭೂತಿ ತೀರ್ಥಗಳನ್ನು ಪಡೆದರೆ ಅವರ ಖಾಯಿಲೆಗಳೂ ವಾಸಿಯಾಗುತ್ತವೆ. ಪ್ರತಿ ಗುರುವಾರ ದೇವಸ್ಥಾನದಲ್ಲಿ ವಿಶೇಷ ಪೂಜೆ ಇರುತ್ತದೆ. ಪ್ರಾರಂಭದಲ್ಲಿ ಜಾತ್ರೆಯ ನಿರ್ವಹಣೆಯನ್ನು ಧಾರವಾಡ ಜಿಲ್ಲಾ ಮಂಡಳಿ, ನಂತರ ತಾಲೂಕ ಮಂಡಳಿಯವರು ಈಗ ಸರಕಾರವೇ ಸ್ಥಳೀಯ ಸಂಪನ್ಮೂಲಗಳನ್ನಾಧರಿಸಿ ನೆರವೆರಿಸುತ್ತಾರೆ. ಈ ಸಮಯದಲ್ಲಿ ದೇಶದ ಮೂಲೆ-ಮೂಲೆಗಳಿಂದಲೂ ಭಕ್ತರು ಆಗಮಿಸಿ ಪುನೀತರಾಗುತ್ತಾರೆ. ಯಾವುದೇ ಜಾತಿ, ಮತ ಬೇಧವಿಲ್ಲದೆ ಎಲ್ಲರೂ ಭಾವೈಕ್ಯತೆಯಿಂದ ದೇವರ ಕಾರ್ಯದಲ್ಲಿ ಒಂದಾಗುತ್ತಾರೆ. ಹೋಳಿ ಹುಣ್ಣಿಮೆಯ ನಂತರ ಮೂರನೇ ದಿನದಿಂದ ಸತತ ಐದು ದಿನ ದೊಡ್ಡ ಪ್ರಮಾಣದಲ್ಲಿ, ನಂತರ ಯುಗಾದಿಯವರೆಗೆ ಸಣ್ಣ ಪ್ರಮಾಣದಲ್ಲಿ ಜಾತ್ರೆ ಮುಂದುವರೆದಿರುತ್ತದೆ. ಸಂತಾನವಿಲ್ಲದರು, ಕುಷ್ಠ ರೋಗಿಗಳು, ತೊನ್ನು ಹತ್ತಿದವರು ಕ್ಷೇತ್ರಕ್ಕೆ ಆಗಮಿಸಿ ಸೇವೆಗೈದು ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಳ್ಳುತ್ತಾರೆ.

**೨.೩. ಗ್ರಾಮದ ಕೋಷ್ಠಕ ವಿವರ**

| ೧. | ಭೌಗೋಳಿಕ ಕ್ಷೇತ್ರ | ೧೪೬೧ ಎಕರೆ/ಹೆಕ್ಟೇರ್ |
|---|---|---|
| ೨. | ಸಾಗು ಕ್ಷೇತ್ರ | ೧೪೪೨ ಹೆಕ್ಟೇರ್ |
| ೩. | ಗ್ರಂಥಾಲಯ ಕೇಂದ್ರ | ೦೧ |
| ೪. | ಮಳೆಯಾಶ್ರಿತ ಪ್ರದೇಶ | ೫೨೪.೬೩ |
| ೫. | ಗ್ರಾಮದ ನೀರಾವರಿ ಕ್ಷೇತ್ರ | ೯೧೭.೩೭ |
| ೬. | ರಸ್ತೆ | ೦೧ ಕಿ.ಮಿ. |
| ೭. | ಮಾರ್ಗ (ಕಾಲುದಾರಿ) | ೦೪ ಕಿ.ಮೀ. |
| ೮. | ಹಳ್ಳ | ೦೩ |
| ೯. | ಸ್ಮಶಾನ | ೦೨ |

| | | |
|---|---|---|
| ೧೦. | ಆರೋಗ್ಯ ಉಪಕೇಂದ್ರ | ೦೧ |
| ೧೧. | ಪ್ರಾಥಮಿಕ ಶಾಲೆ | ೦೧ |
| ೧೨. | ಅಂಚೆ ಕಛೇರಿ ಸೌಲಭ್ಯ | ೦೧ |
| ೧೩. | ಕುಡಿಯುವ ನೀರಿನ ಸೌಲಭ್ಯ | ಇದೆ |
| ೧೪. | ಪಂಪ್‌ಸೆಟ್‌ಗಳ ಸಂಖ್ಯೆ | ೦೫ |
| ೧೫. | ಅಂಗನವಾಡಿ ಕೇಂದ್ರ | ೦೨ |
| ೧೬. | ಖಾಸಗಿ ಕ್ಲಿನಿಕ್ | ೦೨ |
| ೧೭. | ಸರಕಾರಿ ಸಂಘಗಳು | ೦೩ |
| ೧೮. | ನ್ಯಾಯಬೆಲೆ ಅಂಗಡಿ | ೦೧ |
| ೧೯. | ದನಕರುಗಳ ಸಂಖ್ಯೆ | ೧೫೫೦ |
| ೨೦. | ದೇವಾಲಯಗಳು | ೧೦ |
| ೨೧. | ಮಸೀದಿ | ೩ |
| ೨೨. | ವಿದ್ಯುತ್ ಸೌಕರ್ಯ | ಇದೆ |
| ೨೩. | ನೀರಾವರಿ ಸೌಕರ್ಯ | ಇದೆ |
| ೨೪. | ಗ್ರಾಮದ ಒಟ್ಟು ಕುಟುಂಬಗಳು | ೧೭೧೫ |
| ೨೫. | ಗ್ರಾಮದ ಜನಸಂಖ್ಯೆ | ೮೨೩೪(೨೦೧೦-೧೧ನೇ ಜನಗಣತಿ) |
| ೨೬. | ನದಿಗಳು | ೦೧ |
| ೨೭. | ಕೆರೆಗಳು | ೦೨ ಶೆಟ್ಟಿಕೆರೆ, ದೊಡ್ಡಕೆರೆ |
| ೨೮. | ಅಂಗವಿಕಲರು | ೪೦-೫೦ ಜನರು |
| ೨೯. | ವಾರ್ಡಗಳ ಸಂಖ್ಯೆ | ೦೬ |

**೧೪. ಯಮನೂರು ಗ್ರಾಮದ ಜನಸಂಖ್ಯೆ ವಿವರ**

| ಅ.ನಂ. | ಒಟ್ಟು ಜನಸಂಖ್ಯೆ | | |
|---|---|---|---|
| ೧. | ಪುರುಷರು | ಮಹಿಳೆಯರು | ಒಟ್ಟು |
| | ೧೧೦೦ | ೧೦೬೮ | ೨೧೬೮ |
| ೨. | ಸಾಕ್ಷರರು | | |
| | ಗಂಡು ೭೯೭ | ಹೆಣ್ಣು ೪೩೯ | ೧೨೩೬/೧೦% |
| ೩. | ೧೮೯೭ | ೧೫೦೭ | ೩೪೦೪ |

**೨.೪. ಸುತ್ತಮುತ್ತಲ ಗ್ರಾಮದ ಪರಿಚಯ**

**ನವಲಗುಂದ**

ತಾಲೂಕು ಕೇಂದ್ರವಾದ ಧಾರವಾಡದಿಂದ ಈಶಾನ್ಯಕ್ಕೆ ೪೭ಕಿ.ಮೀ. ದೂರದಲ್ಲಿದ್ದು ಬೆಳ್ವೊಲ-೩೦೦ಕ್ಕೆ ಸೇರಿದೆ. ೪೦ ಗ್ರಾಮಗಳ ಆಡಳಿತ ಕೇಂದ್ರವಾಗಿದೆ. 'ನವಿಲ್ಗುಂದ-೪೦ ಎಂದೇ ಪ್ರಸಿದ್ಧವಾಗಿತ್ತು.

ಈ ಊರಿಂದ ಯಾವ ಶಾಸನಗಳೂ ವರದಿಯಾಗಿಲ್ಲ. ಆದರೆ ಸವದತ್ತಿಯ ಕ್ರಿ.ಶ.೧೨೨೮ರ ಶಾಸನ ದಾನ ಭೂಮಿಯನ್ನು ನವಿಲ್ಗುಂದ ಕೋಲಿನಲ್ಲಿ ಅಳೆದು ಕೊಟ್ಟ ಅಂಶವನ್ನು ತಿಳಿಸುತ್ತದೆ. ನವಿಲ್ಗುಂದ ಪದವು ನವಿಲು+ಕುಂದ ಎಂಬ ಎರಡು ಪದಗಳ ಸಂಯುಕ್ತ ಪದವಾಗಿದ್ದು, ಕುಂದ ಎಂದರೆ ಗುಡ್ಡ ಎಂದು ಅರ್ಥ. ಸುಮಾರು ಕ್ರಿ.ಶ.೧೬೮೦ರ ಅವಧಿಯಲ್ಲಿ ಸವಣೂರಿನ ನವಾಬ, ಔರಂಗಜೇಬನ ಸಾಮಂತನಾಗಿ ಈ ಭಾಗವನ್ನು ಆಳುತ್ತಿದ್ದನು. ಆಗ ನವಲಗುಂದದ ದೇಸಾಯಿ ಇಮ್ಮಡಿ ಜಾಯಗೌಡನ ಅಧೀನದಲ್ಲಿನ ಇದೊಂದು ಕಂದಾಯ ವಿಭಾಗವಾಗಿತ್ತು. ನವಲಗುಂದದಲ್ಲಿರುವ ನೀಲಮ್ಮನಕೆರೆ ಹಾಗೂ ಚೆನ್ನಮ್ಮನ ಕೆರೆಗಳು ದೇಸಾಯಿಗಳ ಕಾಲದ ಸಮಾಜ ಕಲ್ಯಾಣ ಕಾರ್ಯಗಳಾಗಿವೆ. ಇಂದಿಗೂ ನವಲಗುಂದ ಜನರು ಇದೇ ಕೆರೆಯ ನೀರನ್ನು ಬಳಸುತ್ತಾರೆ.

ಊರಲ್ಲಿರುವ ಅತ್ಯಂತ ಪ್ರಸಿದ್ಧವಾದ ದೇವಾಲಯಗಳೆಂದರೆ ಸುಮಾರು ಕ್ರಿ.ಶ.೧೬ನೆಯ ಶತಮಾನದಲ್ಲಿ ಜಡೆಸ್ವಾಮಿಗಳು ಆರಂಭಿಸಿದ ಗವಿಮಠ ಆಕರ್ಷಕ ಅಲಂಕೃತ ಕೆತ್ತನೆಯನ್ನು ಹೊಂದಿರುವ ಕಟ್ಟಿಗೆಯನ್ನು ಬಳಸಿ ನಿರ್ಮಿಸಿರುವ ಪಂಚಗೃಹ ಹಿರೇಮಠ ಮತ್ತು ಹುಬ್ಬಳ್ಳಿಯ ಸಿದ್ಧಾರೂಢಸ್ವಾಮಿಗಳ ಸಮಕಾಲೀನರಲ್ಲೊಬ್ಬರಾದ ಮಹಿಮಾನ್ವಿತ ಯೋಗಿಗಳಿಂದ ನಿರ್ಮಾಣಗೊಂಡಿರುವ ನಾಗಲಿಂಗ ಸ್ವಾಮಿ ಮಠ ಹಾಗೂ ದೇವೀ ಆರಾಧಕರಾದ ಹುರಕಡ್ಲಿ ಅಜ್ಜನವರ ಸಮಾಧಿಗಳು ಇಲ್ಲಿವೆ. ನಾಗಲಿಂಗಸ್ವಾಮಿ ಮಠ ಪಂಚಾಲ ಸಮಾಜದವರದಾಗಿದ್ದು ಇಲ್ಲಿ ಬೈಬಲ್‌ಗೂ ಸಮಾನ ಗೌರವ ಸಲ್ಲುತ್ತಿರುವುದು ಉಲ್ಲೇಖನೀಯವಾಗಿದೆ. ಈ ಬೈಬಲ್‌ನ್ನು ಇಂದಿಗೂ ಆ ಮಠದಲ್ಲಿ ಪೂಜೆಗೊಳ್ಳುತ್ತದೆ. ಇಲ್ಲಿ ಹತ್ತು ಮಸೀದಿಗಳು ಐದು ದರ್ಗಾಗಳಿದ್ದು ಅವುಗಳಲ್ಲಿ ಮಂಗಲ್‌ಶಾವಲಿಯ ದರ್ಗಾ ಮುಖ್ಯವಾದದ್ದಾಗಿದೆ. ಇನ್ನೊಂದು ಮುಖ್ಯ ವಿಶೇಷವೇನೆಂದರೆ ನವಲಗುಂದದಲ್ಲಿ ಆಕರ್ಷಕವಾದ ಬಣ್ಣಬಣ್ಣದ ಜಮಖಾನೆ ಗುಡಾರ, ಮರದ ತೊಟ್ಟಿಲುಗಳು ಹಾಗೂ ಆಟದ ಗೊಂಬೆಗಳಿಗೆ ಈ ಊರು ಪ್ರಸಿದ್ಧವಾಗಿದೆ.

**ಅಣ್ಣಿಗೇರಿ**

ನವಲಗುಂದ ತಾಲೂಕಿನ ಅಣ್ಣಿಗೇರಿಯು ಹುಬ್ಬಳ್ಳಿ, ಗದಗ ರೈಲ್ವೇ ಹಾಗೂ ಬಸ್ ಮಾರ್ಗದಲ್ಲಿರುವ ಅತ್ಯಂತ ಪ್ರಾಚೀನ ನಗರ ಪ್ರದೇಶವಾಗಿದೆ. ಸುಂದರ ಪ್ರಾಚೀನ ದೇವಾಲಯಗಳನ್ನು ಹೊಂದಿದೆ. ಅಣ್ಣಿಗೇರಿಯು ಕೆಲವು ಕಾಲ ಬೆಳ್ವೊಲ ನಾಡಿನ ಕೇಂದ್ರವಾಗಿತ್ತು. ಬಾದಾಮಿ ಚಾಲುಕ್ಯರಿಂದ ಆರಂಭಿಸಿ ವಿಜಯನಗರ, ಆದಿಲ್‌ಷಾಹಿಗಳ ಆಡಳಿತದ ಕುರುಹುಗಳು ಇಲ್ಲಿವೆ. ಚಾಲುಕ್ಯ ನಾಲ್ಕನೆಯ ಸೋಮೇಶ್ವರನ ರಾಜಧಾನಿ ಅಣ್ಣಿಗೇರಿಯೇ ಆಗಿತ್ತು. ಪ್ರಾಚೀನ ಶಾಸನಗಳಲ್ಲಿ ದಕ್ಷಿಣ ವಾರಣಾಸಿ ಎಂದೇ ಉಲ್ಲೇಖಿಸಿರುವ ಈ ಊರಿನಲ್ಲಿ ೨೫ಕ್ಕೂ ಮೇಲ್ಪಟ್ಟು ಶಿಲಾಶಾಸನಗಳು ದೊರೆತಿವೆ.

ಅಣ್ಣಿಗೇರಿಯು ಮೊದಲಿನಿಂದಲೂ ವ್ಯಾಪಾರಕೇಂದ್ರವಾಗಿತ್ತು. ಇಲ್ಲಿ ವಾಣಿಜ್ಯ ಬೆಳೆಗಳಾದ ಹತ್ತಿ, ಜೋಳ, ಗೋದಿ, ಮೆಣಸಿನಕಾಯಿ, ಕಾಳುಗಳು ಅತಿ ದೊಡ್ಡ ಪ್ರಮಾಣದಲ್ಲಿ ಮಾರಾಟವಾಗುತ್ತಿವೆ. ಎ.ಎಂ.ಅಣ್ಣಿಗೇರಿಯವರು ಹೇಳುವಂತೆ ಅಣ್ಣಿಗೇರಿಯಲ್ಲಿ "ಮೊಣಕಾಲುಮಟ್ಟ ಎಣ್ಣೆ" ಎಂಬ ನಾಣ್ನುಡಿ ಇತ್ತೆಂದು ಅದಕ್ಕೆ ಆಧಾರವಾಗಿ ಎಣ್ಣೆಕಾಳುಗಳಾದ ಶೇಂಗಾ, ಕುಸುಬಿ, ಸೂರ್ಯಕಾಂತಿ ಅಧಿಕವಾಗಿ

ಬೆಳೆಯುತ್ತಾರೆ. ಹತ್ತಿಯನ್ನು ಕೂಡಾ ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಾರೆ. ಹೀಗಾಗಿ ಪ್ರಸಿದ್ಧವಾದ ೨ ಹತ್ತಿ ಗಿರಣಿಗಳು ಒಂದು ಟೆಕ್ಸ್ಟೈಲ್‌ಮಿಲ್ಲಿದೆ. ಪ್ರಾಚೀನ ಶಾಸನಗಳಲ್ಲಿ ಈ ಊರನ್ನು 'ಅಣ್ಣಿಗೇರಿ-ಅನ್ನತಟಾಕ' ಎಂದು ಉಲ್ಲೇಖಗೊಂಡಿದೆ.

ಅಣ್ಣಿಗೇರಿಯ ಹೃದಯವೆಂದರೆ ಇಲ್ಲಿನ ಭವ್ಯ ಅಮೃತೇಶ್ವರ ದೇವಾಲಯ. ಇದು ಅತ್ಯಂತ ಪ್ರಾಚೀನ ದೇವಾಲಯ. ಪ್ರತಿವರ್ಷ ಹೊಸ್ತಿಲ ಹುಣ್ಣಿಮೆಗೆ ಅತ್ಯಂತ ವಿಜೃಂಭಣೆಯಿಂದ ಜಾತ್ರೆ ನಡೆಯುತ್ತದೆ. ಇತ್ತೀಚಿಗೆ ಪ್ರಾಚ್ಯವಸ್ತು ಇಲಾಖೆಗೆ ಒಳಪಟ್ಟಿದೆ. ಆದಿಕವಿ ಪಂಪನ ತಾಯಿಯ ತವರೂರಾಗಿದ್ದರಿಂದ ಪಂಪನು ಅಣ್ಣಿಗೇರಿಯಲ್ಲೇ ಬಹುಶಃ ಜನಿಸಿರಬೇಕೆಂಬುದು ಸಂಶೋಧಕರ ಅಭಿಪ್ರಾಯವಾಗಿದೆ. ಕವಿಯ ಸ್ಮರಣೆಗಾಗಿ ಇತ್ತೀಚೆಗೆ ಸ್ಥಾಪಿತವಾದ 'ಪಂಪ ಪ್ರತಿಷ್ಠಾನ'ವೆಂಬ ಸಂಸ್ಥೆಯು ಸಕ್ರೀಯವಾಗಿ ದುಡಿಯುತ್ತಿದೆ.

## ಅಧ್ಯಾಯ ೩

# ಸಾಮಾಜಿಕ ಜೀವನ

### ಪೀಠಿಕೆ

ಕೇವಲ ವೃತ್ತಿ ಅಥವಾ ಭೌಗೋಳಿಕ ಪರಿಸ್ಥಿತಿಯನ್ನು ಅನುಸರಿಸಿಯಷ್ಟೇ ಯಾವುದೇ ಸಮುದಾಯವು ಬೆಳೆಯುವುದಿಲ್ಲ. ಅದರ ನಡುವೆ ವಿವಿಧ ಸಮುದಾಯಗಳ ಸಂಬಂಧವು ಮುಖ್ಯವಾಗಿರುತ್ತದೆ. 'ಮಾನವ ಸಂಘಜೀವಿ, ಸಮಾಜ ಜೀವಿ' ಎಂಬ ಅರಿಸ್ಟಾಟಲನ ಮಾತು ತುಂಬಾ ಮಾರ್ಮಿಕವಾದದ್ದು. ವ್ಯಕ್ತಿ ಏಕಾಂಗಿಯಾಗಿ ಬದುಕಲು ಸಾಧ್ಯವಿಲ್ಲ. 'ಮನಕ್ಕ ಮನ ಕೂಡಿದರೆ ಮನಿಮಾರ, ಜನಕ್ಕ ಜನ ಕೂಡಿದರ ಸಹಕಾರ' ಎಂಬ ಜನಪದರ ನಾಣ್ಣುಡಿಯಂತೆ ಮಾನವ ಕಾಡಿನಿಂದ ನಾಡಿಗೆ ಬರುವ ಮೊದಲು ಗುಂಪು ಗುಂಪಾಗಿಯೇ ಇರುತ್ತಿದ್ದ. ಕ್ರಮೇಣ ಅಲೆಮಾರಿಯಾದಾಗಲೂ ಕೂಡ ಗುಂಪುಗಳು ಚದುರಲಿಲ್ಲ. ನೀರು, ಹಣ್ಣು ಹಂಪಲು, ಮೇವು ಎಲ್ಲಿ ಯಥೇಚ್ಛವಾಗಿ ದೊರೆಯುತ್ತಿತ್ತೋ, ಅಲ್ಲೆಲ್ಲ ನೆಲೆ ನಿಂತ ಜನಸಮೂಹಗಳೇ ಹಳ್ಳಿಗಳಾಗಿ ಪರಿಣಮಿಸಿದವು. ಅಲ್ಲಿ ಕುಟುಂಬ, ಸಮಾಜ, ಧರ್ಮ ಮುಂತಾದ ಸಂಸ್ಥೆಗಳು ಜನ್ಮತಾಳಿದವು.

ಯಾವುದೇ ಒಂದು ಸಮಾಜ, ಸಮುದಾಯ ಮೇಲ್ನೋಟಕ್ಕೆ ಅತಿ ಸರಳವೆನ್ನುವಂತೆ ಕಂಡುಬಂದರೂ, ಅದು ತನ್ನೊಡಲ ಒಳಗೆ ತನಗೆ ಅರಿವಾಗದಂತೆ, ಸೂಕ್ಷ್ಮವೂ ಸಂಕೀರ್ಣವೂ ಆದ ಸಾಮಾಜಿಕ ಸ್ವರೂಪಗಳನ್ನು ಹೊಂದಿರುತ್ತದೆ. ವ್ಯವಸ್ಥೆಯೊಳಗೆ ಸುಭದ್ರತೆಯನ್ನು ಕಾಯ್ದುಕೊಳ್ಳುವುದು ಆ ಸಮಾಜಕ್ಕೆ ಮುಖ್ಯವಾಗಿರುತ್ತದೆ. ಸುಭದ್ರತೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಸಾಮಾಜಿಕ ಜೀವನದಲ್ಲಿ ತನ್ನದೇ ಆದ ವರ್ಗ, ಕುಟುಂಬ ಪದ್ಧತಿ, ಮನೆ ನಿರ್ಮಾಣ, ಗೃಹಪ್ರವೇಶ, ನ್ಯಾಯಪದ್ಧತಿ, ಆಹಾರ ಪದ್ಧತಿ, ಉಡುಗೆ-ತೊಡುಗೆ, ವೈದ್ಯ, ಮದ್ದು ಚಿಕಿತ್ಸೆ, ಬೇಟೆ, ಜಾತಿ ಬಹಿಷ್ಕಾರ, ಜನಪದ ಕಲೆಗಳು, ಅತಿಥಿ ಸತ್ಕಾರ, ಅರ್ಥ ವ್ಯವಸ್ಥೆ ಮುಂತಾದವುಗಳನ್ನು ಹೊಂದಿದೆ. ಯಮೂರಿನ ಪರಿಸರಕ್ಕೆ ಎಷ್ಟೇ ಆಧುನಿಕತೆಯ ಪ್ರಭಾವ ಆದರೂ ತನ್ನ ಸಂಪ್ರದಾಯ ಆಚಾರ-ವಿಚಾರಗಳನ್ನು ಬಿಡದೆ ಮುಂದುವರೆಸಿಕೊಂಡು ಬರುತ್ತಿರುವುದನ್ನು ನಾವಿಲ್ಲಿ ಗಮನಿಸಬಹುದು.

### ೩.೧. ಜನಪದ ಸಮುದಾಯಗಳು

ಯಮನೂರು ಗ್ರಾಮದಲ್ಲಿ ಕರ್ನಾಟಕದ ಇತರ ಕಡೆಗಳಲ್ಲಿ ಇರುವಂತೆ, ಹಲವು ಮತ, ಪಂಥಗಳ ವಿವಿಧ ವರ್ಗಗಳ ಜನರು ವಾಸವಾಗಿದ್ದಾರೆ. ಭಾರತೀಯ ಸಂದರ್ಭದಲ್ಲಿಯಂತೂ ಸಮುದಾಯವು ಬಲಿಷ್ಠವಾದ ಒಂದು ಸಾಮಾಜಿಕ ಗುಣವಾಗಿದ್ದು, ಸಾಂಸ್ಕೃತಿಕವಾಗಿ ಹಲವು ಅಂಶಗಳನ್ನು ನಿಯಂತ್ರಿಸುವ, ನಿರ್ಮಿಸುವ

ವಿಶೇಷತೆಯನ್ನು ಸಮುದಾಯವು ಹೊಂದಿರುತ್ತದೆ. ಅಲ್ಲದೇ ಯಾವುದೇ ಸಮುದಾಯದ ಬಗೆಗೆ ಈ ಕುರಿತ ಅಧ್ಯಯನಕ್ಕೆ ಪೂರಕವಾದ ಅಂಶಗಳೇ ಆಗಿರುತ್ತವೆ.

ಯಮನೂರು ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಬ್ರಾಹ್ಮಣರು, ರೆಡ್ಡಿಗಳು, ಲಿಂಗಾಯತರು, ಮುಸಲ್ಮಾನರು, ಹರಿಂಚಿಕಾರಿ, ಭಜಂತ್ರಿ, ಬಡಿಗೇರ, ಕಮ್ಮಾರ, ಮಾದಿಗರು, ಹಡಪದರು, ಹೊಲೆಯರು, ಅಕ್ಕಸಾಲಿ, ತಳವಾರ ಮುಂತಾದ ಜನರು ವಾಸವಾಗಿದ್ದಾರೆ.

ಜಾತಿ ಪದ್ಧತಿ ಹಿಂದೂ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದೆ. ರಿಸ್ಲೆಯವರ ಪ್ರಕಾರ ಜಾತಿಯೆಂದರೆ ಒಬ್ಬ ಐತಿಹಾಸಿಕ ವ್ಯಕ್ತಿ ಅಥವಾ ದೈವಸಂಭೂತನೆನ್ನಲಾದ ಕಾಲ್ಪನಿಕ ಪೂರ್ವಜನಿಂದ ತಮ್ಮ ವಂಶವನ್ನು ಗುರುತಿಸುವ ಕೆಲವು ಕುಟುಂಬಗಳ ಒಂದು ಸಂಕಲನ ಅಥವಾ ಕುಟುಂಬಗಳ ಸಮೂಹ. ಪಾರಂಪರ್ಯವಾಗಿ ವಿವಾಹ ಸಂಬಂಧಗಳು ಆಯಾ ಜಾಗತಿಕ ಪರಿಮಿತಿಯಿಂದಲೇ ನಡೆಯುತ್ತವೆ. ಜಾತಿಯು ಬಹುಮಟ್ಟಿಗೆ ಪಾರಂಪರ್ಯವಾಗಿ ಬಂದ ಒಂದು ವೃತ್ತಿಯನ್ನು ಅನುಸರಿಸುವುದಾದರೂ ಇತ್ತೀಚಿನ ದಿನಗಳಲ್ಲಿ ಕೆಲವು ಬದಲಾವಣೆಗಳು ಕಂಡುಬರುತ್ತವೆ. ಉಡುಗೆ-ತೊಡುಗೆಗಳು, ಆಹಾರಾಭ್ಯಾಸಗಳು, ವಿವಾಹ, ಅಂತ್ಯಕ್ರಿಯೆ ಮುಂತಾದ ಧಾರ್ಮಿಕ ಆಚಾರಗಳು, ರೂಢಿ ಪದ್ಧತಿಗಳು, ಜಾತಿಯಿಂದ ಜಾತಿಗೆ ಭಿನ್ನವಾಗಿವೆ. ಬುಡಕಟ್ಟು ಎಂಬುದು ಅನೇಕ ಕುಲಗಳು, ಅಲೆಮಾರಿ ತಂಡಗಳು ಅಥವಾ ನಿಶ್ಚಿತ ಭೌಗೋಳಿಕ ಪ್ರದೇಶಗಳೊಳಗೆ ವಾಸಿಸುವ ಪ್ರತ್ಯೇಕ ಉಪಭಾಷೆ. ವಿಶಿಷ್ಟ ಸಂಸ್ಕೃತಿ, ಹಾಗೂ ಒಂದು ಸಾಮಾನ್ಯ ಸಾಮಾಜಿಕ ಸಂಘಟನೆ ಅಥವಾ ಇತರರಿಗಿಂತ ತಾವು ಬೇರೆ ಎಂಬ ಏಕತಾಭಾವನೆಯಿರುವ ಒಳಗುಂಪುಗಳ ಸಮೂಹವಾಗಿದೆ. ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಯಮನೂರಿನಲ್ಲಿಯೂ ಸಹ ಅನೇಕ ಜಾತಿ ಮತ್ತು ಬುಡಕಟ್ಟಿನ ಸಮುದಾಯದವರಿರುತ್ತಾರೆ. ಅವರ ಸಂಕ್ಷಿಪ್ತ ಮಾಹಿತಿಯನ್ನು ಈ ಕೆಳಗೆ ನೀಡಲಾಗಿದೆ.

**ಅಗಸ**

ಅಗಸರನ್ನು ಮಡಿವಾಳ, ದೋಬಿ ಮೊದಲಾದ ಹೆಸರುಗಳಿಂದಲೂ ಕರೆಯುತ್ತಾರೆ. ಬಟ್ಟೆ ಸ್ವಚ್ಛ ಮಾಡುವುದು ಇವರ ವಂಶಪಾರಂಪರ್ಯ ವೃತ್ತಿಯಾಗಿದೆ. ಕೆಲವರು ಕೃಷಿ ಹಾಗೂ ಇತರೆ ಉದ್ಯೋಗಗಳಲ್ಲೂ ತೊಡಗಿರುತ್ತಾರೆ. ಇವರು ಇತರ ಜಾತಿಗಳ ಮದುವೆ ಮುಂತಾದ ಸಂದರ್ಭಗಳಲ್ಲಿ ಮೆರವಣಿಗೆ ಸಾಗುವ ದಾರಿಯಲ್ಲಿ ಬಟ್ಟೆಹಾಸುವ (ಮಡಿ) ಕೆಲಸ ಮಾಡುತ್ತಾರೆ. ಇವರಲ್ಲಿ ಅನೇಕ ಬೆಡಗುಗಳಿವೆ. ಒಂದೇ ಬೆಡಗು ಇರುವವರಲ್ಲಿ ವಿವಾಹ ಮಾಡುವ ಸಂಪ್ರದಾಯವಿಲ್ಲ ಎಂದು ಹೇಳುತ್ತಾರೆ. ಇವರಲ್ಲಿ ಪುರೋಹಿತ ವರ್ಗವಿಲ್ಲ. ಮದುವೆ ಧಾರ್ಮಿಕ ಸಮಾರಂಭಗಳನ್ನು ಸಾಮಾನ್ಯವಾಗಿ ಬ್ರಾಹ್ಮಣ/ಲಿಂಗಾಯತ ಪುರೋಹಿತರಿಂದ ನೆರವೇರಿಸಿಕೊಳ್ಳುತ್ತಾರೆ. ಸಾಂಪ್ರದಾಯಿಕವಾಗಿ ಇವರಲ್ಲಿ ವಿಧವಾ ವಿವಾಹಕ್ಕೆ ಅನುಮತಿಯಿಲ್ಲ. ಲಿಂಗಧರಿಸುವ, ಲಿಂಗಧರಿಸದ ಎರಡು ವರ್ಗಗಳಿದ್ದು ಲಿಂಗಧರಿಸುವವರೇ ಶ್ರೇಷ್ಠ ಎನ್ನುವ ಭಾವನೆ ಈ ಸಮುದಾಯದಲ್ಲಿದ್ದು ಈಗೀಗ ಬೇಧ, ಭಾವ ಕಡಿಮೆಯಾಗಿ ಗಂಡು-ಹೆಣ್ಣು ಕೊಡುಕೊಳ್ಳುವಿಕೆ ನಡೆಯುತ್ತದೆ. ಇವರು ಎಲ್ಲಾ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ಭಾದ್ರಪದ ಶುದ್ಧ ಅನೇ ದಿನವನ್ನು ಜೋಕುಮಾರನು ಹುಟ್ಟಿದ ದಿನ ಮಳೆ ಬಂದು ಪೈರು ಚಿಗುರುವುದೆಂಬ ನಂಬಿಕೆ ಇಂದಿಗೂ ಇವರಲ್ಲಿ ಇದೆ.

ಯಮನೂರಿನಲ್ಲಿ ಅಗಸರದ್ದು ಒಂದು ಕುಟುಂಬವಿದೆ. ಅವರು ಬಟ್ಟೆ ಒಗೆಯುವ ಕಾರ್ಯ ಮಾಡುವುದಿಲ್ಲ. ಅವರು ವ್ಯವಸಾಯದಲ್ಲಿ ತೊಡಗಿಕೊಂಡಿದ್ದಾರೆ. ನಮ್ಮ ಪೂರ್ವಜರು ಆ ಕೆಲಸ ಮಾಡುತ್ತಿದ್ದರು ಎಂದು ಅವರ ಕುಟುಂಬದವರು ಹೇಳುತ್ತಾರೆ.

**ಸುಣಗಾರ**

ಸುಣಗಾರ ಹೆಣ್ಣು ಮಕ್ಕಳು ಏಳುದಿನಗಳು ಜೋಕುಮಾರನ ಮೂರ್ತಿಯನ್ನು ಹೊತ್ತುಕೊಂಡು ಓಣಿ ಓಣಿಗಳಲ್ಲಿ ಮನೆಮನೆಗೆ ತಿರುಗಿ ಹಾಡು ಅಥವಾ ಕಥೆಯನ್ನು ಹೇಳುವ ವಾಡಿಕೆಯಿದೆ. ಭಾದ್ರಪದ ಶುದ್ಧ ಹದಿನಾಲ್ಕನೇ ದಿನ ಆ ಮೂರ್ತಿಯನ್ನು ಅಗಸರು ಬಟ್ಟೆ ಒಗೆಯುವ ಕಲ್ಲಿನ ಬುಡದಲ್ಲಿಟ್ಟು ಬರುತ್ತಾರೆ. ಅಗಸರು ಇದಕ್ಕೆ ಮೂರು ದಿನದ ವ್ರತವನ್ನು ಆಚರಿಸುತ್ತಾರೆ. ಅವರು ಆ ದಿನಗಳಲ್ಲಿ ಕಲ್ಲಿನ ಮೇಲೆ ಬಟ್ಟೆ ಒಗೆಯುವುದಿಲ್ಲ.

**ವೀರಶೈವರು (ಲಿಂಗಾಯತ)**

ಇವರಲ್ಲಿ ಜಂಗಮರು, ಪಂಚಮಸಾಲಿ, ಗಾಣಿಗ, ಸಜ್ಜನ, ರಡ್ಡೇರ್, ಕುರುಹಿನಶೆಟ್ಟಿ, ಬಣಜಿಗ, ಸಿಂಪಿಗ ಎಂಬ ಪಂಗಡಗಳಿವೆ. ಇವರೆಲ್ಲರಲ್ಲಿ ಜಂಗಮರೇ ಶ್ರೇಷ್ಠ ಎಂಬ ಭಾವನೆ ಇದೆ. ಇವರಲ್ಲಿ ಮಠಪತಿ ಎಂಬ ಪಂಗಡದೊಂದಿಗೆ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಇವರಲ್ಲಿ ಆಚಾರ ವಿಚಾರ ಸಂಪ್ರದಾಯಗಳು ಒಂದೇ ಆಗಿವೆ. ಈ ಸಮುದಾಯದಲ್ಲಿ ಇಂತಹದೇ ಪ್ರಮುಖ ವೃತ್ತಿ ಎಂದು ಹೇಳಲು ಕಷ್ಟಸಾಧ್ಯ. ಕೃಷಿ, ವ್ಯಾಪಾರ, ನೌಕರಿ, ಕೂಲಿ ಹೀಗೆ ಅನೇಕ ವೃತ್ತಿಗಳಲ್ಲಿ ತೊಡಗಿದ್ದಾರೆ. ಶಿವ, ವೀರಭದ್ರ ಬಸವಣ್ಣ ಇವರ ಆರಾಧ್ಯ ದೈವಗಳಾಗಿವೆ.

**ಬ್ರಾಹ್ಮಣ**

ಬ್ರಾಹ್ಮಣರು ತ್ರಿಮತಗಳಿಗೆ ಸೇರಿರುತ್ತಾರೆ. ಸ್ಮಾರ್ತರು ಶಂಕರಾಚಾರ್ಯರ ಅನುಯಾಯಿಗಳು, ಮಾಧ್ವರು ಮಧ್ವಾಚಾರ್ಯರ ಅನುಯಾಯಿಗಳು ಮತ್ತು ಶ್ರೀವೈಷ್ಣವರು ರಾಮಾನುಜಾಚಾರ್ಯರ ಅನುಯಾಯಿಗಳು. ಬ್ರಾಹ್ಮಣರ ಸು.೫-೬ ಮನೆಗಳಿವೆ.

ಬ್ರಾಹ್ಮಣರಲ್ಲಿ ಕಾಶ್ಯಪ, ವಿಶ್ವಾಮಿತ್ರ, ಹರಿತಸ, ಭಾರದ್ವಾಜ, ಮೊದಲಾದ ಗೋತ್ರಗಳಿವೆ. ಇವರಲ್ಲಿ ೧೬ ಸಂಸ್ಕಾರಗಳಿರುತ್ತವೆ. ಅವುಗಳಲ್ಲಿ ಉಪನಯನವು ಅತಿ ಮುಖ್ಯವಾಗಿರುತ್ತದೆ. ಉಪನಯನದ ನಂತರ ಅವರು ಜನಿವಾರ ಧರಿಸುತ್ತಾರೆ.

ಇವರಲ್ಲಿ ಮೇಲೆ ಹೇಳಿದ ಹಾಗೆ ಸ್ಮಾರ್ತ, ವೈಷ್ಣವ, ಶ್ರೀವೈಷ್ಣವ, ಶೈವ ಎಂಬ ಒಳಪಂಗಡಗಳಿದ್ದು- ಈ ಪಂಗಡಗಳಲ್ಲಿ ಹೆಚ್ಚು ಕಡಿಮೆ ಎಂಬ ಭಾವನೆಗಳುಂಟು. ಕೊಡುಕೊಳ್ಳುವಿಕೆ ನಿಷೇಧವಿದ್ದರೂ ಊಟ ಉಪಚಾರ ನಡೆಯುತ್ತದೆ. ಈಗೀಗ ಇಂತಹ ಕಟ್ಟುಪಾಡುಗಳು ಸಡಿಲಗೊಳ್ಳುತ್ತಿವೆ. ಈ ಸಮುದಾಯಕ್ಕೆ ಲಕ್ಷ್ಮೀನರಸಿಂಹ, ವೆಂಕಟರಮಣ, ರಾಘವೇಂದ್ರ ಪ್ರಮುಖ ಆರಾಧ್ಯ ದೈವಗಳಾಗಿವೆ. ಮತ್ತು ತಮ್ಮ ಊರಿನ ಅಧಿದೇವತೆ ಚಾಂಗದೇವರಿಗೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

**ಪಟ್ವೇಗಾರ**

ಇವರು ತಮ್ಮನ್ನು ಸಹಸ್ರಾರ್ಜುನ ಸೋಮವಂಶ ಕ್ಷತ್ರಿಯರೆಂದೂ ಕರೆದುಕೊಳ್ಳುತ್ತಾರೆ. ಬಟ್ಟೆ ವ್ಯಾಪಾರ ಮಾಡುವುದು ಪ್ರಮುಖ ಉದ್ಯೋಗವಾದರೂ ಇವರು ಈಗೀಗ ಇತರೆ ಉದ್ಯೋಗದಲ್ಲೂ ತೊಡಗಿರುತ್ತಾರೆ. ಇವರಲ್ಲಿಯೂ ಅನೇಕ ಗೋತ್ರಗಳಿರುತ್ತವೆ. ಸಗೋತ್ರವಿದ್ದರೆ ವಿವಾಹ ಸಂಬಂಧ ಏರ್ಪಡುವುದಿಲ್ಲ. ಇವರಲ್ಲಿಯೂ ಜನಿವಾರ ಹಾಕುವ ಪದ್ಧತಿ ಇದೆ. ಮರಾಠಿ-ಗುಜರಾತಿ ಮಿಶ್ರಿತ ಅಹಿರಾಣಿ ಭಾಷೆ ಮಾತನಾಡುತ್ತಾರೆ.

ಇವರು ಅಂಬಾಭವಾನಿ, ತುಳಜಾಭವಾನಿ, ಯಲ್ಲಮ್ಮ ಮುಂತಾದ ಶಕ್ತಿದೇವತೆಗಳನ್ನು ಆರಾಧಿಸುತ್ತಾರೆ. ನೂಲುಹುಣ್ಣಿಮೆ, ದುರ್ಗಾಷ್ಟಮಿ, ಮಹಾನವಮಿ, ದೀಪಾವಳಿ ಇವರು ಆಚರಿಸುವ ಪ್ರಮುಖ ಹಬ್ಬಗಳಾಗಿವೆ. ಇವರು ಮಾಂಸಾಹಾರ ಸೇವಿಸುತ್ತಾರೆ. ಇವರಲ್ಲಿ ಶವವನ್ನು ದಹನ ಮಾಡುವ ಪದ್ಧತಿಯಿದೆ. ಇವರು ಪಂಚರ ಸಮ್ಮುಖದಲ್ಲಿ ಎಲ್ಲ ಸಾಮಾಜಿಕ ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ. ಸಾಮೂಹಿಕ ವಿವಾಹ ಇವರಲ್ಲಿ ಇತ್ತೀಚೆಗೆ ಹೆಚ್ಚಾಗಿರುವುದು ಕಂಡುಬರುತ್ತವೆ. ಯಮನೂರಪ್ಪನ ಉರುಸಿನ ಸಂದರ್ಭದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ.

**ರೆಡ್ಡಿಗಳು**

ಒಕ್ಕಲುತನ ಮಾಡುವ ಒಂದು ವರ್ಗ. ಇವರನ್ನು ಒಕ್ಕಲಿಗರೆಂದು ಕರೆಯುವರು. ಏಕೆಂದರೆ ಇವರ ಸಾಂಪ್ರದಾಯಿಕ ಉದ್ಯೋಗ-ಒಕ್ಕಲುತನ. ಆದರೂ ಇತರ ಉದ್ಯೋಗದಲ್ಲಿ ತೊಡಗಿರುತ್ತಾರೆ. ಲಿಂಗಾಯಿತರೆಡ್ಡಿ, ಮತ್ತು ನಾಮದ ರೆಡ್ಡಿಯವರೂ ಕೂಡಾ ಇದ್ದಾರೆ. ಇವರು ಕನ್ನಡ ಭಾಷೆ ಮಾತನಾಡುತ್ತಾರೆ. ಇವರು ಸಸ್ಯಹಾರಿಗಳು. ಹೇಮರೆಡ್ಡಿ ಮಲ್ಲಮ್ಮ, ಯೋಗಿ ವೇಮನ ಮುಂತಾದವರನ್ನು ಗೌರವಿಸುತ್ತಾರೆ. ಇವರಲ್ಲಿ ಪುರೋಹಿತವರ್ಗ ಇಲ್ಲ. ಇವರು ವಿವಾಹ ಮುಂತಾದ ಧಾರ್ಮಿಕ ಕಾರ್ಯಗಳಿಗೆ ಜಂಗಮರನ್ನು ಕರೆಯುತ್ತಾರೆ. ಇವರು ಶ್ರೀಶೈಲ, ಮೈಲಾರ, ಸೌದತ್ತಿ, ಹಿರೇಮೈಲಾರ, ದೇವರಗುಡ್ಡ ಮುಂತಾದ ಯಾತ್ರಾ ಸ್ಥಳಗಳಿಗೆ ಹೋಗುತ್ತಾರೆ. ಇವರಲ್ಲಿ ಶವವನ್ನು ಹೂಳುತ್ತಾರೆ.

ರೆಡ್ಡಿಗಳಲ್ಲಿ ನಾಮದರೆಡ್ಡಿ ಎಂಬುವರು ವೈಷ್ಣವ ಸಂಪ್ರದಾಯದವರಾಗಿರುತ್ತಾರೆ. ಇವರು ವೆಂಕಟರಮಣ, ಮಾರುತಿ, ಎಲ್ಲಮ್ಮ ಮುಂತಾದ ದೇವರುಗಳನ್ನು ಆರಾಧಿಸುತ್ತಾರೆ. ಗೋಕುಲಾಷ್ಟಮಿ ಹಬ್ಬವನ್ನು ರಡ್ಡೇರು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಾರೆ. ಇವರ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣರು ನೆರವೇರಿಸುತ್ತಾರೆ. ಇವರು ಸಸ್ಯಹಾರಿಗಳಾಗಿದ್ದಾರೆ. ಇವರು ಶವ ಸಂಸ್ಕಾರವನ್ನು ಸುಡುವ ಮೂಲಕ ನೆರವೇರಿಸುತ್ತಾರೆ.

**ಬಣಜಿಗರು**

'ಬಣಜಿಗ' ಎಂದ ಕೂಡಲೆ,

"ಎಣ್ಣೆಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ

ಕಳ್ಳ ತಳವಾರ ಬಲ್ಲ| ಬಣಜಿಗ

ಎಲ್ಲವನು ಬಲ್ಲ ||ಸರ್ವಜ್ಞ||

ಎಂಬ ತ್ರಿಪದಿಯು ಜ್ಞಾಪಕಕ್ಕೆ ಬರುತ್ತದೆ. ಅಂದರೆ ಇವರು ತುಂಬಾ ಜಾಣರು ಎಂಬುದು ವ್ಯಕ್ತವಾಗಿದೆ. ಬಣಜಿಗ ಎಂಬ ಪದವು 'ವಣಜಿಗ' ಎಂಬ ಪದದಿಂದ ಬಂದಿದ್ದು, ಇವರು ಬಹು ಪ್ರಾಚೀನ ಕಾಲದಿಂದಲೂ ವರ್ತಕರ ಸಂಘವನ್ನು ಕಟ್ಟಿಕೊಂಡು ವ್ಯಾಪಾರ ಮಾಡುತ್ತಿದ್ದರು. ಈ ಸಮುದಾಯದ ವೃತ್ತಿ ಪ್ರಮುಖವಾಗಿ ದಲಾಲಿ, ವ್ಯಾಪಾರ ಮತ್ತು ಕೃಷಿಯಾಗಿದೆ. ಈ ಸಮುದಾಯದವರ ಸುಮಾರು ೪-೫ ಕುಟುಂಬಗಳು ಇಲ್ಲಿ ವಾಸಿಸುತ್ತಿವೆ.

**ಹೂಗಾರ**

ದೇವಸ್ಥಾನಗಳಿಗೆ, ಊರಿನ ಲಿಂಗಾಯತ ಹಾಗೂ ಇತರೆ ಜಾತಿಯವರಿಗೆ ವಿಶೇಷ ಸಂದರ್ಭಗಳಲ್ಲಿ, ದೇವರ ಪೂಜೆಗೆ ಹೂ-ಪತ್ರಿ ಒದಗಿಸುವುದೂ, ವಿವಾಹದ ಸಂದರ್ಭದಲ್ಲಿ ಬಾಸಿಂಗ ಹಾಗೂ ಹೂಮಾಲೆ ಕಟ್ಟಿಕೊಡುವುದು ಮುಖ್ಯ ಉದ್ಯೋಗವಾಗಿದೆ. ಇತ್ತೀಚೆಗೆ ಇವರು ಬೇಸಾಯ ಮತ್ತಿತರ ಉದ್ಯೋಗದಲ್ಲಿ ತೊಡಗಿಸಿಕೊಂಡಿದ್ದಾರೆ. ಇವರ ವಿವಾಹ ಮತ್ತಿತರ ಧಾರ್ಮಿಕ ಕಾರ್ಯಗಳನ್ನು ಜಂಗಮರು ನಡೆಸುತ್ತಾರೆ. ಇವರಲ್ಲಿ ವಿವಾಹ ವಿಚ್ಛೇದನ ಅತಿ ವಿರಳ. ಇವರು ಸಾಮಾನ್ಯವಾಗಿ ಎಡೆಯೂರು ಶ್ರೀ ಸಿದ್ಧಲಿಂಗೇಶ್ವರ, ಕಲ್ಬುರ್ಗಿಯ ಶ್ರೀ ಶರಣಬಸವೇಶ್ವರ ಮೊದಲಾದ ಯಾತ್ರಾಸ್ಥಳಗಳಿಗೆ ಹೋಗುತ್ತಾರೆ. ಇವರು ಮೃತರನ್ನು ಹೂಳುತ್ತಾರೆ.

**ಕುರುಬರು**

ಯಮನೂರಿನಲ್ಲಿ ಸುಮಾರು ೧೦೦ ಹಾಲುಮತದವರ ಕುಟುಂಬಗಳಿವೆ. ಇವರ ಹೆಸರೇ ಸೂಚಿಸುವ ಹಾಗೆ ಇವರ ಉದ್ಯೋಗ ಕುರಿಸಾಕಾಣಿಕೆ ಹಾಗೂ ಕಂಬಳಿ ನೇಯುವುದು. ಕೆಲವರು ಕೃಷಿ ಮತ್ತು ಮತ್ತಿತರ ಉದ್ಯೋಗದಲ್ಲಿ ತೊಡಗಿದ್ದಾರೆ. ಇವರಲ್ಲಿ ಹತ್ತಿಕಂಕಣ, ಉಣ್ಣೆಕಂಕಣ ಎಂಬ ಎರಡು ಪಂಗಡಗಳಿವೆ. ಇವರಲ್ಲಿ ಅನೇಕ ಬೆಡಗುಗಳಿವೆ. ಒಂದೇ ಬೆಡಗಿನಲ್ಲಿ ವಿವಾಹ ಮಾಡುವ ಸಂಪ್ರದಾಯವಿಲ್ಲ. ವಿವಾಹ ಮೊದಲಾದ ಧಾರ್ಮಿಕ ಕಾರ್ಯಗಳನ್ನು ಲಿಂಗಾಯತ ಸ್ವಾಮಿಗಳು ನಡೆಸುತ್ತಾರೆ. ಸಾಮಾನ್ಯವಾಗಿ ವಿವಾಹವು ಗಂಡಿನ ಮನೆಯಲ್ಲೇ ನಡೆಯುವುದು ಸಂಪ್ರದಾಯ. ಈ ಜನರ ಗಂಡಸರು ಹೊರಗೆ ಹೋಗುವಾಗ ಸಾಮಾನ್ಯವಾಗಿ ಹೆಗಲ ಮೇಲೆ ಕಂಬಳಿ ಹಾಕಿಕೊಂಡು ತಲೆಗೆ ರುಮಾಲು ಸುತ್ತಿರುತ್ತಾರೆ. ಇವರು ದೀಪಾವಳಿ ಹಬ್ಬವನ್ನು ಅದ್ದೂರಿಯಾಗಿ ಆಚರಿಸುತ್ತಾರೆ. ಈ ಸಮಯದಲ್ಲಿ ತಮ್ಮ ಡೊಳ್ಳು, ಕೋಲು ಮುಂತಾದವುಗಳನ್ನು ಪೂಜಿಸುತ್ತಾರೆ. ಇವರು ಬೀರೇಶ್ವರ, ದೇವರಗುಡ್ಡ, ಮೈಲಾರ, ಯಲ್ಲಮ್ಮ, ರೇವಣ ಸಿದ್ದೇಶ್ವರ ಮೊದಲಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ. ಇವರಲ್ಲಿ ಶವವನ್ನು ಹೂಳುವ ಹಾಗೂ ದಹನ ಮಾಡುವ ಎರಡೂ ಪದ್ಧತಿಗಳು ರೂಢಿಯಲ್ಲಿದೆ. ಡೊಳ್ಳಿನ ಕುಣಿತ ಇವರ ಪ್ರಿಯವಾದ ಜಾನಪದ ಕಲೆ. ಕಾಗಿನೆಲೆಯಲ್ಲಿ ಇವರ ಗುರುಪೀಠ ಇದೆ.

**ಗಾಣಿಗ**

ಇವರ ಜಾತಿಯೇ ಸೂಚಿಸುವ ಹಾಗೆ ಇವರ ಉದ್ಯೋಗ ಎಣ್ಣೆ ತೆಗೆಯುವುದು. ಬೇಸಾಯ, ವ್ಯಾಪಾರ

ಮುಂತಾದ ಉದ್ಯೋಗಗಳನ್ನೂ ಇವರು ಅವಲಂಬಿಸಿರುತ್ತಾರೆ. ಇವರಲ್ಲಿ ಕರಿಗಾಣಿಗ, ಬಿಳಿಗಾಣಿಗ, ಸಜ್ಜನ ಗಾಣಿಗ ಮೊದಲಾದ ಉಪಜಾತಿಗಳಿವೆ. ಹುಟ್ಟು-ಸಾವು, ವಿವಾಹ ಮೊದಲಾದ ಧಾರ್ಮಿಕ ವಿಧಿ-ವಿಧಾನಗಳನ್ನು ಜಂಗಮ ಪುರೋಹಿತರು ನಡೆಸಿಕೊಡುತ್ತಾರೆ. ಇವರು ಎಲ್ಲ ಹಿಂದೂ ಹಬ್ಬಗಳನ್ನು ಆಚರಿಸುತ್ತಾರೆ. ಇವರಲ್ಲಿ ಮೃತರನ್ನು ಹೂಳುವ ಪದ್ಧತಿ ಇದೆ.

### ಒಡ್ಡರು

ಬೋವಿ ಎಂತಲೂ ಕರೆಸಿಕೊಳ್ಳುವ ಈ ಸಮುದಾಯದಲ್ಲಿ, ಕಲ್ಲು ಒಡ್ಡರು, ಬಂಡೆ ಒಡ್ಡರು ಎಂಬ ಪಂಗಡಗಳಿವೆ. ಇವರ ಕುಲದೇವತೆ ಸುಂಕ್ಲಮ್ಮ. ದುರುಗಮ್ಮ ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಕಲ್ಲು, ಬಂಡೆಗಲ್ಲು ಅರೆಯುವುದು, ರಸ್ತೆ ನಿರ್ಮಾಣ ಮಾಡುವುದು, ಮನೆ ಕಟ್ಟುವುದು, ಕೃಷಿ, ವ್ಯಾಪಾರ ಮುಂತಾದ ಉದ್ಯೋಗ ಮಾಡುತ್ತಾರೆ. ಇವರಲ್ಲಿ ಕೆಲವರು ತೆಲುಗು ಮಾತನಾಡುತ್ತಾರೆ. ಇವರು ಮಾಂಸಾಹಾರಿಗಳು. ಇವರಲ್ಲಿ ಕುಂಚಲರು; ಸಾವಂತಲರು, ಉಪ್ಪಕೋಳವರ್ ಹಾಗೂ ಮಲ್ಲೇವರು ಮುಂತಾದ ಬೆಡಗುಗಳಿವೆ.

ಒಂದೇ ಬೆಡಗಿನವರ ಜೊತೆಗೆ ವಿವಾಹ ಮಾಡುವುದಿಲ್ಲ. ವಿವಾಹವು ಸಾಮಾನ್ಯವಾಗಿ ಗಂಡಿನ ಮನೆಯಲ್ಲಿ ನಡೆಯುತ್ತದೆ. ವಿವಾಹ ಹಾಗೂ ಧಾರ್ಮಿಕ ಸಮಾರಂಭಗಳನ್ನು ಲಿಂಗಾಯತ ಜಂಗಮರು ನೆರವೇರಿಸಿ ಕೊಡುತ್ತಾರೆ. ಇವರು ಹನುಮಂತ, ಬಸವಣ್ಣ, ದುರ್ಗವ್ವ, ವೆಂಕಟರಮಣ ಮುಂತಾದ ದೈವಗಳನ್ನು ಪೂಜಿಸುತ್ತಾರೆ. ಧರ್ಮಸ್ಥಳ, ಸವದತ್ತಿ, ದೇವರಗುಡ್ಡ, ತಿರುಪತಿ ಮುಂತಾದವು ಇವರು ಹೋಗುವ ಯತ್ರಾಸ್ಥಳಗಳಾಗಿವೆ. ಇವರಲ್ಲಿ ಮೃತರ ದೇಹವನ್ನು ಸುಡುತ್ತಾರೆ.

### ಮರಾಠ

ಮರಾಠರು ಮೂಲತಃ ಮಹಾರಾಷ್ಟ್ರದಿಂದ ವಲಸೆ ಬಂದಿರುವುದಾಗಿ ತಿಳಿದುಬರುತ್ತದೆ. ಸುಮಾರು ೫೦ ಕುಟುಂಬಗಳು ಇಲ್ಲಿರುವುದು ಕಂಡುಬರುತ್ತದೆ. ಇವರು ಮಾಂಸಾಹಾರಿಗಳಾಗಿದ್ದರೂ, ಬಹುತೇಕ ಬ್ರಾಹ್ಮಣ ವಿಧಿ ಆಚರಣೆಗಳನ್ನು ಅನುಸರಿಸುವರು. ಅಂದರೆ ಇವರಲ್ಲಿ ಜನಿವಾರ ಹಾಕುವ ಸಂಪ್ರದಾಯವಿದೆ. ಹುಟ್ಟಿದಾಗ ಹಾಗೂ ಸತ್ತಾಗ ಮೈಲಿಗೆ ಹಾಗೂ ಇತರ ಧಾರ್ಮಿಕ ಸಂಪ್ರದಾಯಗಳನ್ನು ಆಚರಿಸುವುದೂ ಇವೇ ಮೊದಲಾದ ಪದ್ಧತಿಗಳಿವೆ. ಇವರಲ್ಲಿ ಜಾಧವ್, ಪವಾರ್, ಸಿಂಧೆ, ಬೋಸ್ಲೆ ಮುಂತಾದ ಮನೆತನದ ಹೆಸರುಗಳಿವೆ. ಇವರು ಕನ್ನಡ ಮತ್ತು ಮರಾಠಿಯನ್ನು ಮಾತನಾಡುವರು. ಮದುವೆ ಮುಂತಾದ ಧಾರ್ಮಿಕ ಕಾರ್ಯಗಳನ್ನು ಬ್ರಾಹ್ಮಣ ಪುರೋಹಿತರು ಬಂದು ನಡೆಸಿಕೊಡುತ್ತಾರೆ.

ವಿವಾಹವು ಮಾತುಕತೆಯ ನಿಶ್ಚಯದಂತೆ ಹೆಣ್ಣಿನ ಮನೆಯಲ್ಲಾಗಲೀ ಅಥವಾ ಗಂಡಿನ ಮನೆಯಲ್ಲಾಗಲೀ ನಡೆಯುತ್ತದೆ. ಇವರು ಯಲ್ಲಮ್ಮ, ವಿಠೋಬ, ಮಾರುತಿ, ಅಂಬಾಭವಾನಿ, ಖಂಡೋಬಾ, ಜಗದಂಬಾ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಸವದತ್ತಿ, ಪಂಡರಪುರ, ಧರ್ಮಸ್ಥಳ ಮೊದಲಾದ ಯಾತ್ರಾಸ್ಥಳಕ್ಕೆ ಹೋಗುವ ಪದ್ಧತಿಯಿದೆ. ಇವರಲ್ಲಿ ಶವವನ್ನು ಸುಡುತ್ತಾರೆ. ಹಿಂದೆ ಕೃಷಿಕರು, ಸೈನಿಕರು ಆಗಿದ್ದ ಇವರು ಈಗ ವ್ಯಾಪಾರ ಹಾಗೂ ಇತರೆ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿದ್ದಾರೆ.

**ನಾಯಿಂದ**

ಇವರನ್ನು ಹಡಪಿಗ, ಕ್ಷೌರಿಕ, ಹಜಾಮ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಸಾಂಪ್ರದಾಯಿಕವಾಗಿ ಇವರು ಕ್ಷೌರಿಕ ವೃತ್ತಿಯನ್ನು ಅವಲಂಬಿಸಿರುತ್ತಾರೆ. ಈಚೆಗೆ ಹಲವರು ಕೃಷಿ ಮತ್ತಿತರ ಉದ್ಯೋಗಗಳಲ್ಲೂ ತೊಡಗಿರುತ್ತಾರೆ. ಇವರಲ್ಲಿ ತೆಲುಗು ಮಂಗಲೋಳು ಮತ್ತು ಭಜಂತ್ರಿ ಹಜಾಮರು ಎಂಬ ಪಂಗಡಗಳಿವೆ. ನಾಮದೋರು, ಮೋಡಿಯೋರು ಎಂಬ ಒಳಪಂಗಡಗಳು ಇವರಲ್ಲಿವೆ. ಯಮನೂರಿನಲ್ಲಿ ಹೆಚ್ಚಾಗಿ ವೀರಶೈವ ಮತಾವಲಂಬಿಗಳಿದ್ದಾರೆ. ಜಂಗಮರು ಇವರ ಧಾರ್ಮಿಕ ಕಾರ್ಯಗಳನ್ನು ನಡೆಸಿಕೊಡುತ್ತಾರೆ. ಇವರು ವೀರಭದ್ರೇಶ್ವರ, ಬಸವಣ್ಣ, ದ್ಯಾಮವ್ವ ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ ಹಾಗೂ ಇವರು ಹಡಪದ ಅಪ್ಪಣ್ಣ ಎಂಬ ವಚನಕಾರನನ್ನು ಗೌರವಿಸುತ್ತಾರೆ. ಗೊಡಚಿ, ಹಂಪೆ ಮೊದಲಾದ ಯಾತ್ರಾ ಸ್ಥಳಗಳಿಗೆ ಹೋಗುವ ಇವರು ತಮ್ಮ ಮೃತರನ್ನು ಹೂಳುತ್ತಾರೆ. ಕ್ಷೌರಿಕರ ಮನೆಗಳು ಸುಮಾರು ೪-೫ ಇವೆ.

**ಮಾದಿಗರು**

ಇವರು ಪ್ರತಿಯೊಂದು ಹಳ್ಳಿಯಲ್ಲೂ ಕಂಡುಬರುತ್ತಾರೆ. ಇವರಲ್ಲಿ ದಕ್ಕಲರು, ಆಸಾದಿ, ಕೋಳಿಮಾದಿಗ, ಬಾಲಬಸವ, ಮಿಣಿ ಮಾದಿಗ, ಮೋಚಿಗಾರ, ಡೋರರು ಮುಂತಾದ ಉಪಜಾತಿಗಳಿವೆ. ಚರ್ಮದ ಹಗ್ಗ, ಚರ್ಮದ ಮಿಣಿ, ಚಾವಟಿ, ಎತ್ತಿನ ಕೊರಳಿಗೆ ಹಾಕುವ ಪಟಕಾಣಿ, ಘಂಟಿಸರ, ಚಪ್ಪಲಿ ಮುಂತಾದ ಚರ್ಮದ ಸಾಮಾಗ್ರಿಗಳನ್ನು ಸಿದ್ಧಪಡಿಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದೆ. ಇತ್ತೀಚಿನ ದಿನಗಳಲ್ಲಿ ಕೂಲಿ ಹಾಗೂ ಸ್ವಂತ ಬೇಸಾಯ ಮಾಡುತ್ತಿದ್ದಾರೆ. ಇವರು ದ್ಯಾಮವ್ವ, ದುರ್ಗವ್ವ, ಮರಿಯವ್ವ, ಆಂಜನೇಯ, ಮಂಜುನಾಥಸ್ವಾಮಿ, ಮೈಲಾರ ಮುಂತಾದ ದೇವತೆಗಳನ್ನು ಆರಾಧಿಸುತ್ತಾರೆ. ಹಾಗೂ ಸವದತ್ತಿ, ದೇವರಗುಡ್ಡ, ಹಿರೇಮೈಲಾರ ಮತ್ತು ಧರ್ಮಸ್ಥಳ ಮುಂತಾದ ಯಾತ್ರಾಸ್ಥಳಗಳಿಗೆ ಹೋಗುತ್ತಾರೆ. ಇವರು ಮಾಂಸಾಹಾರಿಗಳು. ಇವರು ಹಿಂದುಗಳ ಎಲ್ಲಾ ಹಬ್ಬಗಳನ್ನು ಆಚರಿಸುತ್ತಾರೆ. ಮಾಳ ಪಕ್ಷದಲ್ಲಿ ಇವರು ಸತ್ತ ಹಿರಿಯರಿಗೆ ಎಡೆಯಿಡುವ ಪದ್ಧತಿ ಇದೆ. ಸಾಂಪ್ರದಾಯಿಕವಾಗಿ ಸತ್ತವರನ್ನು ಹೂಳುತ್ತಾರೆ.

**ಬಡಿಗೇರ**

ಇವರನ್ನು ವಿಶ್ವಕರ್ಮ, ಪಾಂಚಾಳ ಎಂದೂ ಸಹ ಕರೆಯುತ್ತಾರೆ. ಬಡಿಗೇರ, ಕಮ್ಮಾರ, ಕಂಚುಗಾರ, ಅಕ್ಕಸಾಲಿಗ ಹಾಗೂ ಶಿಲ್ಪಿಗಳನ್ನು ಪಾಂಚಾಳರೆಂದು ಕರೆಯುತ್ತಾರೆ. ಬಡಿಗೇರ, ಬಡಿಗ್ಯಾರ, ಬಡಗಿಗೌಡ ಎಂಬಿತ್ಯಾದಿ ಕರೆಯುವ ಇವರನ್ನು ಕುರಿತು ಕ್ರಿ.ಶ. ೧೧೮೦ರ ಧಾರವಾಡ ಜಿಲ್ಲೆಯ ಹೊಸೂರು ಶಾಸನದಲ್ಲಿ ಉಲ್ಲೇಖವಾಗಿದೆ. ಈ ಪಾಂಚಾಳರು ಹಳ್ಳಿಗಳಲ್ಲಿ ತುಂಬಾ ಹಿತಕರವಾದ ಕೆಲಸಗಳನ್ನು ಮಾಡುತ್ತಾ ಬಂದಿದ್ದಾರೆ. ಈ ಬಡಿಗೇರರನ್ನು ಕುರಿತು ಸರ್ವಜ್ಞ ಕವಿಯು ಈ ರೀತಿಯಾಗಿ ಹೇಳಿದ್ದಾರೆ.

ಹುಡುಗ ಕಡಲಿಗೆ ಬೇಕು| ಗುಡಗ ಮಿಂಚಿಗೆ ಬೇಕು

ಕಡಗದ ಕೈಸೊಸೆ ಬೇಕು| ಊರಿಂಗೆ

ಬಡಿಗಾ ತಾ ಬೇಕು ||ಸರ್ವಜ್ಞ||

ಊರಿಗೆ ಬಡಿಗ ಬೇಕೇ ಬೇಕು ಎಂಬುದು ಸರ್ವಜ್ಞನ ಆಶಯ. ಇವರು ಶಿರಸಂಗಿ ಕಾಳಿಕಾದೇವಿಯನ್ನು ಆರಾಧಿಸುತ್ತಾರೆ. ಗೊಡಚಿಯ ವೀರಭದ್ರೇಶ್ವರನಿಗೂ ಹೋಗುತ್ತಾರೆ. ತಿಂಥಿಣಿಯ ಮೌನೇಶ್ವರ ಬಡಿಗೇರ ಕುಲದ ಗುರುತು. ಇವರಲ್ಲಿ ಉಪನಯನ ಸಂಪ್ರದಾಯವಿದೆ. ಈ ಉಪನಯನ, ಮದುವೆ, ಶವಸಂಸ್ಕಾರ, ನಾಮಕರಣ ಇತ್ಯಾದಿ ಕಾರ್ಯಗಳನ್ನು ಶಿರಸಂಗಿ ಆಚಾರ್ಯರು ನಡೆಸಿಕೊಡುತ್ತಾರೆ. ಬಡಿಗೇರರ ಸುಮಾರು ೪ ರಿಂದ ೫ ಕುಟುಂಬಗಳು ಇಲ್ಲಿ ಕಂಡುಬರುತ್ತವೆ.

**ತಳವಾರ**

ತಳವಾರ ಎಂಬುದು ವೃತ್ತಿ ಸೂಚಕವಾದ ಹೆಸರು. ತಳವಾರ ಎಂಬಲ್ಲಿ ತಳ+ವಾರ ಎಂಬ ಎರಡು ಪದಗಳು ಸೇರಿವೆ. ತಳ ಎಂಬುದಕ್ಕೆ ಸ್ವಂತ ಊರು, ಜನ್ಮದೂರು ಎಂಬರ್ಥವಿದೆ. ವಾರ ಎಂದರೆ ಸಂರಕ್ಷಣೆ ಎಂದರ್ಥ. ತಳವಾರ ಶಬ್ದಕ್ಕೆ "ತಳವಾರ" 'ತಳರ' 'ತಳವಾರ' 'ತಳಾರ' 'ತರವಳ' 'ತರವಾಳ' ತಾಳವಾರ ಎಂಬ ಸಮಾನಾರ್ಥಕ ಪದಗಳಿವೆ(ಗ್ರಾಮರಕ್ಷಕ ಕಾವಲುಗಾರ). ಹಿಂದೆ ಕಳ್ಳರನ್ನು ಹಿಡಿಯುವ ಕೆಲಸ ಮಾಡುತ್ತಿದ್ದರೆಂಬ ಬಗ್ಗೆ ಶಿವಕೋಟ್ಯಾಚಾರ್ಯನ ವಡ್ಡಾರಾಧನೆಯಲ್ಲಿ, ಸರ್ವಜ್ಞನ ವಚನಗಳಲ್ಲಿ ಹೇಳಿದ್ದಾರೆ. ಊರಕಾವಲು ಮಾತ್ರವಲ್ಲದೆ, ಊರಿನ ತೆರಿಗೆ ವಸೂಲಿ ಮಾಡುವುದು, ವಾಲಿಕಾರಿಕೆ ಮಾಡುವುದು ಇವರ ಕಾರ್ಯಗಳಾಗಿದ್ದವು. ಈಗಲೂ ಗ್ರಾಮಲೆಕ್ಕಾಧಿಕಾರಿಗಳ ಹತ್ತಿರ ಗ್ರಾಮ ಸಹಾಯಕರಾಗಿ ಇವರೇ ಹೆಚ್ಚಾಗಿ ಕೆಲಸ ಮಾಡುತ್ತಾರೆ. ಯಾರಾದರೂ ಸತ್ತರೆ ಜನರಿಗೆ ಸುದ್ದಿ ಮುಟ್ಟಿಸುವ ಕೆಲಸವನ್ನು ಮೊದಲು ಮಾಡುತ್ತಿದ್ದರು. ಆದರೆ ಈಗ ಮೊಬೈಲ್ ಬಂದಿರುವುದರಿಂದ ಆ ಕೆಲಸ ಅವರಿಗೆ ಕಡಿಮೆಯಾಗಿದೆ.

**ಬಾರಕೇರ (ಅಂಬಿಗೇರ)**

ಗಂಗಾಕುಲ, ಗಂಗಾಮತ ಮುಂತಾದ ಅನೇಕ ಹೆಸರುಗಳುಳ್ಳ ಇವರು ಕರ್ನಾಟಕದಲ್ಲಿ ಹಿಂದುಳಿದ ವರ್ಗದವರು. ಮೀನು ಹಿಡಿಯುವುದು ಮತ್ತು ದೋಣಿ ನಡೆಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದ್ದರೂ, ಹಲವರು ಒಕ್ಕಲುತನವನ್ನು ಮತ್ತೆ ಕೆಲವರು ಇತರ ಉದ್ಯೋಗಗಳನ್ನೂ ಅವಲಂಬಿಸಿರುತ್ತಾರೆ. ಇವರಲ್ಲಿ ಅನೇಕ ಬೆಡಗುಗಳಿವೆ. ಒಂದೇ ಬೆಡಗಿನಲ್ಲಿ ವಿವಾಹ ಮಾಡುವ ಸಂಪ್ರದಾಯವಿಲ್ಲ. ಮದುವೆ ಮುಂತಾದ ಸಮಾರಂಭಗಳನ್ನು ಸಾಮಾನ್ಯವಾಗಿ ಜಂಗಮರು ನೆರವೇರಿಸಿಕೊಡುತ್ತಾರೆ. ವಿವಾಹವು ಸಾಮಾನ್ಯವಾಗಿ ಗಂಡಿನಮನೆಯಲ್ಲಿ ನೆರವೇರುತ್ತದೆ. ಇವರ ಮನೆ ಮಾತು-ಕನ್ನಡ. ಇವರು ಹನುಮಂತ, ಕೊಪ್ಪಳ ಮಾರುತಿ, ಯಲ್ಲಮ್ಮ, ದುರ್ಗವ್ವ, ಮೈಲಾರ ಹತ್ತಿರ ಇರುವ ಅಂಬಿಗರ ಚೌಡಯ್ಯನ ಚೌಡದಾನಪುರಕ್ಕೆ ನಡೆದುಕೊಳ್ಳುತ್ತಾರೆ. ಇವರು ಶವಸಂಸ್ಕಾರವನ್ನು ಸುಡುವುದರ ಮೂಲಕ ನೆರವೇರಿಸುತ್ತಾರೆ. ಯಮನೂರಿನಲ್ಲಿ ಅಂಬಿಗರ ೧೦-೧೫ ಮನೆತನಗಳಿರುವುದು ತಿಳಿದು ಬರುತ್ತದೆ.

**ಕಂಬಾರ**

ಇವರು ಕುಲುಮೆ ಕೆಲಸದಲ್ಲಿ ತೊಡಗಿಸಿಕೊಂಡವರು. ಇವರು ಕೊಡಲಿ, ಕುರ್ಚಿಗಿ, ಕುಡುಗೋಲು,

ಮುಂಜುಣ, ಗುದ್ನಿ, ಕುಂಟಿ, ಹಾರಿ ಮುಂತಾದ ಸಾಮಾನುಗಳನ್ನು ಸಿದ್ಧಪಡಿಸುತ್ತಾರೆ. ಇವರು ಇಕ್ಕಳ, ಸುತ್ತಿಗೆ ತಿದಿ ಮುಂತಾದ ವಸ್ತುಗಳನ್ನು ಬಳಸಿ ಕಬ್ಬಿಣದ ವಸ್ತುಗಳನ್ನು ತಯಾರಿಸುತ್ತಾರೆ. ಇವರದು ಕೇವಲ ಒಂದೇ ಮನೆ ಇದೆ.

### ಮುಸ್ಲಿಂ

ಮುಸ್ಲಿಂ ಸಮುದಾಯವು ಇಲ್ಲಿ ಸಾಮರಸ್ಯದಿಂದ, ಮತಪಂಥವನ್ನು ಮೀರಿದ ಬದುಕನ್ನು ಸಾಗಿಸುತ್ತಿದ್ದಾರೆ. ಇವರು ಯಮನೂರಿನಲ್ಲಿರುವ ಚಾಂಗದೇವರ ಗದ್ದುಗೆಗೆ ನಿರಂತರವಾಗಿ ಹೋಗುವುದು, ಹರಕೆ ತೀರಿಸುವುದು, ಸೇವೆ ಮಾಡುವುದು, ಜಾತ್ರೆ, ಉರುಸಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುತ್ತಾರೆ. ಈ ಸಮುದಾಯದ ಒಳಪಂಗಡಗಳಾದ ಪಿಂಜಾರರ ಮದುವೆ, ಜವುಳ, ಸಾವು ಇತ್ಯಾದಿ ಆಚರಣೆಗಳ ಸಂದರ್ಭಗಳಲ್ಲಿ ಸ್ವಲ್ಪ ಮಟ್ಟಿಗೆ ಹಿಂದುಗಳನ್ನು ಅನುಸರಿಸುತ್ತಾರೆ. ತಾವು ಬೇಡಿಕೊಂಡ ಹರಕೆ ತೀರಿಸುವಾಗ ಆಡು, ಕುರಿ, ಟಗರು ಮುಂತಾದ ಪ್ರಾಣಿಗಳನ್ನು ಇಂದಿಗೂ ಬಲಿಕೊಡುವ ಪದ್ಧತಿಯಿದೆ. ಸಮುದಾಯದ ಪ್ರಮುಖ ಒಳಪಂಗಡಗಳೆಂದರೆ ಶೇಖ್, ಸೈಯದ್, ಪಿಂಜಾರ, ಪಠಾಣ್, ಮುಲ್ಲಾ.

ಒಳಪಂಗಡಗಳಲ್ಲಿ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಇವರಲ್ಲಿ ಸೈಯದ್ ಪಂಗಡವು ಶ್ರೇಷ್ಠ ಎಂದು ಹೇಳಿಕೊಳ್ಳುತ್ತಾರೆ. ಇವರು ಮನೆಯಲ್ಲಿ ಉರ್ದು, ಕನ್ನಡ ಮಾತನಾಡುತ್ತಾರೆ. ಮಾಬುಸುಬಾನಿ, ಚಾಂಗದೇವರು ಇವರ ಕುಲದೇವರು. ಸುಮಾರು ೨೦ ರಿಂದ ೩೦ ಕುಟುಂಬಗಳಿವೆ.

### ಕೊರವರು

ಕೊರವರು ದ್ರಾವಿಡ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರು ಮೊದಲು ಅಲೆಮಾರಿಗಳಾಗಿದ್ದರು. ಈಗ ಒಂದೊಂದು ಊರಿನಲ್ಲಿ ಸ್ಥಿರವಾಗಿ ನೆಲೆಸಿದ್ದಾರೆ. "ಕೊರವರು ವಾಂಡ್ಲೆ ಕೈಫಿಯತ್ತು" ಎಂಬ ಕೃತಿಯಲ್ಲಿ ಕೊರವರ ಪಂಗಡಗಳ ಬಗ್ಗೆ ವಿವರಿಸಿದೆ. ಅದರಲ್ಲಿ ಕಕ್ಕೆ ಕೊರವರು, ವಡ್ಡಕೊರವರು, ಹಕ್ಕಿ ಕೊರವರು ಮತ್ತು ಕಳೆ ಕೊರವರು ಎಂಬ ೪ ಪಂಗಡಗಳಿವೆ. ಇವರ ವೃತ್ತಿ ವಿಶೇಷಣಗಳನ್ನು ತಿಳಿಸುತ್ತ ಕಕ್ಕೆ ಕೊರವರ ಕಸುಬು ಮೋಡಿಕೆಯಾದರೆ, ವಡ್ಡ ಕೊರವರು ವಾಲಗ ಊದುವುದು, ಹಕ್ಕಿ ಕೊರವರು ಹಕ್ಕಿಯನ್ನು ಹಿಡಿಯುವುದು, ಕಳ್ಳ ಕೊರವರದು ಕನ್ನಹಾಕಿ ಕಳ್ಳತನ ಮಾಡುವುದು ಎಂದು ಹೇಳುತ್ತಾರೆ. ಯಮನೂರಿನಲ್ಲಿರುವ ಕೊರವರು ಪುಟ್ಟಿ, ಕಸಬರಿಗೆ ಹೆಣೆಯುವ, ಫುಟ್‌ಪಾತುಗಳ ಮೇಲೆ ಚಿಕ್ಕಪುಟ್ಟ ಹಣ್ಣಿನಂಗಡಿ ಮುಂತಾದ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಇವರಲ್ಲಿ ಕಾವಡಿ, ಸಾತಪಡಿ ಮುಂತಾದ ಬೆಡಗುಗಳಿವೆ.

### ಜೋಗೇರ

ಸಣ್ಣ ಪುಟ್ಟ ವ್ಯಾಪಾರವನ್ನು ಅದರಲ್ಲೂ ವಿಶೇಷವಾಗಿ ಸ್ಟೇಷನರಿ ಸಾಮಾನುಗಳಂತಹ ವಸ್ತುಗಳನ್ನು ಕಸಬರಿಗೆ ಸಿಂಬೆಯಂತಹ ವಸ್ತುಗಳನ್ನು ಮಾರಾಟ ಮಾಡುವುದು ಇವರ ಪ್ರಮುಖ ಕಸುಬಾಗಿದೆ. ಸು.೧೦-೧೫ ಗುಡಿಸಲುಗಳಿದ್ದು, ಇವರು ಪೂಜಿಸುವ ದೇವರು ಯಲ್ಲಮ್ಮ, ಐನೇರು ಈ ಸಮುದಾಯದ ಮದುವೆ ಮುಂತಾದ ಕಾರ್ಯಗಳನ್ನು ಮಾಡಿಸುತ್ತಾರೆ.

**ದೇವಾಂಗ**

ಈ ಸಮುದಾಯವನ್ನು ನೇಕಾರರು, ಬಿಳಿ ಜಾಡರು, ನೇಯುವವರು, ಜೇಡರು, ಜಾಡರು ಎಂದು ಕರೆಯುತ್ತಾರೆ. ದೇವಾಂಗ ಎಂಬುದು ಋಷಿಯ ಮೂಲವನ್ನು ಹೇಳುತ್ತದೆ. ಬಟ್ಟೆಯನ್ನು ನೇಯುವುದರಿಂದ ಇವರಿಗೆ ನೇಕಾರರು ಎಂದು ಕರೆಯುತ್ತಾರೆ. ಇವರಲ್ಲಿ ವ್ಯಾಪಾರಸ್ಥ ಸಮುದಾಯ ಹೆಚ್ಚಾಗಿ ಕಂಡುಬರುತ್ತದೆ.

**ವೃತ್ತಿ**

ಯಮನೂರು ಗ್ರಾಮದಲ್ಲಿ ವ್ಯವಸಾಯವೇ ಪ್ರಮುಖ ಉದ್ಯೋಗವಾಗಿದೆ. ಗ್ರಾಮದ ವ್ಯವಸಾಯಗಾರರು ಮುಸುಕಿನ ಜೋಳ, ಜೋಳ, ಗೋದಿ, ಕಡಲೆ, ಈರುಳ್ಳಿ, ಮೆಣಸಿನಕಾಯಿ, ಸೂರ್ಯಕಾಂತಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ. ಈ ಗ್ರಾಮದಲ್ಲಿ ಗುಡಿಕೈಗಾರಿಕೆಗಳು ಜೀವಂತವಾಗಿವೆ. ಯಮನೂರಿನಲ್ಲಿ ವೀರಶೈವ ಸಮುದಾಯ, ಕುರುಬ ಸಮುದಾಯ, ರೆಡ್ಡಿ ಸಮುದಾಯದವರು ಬಹುಸಂಖ್ಯಾತರಿದ್ದಾರೆ. ಇವರಲ್ಲಿ ಹೆಚ್ಚು ಜನರು ಬೇಸಾಯವನ್ನೇ ಅವಲಂಬಿಸಿದ್ದಾರೆ. ಉಳಿದ ಜನ ವ್ಯಾಪಾರ, ಕೂಲಿ ಕೆಲಸ ಮಾಡಿಕೊಂಡು ಉಪಜೀವನ ಮಾಡುತ್ತಾರೆ. ಎಲ್ಲ ಸಮುದಾಯದವರೂ ದೇವರು, ದೈವ, ಧರ್ಮದಲ್ಲಿ ಅತೀವ ನಂಬಿಕೆಯುಳ್ಳವರು. ಇತ್ತೀಚೆಗೆ ಈ ಸಮುದಾಯದವರು ಸರ್ಕಾರಿ, ಅರೆಸರ್ಕಾರಿ ಉದ್ಯೋಗಗಳನ್ನು ಹಿಡಿದು ಜೀವನ ಸಾಗಿಸುತ್ತಾರೆ. ಮರಾಠರಲ್ಲಿ ಕೃಷಿ ಭೂಮಿಯನ್ನು ಹೊಂದಿದ್ದು ಅವರು ಲಾಭಕಾರಿಯಾಗಿ ಕೃಷಿಯನ್ನು ನಿರ್ವಹಿಸಲಾಗದೇ ಬೇರೆ ರೈತರಿಂದ ಮಾಡಿಸಿಕೊಳ್ಳುತ್ತಾರೆ. ಕೆಲವರು ಕೃಷಿ ಭೂಮಿಯನ್ನು ಮಾರಾಟಮಾಡಿ ಪಟ್ಟಣವನ್ನು ಸೇರಿದ್ದಾರೆ. ಈಗ ಉಳಿದಿರುವಂತ ಬರ್ಗೆ ಮನೆತನದವರು ಚಾಂಗದೇವರ ಅರ್ಚಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ಗ್ರಾಮದ ಕೃಷಿ ಕಾಯಕದ ಜೊತೆಗೆ ನೌಕರಿ ಕೂಡ ಮಾಡುತ್ತಿದ್ದಾರೆ.

ಗ್ರಾಮದ ಕುರುಬರು ಕುರಿ ಸಾಕುವ ವೃತ್ತಿಯನ್ನು ಕಡಿಮೆ ಮಾಡಿದ್ದು, ಕೃಷಿ ಕಾಯಕದೆಡೆ ಲಕ್ಷ್ಯಹರಿಸುತ್ತಿದ್ದಾರೆ. ಒಬ್ಬರೂ ಸರಕಾರಿ ನೌಕರಿಯಲ್ಲಿರದೇ, ಇವರು ಶೈಕ್ಷಣಿಕವಾಗಿ ಹಿಂದುಳಿದಿರುವುದು ಸ್ಪಷ್ಟವಾಗುತ್ತದೆ. ಇತ್ತೀಚಿಗೆ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುತ್ತಿರುವುದು ಶೈಕ್ಷಣಿಕ ಜಾಗೃತಿಯುಂಟಾಗಿರುವುದು ಕಂಡುಬರುತ್ತದೆ.

ಬಡಿಗೇರ ಹಾಗೂ ಕಮ್ಮಾರರು ತಮ್ಮ ವೃತ್ತಿಯನ್ನು ನಿರ್ವಹಿಸಿಕೊಂಡು ಹೋಗುತ್ತಿದ್ದಾರೆ. ತಮ್ಮ ತಮ್ಮ ಕುಟುಂಬಗಳಲ್ಲಿ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದಾರೆ. ವೈಜ್ಞಾನಿಕವಾಗಿ ಮುಂದುವರೆದಿರುವ ಈ ಸಂದರ್ಭದಲ್ಲಿ ನಗರೀಕರಣದ ಪ್ರಭಾವದಿಂದಾಗಿ ಇವರು ಪೈಪೋಟಿಯನ್ನು ಎದುರಿಸುವಂತಾಗಿದೆ. ಗಾಣಿಗರು ತಮ್ಮ ಪ್ರಾಚೀನ ಉದ್ಯೋಗಗಳಾದ ಗಾಣದಿಂದ ಎಣ್ಣೆ ತೆಗೆಯುವ ಕಾಯಕವನ್ನು ಬಿಟ್ಟು ಕೃಷಿ, ವ್ಯಾಪಾರ, ನೌಕರಿಯ ಕಡೆಗೆ ವಾಲಿರುವುದು ಸ್ಪಷ್ಟವಾಗುತ್ತದೆ.

ಮಾದಿಗ ಸಮುದಾಯದವರು ಚರ್ಮದಿಂದ ತಯಾರಿಸುವ ವಸ್ತುಗಳನ್ನು ತಯಾರಿಸುತ್ತಿದ್ದರೂ ಇಂದು ಮಾರಾಟವಾಗದೇ ನಷ್ಟದಲ್ಲಿದ್ದಾರೆ. ಗ್ರಾಮದ ಕೊರವ ಸಮುದಾಯದವರು ಕೂಡ ತಮ್ಮ ವೃತ್ತಿಯಿಂದಾಗಿ ನಷ್ಟದಲ್ಲಿದ್ದಾರೆ. ಗ್ರಾಮದ ಕೊರವ ಸಮುದಾಯದವರು ಕೂಡ ತಮ್ಮ ಮೂಲ ಉದ್ಯೋಗವಾದ ಬುಟ್ಟಿ ಹೆಣೆಯುವ ಕಾರ್ಯಕ್ಕೆ ಮೂಲವಸ್ತು ಸಿಗದೆ, ಅಕಸ್ಮಾತ್ ಸಿಕ್ಕರೂ ಆಧುನಿಕತೆಯ ಪ್ರಭಾವದಿಂದ ಮಾರಾಟವಾಗದೇ ಸಂಕಷ್ಟದಲ್ಲಿದ್ದಾರೆ. ಬಾರಕೇರ ಸಮುದಾಯದವರು ಬಹುಸಂಖ್ಯಾತರಿದ್ದಾರೆ. ಇವರು

ಮೀನು ಹಿಡಿಯುವುದು, ದೋಣಿ ನಡೆಸುವುದು ಇವರ ಸಾಂಪ್ರದಾಯಿಕ ಉದ್ಯೋಗವಾಗಿದ್ದರೂ, ಹಲವರು ಒಕ್ಕಲುತನವನ್ನು ಮತ್ತೆ ಕೆಲವರು ಇತರ ಉದ್ಯೋಗಗಳನ್ನು ಅವಲಂಬಿಸಿರುತ್ತಾರೆ.

ಬಣಜಿಗ ಸಮುದಾಯದಲ್ಲಿ ವ್ಯಾಪಾರ ವೃತ್ತಿಯನ್ನು ಕೆಲವು ಜನ ಅವಲಂಬಿಸಿದ್ದಾರೆ. ಇನ್ನು ಹಲವು ಜನ ಕೃಷಿಯನ್ನೇ ಅವಲಂಬಿಸಿದ್ದಾರೆ. ಇದ್ದುದರಲ್ಲಿಯೇ ಮಕ್ಕಳಿಗೆ ಒಳ್ಳೆಯ ಬದುಕನ್ನು ನೀಡಲು ಹಂಬಲಿಸುವ ಜನ ಇವರಾಗಿದ್ದಾರೆ.

ಮುಸ್ಲಿಂ ಸಮುದಾಯದವರು ಗ್ರಾಮದಲ್ಲೇ ಅತೀ ಗರಿಷ್ಠ ಸಂಖ್ಯೆಯಲ್ಲಿದ್ದಾರೆ. ಕೆಲವರು ಭೂಮಿಯನ್ನು ಹೊಂದಿದವರಾಗಿದ್ದಾರೆ. ಇನ್ನು ಕೆಲವರು ಯಾವುದೇ ಭೂಮಿ ಸೀಮೆ ಇಲ್ಲದ ಜನರೂ ಇದ್ದಾರೆ. ಕೆಲವರು ವ್ಯಾಪಾರ, ಕೂಲಿ, ನೌಕರಿ ಹೀಗೆ ವಿವಿಧ ವೃತ್ತಿಗಳಲ್ಲಿ ತೊಡಗಿಕೊಂಡಿದ್ದು, ಗ್ರಾಮದಲ್ಲಿ ಸೌಹಾರ್ದದಿಂದ ಇತರ ಜನತೆಯ ಜೊತೆಗೆ ಬದುಕುತ್ತಿದ್ದಾರೆ.

ಜಂಗಮ ಸಮುದಾಯದವರು ಗರಿಷ್ಠ ಸಂಖ್ಯೆಯಲ್ಲಿದ್ದು, ಕೃಷಿ ಜಮೀನುಗಳನ್ನು ಹೊಂದಿದ್ದು, ವ್ಯವಸಾಯ ಮಾಡುತ್ತಾ ಜೀವನ ಸಾಗಿಸುತ್ತಿದ್ದಾರೆ. ಇದರ ಜೊತೆಗೆ ಹೂವು ಹಣ್ಣು ಕಾಯಿ ಓದಿಕೆ, ಸಕ್ಕರೆ ವ್ಯಾಪಾರ ಮಾಡುತ್ತಾರೆ. ಇದ್ದುದರಲ್ಲಿಯೇ ಮಕ್ಕಳಿಗೆ ಶಿಕ್ಷಣ ಕೊಡಿಸಿ ಉತ್ತಮ ಬದುಕನ್ನು ನೀಡುವತ್ತ ದಾಪುಗಾಲಿಡುತ್ತಿದ್ದಾರೆ.

ಗ್ರಾಮದ ಹೊಲೆಯರ ಸಮುದಾಯದವರೂ ಪಾರಂಪರಿಕ ಉದ್ಯೋಗಗಳಿಂದ ದೂರವಿದ್ದು, ಇವರು ಕೂಡಾ ಶೈಕ್ಷಣಿಕವಾಗಿ ಸರ್ಕಾರ ನೀಡುವ ಹಲವು ಸೌಲಭ್ಯಗಳನ್ನು ಬಳಸಿಕೊಂಡು, ಗೌರವದಿಂದ ಬದುಕುತ್ತಿದ್ದಾರೆ. ಅಲ್ಪಸ್ವಲ್ಪ ಜನ ಅನಕ್ಷರಸ್ಥರಾಗಿದ್ದರೂ ಆಧುನಿಕ ಸಮಾಜದ ಜೊತೆ ಹೊಂದಿಕೊಂಡು ನೆಮ್ಮದಿಯ ಬದುಕು ನಡೆಸುತ್ತಿದ್ದಾರೆ. ತಮ್ಮ ಬದುಕಿಗೆ ಪೂರಕವಾದ ನಿರ್ಣಯ ಕೈಗೊಳ್ಳುವಷ್ಟು ಸಂಪೂರ್ಣ ಸ್ವಾತಂತ್ರ್ಯತೆಯಲ್ಲಿ ಇವರು ಬದುಕುತ್ತಿದ್ದಾರೆ.

ಒಟ್ಟಾರೆ ಯಮನೂರು ಗ್ರಾಮದ ಜನ ವಿವಿಧ ಉದ್ಯೋಗ ಕೈಗೊಳ್ಳುವಲ್ಲಿ ಪುರುಷರಷ್ಟೇ ಸ್ತ್ರೀಯರು ಸಬಲರಾಗುತ್ತಿರುವುದು ಕಂಡುಬರುತ್ತದೆ. ವಿವಿಧ ಸ್ತ್ರೀ-ಸಂಘಗಳ ಮೂಲಕ ಆರ್ಥಿಕ ಸಬಲೀಕರಣದತ್ತ ಸಾಗುತ್ತಿದ್ದಾರೆ. ಇದರ ಜೊತೆಗೆ ವಿವಿಧತೆಯಲ್ಲಿ ಏಕತೆ ಸಾಧಿಸುವತ್ತ ಯಮನೂರು ಗ್ರಾಮವು ಜನಪದರ ಬದುಕಿಗೆ ವಿವಿಧ ನೆಲೆಗಳನ್ನು ಒದಗಿಸಿರುವುದು ಎದ್ದು ಕಾಣುತ್ತದೆ.

**೩.೨. ಕುಟುಂಬ ಪದ್ಧತಿ (Family)**

ಕುಟುಂಬವು ಸಮಾಜದ ಮೂಲಭೂತ ಮತ್ತು ಶಕ್ತಿಶಾಲಿ ಘಟಕವಾಗಿದೆ. ಏಕೆಂದರೆ ಪ್ರಾಣಿಗಳಂತೆ ಬದುಕಿದ ಮಾನವ ಬರುಬರುತ್ತಾ ಕೌಟುಂಬಿಕ ಬದುಕನ್ನು ಆರಂಭಿಸಿ ಕುಟುಂಬದ ಪ್ರೀತಿಯಲ್ಲಿ ಭಾಗಿಯಾದನು. ಕುಟುಂಬವನ್ನು ಕುರಿತು ಅಧ್ಯಯನ ಮಾಡಿದ ಸಮಾಜ ವಿಜ್ಞಾನಿಗಳು ಈ ರೀತಿಯಾದ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ - "ಇದೊಂದು ಮಾನವ ಸಮಾಜದ ಪ್ರಾಥಮಿಕ ಸಂಸ್ಥೆ" ಎನ್ನುತ್ತಾರೆ. ಇನ್ನೂ ಕೆಲವರು ಕುಟುಂಬವನ್ನು "ಸಮಾಜ ಕೇಂದ್ರ" ಎಂದು ವ್ಯಕ್ತಪಡಿಸುತ್ತಾರೆ. ನಾಗರೀಕತೆಗೆ ಸಮಾಜ ತಳಹದಿಯಾದರೆ, ಸಮಾಜಕ್ಕೆ ಕುಟುಂಬವೇ ಮೂಲ. ಕುಟುಂಬದ ಅಸ್ತಿತ್ವವಿಲ್ಲದ ಯಾವುದೇ ಸಮಾಜವನ್ನು ಊಹಿಸುವುದೂ ಕಷ್ಟ. ಕುಟುಂಬದಲ್ಲಿ ತಲೆ ಎತ್ತಿದ ಹಲವಾರು ಸಮಸ್ಯೆಗಳು ನಾಳೆ ಸಮಾಜದಲ್ಲಿಯೂ

ತಲೆ ಎತ್ತಬಹುದು. ದೇಶದಲ್ಲಿಯೂ ತಲೆದೋರಬಹುದು. ಆದ್ದರಿಂದ ಕೌಟುಂಬಿಕ ಸಂಸ್ಕೃತಿಯೇ ಸಮಾಜ ಮತ್ತು ದೇಶದ ಸಂಸ್ಕೃತಿಯಾಗುತ್ತದೆ.

ಮೆಕೈವರ್ ಮತ್ತು ಪೇಜ್‌ರವರು "ಕುಟುಂಬವು ಲೈಂಗಿಕ ಸಂಬಂಧದಿಂದ ಸ್ಪಷ್ಟಪಡಿಸಲ್ಪಟ್ಟು, ಸಾಕಷ್ಟು ಖಚಿತವಾದ ಮಕ್ಕಳನ್ನು ಪಡೆಯಲು ಮತ್ತು ಪೋಷಿಸಲು ಅವಕಾಶ ಮಾಡಿಕೊಡುವಂತಹ ಒಂದು ಸಾಮಾಜಿಕ ಸಂಸ್ಥೆ" ಎಂದಿದ್ದಾರೆ. ಕುಟುಂಬವು ಹಲವಾರು ಲಕ್ಷಣಗಳನ್ನು ಹೊಂದಿದೆ. ಇನ್ನು ವಿವಿಧ ದೃಷ್ಟಿಕೋನಗಳಿಂದ ಅಧ್ಯಯನ ಮಾಡಬಹುದು. ಉದಾಹರಣೆಗಾಗಿ-ಸಂಘವಾಗಿ, ಸಂಸ್ಥೆಯಾಗಿ ಕಾರ್ಯನಿರ್ವಹಿಸುವ ಘಟಕವಾಗಿ ಮತ್ತು ವಿಕಸನೀಯ ಪ್ರಕ್ರಿಯೆಯಾಗಿ ಅಧ್ಯಯನ ಮಾಡಲು ಸಾಧ್ಯವಿದೆ. ಅಂದರೆ ಒಂದು ಕುಟುಂಬದಲ್ಲಿನ ವ್ಯಕ್ತಿವ್ಯಕ್ತಿಗಳ ಸಂಬಂಧ, ವಾಸಿಸುವ ಮನೆ, ಮಾಡುವ ಊಟ, ಸಂಪ್ರದಾಯ, ಹಕ್ಕು ಭಾಧ್ಯತೆ, ಆರ್ಥಿಕ ಸ್ಥಿತಿಗತಿ ಮತ್ತು ಧರ್ಮ-ನಂಬಿಕೆಗಳನ್ನು ಅರ್ಥ ಮಾಡಿಕೊಳ್ಳಲು ಈ ಅಧ್ಯಯನ ಅಗತ್ಯವಾಗಿದೆ ಎಂದು ಹೇಳಬಹುದು.

**ಯಮನೂರಿನಲ್ಲಿರುವ ಕುಟುಂಬ ಪದ್ಧತಿ**

ಕುಟುಂಬಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಂಗಡಿಸಿ ನೋಡಿದಾಗ ಈ ರೀತಿಯಾದ ಕುಟುಂಬದ ಹಲವು ಪ್ರಕಾರಗಳು ಕಂಡುಬರುತ್ತವೆ.

ಅವಿಭಕ್ತ ಕುಟುಂಬ, ವಿಭಕ್ತ ಕುಟುಂಬ, ಮಾತೃಮೂಲ ಕುಟುಂಬ, ಪಿತೃಪ್ರಧಾನ ಕುಟುಂಬ, ರಕ್ತಸಂಬಂಧಿಗಳ ಕುಟುಂಬ, ಗಂಡ ಹೆಂಡಿರ ಕುಟುಂಬ, ಏಕಪತ್ನಿ ಕುಟುಂಬ, ಬಹುಪತ್ನಿ ಕುಟುಂಬ, ಬಹುಪತಿ ಕುಟುಂಬ. ಹೀಗೆ ಕುಟುಂಬಗಳ ವಿವಿಧ ಪ್ರಕಾರಗಳಿದ್ದರೂ ಪ್ರಸ್ತುತ ಯಮನೂರಿನ ಪರಿಸರದಲ್ಲಿನ ಕುಟುಂಬ ವ್ಯವಸ್ಥೆಯನ್ನು ಪರಿಶೀಲಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ.

ಏಕೆಂದರೆ ಕುಟುಂಬವು ಸಾಮಾಜಿಕ ವ್ಯವಸ್ಥೆಯ ಕೇಂದ್ರಬಿಂದು. ಕುಟುಂಬವೆಂಬ ಘಟಕಗಳ ಆಧಾರದ ಮೇಲೆ ಈ ವ್ಯವಸ್ಥೆ ನಿಂತಿದೆ ಎಂದರೆ ತಪ್ಪಾಗಲಾರದು. ಎಲ್ಲಾ ಸಮಾಜಗಳ ಬಗ್ಗೆಯೂ ಈ ಮಾತು ನಿಜವೆನಿಸುತ್ತದೆ. ಅಂತೆಯೇ ವಿವಾಹ ಮತ್ತು ಕುಟುಂಬ ಇವು ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಒತ್ತಾಸೆ ನೀಡಿರುವ ಎರಡು ಪ್ರಮುಖ ಸಾಮಾಜಿಕ ಸಂಸ್ಥೆಗಳು, ಪರಿವರ್ತನೆಯ ದಾಳಿಯನ್ನು ಎದುರಿಸಿಯೂ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡಿರುವ ಸಂಸ್ಥೆಗಳು.

ಯಮನೂರು ಒಂದು ಸಣ್ಣ ಗ್ರಾಮವಾಗಿದೆ. ಕೃಷಿಯೇ ಮೂಲ ಉದ್ಯೋಗವಾಗಿದೆ. ಇದರ ಹಿನ್ನಲೆಯಲ್ಲಿ ಮೊದಲು ಅವಿಭಕ್ತ ಕುಟುಂಬಗಳು ಅಸ್ತಿತ್ವದಲ್ಲಿದ್ದವು. ಇತ್ತೀಚಿನ ದಿನಗಳಲ್ಲಿ ಜನ ಆಧುನೀಕರಣದ ಪ್ರಭಾವದಿಂದ ವಿವಿಧ ವೃತ್ತಿಗಳನ್ನು ಕೈಗೊಂಡು ಜೀವನ ಸಾಗಿಸುತ್ತಿದ್ದಾರೆ. ಕೈಗಾರಿಕೀಕರಣ, ನಗರೀಕರಣ, ಶಿಕ್ಷಣ, ಉದ್ಯೋಗದಂತಹ ಪ್ರಭಾವಕ್ಕೆ ಒಳಗಾಗಿ ನಿರ್ದಿಷ್ಟ ಸ್ಥಳದಲ್ಲಿ ಇರಲಿಕ್ಕೆ ಆಗದೇ ತಮಗೆ ಅನುಕೂಲವೆನಿಸುವ ಸ್ಥಳಗಳಿಗೆ ಹೋಗಿ ಜೀವಿಸಲು ಬಯಸುವುದರಿಂದ ಅವಿಭಕ್ತ ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ಮಾರ್ಪಾಡು ಹೊಂದಿವೆ.

**ಅವಿಭಕ್ತ ಕುಟುಂಬ**

ಕುಟುಂಬದ ಮುಖ್ಯವಾದ ಬಗೆಗಳಲ್ಲಿ ಅವಿಭಕ್ತ ಕುಟುಂಬವೂ ಒಂದು. ಇಲ್ಲಿ ತಂದೆಯ ಶ್ರೇಣಿಯ

ಮೂಲಕ ಒಟ್ಟಾಗಿ ಸೇರಿರುವ ಎರಡು ಮೂರು ತಲೆಮಾರಿನ ಸರಳ ಕುಟುಂಬಗಳನ್ನು ಒಳಗೊಂಡಿರುತ್ತವೆ. ಇಲ್ಲಿ ಅಜ್ಜ-ಅಜ್ಜಿಯರು, ತಂದೆ-ತಾಯಿಗಳು, ಮಕ್ಕಳು, ಅಣ್ಣ-ತಮ್ಮಂದಿರು, ಮೊಮ್ಮಕ್ಕಳು, ಮರಿಮೊಮ್ಮಕ್ಕಳು, ಗಿರಿಮೊಮ್ಮಕ್ಕಳು ಮುಂತಾದ ರಕ್ತ ಸಂಬಂಧಗಳು ಸೇರಿ ಮೂರು-ನಾಲ್ಕು ತಲೆಮಾರಿನ ಜನರಿರುತ್ತಾರೆ. ಕುಟುಂಬದ ಸದಸ್ಯರು ಹೆಚ್ಚಿದಷ್ಟು ಉತ್ಪಾದನೆ ಹೆಚ್ಚು. ನಾನಾ ರೀತಿಯಲ್ಲಿ ಬರುವ ಸಂಬಂಧಗಳ ಮಧ್ಯೆ ಪ್ರೀತಿ ವಾತ್ಸಲ್ಯ ತುಂಬಿ, ಸಾಂಘಿಕವಾದ, ಭದ್ರತೆಯ ಭಾವನೆಯನ್ನು ಮೂಡಿಸುವ ಒಂದು ಪದ್ಧತಿಯಾಗಿದೆ. ಯಮನೂರಿನಲ್ಲಿ ಅವಿಭಕ್ತ ಕುಟುಂಬಗಳು ಸಾಕಷ್ಟು ಪ್ರಮಾಣದಲ್ಲಿ ಇಲ್ಲದಿದ್ದರೂ, ಇದ್ದವರು ಸಾಮರಸ್ಯದ ಬದುಕನ್ನು ಸಾಗಿಸುತ್ತಿದ್ದಾರೆ. ಇತ್ತಿತ್ತಲಾಗಿ ಯಮನೂರು ಗ್ರಾಮವು ನಗರೀಕರಣ, ಯಾಂತ್ರೀಕರಣ ಇನ್ನೂ ಮುಂತಾದ ಆಧುನಿಕ ಸ್ಥಿತ್ಯಂತರಗಳ ಪ್ರಭಾವದಿಂದಾಗಿ ಕೂಡಿಕೊಂಡು ಬಾಳುವ, ಬದುಕುವ ಮನೋಧೋರಣೆ ಕಡಿಮೆಯಾಗಿ ಯಾವುದಾದರೂ ಕಾರ್ಯಕ್ರಮಗಳಲ್ಲಿ ಮಾತ್ರ ಸೇರುತ್ತಾರೆ.

ಸಾಮಾನ್ಯವಾಗಿ ಜೀವನವು ಇವತ್ತು ಪರಿಸರ ಮತ್ತು ಪರಿಸ್ಥಿತಿಗೆ ಅನುಗುಣವಾಗಿ ಬದಲಾವಣೆಯನ್ನು ಹೊಂದುವುದು ಸಹಜವಾಗಿದೆ. ಪುರುಷನೇ ನಮಗೆ ಅರಿವಿಗೆ ಬರುತ್ತಿರುವ ಸಂಗತಿಯಾಗಿದೆ. ಪುರುಷಪ್ರಧಾನ ಕುಟುಂಬಗಳು ಎಲ್ಲೆಡೆ ಕಂಡುಬರುತ್ತಿದ್ದು, ಸಹಜವಾಗಿ ಪುರುಷ ಕುಟುಂಬದ ಯಜಮಾನನಾಗಿದ್ದಾನೆ. ಈ ಕಾರಣದಿಂದ ಕುಟುಂಬದ ಎಲ್ಲರ ಮೇಲೂ ಅಧಿಕಾರ ನಡೆಸುತ್ತಾನೆ. ಅಲ್ಲದೆ ಸ್ತ್ರೀಯರಿಗೂ ಗೌರವದ ಸ್ಥಾನವನ್ನು ನೀಡಿದ್ದಾನೆ. ಸ್ತ್ರೀ ಎಷ್ಟೋ ವೇಳೆ ಮನೆ ಮಕ್ಕಳನ್ನು ನೋಡಿಕೊಳ್ಳುವುದರ ಜೊತೆಗೆ ಕೃಷಿ ಚಟುವಟಿಕೆ ಇನ್ನಿತರ ಕಾರ್ಯಗಳಲ್ಲೂ ಭಾಗಿಯಾಗುತ್ತಾಳೆ. ಪುರುಷ ದುಶ್ಚಟಗಳಿಗೆ ಬಲಿಯಾದ ಸಂದರ್ಭಗಳಲ್ಲಿ, ತಮ್ಮ ಕುಟುಂಬ ನಿರ್ವಹಣೆಯಲ್ಲಿ ಎಡವಿದಾಗ ಮನೆಯ ಯಜಮಾನಿಯಾಗಿ, ಹೆಂಡತಿಯಾಗಿ, ತಾಯಿಯಾಗಿ, ಈ ಕುಟುಂಬಗಳ ಜವಾಬ್ದಾರಿಯನ್ನು ವಹಿಸಿಕೊಂಡು ಹೋಗುವುದು ಕಂಡುಬರುತ್ತದೆ.

**೩.೩. ಮನೆಗಳ ಮಾದರಿ**

ಈ ಪ್ರದೇಶಗಳಲ್ಲಿ ವಿವಿಧ ಬಗೆಯ ಮನೆಗಳನ್ನು ಕಾಣಬಹುದಾಗಿದೆ. ಸಾಮಾಜಿಕ ಹಾಗೂ ಆರ್ಥಿಕ ಬೆಳವಣಿಗೆಗಳ ಪ್ರಭಾವದಿಂದ ಇತ್ತೀಚೆಗೆ ನಗರ ಪ್ರದೇಶಗಳ ಗೃಹ ನಿರ್ಮಾಣದಲ್ಲಿ ಹಲವಾರು ಬದಲಾಣೆಗಳು ಕಂಡು ಬಂದರೂ ಗ್ರಾಮಾಂತರ ಪ್ರದೇಶಗಳಲ್ಲಿ ಈ ಬದಲಾವಣೆಗಳು ತೀವ್ರವಾಗಿಲ್ಲ. ಗ್ರಾಮೀಣ ವಾತಾವರಣದಲ್ಲಿ ಗೃಹಗಳನ್ನು ನಿರ್ಮಿಸುವಾಗ ಯಾವುದೇ ಯೋಜನೆ, ಶುಚಿತ್ವಕ್ಕೆ ಮಹತ್ವವನ್ನು ನೀಡುವುದು ಬಹಳ ಅಪರೂಪ. ಹಿಂದಿನ ಶೈಲಿಯ ಮನೆಗಳಲ್ಲಿ ಸಾಮಾನ್ಯವಾಗಿ ಕಡಪಾ ಕಲ್ಲಿನ, ಸಗಣಿಯಿಂದ ಸಾರಿಸಿದ ನೆಲ, ಮಣ್ಣಿನ ಗೋಡೆ ಹಾಗೂ ಮರದ ಸೊಪ್ಪಿಗೆ ಶುದ್ಧವಾದ ಹಾಳು ಮಣ್ಣನ್ನು ಕಲಿಸಿ ಮೆತ್ತಿರುವ ಮೇಲ್ಛಾವಣಿಯನ್ನು ಕಾಣಬಹುದಾಗಿದೆ.

ಮನೆಯ ಕಟ್ಟಡವು ಬಹಳ ಮಟ್ಟಿಗೆ ಜನರ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿದೆ. ಶ್ರೀಮಂತರ ಮನೆಗಳ ನಿರ್ಮಾಣದಲ್ಲಿ ವೈಭವಪೂರ್ಣ ಅಲಂಕಾರಗಳು ಸಹಜವಾಗಿ ಕಾಣಬರುತ್ತವೆ. ಮಧ್ಯಮ ವರ್ಗದವರ ಮನೆಗಳಲ್ಲಿ ಯೋಜನೆಯ ವಿನ್ಯಾಸಗಳು ಕಂಡು ಬರದಿದ್ದರೂ ತಮ್ಮ ಅಗತ್ಯಕ್ಕೆ ತಕ್ಕಂತೆ ಮನೆಗಳನ್ನು ನಿರ್ಮಿಸಿರುತ್ತಾರೆ.

ಬಡವರ ಮನೆಗಳು ಹೆಚ್ಚಾಗಿ ಸಾಲು ಮನೆಯ ಕಟ್ಟಡಗಳಾಗಿ ನಿರ್ಮಿತವಾಗಿದ್ದು ಗಾಳಿ ಮತ್ತು ಬೆಳಕಿಗೆ ಹೆಚ್ಚಿನ ಅವಕಾಶ ಕಂಡುಬರುವುದಿಲ್ಲ. ಮನೆಯ ಮುಂಭಾಗದ ಎರಡು ಕಡೆಗಳಲ್ಲಿ ಕುಳಿತುಕೊಳ್ಳುವಂತಹ ಜಗಲಿ ಮತ್ತು ನಂತರ ಪಡಸಾಲೆ, ನಡುಮನೆ ಹಾಗೂ ಅನುಕೂಲವಿರುವ ಕಡೆಗಳಲ್ಲಿ ಕೊಠಡಿಗಳು, ಅಡಿಗೆ ಮನೆ ಮತ್ತು ಒಂದು ಭಾಗದಲ್ಲಿ ದೇವರ ಜಗಲಿ ಮತ್ತು ಬಚ್ಚಲುಮನೆ ಸ್ನಾನದ ಮನೆಯಿರುವುದು ಮನೆಯ ಕೆಲವು ಸಾಮಾನ್ಯ ಲಕ್ಷಣವಾಗುತ್ತದೆ. ಕೆಲವು ಮನೆಗಳಲ್ಲಿ ಅಡಿಗೆ ಮನೆಯ ಒಂದು ಪಾರ್ಶ್ವದಲ್ಲಿ ಸ್ನಾನದ ಬಚ್ಚಲನ್ನು ಮಾಡಿರುತ್ತಾರೆ. ಕೆಲವು ಮನೆಗಳಲ್ಲಿ ಗಾಳಿ ಮತ್ತು ಬೆಳಕಿನ ಸೌಲಭ್ಯಕ್ಕಾಗಿ ಬೆಳಕು ಕಿಂಡಿಯನ್ನು ಇಟ್ಟಿರುತ್ತಾರೆ. ಸಾಮಾನ್ಯವಾಗಿ ಬ್ರಾಹ್ಮಣರ ಹಾಗೂ ಮರಾಠರ ಮನೆಯ ಮುಂಭಾಗದಲ್ಲಿ ತುಳಸೀ ಕಟ್ಟೆಯನ್ನು ಕಾಣಬಹುದಾಗಿದೆ. ಒಕ್ಕಲುತನ ಮಾಡುವವರ ಮನೆಗಳಲ್ಲಿ ಸಾಮಾನ್ಯವಾಗಿ ದನಕರುಗಳಿಗಾಗಿ ಕೊಟ್ಟಿಗೆಯನ್ನು ಮತ್ತು ಆಹಾರ ಧಾನ್ಯಗಳನ್ನು ಸಂಗ್ರಹಿಸಿಡಲು ಹಗೇವು ಇಲ್ಲವೇ ಕಣಜದ ವ್ಯವಸ್ಥೆಯನ್ನು ಮಾಡಿರುತ್ತಾರೆ.

ಮುಸಲ್ಮಾನರ ಮನೆಯ ಹೊರಗೋಡೆಗಳು, ಎತ್ತರವಾಗಿ ಹೊರಗೋಡೆಯಿಂದ ಮುಚ್ಚಿಕೊಂಡಿರುವಂತೆ ಕಾಣುತ್ತವೆ. ಇವರ ಮಹಿಳೆಯರ ಪರದಾ ಪದ್ಧತಿಯು ಇದಕ್ಕೆ ಕಾರಣವಿರಬಹುದೆಂದು ಹೇಳಬಹುದು.

ಶೌಚಾಲಯ ವ್ಯವಸ್ಥೆ- ಸರ್ಕಾರದ ನೆರವಿನೊಂದಿಗೆ ಅನೇಕ ಮನೆಗಳು ಶೌಚಾಲಯ ಮತ್ತು ವಿದ್ಯುತ್ ಹೊಂದಿವೆ.

**೩.೪. ಆಹಾರಪದ್ಧತಿ**

ಭೂಮಿಯ ಮೇಲೆ ಮನುಷ್ಯ ವಾಸಿಸಲು ಗಾಳಿ ನೀರು ಹೇಗೆ ಅವಶ್ಯವೋ ಹಾಗೇ ಆಹಾರವೂ ಅತಿ ಮುಖ್ಯವಾಗಿ ಬೇಕು. ಅಂತೆಯೇ ಸರ್ವಜ್ಞ ಕವಿಯು "ಅನ್ನದೇವರ ಮುಂದೆ ಇನ್ನು ದೇವರಿಲ್ಲ" ಅನ್ನವು ಇರುವ ತನಕ ಪ್ರಾಣವು ಜಗದೊಳಗೆ ಅನ್ನವೇ ದೈವ ಸರ್ವಜ್ಞ" ದಾಸರು ಹೇಳುವ ಹಾಗೆ ಉದರಪೋಷಣೆಗಾಗಿ ವಿವಿಧ ವೇಷಮಂ. ಎಲ್ಲರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ಎನ್ನುವಂತೆ ಆಹಾರ ಬಹಳ ಮುಖ್ಯ. ಒಂದೊಂದು ಸಮುದಾಯದ ಜನರು ತಮ್ಮ ಅಗತ್ಯಕ್ಕನುಗುಣವಾಗಿ ಆಹಾರ ವ್ಯವಸ್ಥೆಯನ್ನು ತಾವೇ ರೂಢಿಸಿಕೊಂಡಿದ್ದಾರೆ. ಆಹಾರ ವ್ಯವಸ್ಥೆಗೂ ಜನರ ಆರ್ಥಿಕ ಸಾಮಾಜಿಕ ವ್ಯವಸ್ಥೆಗೂ ನೇರವಾದ ಸಂಬಂಧವಿದೆ. ಹಾಗೆಯೇ ಯಮನೂರು ಜನರ ಆಹಾರ ಪದ್ಧತಿಯೂ ಇಲ್ಲಿನ ಪ್ರಾದೇಶಿಕತೆಯಿಂದಲೇ ಕೂಡಿರುವುದು.

ಈ ಭಾಗದಲ್ಲಿ ಜೋಳ, ಗೋದಿ ಹೆಚ್ಚಾಗಿ ಬೆಳೆಯುವುದರಿಂದ ಅನ್ನ, ಸಾರು, ರೊಟ್ಟಿ, ಚಪಾತಿ, ಪಲ್ಯ ನಿತ್ಯದ ಊಟವಾಗಿರುತ್ತದೆ. ಚಹಾ ಕಾಫಿ ಎಲ್ಲ ವರ್ಗದ ಜನರಲ್ಲೂ ಸಾಮಾನ್ಯವಾಗಿರುತ್ತದೆ. ಈ ಪ್ರದೇಶದಲ್ಲಿ ಬಹುಮಟ್ಟಿಗೆ ಬೆಳಗಿನ ಉಪಹಾರಕ್ಕೆ ರೊಟ್ಟಿಯನ್ನೇ ಬಳಸುವರು, ರೊಟ್ಟಿಯ ಜೊತೆಗೆ ಶೇಂಗಾ ಚಟ್ನಿ, ಹುರಿಗಡಲೆ ಚಟ್ನಿ, ಕೆಂಪು ಮೆಣಸಿನಕಾಯಿ ಚಟ್ನಿ ಇವೇ ಮೊದಲಾದವುಗಳನ್ನು ಮೊಸರಿನೊಂದಿಗೆ ಬಳಸುವರು. ದಿನನಿತ್ಯದಲ್ಲಿ ಸಾಮಾನ್ಯವಾಗಿ ಹೆಸರು, ಕಡ್ಲಿ, ತೊಗರಿ, ಮಡಿಕೆ, ಅಲಸಂದೆ ಮತ್ತು ಹುರಳಿಕಾಳುಗಳ ಉಸುಳಿ ಹಾಗೂ ಬದನೆಕಾಯಿ, ತುಪ್ರಿಕಾಯಿ, ಪಡುವಲಕಾಯಿ, ಕುಂಬಳಕಾಯಿ,

ಆಲೂಗಡ್ಡೆ, ಚೌಳಿಕಾಯಿ ಮತ್ತು ತೊಂಡೆಕಾಯಿ ಪಲ್ಯವನ್ನು ಉಪಯೋಗಿಸುತ್ತಾರೆ. ಬೇಸಿಗೆ ಕಾಲದಲ್ಲಿ ಇಲ್ಲವೆ ಯಾವಾಗಾದರೂ ಒಮ್ಮೆ ಜೋಳದ ನುಚ್ಚು(ಕಿಚಡಿ) ಅಂಬ್ಲಿಯನ್ನು ಬಳಸುತ್ತಾರೆ. ತೀರಾ ಬಡವರು ಅನ್ನವನ್ನು ನಿತ್ಯ ಬಳಸುವುದಿಲ್ಲ. ವಿಶೇಷ ಸಂದರ್ಭದಲ್ಲಿ, ಹಬ್ಬ ಹರಿದಿನಗಳಲ್ಲಿ ಮದುವೆ ಮುಂತಾದ ಸಂದರ್ಭಗಳಲ್ಲಿ ಬಳಸುತ್ತಾರೆ. ರೊಟ್ಟಿ ಪಂಚಮಿ ದಿನ ಜೋಳದ ರೊಟ್ಟಿ, ಸಜ್ಜೆ ರೊಟ್ಟಿ ಮೊದಲೇ ಮಾಡಿ ಇಡುತ್ತಾರೆ.

ದಿನನಿತ್ಯದ ಊಟಕ್ಕೂ ಹಬ್ಬದ ಊಟಕ್ಕೂ ತುಂಬಾ ವ್ಯತ್ಯಾಸವಿರುವದು ಕಂಡುಬರುತ್ತದೆ. ಹಬ್ಬ ಹರಿದಿನಗಳಲ್ಲಿ ಕೆಲವು ವಿಶೇಷ ಆಹಾರಗಳನ್ನು ತಯಾರಿಸುತ್ತಾರೆ. ಯುಗಾದಿ ಹಬ್ಬದಲ್ಲಿ ಕಡ್ಲಿಬೇಳೆ ಹೋಳಿಗೆ, ಬೇವು, ಬೆಲ್ಲ, ಶ್ಯಾವಿಗಿ ಪಾಯಸ, ಮಣ್ಣೆತ್ತಿನ ಅಮವಾಸ್ಯೆಯಲ್ಲಿ ಹೋಳಿಗೆ, ಕರಿಗಡಬು, ಗೋಧಿಹುಗ್ಗಿ ಮಾವಿನಹಣ್ಣಿನ ಸೀಕರಣೆ, ನಾಗರ ಪಂಚಮಿಯಲ್ಲಿ ಅಳ್ಳಿಟ್ಟು, ಕಡ್ಲೆ, ಹೆಸರು ಅಥವಾ ಮಡಿಕೆ ಕಾಳಿನ ಉಸುಳಿ, ಹಾಗೂ ಶೇಂಗಾ ಉಂಡಿ, ಕಡ್ಲೆ ಉಂಡಿ, ಎಳ್ಳು ಉಂಡೆ ಮೊದಲಾದ ಉಂಡೆಗಳು, ಗಣೇಶನ ಹಬ್ಬದಲ್ಲಿ ಕಜ್ಜಾಯ, ಮೊದಕ, ವಿಜಯದಶಮಿಯಲ್ಲಿ ಗೋಧಿಹುಗ್ಗಿ, ಹೋಳಿಗೆ, ಕರ್ಚಿಕಾಯಿ ದೀಪಾವಳಿಯಲ್ಲಿ ಹೋಳಿಗೆ ಚಕ್ಕುಲಿ ಉಂಡೆಗಳು, ಸಂಕ್ರಾಂತಿಯಲ್ಲಿ ಕಾಮನ ಹುಣ್ಣಿಮೆಯಲ್ಲಿ ಹೋಳಿಗೆ ಮಾಡುವುದು ರೂಢಿಯಲ್ಲಿದೆ. ಮೊಹರಂ ಹಬ್ಬಕ್ಕೆ ಮಾದ್ಲಿ ಚೋಂಗೆ, ಶಿವರಾತ್ರಿ ಉಪವಾಸದ ನಂತರ ಫಳಾರ ಈ ರೀತಿಯಾಗಿ ನಾನಾ ನಮೂನೆಯ ಹಬ್ಬಗಳಿಗೆ ಅದರದ್ದೇ ಆದ ವಿಶೇಷ ಅಡುಗೆ ಮಾಡುವುದು ಕಂಡು ಬರುತ್ತದೆ.

ಮದುವೆ ಸಮಾರಂಭದಲ್ಲಿ ಊಟಕ್ಕೆ ಗೋಧಿ ಹುಗ್ಗಿ, ಬುಂದೆ, ಶಿರಾ, ಬಾಲುಷಾ, ಜಿಲೇಬಿ ಜಹಾಂಗೀರ್, ರಸಗುಲ್ಲಾ, ಜಾಮೂನ್, ಬರ್ಫಿಯಂತಹ ಅನೇಕ ಹೊಸ ಹೊಸ ಸಿಹಿ ತಿಂಡಿಗಳನ್ನು ಮಾಡುತ್ತಾರೆ. ಅನ್ನಸಾರು, ಮೊಸರನ್ನ, ಪಲಾವು ಅಷ್ಟೇ ಅಲ್ಲದೆ ಕಾಫೀ ಸೇವಿಸುವುದು, ವೀಳ್ಯದಲೆ, ಅಡಿಕೆ ತಂಬಾಕನ್ನು ಹಾಕುವುದು ಇವರಲ್ಲಿ ಬಹಳ ಮಟ್ಟಿಗೆ ರೂಢಿಯಲ್ಲಿದೆ.

ಹೊಟೇಲುಗಳಲ್ಲಿ ಉಪ್ಪಿಟ್ಟು, ಪೂರಿ, ಇಡ್ಲಿ, ಒಡೆ, ದೋಸೆ, ಚಟ್ನಿ ಸಾಂಬಾರ್, ಬಜಿ, ಮಿರ್ಚಿ, ಅವಲಕ್ಕಿ, ಮಂಡಕ್ಕಿ, ಖಾರಸೇವು, ಶಿರಾ, ಇವೇ ಮುಂತಾದ ತಿಂಡಿಗಳನ್ನು ಮಾಡುತ್ತಾರೆ.

ಕುರಿಕಾಯುವ ಜನ ಜೋಳದ ಸಂಗಟಿ, ಮುದ್ದಿ, ಕುರಿಹಾಲು ಸೇವಿಸುತ್ತಾರೆ. ಮುಸಲ್ಮಾನರು ಮಾಂಸಹಾರಿಗಳಾಗಿದ್ದು ಅವರ ಸಂಪ್ರದಾಯದಂತೆ ಕಡಿದ (ಝುಖ) ಮಾಂಸವನ್ನು ಮಾತ್ರ ಬಳಸುತ್ತಾರೆ. ದನದ ಮಾಂಸವನ್ನು ಬಳಸುವುದಿಲ್ಲ. ಹಂದಿ ಮಾಂಸ ಇವರಿಗೆ ನಿಷೇಧ. ಮಾಂಸಹಾರದ ಜೊತೆಯಲ್ಲಿ ತರಕಾರಿ ಹಾಗೂ ಬೇಳೆ ಮೊದಲಾದವುಗಳಿಂದ ತಯಾರಿಸಿದ ಆಹಾರಗಳನ್ನು ಬಳಸುತ್ತಾರೆ. ಹಬ್ಬಹರಿದಿನಗಳಲ್ಲಿ, ಪಲಾವ್, ಕೋಳಿ, ಖೈಮಾ, ಶಾವಿಗೆಪಾಯಸ, ಒಂದು ರೀತಿಯ ಕರಿಗಡಬು, ಮತ್ತಿತರ ಸಿಹಿತಿಂಡಿಗಳನ್ನು ತಯಾರಿಸುತ್ತಾರೆ.

ಮಕ್ಕಳಿಗೆ ಗಣಜಲಿ ತಟ್ಟು ಎದ್ದರೆ ಹೆಣ್ಣು ದೇವರು ಅಂದರೆ ದ್ಯಾಮವ್ವ ದುರಗವ್ವನಿಗೆ ದೀಪಕೊಟ್ಟು ಏನಾದರೂ ಸಿಹಿ ತಿಂಡಿಯನ್ನು ಮಾಡುತ್ತಾರೆ.

ಗರ್ಭಿಣಿ ಸ್ತ್ರೀಯರಿಗೆ ವಿವಿಧ ಊಟ ಉಪಚಾರ ಮಾಡುವರು. ಬಾಣಂತಿಯರಿಗೆ, ಋತುಮತಿಯಾದವರಿಗೆ ಕೊಬ್ಬರಿಕಾರ ಕೊಡುವುದು ಇಲ್ಲಿನ ವಿಶೇಷ. ನಿಂಬೆಹಣ್ಣಿನ ಶರಬತ್, ಮಜ್ಜಿಗೆಯನ್ನು ಸೇವಿಸುತ್ತಾರೆ. ಆದರೆ ಇತ್ತೀಚಿನ ಯುವ ಪೀಳಿಗೆ ಕೋಕೊಕೋಲಾ, ಪೆಪ್ಸಿ ಮುಂತಾದ ತಂಪು ಪಾನೀಯಗಳನ್ನು ಸೇವಿಸುತ್ತಾರೆ.

**ಪಾನೀಯಗಳು**

ಪಾನೀಯಗಳು ಎಂದರೆ ನೀರನಲ್ಲಿ ತಯಾರಿಸುವ ಒಂದು ಆಹಾರ. ಇದರಲ್ಲಿ

೧. ಸಿಹಿ ಪಾನೀಯ

೨. ಮಾದಕ ಪಾನೀಯ

೩. ಉಪ್ಪು/ಹುಳಿ ಪಾನೀಯ ಎಂದು ಮೂರು ಬಗೆಯಾಗಿ ವರ್ಗೀಕರಿಸಿದ್ದಾರೆ.

'ಷರಬತ್ತು' ಸಿಹಿ ಪಾನೀಯವಾಗಿ ಗ್ರಾಮದಲ್ಲಿ ಬಳಸುತ್ತಾರೆ. ಇದರಲ್ಲಿ ನಿಂಬೆಹಣ್ಣಿನ ಪಾನಕವೆ ಹೆಚ್ಚಾಗಿ ಬಳಸಲ್ಪಡುತ್ತದೆ.

**ಮಾಡುವ ವಿಧಾನ**

ನೀರಿಗೆ ತಕ್ಕ ಪ್ರಮಾಣದ ನಿಂಬೆ ಹುಳಿ ಹಿಂಡಿ ಅದಕ್ಕೊಂದಿಷ್ಟು ಸಕ್ಕರೆ, ಸ್ವಲ್ಪ ಉಪ್ಪು ಬೆರೆಸಿ ಈ ಪಾನಕವನ್ನು ಸರಳವಾಗಿ ತಯಾರಿಸಬಹುದು. ಇದಕ್ಕೆ ಯಾಲಕ್ಕಿಯನ್ನು ಬೆರೆಸಿದರೆ ಪಾನಕಕ್ಕೆ ಒಳ್ಳೆಯ ಸುವಾಸನೆ ಬರುವುದರ ಜೊತೆಗೆ ಹೊಟ್ಟೆಗೆ ತಂಪನ್ನು ಕೊಡುತ್ತದೆ. ಅದಕ್ಕಾಗಿ ಇದನ್ನು ಬೇಸಿಗೆಯ ದಿನಗಳಲ್ಲಿ ಹೆಚ್ಚು ಬಳಸುತ್ತಾರೆ. ಜೊತೆಗೆ ಇದು ಆರೋಗ್ಯವರ್ಧಕ, ಇದರಿಂದ ಬಾಯಾರಿಕೆಯನ್ನು ಬೇಗನೆ ಶಮನಮಾಡಿಕೊಳ್ಳಬಹುದು.

ಉತ್ತರ ಕರ್ನಾಟಕದಲ್ಲಿ ಬಿಸಿಲಿನ ಬೇಗೆ ಹೆಚ್ಚಾಗಿರುವುದರಿಂದ ಮಣ್ಣಿನ ಕೊಡ, ಹರವಿಗಳನ್ನು ಬಳಸುತ್ತಿದ್ದರು. ಆದರೆ ಈಗ ರೆಫ್ರಿಜರೇಟರ್ ಬಂದಿರುವುದರಿಂದ ಅದರಿಂದ ನೀರನ್ನು ತೆಗೆದುಕೊಂಡು ತಂಪಾದ ಷರಬತ್ತು ತಯಾರಿಸುತ್ತಾರೆ. ಆದರೆ ಗ್ರಾಮಗಳಲ್ಲಿ ಮಣ್ಣಿನ ಕೊಡ ಹಾಗೂ ಹರವಿಗಳನ್ನು ಬಳಸುತ್ತಾರೆ. ಮಣ್ಣಿನ ಪಾತ್ರೆಯಲ್ಲಿನ ನೀರನ್ನು ಕುಡಿದರೆ ಆರೋಗ್ಯಕ್ಕೂ ಒಳ್ಳೆಯದೆಂಬ ಅಭಿಪ್ರಾಯ ಗ್ರಾಮಸ್ಥರಲ್ಲಿ ಇನ್ನೂ ಅಚ್ಚಳಿಯದೇ ಉಳಿದಿದೆ.

**ಮಾದಕ ಪಾನೀಯ**

ಮಾದಕ ಪಾನೀಯವೆಂದರೆ ಮತ್ತನ್ನು ಬರಿಸುವ ದ್ರವರೂಪದ ಪದಾರ್ಥ. ಇವು ಸೆರೆ, ಶೆಂದಿ, ಕಳ್ಳಬಟ್ಟಿಯಿಂದ ತೆಗೆದ ಸೆರೆ, ಸಿಂದಿಗಿಡದಿಂದ ಇಳಿಸಿಕೊಳ್ಳುವ ಸಿಂಧಿ, ಕರ್ನಾಟಕದ ಬಹುತೇಕ ಪ್ರದೇಶಗಳಲ್ಲಿ ಬಳಸುತ್ತಾರೆ. ಚಟಕ್ಕಂಟಿಕೊಂಡವರು ದಿನವೂ ಇದನ್ನು ಕುಡಿಯುತ್ತಾರೆ. ಇನ್ನು ಕೆಲವರು ಏನಾದರೂ ಪಾರ್ಟಿ, ಹೋಳಿಹುಣ್ಣಿಮೆಯ ಸಂದರ್ಭದಲ್ಲಿ ಹಾಗೂ ಚುನಾವಣೆಯಲ್ಲಿ ಆಯ್ಕೆಯಾದಾಗ ಮಾತ್ರ ಸೇವಿಸುತ್ತಾರೆ.

**ಮಜ್ಜಿಗೆ ಮತ್ತು ಅಂಬಲಿ**

ಇವು ಉಪ್ಪು ಪಾನೀಯಗಳು. ಊಟದಲ್ಲಿ ಮಜ್ಜಿಗೆ ಬಳಸುವುದು, ಊಟದ ನಂತರವೂ ಮಜ್ಜಿಗೆಯನ್ನು

ಕುಡಿಯುವುದು ಆರೋಗ್ಯಕ್ಕೆ ಒಳ್ಳೆದೆಂಬ ಅಭಿಪ್ರಾಯವಿದೆ. ಮಜ್ಜಿಗೆಗೆ ಸ್ವಲ್ಪ ಉಪ್ಪು ಬೆರೆಸಿಕೊಂಡು ಸೇವಿಸಿದರೆ ಅದು "ಸಾದಾಮಜ್ಜಿಗೆ" ಇದೇ ಮಜ್ಜಿಗೆಗೆ ಬಳ್ಳೊಳ್ಳಿ, ಜೀರಿಗೆ, ಕೊತ್ತಂಬರಿ, ಉಪ್ಪು ಅರಿದು ಬೆರೆಸಿದರೆ ಅದು ಮಜ್ಜಿಗೆ ಸಾರು ಎನಿಸಿಕೊಳ್ಳುತ್ತದೆ. ಇದನ್ನು ಸೇವಿಸಿದರೆ ಅಜೀರ್ಣದಿಂದ ದೂರವಾಗಬಹುದು.

**ಅಂಬಲಿ**

ಇತ್ತೀಚಿನ ದಿನಗಳಲ್ಲಿ ಅಂಬಲಿ ಸೇವೆ ಕ್ವಚಿತ್ತಾಗಿ ಇದೆ. ಜೋಳದ ಹಿಟ್ಟಿಗೆ ಉಪ್ಪು, ಬಳ್ಳೊಳ್ಳಿ, ಜೀರಿಗೆ ಬೆರೆಸಿ ಸ್ವಲ್ಪ ಮಟ್ಟಿಗೆ ಮೊಸರು ಹಾಕಿ ಕುದಿಸಿಬಿಟ್ಟರೆ, ಅಂಬಲಿ ಸಿದ್ದಗೊಳ್ಳುತ್ತದೆ. ಇದು ಆರೋಗ್ಯಕ್ಕೆ ಬಹಳ ಒಳ್ಳೆಯದಾಗಿರುತ್ತದೆ.

**೩.೫. ಉಡುಗೆ-ತೊಡುಗೆ**

ಸಾಂಪ್ರದಾಯಿಕವಾಗಿ ಹಿಂದೂ ಗಂಡಸರಲ್ಲಿ ರೂಢಿಯಲ್ಲಿರುವ ಉಡುಪುಗಳೆಂದರೆ ಧೋತರವನ್ನು ಕಚ್ಚೆಹಾಕಿ ಧರಿಸುತ್ತಾರೆ. ನಿಲುವಂಗಿ, ಜುಬ್ಬಾ ಹಾಗೂ ತಲೆಗೆ ರುಮಾಲು ಅಥವಾ ರಟ್ಟಿನ ಇಲ್ಲವೇ ಗಾಂಧಿ ಟೋಪಿ, ಕೆಲವರು ಓವರ್ ಕೋಟುಗಳನ್ನೂ ಧರಿಸುವರು. ಹೊಲಗದ್ದೆಗಳಲ್ಲಿ ಕೆಲಸ ಮಾಡುವ ಗಂಡಸರು ಬಗಲ್‌ಕಸಿ ಅಂಗಿ (ಅರ್ಧತೋಳಿನ ಅಂಗಿ)ಯನ್ನೂ ಮತ್ತು ಧೋತರವನ್ನೂ ಧರಿಸುತ್ತಾರೆ. ಯುವಕರು ಮತ್ತು ನೌಕರಿ ಮಾಡುವವರು ಪ್ಯಾಂಟ್ ಶರ್ಟಗಳನ್ನು ಧರಿಸುತ್ತಾರೆ.

ಸ್ತ್ರೀಯರು ಸೀರೆ ಕುಪ್ಪಸಗಳನ್ನು ಧರಿಸುವುದು ಸಾಂಪ್ರದಾಯಿಕವಾಗಿ ರೂಢಿಯಲ್ಲಿದೆ. ದೊಡ್ಡದಾದ ಸೀರೆಗಳನ್ನು ಕಚ್ಚೆಹಾಕಿ ಉಡುವುದು, ಮತ್ತು ಸೆರಗಿನಿಂದ ತಲೆಯನ್ನು ಮುಚ್ಚಿಕೊಳ್ಳುವುದು ಹಿಂದಿನಿಂದಲೂ ರೂಢಿಯಲ್ಲಿರುವುದು. ಇದನ್ನು ಇಂದಿಗೂ ಕಾಣಬಹುದಾಗಿದೆ. ವಿಶೇಷ ಸಂದರ್ಭಗಳಲ್ಲಿ ರೇಷ್ಮೆ ಸೀರೆ ಉಡುವುದು ಸಹಜವಾಗಿದೆ. ಹುಡುಗಿಯರು ಬಹುತೇಕವಾಗಿ ಲಂಗ ಕುಪ್ಪಸ-ಟಿಷರ್ಟ್ ಚೂಡಿದಾರ್, ಪ್ಯಾಂಟ್ ಟೀ ಶರ್ಟ, ಮೊದಲಾದುವುಗಳನ್ನು ಧರಿಸುತ್ತಾರೆ. ನಾಗರೀಕತೆಯ ಬೆಳವಣಿಗೆಯಿಂದ ಹಿಂದಿನ ಕಾಲಕ್ಕಿಂತ ಇಂದಿನ ಜನರ ಉಡಿಗೆ ತೊಡುಗೆಗಳಲ್ಲಿ ಬದಲಾವಣೆಯನ್ನು ಕಾಣಬಹುದಾಗಿದೆ.

ಮುಸ್ಲಿಂರಲ್ಲಿ ಸಾಮಾನ್ಯವಾಗಿ ಗಂಡಸರು ಪೈಜಾಮ, ಉದ್ದನೆಯ ನಿಲುವಂಗಿ (ಜುಬ್ಬ) ಹಾಗೂ ಟೋಪಿಯನ್ನು ಧರಿಸುವರು. ಹಳೆಯ ಕಾಲದ ಜನ ಧೋತರ ಉಡುತ್ತಾರೆ. ಆದರೆ ಯುವಕರು ಪ್ಯಾಂಟ್, ಶರ್ಟ್ ಮುಂತಾದವುಗಳನ್ನು ಧರಿಸುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಇವರಲ್ಲಿ ಸ್ತ್ರೀಯರು ಹೊರಗೆ ಹೋಗುವಾಗ ಕಪ್ಪು ಬಟ್ಟೆಯಿಂದ ತಯಾರಿಸಿರುವ ಬುರಖಾವನ್ನು ತಲೆಯಿಂದ ಪಾದದವರೆಗೂ ದೇಹ ಮುಚ್ಚುವಂತೆ ಧರಿಸುತ್ತಾರೆ.

ಪುರುಷರು ಕೆಲವೊಮ್ಮೆ ನಿಲುವಂಗಿ ಜುಬ್ಬಾ ತೊಡುತ್ತಾರೆ. ಟೋಪಿಯಲ್ಲಿ ಮಕಮಲ್ ಟೋಪಿ, ತುರ್ಕಿ ಟೋಪಿ, ಹೆಣಿಕೆ ಟೋಪಿ, ರಾಂಪುರಿ ಟೋಪಿ, ಜಿನ್ನಾ ಟೋಪಿಗಳನ್ನು ವೈವಿಧ್ಯಮಯವಾಗಿ ಬಳಸುತ್ತಾರೆ. ಮೌಲ್ವಿ ಖಾಜಾಗಳು, ಶೇರವಾನಿ ಧರಿಸುತ್ತಾರೆ. ಹಜ್ ಯಾತ್ರಿಕರು ಒಂದು ಬಿಳಿ ವಸ್ತ್ರವನ್ನು ಲುಂಗಿಯಂತೆ ಸುತ್ತಿಕೊಂಡರೆ, ಇನ್ನೊಂದು ವಸ್ತ್ರವನ್ನು ತೋಳು ಪೂರ್ತಿ ಹೊದ್ದು ಕೊಳ್ಳುವರು. ಮುಸ್ಲಿಂ ಮಹಿಳೆಯರು ಹೆಚ್ಚಾಗಿ ಬಂಗಾರದ ಆಭರಣಗಳನ್ನು ತೊಡುವ ಪದ್ಧತಿ ಇದೆ.

**ಆಭರಣಗಳು:** ಆಭರಣಗಳ ಮೋಹ ಹೆಚ್ಚಾಗಿದೆ. ಯಮನೂರು ಜನರ ಸ್ತ್ರೀಯರು, ಪುರುಷರು, ಮಕ್ಕಳು ಸಹ ಹೊರತಾಗಿಲ್ಲ. ಅಂದರೆ ಯಮನೂರಿನ ಜನರು ಕೂಡಾ ಆಭರಣ ಪ್ರಿಯರಾಗಿದ್ದಾರೆ. ಆದರೆ ಆಭರಣದ ಬಳಕೆಯು ಬಹು ಮಟ್ಟಿಗೆ ಜನರ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿದೆ. ಸ್ತ್ರೀಯರು ಓಲೆ, ಜುಮಕಿ, ಮೂಗುತಿ, ಕೈಬಳೆ, ಸರ (ಮುತ್ತಿನಿಂದ ಮಾಡಿರುವ ನತ್ತು), ಉಂಗುರ, ಕಾಲ್ಗೆಜ್ಜೆ, ಕೈಬಳೆ ಪಾಟ್ಲಿ ಮುಂತಾದವುಗಳನ್ನು ಉಪಯೋಗಿಸುತ್ತಾರೆ.

**ಸ್ತ್ರೀಯರ ಆಭರಣಗಳು**

| ಆಭರಣಗಳು | ತೊಡುವ ಸ್ಥಳ |
|---|---|
| ಬೋರಮಳ ಸರ ಮತ್ತು ಮೆಲುಂಡು ಸರ | ಕೊರಳಿಗೆ |
| ಓಲೆ, ಜುಮುಖಿ, ಬುಗಡೆ | ಕಿವಿಗೆ |
| ಕಂಠಿಸರ, ಅವಲಕ್ಕಿಸರ, ಕಾಸಿನಸರ, ಟಿಕ್ಕೆ | ಕೊರಳಿಗೆ |
| ಮೂಗತಿ, ನತ್ತು | ಮೂಗಿಗೆ |
| ಬೈತಲೆ ಸರ | ಬೈತಲೆಗೆ |
| ಕಾಲುಂಗುರ | ಕಾಲ ಬೆರಳಿಗೆ |
| ಚೈನ (ಬೆಳ್ಳಿ) | ಕಾಲಿಗೆ |
| ಉಂಗುರ (ವಂಕಿ ಉಂಗುರ, ಸುತ್ತಿನುಂಗುರ, ಮುತ್ತಿನುಂಗುರ, ಹರಳಿನ ಉಂಗುರ) | ಕೈ ಬೆರಳಿಗೆ |
| ವಂಕಿ, ನಾಗಮುರಿ | ರಟ್ಟೆಗೆ |
| ಉದ್ದನೆಸರ (ಲಾಂಗ್ ನೆಕ್ಲೆಸ್)) | ಕೊರಳಿಗೆ |
| ಡಾಬು (ಬಂಗಾರ/ಬೆಳ್ಳಿ) | ಸೊಂಟಕ್ಕೆ |
| ಕೀ ಗೊಂಚು | ಸೊಂಟಕ್ಕೆ |
| ಪಾಟಲಿ, ಬಿಲ್‌ವಾರ, ತೋತೊಡೆ | ಕೈಗೆ |

**ಮಕ್ಕಳ ಆಭರಣಗಳು**

| ಆಭರಣಗಳು | ತೊಡುವ ಸ್ಥಳ |
|---|---|
| ಮುರುವು | ಕಿವಿಗೆ |
| ಕೌಡಿಸರ/ಹವಳದಸರ | ಕೊರಳಿಗೆ |
| ಕರಿಮಣಿ ಸರ | ಕೈಗೆ |
| ಉಂಗುರ | ಕೈ ಬೆರಳಿಗೆ |

| | |
|---|---|
| ಚೈನ | ಕೊರಳಿಗೆ |
| ಲಿಂಗದ ಕೈ | ಕೊರಳಿಗೆ |
| ಬೆಳ್ಳಿ ಉಡುದಾರ | ಸೊಂಟಕ್ಕೆ |
| ಗೆಜ್ಜೆ, ಹಾಲ್ಗಡಗ | ಕಾಲಿಗೆ |
| ಕೈ ಕಟ್ಟು (ಬಂಗಾರ) | ಕೈಗೆ |
| ಗೆಜ್ಜೆ (ಬೆಳ್ಳಿ) | ಕಾಲಿಗೆ |

**ಪುರುಷರು**

| ಆಭರಣಗಳು | ತೊಡುವಸ್ಥಳ |
|---|---|
| ಮುರುವು | ಕಿವಿಗೆ |
| ಚೈನ್ | ಕೊರಳಿಗೆ |
| ಉಡುದಾರ | ಸೊಂಟಕ್ಕೆ |
| ಕಡಗ | ಕೈಗೆ |
| ಬ್ರಾಸಲೆಟ್ | ಕೈಗೆ |
| ಬೆಳ್ಳಿ ತಾಯತ | ಕೊರಳಿಗೆ, ರಟ್ಟೆಗೆ, ಸೊಂಟಕ್ಕೆ |
| ಲಿಂಗದ ಕಾಯಿ | ಲಿಂಗ ಇಡುವಂಥ ಪೆಟ್ಟಿಗೆ ಕೊರಳಿಗೆ |
| ಉಂಗುರ | ಕೈ ಬೆರಳಿಗೆ |

**ಪ್ರಾಣಿಗಳ ಆಭರಣಗಳು**

ಮನುಷ್ಯನು ತಾನು ವಿವಿಧ ಸೌಂದರ್ಯವರ್ಧಕಗಳನ್ನು ಬಳಸಿಕೊಂಡು ಸುಂದರವಾಗಿ ಕಾಣುತ್ತಾ ವಿವಿಧ ಆಭರಣಗಳನ್ನು ಧರಿಸಿಕೊಂಡು ತಾನೊಬ್ಬನೇ ಖುಷಿಪಡುವುದಲ್ಲದೇ, ತಾನು ಪ್ರೀತಿಸುತ್ತಿರುವ, ತನ್ನ ಪ್ರೀತಿಯ ಸಾಕುಪ್ರಾಣಿಗಳಿಗೂ ಆಭರಣಗಳನ್ನು ತೊಡಿಸುವುದು ಒಂದು ವಿಶೇಷ. ಮಾನವ ಹಬ್ಬ ಹರಿದಿನಗಳಲ್ಲಿ ಮಾತ್ರ ತಾನು ಆಭರಣ ಹಾಕಿಕೊಳ್ಳುವ ಹಾಗೆ ಪ್ರಾಣಿಗಳಿಗೂ ಅವುಗಳದೇ ಆದ ಹಬ್ಬ ಹರಿದಿನಗಳಲ್ಲಿ ಆಭರಣ ಹಾಕಿ ಸಂತಸಪಡುತ್ತಾನೆ. ಆ ಆಭರಣಗಳು ಯಾವುವೆಂದರೆ ಎತ್ತಿನ ಕೊಂಬಣಸು, ಗೊಂಡೆ, ಕೊರಳಲ್ಲಿ ಗೆಜ್ಜೆಸರ, ಗಂಟೆ, ಗೆಜ್ಜೆಪಟ್ಟಿ, ಹಣೆಗೆ ಮುತ್ತಿನ ದಂಡೆ ಹಾಗೂ ದೇಹಕ್ಕೆ ಕಸೂತಿ ಹೆಣಿಕೆ ಹೆಣೆದ ಬಟ್ಟೆಯನ್ನು ಕಾರಹುಣ್ಣಿಮೆಯ ಕರಿಯ ಸಂದರ್ಭದಲ್ಲಿ, ಶ್ರಾವಣದ ಕೊನೆಯ ಸೋಮವಾರದಂದು ಎತ್ತಿಗೆ ಹಾಕಿ ಅಲಂಕಾರ ಮಾಡಿ ಊರಿನಲ್ಲಿ ಮೆರವಣಿಗೆ ಹೋಗುತ್ತಾರೆ. ನಾಯಿಗೂ ಕೂಡಾ ಕೊರಳಲ್ಲಿ ಗೆಜ್ಜೆ ಪಟ್ಟಿ ಕಟ್ಟಿರುವುದುಂಟು. ಮಾನವನ ಸೌಂದರ್ಯಾಕಾಂಕ್ಷೆಗೆ ಇವು ಸಾಕ್ಷಿಯಾಗಿವೆ.

ಹೀಗೆ ಆಭರಣಗಳು ಸೌಂದರ್ಯ ವರ್ಧಕಗಳಷ್ಟೇ ಅಲ್ಲ. ನಮ್ಮ ಆಪತ್ಕಾಲಕ್ಕೂ ನೆರವಾಗುತ್ತವೆ. ಹೇಗೆಂದರೆ ಜಮೀನು, ಮನೆ ಹಿಡಿಯುವ ಪರಿಸ್ಥಿತಿಯಲ್ಲಿ ಹಣದ ಅಡಚಣೆಯಾದರೆ ಅವುಗಳನ್ನು ಮಾರಬಹುದು ಅಥವಾ ಅಡಾ ಇಟ್ಟು ಹಣ ಪಡೆಯಬಹುದು. ನಂತರ ನಮಗೆ ಅನುಕೂಲವಾದಾಗ

ಆಭರಣ ಮಾಡಿಸಿಕೊಳ್ಳಲು ಬರುತ್ತದೆ. ಹೀಗಾಗಿ ಆಭರಣಗಳನ್ನು "ಆಪತ್ಕಾಲದ ನಂಟ" ಎಂದು ಕರೆಯಬಹುದು.

### ೩.೬. ಜನಪದ ವೈದ್ಯ

ಪ್ರಪಂಚದ ಇಂದಿನ ವೈದ್ಯ ಪದ್ಧತಿಗಳಿಗೆ ತಾಯಿಬೇರು ಜನಪದ ವೈದ್ಯ. ಮಾನವನಿಗೆ ನಿರಂತರವಾಗಿ ಕಾಡುವ ಒಂದಿಲ್ಲೊಂದು ರೋಗರುಜಿನಗಳಿವೆ. ಜನಪದ ವೈದ್ಯವು ಆಯಾ ಪರಿಸರ, ಬುಡಕಟ್ಟು, ಸಮುದಾಯಗಳಲ್ಲಿ ಭಿನ್ನ ಭಿನ್ನ ರೀತಿಯಲ್ಲಿ ಬಳಕೆಗೊಳ್ಳುತ್ತದೆ. ಈ ಎಲ್ಲ ಸಮುದಾಯಗಳ ಮೂಲ ಉದ್ದೇಶ ರೋಗರುಜಿನಗಳನ್ನು ಹೊಡೆದೋಡಿಸುವುದಾಗಿದೆ. ಜನಪದ ವೈದ್ಯ ಪದ್ಧತಿಯನ್ನು ವೈದ್ಯರು ಕೊಡುವ ಮದ್ದಿನ ಗುಣವಾಗಿ ಹೀಗೆ ವರ್ಗೀಕರಿಸಬಹುದಾಗಿದೆ. ಗಿಡಮೂಲಿಕೆ ಪದ್ಧತಿ, ರಸ ಪದ್ಧತಿ, ಶಸ್ತ್ರ ಚಿಕಿತ್ಸಾ ಪದ್ಧತಿ ಮತ್ತು ಯಂತ್ರ-ಮಂತ್ರ-ಮಾಟ.

ರೋಗ ಗುರುತಿಸುವ ಆರೋಗ್ಯಕ್ಕೆ ಬೇಕಾಗುವ ಗಿಡಬಳ್ಳಿ ಮೂಲಿಕೆಗಳ ಬೇರು, ತಪ್ಪಲು, ಕಾಯಿ, ಹಣ್ಣು, ಬೀಜ, ತೊಗಟೆ ಸಂಗ್ರಹಿಸಿ ಅವನ್ನು ಕ್ರಮಬದ್ಧವಾಗಿ ಕುಟ್ಟಿ ಆ ಮದ್ದಿನಿಂದ ರೋಗ ಕಳೆಯುವ ಪದ್ಧತಿಯೇ ಗಿಡಮೂಲಿಕೆ ಪದ್ದತಿ. ಗಿಡಮೂಲಿಕೆಗಳಿಂದ ಮದ್ದು ತಯಾರಿಸಿ ರೋಗಗುಣಪಡಿಸುವವರೆ ನಾಟಿವೈದ್ಯರು.

ಮಗುವಿಗೆ ಜ್ವರ ಬಂದರೆ, ಸರಿ ದಿನಗಳು ಇದ್ದರೆ, ಬಳೆ ಚೂರಿನಿಂದ ಅಥವಾ ಬೇವಿನಕಡ್ಡಿಯಿಂದ ಹಣೆಯ ಭಾಗ ಹಾಗೂ ಕುತ್ತಿಗೆಯ ಭಾಗದಲ್ಲಿ ಬೆಚ್ಚಗೆ ಮಾಡುತ್ತಾರೆ. ಅನುಭವಿಕರೇ ಈ ಪದ್ಧತಿಯನ್ನು ಅನುಸರಿಸುತ್ತಾರೆ. ಕಾಲಿಗೆ ಗಾಯವಾದರೆ ದಾಟು ಚುಕ್ಕೆ ಎಂದು ಭಾವಿಸಿ ಮೂರು ದಾರಿ ಕಲೆಯುವಲ್ಲಿ ಓಕಳಿ ನೀರು ದಾರಿಗೆ ಅಡ್ಡಹಾಕಿ ಅದರ ಮೇಲೆ ಎಲೆ, ಅಡಿಕೆ, ಎಂಟಾಣೆ ಇಟ್ಟು ಗಾಯವಾದವನಿಗೆ ಆ ಓಕಳಿಯನ್ನು ದಾಟಿಸಿ ಕರೆತರುವ ಪದ್ಧತಿ ಇದೆ. ಓಕಳಿಯನ್ನು ದಾಟಿದವನು ಅದನ್ನು ತಿರುಗಿ ನೋಡದೆ ಬರುತ್ತಾನೆ. ಹೀಗೆ ಒಂದೊಂದು ರೋಗಗಳಿಗೂ ಭಿನ್ನ ಭಿನ್ನ ಪದ್ಧತಿಗಳಿವೆ. ಮಕ್ಕಳು ಹಟ ಮಾಡಿದರೆ ದೃಷ್ಟಿ ಆಗಿದ್ದರೆ, ಅತ್ತರೆ, ಒಣಮೆಣಸಿನಕಾಯಿ, ಉಪ್ಪು ತೆಗೆದುಕೊಂಡು ಮುಖಕ್ಕೆ ನಿವಾಳಿಸಿ ಬಿಸಾಕುತ್ತಾರೆ. ಅಥವಾ ಬೆಂಕಿಯಲ್ಲಿ ಹಾಕುತ್ತಾರೆ. ಕೆಲವರು ತಲೆಕೂದಲಿನಿಂದ ಮುಖಕ್ಕೆ ನಿವಾಳಿಸುತ್ತಾರೆ. ಹತ್ತಿಗೊಂಬೆ ಮಾಡಿ ಚಮಚಕ್ಕೆ ದಾರ ಸುತ್ತಿ ಸುಡುವುದೂ ಉಂಟು. ಬೆಂಕಿಯಲ್ಲಿ ಹಾಕಿದ ಓಣಮೆಣಸಿನಕಾಯಿ ಘಾಟು ಬಾರದಿದ್ದರೆ ಮಗುವಿಗೆ ದೃಷ್ಟಿ ಆಗಿದೆ ಎಂದರ್ಥ.

ಅಳ್ಳೆತ್ತಿ ಉರಿದರೆ ಒಳ್ಳೆಣ್ಣೆ, ಔಡಲ ಎಣ್ಣೆಯನ್ನು ನೆತ್ತಿಗೆ ಪಾದಕ್ಕೆ ತಿಕ್ಕುತ್ತಾರೆ. ಕೂದಲು ಉದುರುವುದನ್ನು ತಡೆಯಲು ಕೂದಲು ಬೆಳೆಯಲು ಬಿಳಿದಾಸವಾಳದ ಹೂವನ್ನು ಒಣಗಿಸಿ ಪುಡಿ ಮಾಡಿ ಎಣ್ಣೆಯಲ್ಲಿ ಕಲಸಿ ಹಚ್ಚಿಕೊಳ್ಳುತ್ತಾರೆ. ತಲೆಗೆ ತೂತು ಬಿದ್ದರೆ, ಮೈಗೆ ಗಾಯವಾದರೆ, ನಶೆಪುಡಿ, ಅರಿಶಿಣಪುಡಿ ಹಚ್ಚಿ ವಾಸಿಮಾಡುತ್ತಾರೆ. ತಲೆಸೂಲಿಗೆ ಬೆಳ್ಳುಳ್ಳಿ ಸುಲಿದು ಅರ್ಧಮರ್ಧ ಕುಟ್ಟಿ ತಲೆಸೂಲಿ ಇರುವ ಭಾಗಕ್ಕೆ ಹಚ್ಚಿ ಕಾವು ಕೊಡುತ್ತಾರೆ. ಕಿವಿ ಸೋರಿದರೆ, ಕಿವಿಗೆ ಪೆಟ್ಟು ಬಿದ್ದರೆ, ಬೆಳ್ಳುಳ್ಳಿ ಲವಂಗವನ್ನು ಕೊಬ್ಬರಿ ಎಣ್ಣೆಯಲ್ಲಿ ಸಮನಾಗಿ ಹಾಕಿ ಅರೆದು ರಸ ಹಿಂಡಿ ಕಿವಿಯಲ್ಲಿ ಹಾಕುತ್ತಾರೆ. ಕೆಮ್ಮು, ನಾಯಿಕೆಮ್ಮು,

ಮತ್ತು ಒಣ ಕೆಮ್ಮು ಬಂದರೆ ಬೆಳ್ಳುಳ್ಳಿ, ಶುಂಠಿ, ಮತ್ತು ಒಣ ಅಲ್ಲಾ, ಬೆಲ್ಲ ತಿಂದು ನೀರು ಕುಡಿಯದೇ ಮಲಗಬೇಕು. ಒಣಶುಂಠಿ ಅಥವಾ ಲವಂಗ ರಾತ್ರಿಪೂರ್ತಿ ಬಾಯಲ್ಲಿ ಇಟ್ಟುಕೊಂಡು ಮಲಗಿದರೆ ಕೆಮ್ಮು ನಿಲ್ಲುತ್ತದೆ ಎಂಬ ನಂಬಿಕೆ ಇದೆ.

ಮಗು ಹಾಲು ಕಕ್ಕಿದರೆ ಬೆರಳಿಗೆ ಜೇನುತುಪ್ಪ ಹಚ್ಚಿ ಮಗುವಿಗೆ ನೆಕ್ಕಿಸಿದರೆ ಕಕ್ಕುವುದು ನಿಲ್ಲುತ್ತದೆ ಎನ್ನುತ್ತಾರೆ. ಮಕ್ಕಳಿಗೆ ಮುಟ್ಟುದೋಷ ಆದರೆ ಮಠದಲ್ಲಿ ಅಂತ್ರ ತಾಯಿತ ಕಟ್ಟಿಸುತ್ತಾರೆ. ಕಫ, ಹಲ್ಲು ಬೀಳುವುದು, ನೋಯುವುದು, ಹಲ್ಲಿಗೆ ಪೆಟ್ಟಾಗುವುದು, ಬಾಯಿ ಒಡೆಯುವುದು, ಗಂಟಲು ನೋವು, ಹದಗಡ್ಡಿ, ಎದೆಉರಿ, ದಮ್ಮು, ಕುರುವು, ಜಂತುಹುಳು, ವಾತಪಿತ್ತ, ಮುಳ್ಳು ಮುರಿದರೆ, ಬಟ್ಟು ಒಡೆದರೆ ಉಗುರುಸುತ್ತು, ಪಿಟ್ಸ್ ಬಂದರೆ, ಬಿಳಿಸೆರಗು, ಹೆರಿಗೆಬೇನೆ, ನಾಯಿ ಕಡಿದರೆ ಹೀಗೆ ಅನೇಕ ಕಾಯಿಲೆಗಳಿಗೆ ಯಮನೂರಿನ ಜನಪದರು ತಮ್ಮದೇ ಆದ ಪರಿಣಾಮಕಾರಿ ಮನೆ ವೈದ್ಯವನ್ನು ಅವಲಂಬಿಸಿದ್ದಾರೆ.

ಮಾತು ಬಾರದ ಪ್ರಾಣಿಗಳಿಗೆ ಔಷಧಿ ಕೊಟ್ಟರೆ ಪುಣ್ಯ ಬರುತ್ತದೆ ಎಂದು ಹೇಳುವ ಜನಪದ ಪಶುವೈದ್ಯರು ಇಲ್ಲಿದ್ದಾರೆ. ದನದ ನಾಲಿಗೆಗೆ ಮುಳ್ಳುರೋಗ ಬಂದು ದನವು ಹುಲ್ಲು ತಿನ್ನದೇ ಇದ್ದರೆ, ಮದ್ದುಗುಣಿಕೆ ಕಾಯಿಯ ಮುಳ್ಳುಗಳಿಂದ ದನದ ನಾಲಿಗೆಯನ್ನು ತಿಕ್ಕುತ್ತಾರೆ. ಕುಂದು ಆದರೆ ದನದ ಕೊರಳಿಗೆ ಅಮೃತ ಬಳ್ಳಿಯ ತಪ್ಪಲನ್ನು ಸುತ್ತುತ್ತಾರೆ. ಚಪ್ಪೆರೋಗಕ್ಕೆ ಕಾಸಿದ ಕಬ್ಬಿಣ ಸಲಾಕೆಯಿಂದ ಬೇನೆ ಇದ್ದ ಜಾಗಕ್ಕೆ ಬರೆ ಎಳೆಯುತ್ತಾರೆ. ಕುರಿ ಆಡುಗಳು ಸರಿಯಾಗಿ ಮೇಯದಿದ್ದರೆ ಕಬ್ಬಿಣದ ಕಾಸಿದ ನೀರನ್ನು ಕುಡಿಸುತ್ತಾರೆ. ದನ ಕರುಗಳಿಗೂ ಸಹ ಮಂತ್ರಿಸಿದ ನೀರು ಕುಡಿಸುವುದು, ದೃಷ್ಟಿ ತೆಗೆಯುವುದು, ಕೊರಳಿಗೆ ಚಿಪ್ಪು ಅಥವಾ ಮಂಡ ಕಸಬರಿಗೆ ಕಟ್ಟುವ ಪದ್ಧತಿ ಇದೆ. ಕುರಿ ಕಾಯುವವರು ಕುರಿಗಳಿಗೆ ಕಾಯಿಲೆ ಬಂದಾಗ ಔಷಧ ಅಂಗಡಿಗಳಲ್ಲಿ ದೊರೆಯುವ ಔಷಧಿಕೊಂಡು, ತಾವೇ ಕುರಿಗಳಿಗೆ ಇಂಜಕ್ಷನ್ ಕೊಡುವುದು, ಔಷಧಿ ಕುಡಿಸುವುದು ಮಾಡುತ್ತಾರೆ. ಈಗೀಗ ಪಶು ಆಸ್ಪತ್ರೆಗಳಿದ್ದರೂ ಅವರ ಚಿಕಿತ್ಸೆ ಅಷ್ಟು ಪರಿಣಾಮಕಾರಿಯಾಗಿರುವುದಿಲ್ಲ ಎಂಬ ನಂಬಿಕೆಯಿಂದ ಅವರಲ್ಲಿಗೆ ಹೋಗುವವರು ಕಡಿಮೆ. ಆದರೂ ಕೆಲವೊಮ್ಮೆ ಸರಕಾರಿ, ಖಾಸಗಿ ವೈದ್ಯರುಗಳು ಇರುವುದರಿಂದ ಮನೆ ಔಷಧಿಯ ಬಗ್ಗೆ ಆಸಕ್ತಿ ಕಳೆದುಕೊಂಡು ಇಂಗ್ಲೀಷ್ ಔಷಧಿಗಳತ್ತ ಹೆಚ್ಚಿನ ಸಂಖ್ಯೆಯಲ್ಲಿ ಮುಖಮಾಡಿ ನಿಲ್ಲತೊಡಗುತ್ತಾರೆ.

### ೩.೭. ನ್ಯಾಯ ವ್ಯವಸ್ಥೆ

ನ್ಯಾಯ ಇತ್ಯರ್ಥದ ಒಂದು ವ್ಯವಸ್ಥೆಯೇ ನ್ಯಾಯಪದ್ಧತಿ. ಇದು ಪಂಚಾಯತಿ ಪರಂಪರೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡು ಬಂದಿದೆ.

ಹಲವಾರು ಸಮುದಾಯ ಹಾಗೂ ಬುಡಕಟ್ಟುಗಳಿಂದ ಕೂಡಿದ ಯಮನೂರಿನಲ್ಲಿ ಕುಟುಂಬದ ಯಾವುದೇ ಸಮಸ್ಯೆಯಿರಲಿ ಅಥವಾ ಹಲವಾರು ಕಾರಣಗಳಿಂದ ಉಂಟಾದ ಕಲಹವಿರಲಿ ಊರಿನ ಹಿರಿಯರು, ಸಮುದಾಯ ಮುಖಂಡರು ವ್ಯವಸ್ಥೆಯ ಅಡಿಯಲ್ಲಿ ನ್ಯಾಯ ತೀರ್ಮಾನ ಮಾಡುತ್ತಾರೆ. ಇದನ್ನು ಸಹಭಾಗಿತ್ವದ ನ್ಯಾಯ ಅಥವಾ ಪಂಚಾಯ್ತಿ ನ್ಯಾಯ ಎನ್ನಬಹುದು. ಇಲ್ಲಿಗೆ ಬಂದ ದೂರುಗಳನ್ನು ಈ ಊರಿನವರೇ ಇತ್ಯರ್ಥ ಮಾಡುತ್ತಾರೆ. ಸ್ಥಳೀಯ ಸಮುದಾಯದ ಮಧ್ಯಸ್ಥರು ಕುಲಾಚಾರಗಳನ್ನು ಅಥವಾ ಸಂಪ್ರದಾಯಗಳನ್ನು ಅನುಸರಿಸಿ ನ್ಯಾಯ ನಿರ್ಣಯ ಮಾಡುತ್ತಾರೆ.

ಗ್ರಾಮಕ್ಕೆ ಸಂಬಂಧಿಸಿದ ವ್ಯಾಜ್ಯವಾಗಿದ್ದರೆ ಊರಿನ ತಳವಾರನು ಹಿರಿಯರ ನಿರ್ದೇಶನದಂತೆ ಪಂಚಾಯ್ತಿ ಮಾಡುವ ದೈವವನ್ನು ಕರೆದು ಬರುತ್ತಾನೆ. ವ್ಯಕ್ತಿಗತ ವ್ಯಾಜ್ಯವಾಗಿದ್ದರೆ ವ್ಯಾಜ್ಯಕ್ಕೆ ಸಂಬಂಧಪಟ್ಟವರೇ ತಮಗೆ ಬೇಕಾದವರನ್ನು ಕರೆತರುತ್ತಾರೆ. ವ್ಯಾಜ್ಯ ಹೂಡಿದವರು ಸೌಜನ್ಯಕ್ಕಾಗಿ ತೀರ್ಪುಗಾರರಿಗೆ ಟೀ ಮತ್ತು ತಿಂಡಿಯ ವ್ಯವಸ್ಥೆ ಮಾಡುತ್ತಾರೆ.

ಭೂಮಿ, ಹಣಕಾಸು, ಸಣ್ಣಪುಟ್ಟ ಕಳ್ಳತನ, ಸ್ತ್ರೀ ಪುರುಷರ ಸಮಸ್ಯೆಗಳು, ಅಂತರ್‌ಜಾತಿಯ ವಿವಾಹ, ಮನೆ, ಹಬ್ಬ, ಜಾತ್ರೆ ಇತ್ಯಾದಿಗಳು ಪಂಚಾಯ್ತಿಗೆ ಬರಬಹುದಾದ ವ್ಯಾಜ್ಯಗಳಾಗಿರುತ್ತವೆ. ಪಂಚಾಯ್ತಿಯ ತೀರ್ಮಾನ ತೆಗೆದುಕೊಳ್ಳುವಾಗ ಅಲ್ಲಿ ಸೇರಿದ ಹಿರಿಯರೊಂದಿಗೆ ಕೂಲಂಕುಷವಾಗಿ ಚರ್ಚಿಸಿ, ಅವರೂ ದೈವದವರ ಅಭಿಪ್ರಾಯದ ಮೇರೆಗೆ ಯಜಮಾನರು ನ್ಯಾಯ ತೀರ್ಮಾನ ತೆಗೆದುಕೊಳ್ಳಬೇಕಾಗುತ್ತದೆ. ಯಾರೇ ಆಗಲಿ ಪಂಚಾಯ್ತಿ ತೀರ್ಮಾನಕ್ಕೆ ಬದ್ಧರಾಗಿರಬೇಕಾಗುತ್ತದೆ. ಇಲ್ಲದಿದ್ದರೆ ಅವರನ್ನು ಊರಿನಿಂದ ಅಥವಾ ಜಾತಿಯಿಂದ ಬಹಿಷ್ಕಾರ ಹಾಕುವಂತಹ ಶಿಕ್ಷೆ ವಿಧಿಸುತ್ತಾರೆ. ಅಥವಾ ಇಲ್ಲಿ ಬಗೆಹರಿಯದೆ ಹೋದರೆ ಪೋಲೀಸ್ ಅಥವಾ ಕೋರ್ಟ್ ಮೆಟ್ಟಿಲೇರುವ ಸಂದರ್ಭಗಳೂ ಬರುತ್ತವೆ.

**೩.೮. ಅತಿಥಿ ಸತ್ಕಾರ**

ಮನೆಗೆ ಬಂದ ಅತಿಥಿಗಳನ್ನು ಆದರದಿಂದ ಸ್ವಾಗತಿಸುವ, ಗೌರವಿಸುವ, ಸಂತೋಷವಾಗುವ ರೀತಿಯಲ್ಲಿ ಉಪಚರಿಸುವ ಸಂಸ್ಕೃತಿ ನಮ್ಮದು. "ಅತಿಥಿ ದೇವೋ ಭವ" ಎಂದು ಭಾವಿಸಿ ಯಮನೂರಿನ ಜನ ಮನೆಗೆ ಬಂದವರನ್ನು ಸತ್ಕರಿಸುವುದರಲ್ಲಿ ಕಡಿಮೆಯೇನಿಲ್ಲ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಅತಿಥಿ ಸತ್ಕಾರದ ಪದ್ಧತಿ ಜೀವಂತವಾಗಿದೆ. ಎಂಥವರೇ ಬರಲಿ, ಬಂದವರನ್ನು ಸತ್ಕರಿಸುವುದು ನಮ್ಮ ಧರ್ಮ ಎಂದು ತಿಳಿದವರು ಹಳ್ಳಿಗರು. ಬೃಹತ್ತಾಗಿ ಬೆಳೆದ ಪಟ್ಟಣ ಸಂಸ್ಕೃತಿಯಲ್ಲಿ ಅತಿಥಿ ಸತ್ಕಾರ ಕಡಿಮೆಯಾಗತೊಡಗಿದೆ. ಬಂದ ಅತಿಥಿಗಳ ಜೊತೆಗೆ ಯಾಂತ್ರಿಕವಾಗಿ, ನಾಟಕೀಯವಾಗಿ ಮಾತನಾಡಿಸಿ ಹಾಗೆಯೇ ಕಳುಹಿಸುವವರಿದ್ದಾರೆ. ಯಮನೂರು ಹಳ್ಳಿಯ ಪರಿಸರವಾದ್ದರಿಂದ ಇಲ್ಲಿ ಅತಿಥಿ ಸತ್ಕಾರ ಪದ್ಧತಿ ಇನ್ನೂ ಜೀವಂತವಾಗುಳಿದಿದೆ ಎನ್ನಬಹುದು. ಇಲ್ಲಿಯ ಜನರ ಮನೆಗೆ ಯಾರೇ ಬರಲಿ ಬಂದ ಕೂಡಲೆ ಒಳಗೆ ಕರೆದು ಕೂಡಿಸಿ, ಕುಡಿಯಲು ನೀರು ಚಹಾ ಕೊಡುತ್ತಾ ಊರಿನ ಕ್ಷೇಮ ಸಮಾಚಾರದ ಬಗ್ಗೆ, ಮಳೆ ಬೆಳೆ ಬಗ್ಗೆ ವಿಚಾರಿಸಿಕೊಳ್ಳುತ್ತಾರೆ. ಆ ಮೇಲೆ ಕೈಕಾಲು ತೊಳೆಯಲು ಹೇಳಿ ಬಂದವರು ಸಂಬಂಧಿಗಳಾಗಿದ್ದಲ್ಲಿ ಹಪ್ಪಳ, ಸಂಡಿಗೆ ಕರೆದು ಸಿಹಿ ಅಡಿಗೆ ಮಾಡಿ ಊಟಕ್ಕೆ ಬಡಿಸುತ್ತಾರೆ. ಬೇಸಿಗೆಯಲ್ಲಿ ಬಂದ ಅತಿಥಿಗಳಿಗೆ ಲಿಂಬೂಶರಬತ್, ಮಜ್ಜಿಗೆ ಕೊಡುತ್ತಾರೆ. ವಿಶೇಷ ಕಾರ್ಯಕ್ರಮವಿದ್ದಾಗ ಸಂಬಂಧಿಕರನ್ನು ಸ್ನೇಹಿತರನ್ನು ನೆರೆಹೊರೆಯವರನ್ನು ಊಟಕ್ಕೆ ಕರೆಯುತ್ತಾರೆ. ಊಟಕ್ಕೆ ಕರೆಯುವಾಗ ಹೆಣ್ಣುಮಕ್ಕಳು ಅತಿಥಿಗಳಿಗೆ ಕುಂಕುಮ ಕೊಟ್ಟು ಕರೆಯುತ್ತಾರೆ. ಈ ಪದ್ಧತಿ ಹೆಣ್ಣು ಮಕ್ಕಳಲ್ಲಿ ಮಾತ್ರ ಇದೆ. ಮನೆಗೆ ಯಾರಾದರೂ ಮುತ್ತೈದೆಯರು ಬಂದರೆ ವಾಪಸ್ ಹೋಗುವಾಗ ಕುಂಕುಮ ಕೊಡುತ್ತಾರೆ. ಹಿಂದೆ ಊಟಕ್ಕೆ ಕರೆಯುವಾಗ ಎಲ್ಲರೂ ಊಟಕ್ಕೆ ಬನ್ನಿ ಎಂದು ಕರೆಯುತ್ತಿದ್ದರು. ಇತ್ತೀಚಿಗೆ ಮನೆಗೊಬ್ಬರಂತೆ ಕರೆಯುವ ಪದ್ಧತಿ ಇದೆ.

## ೩.೯. ಜಾತಿ ಬಹಿಷ್ಕಾರ, ಜಾತಿಗೆ ಸೇರಿಸಿಕೊಳ್ಳುವಿಕೆ

ಬಹಿಷ್ಕಾರವೆಂದರೆ ತಪ್ಪು ಮಾಡಿದವರನ್ನು ಜಾತಿಯಿಂದ ಅಥವಾ ಸಮಾಜದಿಂದ ಹೊರಗಿಡುವುದು. ಇದು ಬಹು ಹಿಂದಿನಿಂದಲೂ ಬಂದ ಈ ಪದ್ಧತಿಯಾಗಿದ್ದು, ಅಮಾನವೀಯವಾದುದಾಗಿದೆ. ಆಧುನಿಕತೆಯ ಪ್ರಭಾವದಿಂದಾಗಿ ಈ ಪದ್ಧತಿ ಇಂದು ಮಾಯವಾಗಿದೆ ಎಂದು ಹೇಳಬಹುದು. ಯಮನೂರಿನಲ್ಲಿ ಜಾತಿ ಬಹಿಷ್ಕಾರ ಪದ್ಧತಿ ಕಂಡುಬರುವುದಿಲ್ಲ. ಹುಡುಗ/ಹುಡುಗಿಯ ತಂದೆ ತಾಯಿ ಕುಟುಂಬದ ಅಥವಾ ಸಮಾಜದ ಮಾತನ್ನು ಧಿಕ್ಕರಿಸಿ, ಸಮಾಜದ ಕಟ್ಟುಪಾಡನ್ನು ಧಿಕ್ಕರಿಸಿ, ಅನ್ಯಜಾತಿಯ ಇಲ್ಲವೇ ಅನ್ಯ ಧರ್ಮದವರನ್ನು ಮದುವೆಯಾದರೆ ಜಾತಿ ಬಹಿಷ್ಕಾರವನ್ನು ಹಿಂದಿನ ಹಿರಿಯರು ಹಾಕುತ್ತಿದ್ದರು. ಇಂದಿನವರು ಇಂತಹ ತಪ್ಪುಗಳನ್ನು ಮಾಡಿದರೆ ಮನೆಯಿಂದ ಹೊರ ಹಾಕಿ ಒಂದು ವರ್ಷದ ಮಟ್ಟಿಗೆ ಮದುವೆಯಾಗಿ ಹೊರಗೆ ಹೋದ ಮಗ ಅಥವಾ ಮಗಳನ್ನು ಯಾರೂ ಮಾತನಾಡಿಸುವುದಿಲ್ಲ. ಸಮಾಜದಲ್ಲಿ ಇವರನ್ನು ಕಂಡರೆ ಜನರು ವ್ಯಂಗ್ಯದಿಂದ ಆಡಿಕೊಳ್ಳುತ್ತಾರೆ ಮತ್ತು ಇವರನ್ನು ನೋಡುವ ದೃಷ್ಟಿಕೋನವೇ ಬೇರೆಯಾಗಿರುತ್ತದೆ. ಅಂತರ್‌ಜಾತಿಯ ವಿವಾಹವಾದವರನ್ನು ಅಸ್ಪೃಶ್ಯರ ತರಹ ಕಾಣುವ ಸಮಾಜ ಇದಾಗಿದೆ ಎಂದು ಹೇಳಬಹುದು. ಕಾಲಕ್ರಮೇಣ ಅವರು ಮಾಡಿದ ತಪ್ಪನ್ನು ಮರೆತು ಕರುಳಬಳ್ಳಿಯ ವಾತ್ಸಲ್ಯದ ಕರೆಗೆ ಸೋತು ತಂದೆ ತಾಯಿಯರು ಕರೆದುಕೊಳ್ಳುತ್ತಾರೆ. ಇನ್ನು ಕೆಲವರು ಸಾಯುವವರೆಗೂ ಮನೆಗೆ ಸೇರಿಸಿಕೊಳ್ಳುವುದಿಲ್ಲ. ಸತ್ತರೆಂದು ಕೈಬಿಟ್ಟು ಬಿಡುತ್ತಾರೆ.

ಅಂತರ್ಜಾತಿಯ ಮದುವೆಯಾದರೆ ಹುಡುಗಿ ಯಾವುದೇ ಜಾತಿಯವಳಾಗಿದ್ದರೂ ಸಹ ಮದುವೆಯಾದ ಹುಡುಗನ ಜಾತಿಗೆ ಅಥವಾ ಧರ್ಮಕ್ಕೆ ಸೇರುವ ರೂಢಿ ಇದೆ. ಈ ಊರಿನಲ್ಲಿ ಅಂತರ್ಜಾತಿಯ ವಿವಾಹಗಳು ಕಡಿಮೆ ಎಂಬುದು ತಿಳಿದು ಬರುತ್ತದೆ.

ಗಂಡಾಗಲಿ ಹೆಣ್ಣಾಗಲಿ ಅನೈತಿಕ ಸಂಬಂಧವನ್ನು ಸಮಾಜ ಅಥವಾ ಗಂಡ ಹೆಂಡತಿ ಒಪ್ಪುವುದಿಲ್ಲ. ಅದರಲ್ಲೂ ಹೆಣ್ಣಿನ ಅನೈತಿಕ ಸಂಬಂಧವನ್ನು ಗಂಡನಾದವನು ಅಥವಾ ಕುಟುಂಬವರ್ಗ ತುಂಬಾ ಗಂಭೀರವಾಗಿ ಪರಿಗಣಿಸುತ್ತದೆ. ಅಂತಹ ಹೆಣ್ಣನ್ನು ಮನೆಯಿಂದ ಹೊರಹಾಕುವ ಹಿಂಸಿಸುವ ಮಟ್ಟಕ್ಕೆ ಹೋಗುತ್ತದೆ. ಸಮಾಜದಲ್ಲೂ ಸಹ ಇವಳಿಗೆ ಗೌರವ ಇರುವುದಿಲ್ಲ. ಅವಳ ಜೊತೆಗೆ ಬೇರೆ ಹೆಣ್ಣುಮಕ್ಕಳನ್ನು ತಿರುಗಾಡಲು ಬಿಡುವುದಿಲ್ಲ. ಒಟ್ಟಾರೆಯಾಗಿ ಜಾತಿ ಬಹಿಷ್ಕಾರ ಪದ್ಧತಿ ಹಿಂದಿನಷ್ಟು ಕಠಿಣವಾಗಿಲ್ಲವೆಂದು ಹೇಳಬಹುದು.

## ೩.೧೦. ಅರ್ಥ ವ್ಯವಸ್ಥೆ

ಒಂದು ಸಮಾಜದ ನಾಗರೀಕತೆ ಯಾವ ಹಂತದಲ್ಲಿದೆ ಎಂದು ಗುರುತಿಸಿಕೊಳ್ಳಲು ಅಲ್ಲಿನ ಅರ್ಥವ್ಯವಸ್ಥೆಯನ್ನು ಅರಿತುಕೊಳ್ಳುವುದು ಸಹ ಮುಖ್ಯವಾಗಿರುತ್ತದೆ. ಕಾಲಕ್ರಮೇಣ ವೃತ್ತಿ ಮನುಷ್ಯನ ಪ್ರವೃತ್ತಿಗಳು ಆತನ ಬದುಕಿಗೆ ಅಗತ್ಯವಾದ ಅರ್ಥಸಂಪಾದನೆಯ ಗುರಿಯನ್ನೇ ಕೇಂದ್ರವಾಗಿ ಉಳ್ಳವಾಗಿದ್ದು, ಜಾನಪದದ ಹಲವು ಮುಖಗಳು ಗರಿಗೆದರಲು ಕಾರಣವಾಗಿವೆ. ಯಮನೂರಿನ ಜಾನಪದ ಅಧ್ಯಯನಕ್ಕೆ ಇಲ್ಲಿನ ಜನರ ವೃತ್ತಿ ಆರ್ಥಿಕ ಸ್ಥಿತಿಗತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಬೇಕಿದೆ.

ಇಲ್ಲಿನ ಜನರ ಪ್ರಮುಖ ವೃತ್ತಿ ಕೃಷಿಯಾಗಿದೆ. ಯಮನೂರು ಪ್ರದೇಶವು ಒಣಬೇಸಾಯದ ಪ್ರದೇಶವಾಗಿದೆ. ಜೋಳ, ಸೂರ್ಯಕಾಂತಿ, ತೊಗರಿ, ಶೇಂಗಾ, ಹೆಸರು, ಅಲಸಂದಿ, ಮೆಣಸಿನಕಾಯಿ ಇಲ್ಲಿನ ಪ್ರಮುಖ ಬೆಳೆಗಳಾಗಿವೆ. ಹತ್ತಿ, ಮುಸಕಿನ ಜೋಳ, ಕಡಲೆ, ಗೋಧಿ ಇಲ್ಲಿನ ಪ್ರಮುಖ ಬೆಳೆಗಳಾಗಿವೆ. ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ಬೆಲೆ ಗಗನಕ್ಕೇರಿದ್ದರೂ ಎಲ್ಲಾ ರೈತರ ಉತ್ಪನ್ನಗಳೂ ಏಕಕಾಲಕ್ಕೆ ಮಾರುಕಟ್ಟೆಗೆ ಬಂದಾಗ ರೈತರ ಉತ್ಪನ್ನಗಳಿಗೆ ಬೆಲೆ ಕಡಿಮೆಯಾಗಿಬಿಡುತ್ತದೆ. ಹೀಗಾಗಿ ರೈತ ಯಾವಾಗಲೂ ಸಂಕಷ್ಟಕ್ಕೆ ಸಿಲುಕಿ ಕಷ್ಟಪಡಬೇಕಾಗುತ್ತದೆ. ಅನೇಕ ಸಂಕಷ್ಟಗಳನ್ನು ಎದುರಿಸಿದರೂ ಇದ್ದುದರಲ್ಲಿ ಇವರ ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ ಎಂದು ಹೇಳಬಹುದು. ಹಾಲು ಮಾರುವವರು ತಕ್ಕಮಟ್ಟಿನ ಲಾಭವನ್ನು ಪಡೆಯುತ್ತಾರೆ. ಇವರು ವ್ಯಾಪಾರ ವಹಿವಾಟಿಗಾಗಿ, ಖರೀದಿಗಾಗಿ ಸಮೀಪದ ನವಲಗುಂದ ಮತ್ತು ಹುಬ್ಬಳ್ಳಿಗೆ ಹೋಗುತ್ತಾರೆ. ಇಲ್ಲಿ ಸಣ್ಣಪುಟ್ಟ ಕಿರಾಣಿ ಅಂಗಡಿ, ಸ್ಟೇಷನರಿ ಅಂಗಡಿ, ಸಣ್ಣ ಪ್ರಮಾಣದ ಹೋಟೆಲ್‌ಗಳೂ ಸೇರಿದಂತೆ ಹತ್ತಾರು ವ್ಯವಹಾರಗಳಿಂದ ಆರ್ಥಿಕ ಜೀವನ ನಡೆಸುತ್ತಾರೆ.

ಇವುಗಳಲ್ಲದೆ, ಈಗೀಗ 'ಸ್ತ್ರೀಶಕ್ತಿ' ಸಂಘಗಳನ್ನು ರಚಿಸಿಕೊಂಡು ಕಡಿಮೆ ಬಡ್ಡಿಯಲ್ಲಿ ಸರ್ಕಾರದಿಂದ ಸಾಲವನ್ನು ಪಡೆದುಕೊಂಡು ವ್ಯವಹಾರಕ್ಕೆ ಬಳಸಿಕೊಂಡು ವ್ಯವಹಾರಿಕ ಜ್ಞಾನದೊಂದಿಗೆ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಿಕೊಳ್ಳುತ್ತಿದ್ದಾರೆ.

ಸರ್ಕಾರದಿಂದ ದೊರೆಯುವ ಅನೇಕ ಸಬ್ಸಿಡಿಗಳು, ಉಚಿತ ವಿದ್ಯುತ್, ವಾರ್ಷಿಕ ಶೇ.೨ರ ಬಡ್ಡಿಯಲ್ಲಿ ಸಾಲ, ಉಚಿತ ಶಿಕ್ಷಣ, ರೇಶನ್ ಮುಂತಾದ ಸರ್ಕಾರದ ಯೋಜನೆಗಳೂ ಸಹ ಇಲ್ಲಿನ ಜನರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಕಾರಣವಾಗಿವೆ.

**೩.೧೧. ಜನಪದ ಆಟಗಳು**

ಒಂದು ಸಮುದಾಯದ ಅಥವಾ ಒಂದು ಗ್ರಾಮದ ಬೆಳವಣಿಗೆ, ಬದುಕು, ಮನರಂಜನೆಯನ್ನು ತಿಳಿಯಬೇಕಾದರೆ, ಜನಪದರ ಆಟಗಳ ಕುರಿತು ಅರಿಯಬೇಕಾಗುತ್ತದೆ. ಪ್ರಪಂಚದಲ್ಲಿ ವಾಸಿಸುವ ಜೀವಿಗಳಿಗೆ ಜನಪದ ಕ್ರೀಡೆಗಳು ನೈಸರ್ಗಿಕವಾಗಿ ಬಂದ ಆಸಕ್ತಿಗಳಾಗಿವೆ. ಆಟವಾಡುವುದು, ಜೀವಿಗಳ ನೈಸರ್ಗಿಕ ಕ್ರಿಯೆ ಆಟ ಹುಟ್ಟಿನಿಂದ ಬಂದ ಪ್ರವೃತ್ತಿ ಅದು ಜೀವಂತಿಕೆಯ ಪ್ರತೀಕ. ಮನುಷ್ಯನಿಗೆ ಆಟಗಳು, ಮನರಂಜನೆ, ಮಾನಸಿಕ ಮತ್ತು ಬೌದ್ಧಿಕ ಉಲ್ಲಾಸ ನೀಡುವ ಸಹಜ ಪ್ರವೃತ್ತಿಯಾಗಿವೆ. ಆಟಗಳು ಮನಸ್ಸಿಗೆ ಅನುಗುಣವಾಗಿ ಬೇರೆ ಬೇರೆ ಹಂತವನ್ನು ಪಡೆದಿವೆ. ಸಹನೆ, ಕಷ್ಟ, ಸಹಿಷ್ಣುತೆ, ಯುಕ್ತಿ, ಐಕ್ಯ ಮನೋಭಾವನೆ, ಭ್ರಾತೃತ್ವ ಸಹಕಾರ ಮನೋಧರ್ಮ ಮೊದಲಾದ ಗುಣಗಳು ಕ್ರೀಡೆಗಳ ಫಲವಾಗಿ ಒಡಮೂಡಿವೆ.

ಜನಪದ ಆಟಗಳನ್ನು ಚಾರಿತ್ರಿಕವಾಗಿ, ಭೌಗೋಳಿಕವಾಗಿ ಅವಲೋಕಿಸಿದಾಗ ಎಲ್ಲ ಜನಪದ ಆಟಗಳು, ಎಲ್ಲಾ ಕಾಲದಲ್ಲೂ ಎಲ್ಲಾ ಜನರಲ್ಲೂ ಜನಪ್ರಿಯವಾಗಿರಲಿಲ್ಲ. ಅಂದರೆ ಪರಂಪರಾನುಗತ ಸಲಕರಣೆಗಳನ್ನು ಬಳಸಿಕೊಂಡು, ಮನೆಯ ಒಳಗೆ ಮತ್ತು ಹೊರಗೆ ಆಡಲಾಗುವ ಯಾವುದೇ ಗುಂಪಿನ ಜನತೆಯ ಆಟಗಳೇ ಜನಪದ ಆಟಗಳು.

ಈಜಿಪ್ಟ್, ಮೆಹೆಂಜೋದಾರೋಗಳ, ವೇದೋಪನಿಷತ್ತುಗಳಲ್ಲಿ ರಾಮಾಯಣ, ಮಹಾಭಾರತಗಳಲ್ಲಿ, ರಾಜಮಹಾರಾಜರುಗಳ ಕಾಲದಲ್ಲಿ ಅದರಲ್ಲೂ ವಿಶೇಷವಾಗಿ, ವಿಜಯನಗರ, ಮೈಸೂರು ಒಡೆಯರ ಕಾಲದಲ್ಲಿ ಆಟಗಳ ಬಗೆಗಿನ ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ.

ಪಂಪನ 'ವಿಕ್ರಮಾರ್ಜುನ ವಿಜಯ'ದಲ್ಲಿ 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ...' (ಪಂಪ ಭಾರತ ೬-೬೯) ಎಂಬ ಸಾಲುಗಳಿಂದ ಹಿಡಿದು ಜನ್ನ, ಜಗನ್ನಾಥ ವಿಜಯ, ನಂಜುಂಡ, ಕುಮಾರವ್ಯಾಸರಾದಿಯಾಗಿ ಅನೇಕ ಕವಿಗಳ ಕಾವ್ಯಗಳಲ್ಲಿ ಪಗಡೆ ಆಟ, ಕುದುರೆ ಓಡಿಸುವ ಆಟ, ಚಿನ್ನಿಕೋಲು, ಗುರಿಯಾಳು, ಚರಡಿನ ಹೊಣಕೆ, ಗದುಗಂಬಿ, ಕಣ್ಣುಮುಚ್ಚು, ಜೂಜು, ಆಣೆಕಲ್ಲಾಟ ಮುಂತಾದ ಆಟಗಳ ಉಲ್ಲೇಖವಿದೆ.

ಪ್ರಸ್ತುತ ಅಧ್ಯಯನದಲ್ಲಿ ಯಮನೂರಿನ ಪರಿಸರದಲ್ಲಿರುವ ಕೆಲವು ಆಟಗಳನ್ನು ವರ್ಗೀಕರಿಸುವುದು, ಕಷ್ಟಸಾಧ್ಯದ ಕೆಲಸ. ಇಲ್ಲಿ ಕಂಡುಬರುವ ಆಟಗಳನ್ನು ಹೊರಾಂಗಣ ಆಟ, ಒಳಾಂಗಣ ಆಟಗಳೆಂದು ವರ್ಗೀಕರಿಸಿದ್ದೇನೆ. ಇಲ್ಲಿ ಕೆಲವೊಂದು ಪ್ರಮುಖ ಆಟಗಳನ್ನು ಮಾತ್ರ ವಿವರಿಸಿ ಉಳಿದ ಆಟಗಳನ್ನು ಹೆಸರಿಸಿದ್ದೇನೆ.

**ಒಳಾಂಗಣ ಆಟಗಳು**

ಮನೆಯ ಒಳಗಡೆ ಆಡುವಂತಹ ಆಟಗಳಿಗೆ ಒಳಾಂಗಣ ಆಟಗಳು ಎಂದು ಕರೆಯುತ್ತಾರೆ.

**ಚೌಕಾಬಾರ (ಚಕ್ಕಾ)**

ಮಹಿಳೆಯರ ಆಟಗಳಲ್ಲಿ ಇದೊಂದು ಜನಪ್ರಿಯ ಆಟ. ಇಬ್ಬರು ಅಥವಾ ನಾಲ್ಕು ಜನರು ಆಟದಲ್ಲಿ ಭಾಗವಹಿಸುತ್ತಾರೆ. ಐದೈದು (೨೫ ಮನೆ) ಅಥವಾ ಏಳೇಳು ಮನೆ (೪೯ ಮನೆ) ಬರೆದು, ಮಧ್ಯದ ಮನೆಯಲ್ಲಿ ೫ ಅಥವಾ ೭ ಕಾಯಿ, ಬಳಪ, ಬಳೇಚೂರು ಇಟ್ಟು ಆಟ ಆರಂಭಿಸುತ್ತಾರೆ. ಮಧ್ಯದ ಅಥವಾ ಮೂಲೆಯಲ್ಲಿರುವ ಕಟ್ಟೆಮನೆಗಳು, ಇಲ್ಲಿ ಕಡಿಯಲು ಬರುವುದಿಲ್ಲ. ತಿಕ್ಕಿದ ಹುಣಸೆಹಣ್ಣಿನ ಬೀಜದಿಂದ ಅಥವಾ ಕವಡೆಯಿಂದ ಆಟ ಆರಂಭಿಸುತ್ತಾರೆ. ಕವಡೆಯನ್ನು ಕೈಯಲ್ಲಿ ಕುಲಕಿ, ನೆಲದ ಮೇಲೆ ಹಾಕುವರು, ಅಂಗಾತ ಬಿದ್ದ ಕವಡೆಗಳ ಸಂಖ್ಯೆಗಳ ಆಧಾರದಲ್ಲಿ ಕಾಯಿ ಬಿಡುತ್ತಾರೆ. ಕಟ್ಟೆಮನಿ ಇಲ್ಲದ ಸ್ಥಳದಲ್ಲಿ ಎದುರಾಳಿ ಕಾಯಿ ಸಿಕ್ಕರೆ ಕಡಿದು ಮತ್ತೆ ಆಡುತ್ತಾರೆ. ಎಲ್ಲಾ ಕಾಯಿಗಳನ್ನು ನಡುಮಧ್ಯದ ಮನೆಗೆ ಯಾರು ತಂದು ಹಣ್ಣು ಮಾಡಿಕೊಳ್ಳುತ್ತಾರೊ ಅವರು ಗೆದ್ದಂತೆ. ಹೆಣ್ಣು ಮಕ್ಕಳು ವಿರಾಮದ ವೇಳೆಯಲ್ಲಿ ಈ ಆಟವನ್ನು ಆಡುತ್ತಾರೆ. ಈಗೀಗ ಟೀವಿ ಹಾವಳಿ ಹೆಚ್ಚಾದ ಕಾರಣ ಇಂತಹ ಆಟಗಳು ಕಡಿಮೆಯಾಗತೊಡಗಿವೆ.

**ಅತ್ತಿಕಟಗಿ ಬಿತ್ತಿಕಟಗಿ ಆಟ**

ಈ ಆಟಕ್ಕೆ ಎಷ್ಟು ಮಕ್ಕಳಾದರೂ ನಡೆಯುತ್ತದೆ. ಎಲ್ಲ ಮಕ್ಕಳು ಕುಳಿತುಕೊಂಡು ತಮ್ಮ ತಮ್ಮ ಎರಡೂ ಕೈಗಳನ್ನು ನೆಲಕ್ಕೆ ಬೋರಲಿಡಬೇಕು. ಅವರಲ್ಲಿ ಒಬ್ಬರು ಉಳಿದೆಲ್ಲರ ಕೈಗಳ ಮೇಲೆ ತೋರ್ಬೆರಳು ಇಟ್ಟು

ಅತ್ತಿ ಕಟಗಿ ಬಿತ್ತಿ ಕಟಗಿ

ಭಾವನೋಡು ಬಸನೋರು

ಕೈ ಕೈ ದೊಳ ಗೈ

ಪಂಚಂ ಪಗಡಂ

ನೆಲ್ಲಿಕಟ ಹನಮ

ಹಾಸರ ಧರಮ

ತಿಪ್ಪಿ ಮೇಲೆ ಕೋಳಿ ರಗತ್ತ ಬೋಳಿ

ಸೂಜಿನಾ ದಬ್ಬಣಾನಾ ಎಂದು ಹಾಡು ಕೊನೆಯವರ ಕೈಯನ್ನು ಚೂಟಬೇಕು. ಆಗ ಸೂಜಿ ಎಂದರೆ ಅಂಗೈ ನೆಲಕ್ಕೆ ತಾಗಿಸಿಯೇ ಮೇಲ್ಮುಖ ಮಾಡಬೇಕು. ದಬ್ಬಣ ಎಂದರೆ ಹಾಗೇ ಬೋರಲಿರಬೇಕು. ಕೊನೆಗೆ ಎಲ್ಲರ ಕೈಗಳನ್ನು ಅವರವರ ಬೆನ್ನಹಿಂದೆ ಇಟ್ಟುಕೊಳ್ಳಲು ಹೇಳಬೇಕು. ಆ ಮೇಲೆ ಪ್ರತಿಯೊಬ್ಬರಿಗೂ ಪ್ರಶ್ನೋತ್ತರಗಳ ಮೂಲಕ ಆಟ ಮುಂದುವರಿಯುತ್ತದೆ.

ಪ್ರಶ್ನೆ: ಕೈ ಕೈ ಎಲ್ಲಿಗೋದವು?.

ಉ: ಬಾಗಿಲಿಂದೋದವು

ಪ್ರ: ಬಾಗಿಲೇನುಕೊಡ್ತು?

ಉ: ಕದ ಕೊಡ್ತು

ಪ್ರ: ಕದ ಏನ್ ಮಾಡ್ದಿ?

ಉ: ಒಲ್ಯಾಗ ಹಾಕಿದೆ

ಪ್ರ: ಒಲಿ ಏನ್ ಕೊಟ್ಟಿತು?

ಉ: ಬೂದಿ ಕೊಟ್ಟಿತು

ಪ್ರ: ಬೂದಿ ಏನ್ ಮಾಡ್ದಿ?

ಉ: ತಿಪ್ಪೀಗೆ ಹಾಕ್ದೆ

ಪ್ರ: ತಿಪ್ಪಿ ಏನು ಕೊಟ್ಟೀತು?

ಉ: ಗೊಬ್ಬರ ಕೊಟ್ಟಿತು

ಪ್ರ: ಗೊಬ್ಬರ ಏನ್ ಮಾಡ್ದಿ?

ಉ: ಹೊಲಕ್ಕಾಗಿದೆ.

ಪ್ರ: ಹೊಲ ಏನ್ ಕೊಟ್ಟಿತು?

ಉ: ಹೂವ ಕೊಟ್ಟಿತು

ಪ್ರ: ಹೂವು ಏನ್ ಮಾಡಿದಿ?

ಉ: ದೇವರಿಗೆ ಏರಿಸಿದೆ

ಪ್ರ: ದೇವರು ಏನ್ ಕೊಟ್ಟ?

ಉ: ವರ ಕೊಟ್ಟ ಎಂದು ಪ್ರತಿಯೊಬ್ಬರು ಸಂವಾದದ ಮೂಲಕ ಆಟ ಮುಗಿಸುವರು.

**ಆಣೆ ಕಲ್ಲಾಟ**

ಎದಿರು ಬದಿರು ಇಬ್ಬರು ಕುಳಿತುಕೊಂಡು ಆಡುವ ಆಟ ಇದಾಗಿದೆ. ಐದಾರು ಕಲ್ಲುಗಳು ಬೇಕು. ಎಲ್ಲ ಕಲ್ಲುಗಳನ್ನು ನೆಲಕ್ಕೆ ಹಾಕಿ ಅದರೊಳಗೆ ಒಂದು ಕಲ್ಲನ್ನು ತೆಗೆದುಕೊಂಡು ಆ ಕಲ್ಲನ್ನು ಎರಡು ಮೂರು ಅಡಿ ಎತ್ತರಕ್ಕೆ ತೂರಿ ಆ ಕಲ್ಲು ಕೆಳಗೆ ಬರುವುದರೊಳಗೆ ಕೆಳಗೆ ಚೆಲ್ಲಿದ ಕಲ್ಲುಗಳನ್ನು ಒಂದೊಂದಾಗಿ ತೆಗೆದುಕೊಂಡು ಬದಿಗಿಡಬೇಕು. ಒಂದೊಂದು ತೆಗೆದುಕೊಳ್ಳುವಾಗ ಪಕ್ಕದ ಕಲ್ಲುಗಳು ಕೈಗೆ ತಗುಲಬಾರದು. ತಗುಲಿದರೆ ಆಟದಲ್ಲಿ ಸೋತಂತೆ. ಆ ಮೇಲೆ ತೂರಿದ ಕಲ್ಲು ಕೆಳಗೆ ಬರುವುದರೊಳಗೆ ಎರಡೆರಡು, ಮೂರು ಮೂರು ಕೊನೆಗೆ ಎಲ್ಲಾ ಕಲ್ಲುಗಳನ್ನು ಒಮ್ಮೆಗೆ ತೆಗೆದುಕೊಳ್ಳಬೇಕು.

**ಹೊರಾಂಗಣ ಆಟಗಳು**

ಮನೆಯ ಹೊರಗೆ ಅಥವಾ ಪ್ರಕೃತಿಯ ಮಧ್ಯದಲ್ಲಿ ಆಡುವ ಆಟಗಳಿಗೆ ಹೊರಾಂಗಣ ಆಟಗಳು ಎನ್ನುತ್ತಾರೆ. ಇಲ್ಲಿ ಇಂತಹ ಆಟಗಳು ಸಾಕಷ್ಟು ಸಿಗುತ್ತವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ವಿವರಿಸಿ ಉಳಿದವುಗಳ ಹೆಸರುಗಳನ್ನು ಮಾತ್ರ ತಿಳಿಸಿದ್ದೇನೆ.

**ಚಿಣಿ ಪಿಣಿ (ಚಿನ್ನಿದಾಂಡು)**

ಐದಾರು ಮಕ್ಕಳು ಮಾಡಿಕೊಂಡು ಒಬ್ಬರಾದ ಮೇಲೊಬ್ಬರಂತೆ ಚಿಣಿಪಿಣಿ ಆಡುತ್ತಾರೆ. ಈ ಆಟಕ್ಕೆ ಪಿಣಿ (ಅರ್ಧ ಅಡಿ ಉದ್ದದ ಎರಡೂ ಬದಿಗೆ ಚೂಪಾಗಿ ಕೆತ್ತಿರುವ ಕಟ್ಟಿಗೆ) ಮತ್ತು ಚಿಣಿ (ಎರಡೂ ಅಥವಾ ಎರಡೂವರೆ ಅಡಿ ಉದ್ದದ ಕಟ್ಟಿಗೆಗೆ ಒಂದು ಭಾಗದಲ್ಲಿ ಚೂಪಾಗಿ ಕೆತ್ತಿರುವಂತದ್ದು) ಬೇಕು. ನೆಲದಲ್ಲಿ ಉದ್ದನೆಯ ತಗ್ಗು ಕೊರೆದುಕೊಂಡು ಅದರಲಿ ಚಿಣಿ ಅಡ್ಡಲಾಗಿ ಇಟ್ಟು ಚಿಣಿಯಿಂದ ಒಬ್ಬ ಚಿಮ್ಮುತ್ತಾನೆ. ಉಳಿದ ನಾಲ್ಕೈದು ಹುಡುಗರು ಚಿಮ್ಮಿದ ಪಿಣಿಯನ್ನು ಹಿಡಿಯಲು ಯತ್ನಿಸುತ್ತಾರೆ. ಒಂದು ವೇಳೆ ಪಿಣಿ ನೆಲಕ್ಕೆ ಬೀಳುವ ಮೊದಲೇ ಹಿಡಿದರೆ ಚಿಮ್ಮಿದವನು ಔಟ್ ಆದಂತೆ. ಹಿಡಿಯದಿದ್ದರೆ ಅದೇ ಪಿಣಿಯನ್ನು ಪಿಚ್ಚಿನ ಹತ್ತಿರ ನಿಂತಿರುವನ (ಚಿಮ್ಮಿದವನ) ಕಡೆಗೆ ಎಸೆಯುತ್ತಾನೆ. ಎಸೆದ ಪಿಣಿ ಪಿಚ್ಚಿಗೆ ತುಂಬಾ ಹತ್ತಿರವಿದ್ದರೆ ಚಿಮ್ಮಿದವನು ಔಟ್ ಆಗುತ್ತಾನೆ. ದೂರ ಇದ್ದರೆ ಚಿಮ್ಮಿದವನು ಪಿಣಿಯ ಒಂದು ತುದಿಯನ್ನು ಚಿಣಿಯಿಂದ ನೆಲಕ್ಕೆ ಬಾರಿಸಿ ಮೇಲೆದ್ದ ಪಿಣಿಯನ್ನು ಚಿಣಿಯಿಂದ ವೇಗವಾಗಿ ಬಾರಿಸುತ್ತಾನೆ. ಹೀಗೆ ಮೂರು ಬಾರಿ ಬಾರಿಸುತ್ತಾನೆ. ಪಿಣಿಯು ಪಿಚ್ಚಿನಿಂದ ಇರಬಹುದಾದ 'ದೂರದ ಆಧಾರದ ಮೇಲೆ ಲೆಕ್ಕ ಇಡುತ್ತಾರೆ. ಈ ಲೆಕ್ಕದಲ್ಲಿ ಯಾರು ಹೆಚ್ಚು ಮೊತ್ತಗಳಿಸುತ್ತಾರೊ ಅವರು ಗೆದ್ದಂತೆ. ಕೆಲವು ಕಡೆ ಈ ಆಟವನ್ನು ಸ್ವಲ್ಪ ವ್ಯತ್ಯಾಸವಾಗಿ ಆಡುವುದು ಉಂಟು. ಸಾಮಾನ್ಯವಾಗಿ ಈ ಆಟವನ್ನು ಹುಡುಗರು ಆಡುತ್ತಾರೆ. ಈ ಆಟದಿಂದ ಕೆಲವು ಸಲ ಅಪಾಯ ಉಂಟಾಗುತ್ತದೆ ಎಂದು ತಿಳಿಯುತ್ತದೆ.

**ಲಗೋರಿ**

ಹುಡುಗರು ಆಡುವ ಗುಂಪು ಆಟ ಇದಾಗಿದೆ. ಒಂದಕ್ಕಿಂತ ಒಂದು ಅಗಲವಿರುವ ವೃತ್ತಾಕಾರದ ಕಲ್ಲುಗಳನ್ನು ಒಂದರ ಮೇಲೊಂದರಂತೆ ಏಳೆಂಟು ಕಲ್ಲುಗಳನ್ನು ಜೋಡಿಸಿ ಇಡುತ್ತಾರೆ. ಆ ಕಲ್ಲಿನ ಎಡಬಲಕ್ಕೆ ೮-೧೦ ಅಡಿಗಳಷ್ಟು ದೂರ ನಿಂತ ಹುಡುಗರು ಚಂಡಿನಿಂದ ಕಲ್ಲಿಗೆ ಹೊಡೆದು ಜೋಡಿಸಿಟ್ಟ

ಕಲ್ಲುಗಳನ್ನು ಕೆಡುವಬೇಕು. ಕೆಡವಿದವರು ಪುಟಿದು ಹೋದ ಚೆಂಡನ್ನು ತರುವುದರೊಳಗೆ ಎದುರಾಳಿಗಳು ಬಿದ್ದ ಕಲ್ಲುಗಳನ್ನು ಜೋಡಿಸಿ ಲಗೋರಿ ಕಟ್ಟಬೇಕು. ಹೀಗೆ ಜೋಡಿಸುವಾಗ ಚಂಡಿನಿಂದ ಎದುರಾಳಿಗಳ ಬೆನ್ನಿಗೆ ಹೊಡೆಯುತ್ತಾರೆ. ಮತ್ತೆ ಚಂಡಿನಿಂದ ತಪ್ಪಿಸಿಕೊಂಡು ಕಲ್ಲುಗಳನ್ನು ಜೋಡಿಸಿ ಲಗೋರಿ ಎಂದು ಹೇಳುತ್ತಾರೆ. ಒಂದು ಗುಂಪಿನ ನಂತರ ಇನ್ನೊಂದು ಗುಂಪು ಇದೇ ರೀತಿ ಆಡಬೇಕಾಗುತ್ತದೆ.

**ಕುಂಟಾಬಿಲ್ಲೆ (ಸೀತೆ ಮನಿ) ಆಟ**

ಇದು ಹೆಣ್ಣು ಮಕ್ಕಳ ಆಟಗಳಲ್ಲೊಂದು. ಚೌಕಾಕಾರದ/ವೃತ್ತಾಕಾರದ ೮-೧೦ ಮನೆಗಳನ್ನು ನೆಲದಲ್ಲಿ ಬರೆದು ಒಬ್ಬರ ನಂತರ ಒಬ್ಬರಂತೆ ಇಬ್ಬರು ಆಡುತ್ತಾರೆ. ಕೈಯಲ್ಲಿ ಒಂದು ಹಣಚಿಪಿಲ್ಲೆ ಅಥವಾ ಅಗಲವಾದ ಕಲ್ಲು ಮನೆಯೊಳಗೆ ಹಾಕುತ್ತಾ ಆ ಮನೆಯನ್ನು ದಾಟಿ ಒಂಟಿಗಾಲಿನಿಂದ ಮುಂದಿನ ಎಲ್ಲಾ ಮನೆಗಳಿಗೆ ಗೆರೆ ಕೊರೆದು "ಪಟ್ಟ" ಎಂದು ಹೇಳುತ್ತಾರೆ. ಬೋಕಿ ಮನೆಯ ಹೊರಗೆ ಬಿದ್ದರೆ ನಂತರದವರು ಆಡಬೇಕಾಗುತ್ತದೆ. ಕೆಲವರು ಎಲ್ಲ ಮನೆಗಳಿಗೆ ಸರಿಯಾಗಿ ಕಾಯಿ ಹಾಕಿ ಒಂಟಿಗಾಲಿನಲ್ಲಿ ಹೋಗಿ ಬಂದರೆ ಮನೆಯ ತುದಿಯಲ್ಲಿ ಬೆನ್ನು ಮಾಡಿನಿಂತು ಹಿಂದಿನಿಂದ ಕಲ್ಲು ಎಸೆಯುತ್ತಾರೆ. ಆ ಕಲ್ಲು ಯಾವ ಮನೆಯಲ್ಲಿ ಬೀಳುತ್ತದೆಯೋ ಆ ಮನೆ ಪಟ್ಟ ಆದಂತೆ. ಎದುರಾಳಿ ಈ ಮನೆಯನ್ನು ತುಳಿಯುವ ಹಾಗಿಲ್ಲ. ಒಟ್ಟಿನಲ್ಲಿ ಹೆಚ್ಚು ಮನೆಗಳನ್ನು ಪಟ್ಟ ಮಾಡಿಕೊಂಡವರೆ ಗೆದ್ದಂತೆ.

**ಕಬ್ಬಡ್ಡಿ**

ಏಳೇಳು ಜನರಿಂದ ಕೂಡಿದ ಗಂಡು ಮಕ್ಕಳ ಗುಂಪು ಆಟ ಇದಾಗಿದೆ. ಇತ್ತೀಚಿಗೆ ಹೆಣ್ಣು ಮಕ್ಕಳೂ (ಶಾಲಾ ಕಾಲೇಜುಗಳಲ್ಲಿ) ಈ ಆಟವನ್ನು ಆಡುತ್ತಾರೆ. ಮೈದಾನದಲ್ಲಿ ಎರಡೂ ತಂಡಗಳಿಗೆ ಸರಿಸಮನಾಗಿ ಗೆರೆ ಕೊಯ್ದು ಅದರಲ್ಲಿ ಮಧ್ಯಗೆರೆ ಲಾಬಾಲೈನ್, ಔಟ್‌ಲೈನ್ ಎಂದು ಗೆರೆಗಳಿರುತ್ತವೆ. ಎರಡೂ ತಂಡಗಳಲ್ಲಿ ಕ್ಯಾಪ್ಟನ್, ಕ್ಯಾಚರ್, ರೈಡರ್ ಎಂದು ವಿಶೇಷವಾಗಿ ಇರುತ್ತಾರೆ. ಮೊದಲಿಗೆ ರೈಡ್ ಮಾಡುವವನು ಮಧ್ಯದ ಗೆರೆ ಮುಟ್ಟಿ ನಮಸ್ಕರಿಸಿ ಕಬ್ಬಡ್ಡಿ ಕಬ್ಬಡ್ಡಿ ಎಂದು ಉಸಿರು ಬಿಡದಂತೆ ಎದುರಾಳಿಗಳನ್ನು ಮುಟ್ಟಿ ವಾಪಾಸ್ಸು ಬಂದರೆ, ಹೇಳುತ್ತಾ ಎದುರಾಳಿಗಳು ಔಟಾಗಿ ಹೊರಗೆ ನಿಲ್ಲಬೇಕು. ರೈಡರ್ ವಾಪಸ್ ಹೋಗುವುದರೊಳಗೆ ಮಧ್ಯದ ಗೆರೆ ಮುಟ್ಟಲು ಆಸ್ಪದ ಕೊಡದಂತೆ ಹಿಡಿದರೆ ರೈಡರ್ ಔಟಾಗುತ್ತಾನೆ. ಯಾವ ಗುಂಪು ಹೆಚ್ಚಾಗಿ ಔಟಾಗುತ್ತಾರೋ ಅವರು ಸೋತಂತೆ.

**ಚೀಲ ಎತ್ತುವ ಮತ್ತು ಗುಂಡು ಎತ್ತುವ ಆಟ**

ಶ್ರಮಿಕ ವರ್ಗದವರು ಕೃಷಿ ಚಟುವಟಿಕೆ ಇಲ್ಲದೇ ಇದ್ದ ಸಂದರ್ಭದಲ್ಲಿ ಅಥವಾ ಹಬ್ಬ ಹರಿದಿನಗಳಲ್ಲಿ ಈ ಆಟವನ್ನು ಸಂಜೆವೇಳೆ ಆಡುತ್ತಾರೆ. ೧೦೦-೧೨೫ ಕೆ.ಜಿ.ತೂಕದ ಚಂಡಿನಾಕಾರದ ಗುಂಡುಗಳು ಮತ್ತು ಕೈಹಿಡಿಕೆಯಿರುವ ವೃತ್ತಾಕಾರದ ಗುಂಡುಗಳನ್ನು ಮತ್ತು ಭಾರವಾದ ಕಾಳಿನ ಚೀಲವನ್ನು ಹೆಗಲ ಮೇಲೆ ಹೊತ್ತುಕೊಂಡು ಬಂದು ದೇವಸ್ಥಾನದ ಮುಂದೆ ಇಡುವ ಪದ್ಧತಿ ಇದೆ. ಮಾರುತಿ, ಮೋಹಿತೆ, ಸಿದ್ದಯ್ಯ ಕರಗಿ.

### ಕಣ್ಣಾಮುಚ್ಚಾಲೆ ಆಟ

ಒಬ್ಬ ಕುಳಿತುಕೊಂಡು ಇನ್ನೊಬ್ಬನ ಕಣ್ಣನ್ನು ಎಡಗೈಯಿಂದ ಮುಚ್ಚಿ ಆ ಹುಡುಗನ ಬಲಗೈಯನ್ನು ಹಿಡಿದು ಮುಂದೆ ನಿಂತ ಆಟಗಾರರನ್ನು ತೋರಿಸುತ್ತಾ "ಅವರ್ ಬಿಟ್ಟು ಇವರ್ ಬಿಟ್ಟು ಇವರ್‍ಯಾರು" ಎಂದು ಹೇಳುತ್ತಾನೆ. ಕಣ್ಣು ಮುಚ್ಚಿಕೊಂಡ ಹುಡುಗನಿಗೆ ಮುಂದೆ ನಿಂತಿರುವ ಆಟಗಾರರನ್ನು ಸರಿಯಾಗಿ ಗುರುತಿಸಲು ಆಗುವುದಿಲ್ಲ. ಕೊನೆಗೆ ಎಲ್ಲ ಆಟಗಾರರು ಅಡಗಿಸಿಕೊಳ್ಳುತ್ತಾರೆ. ಆಗ ಕಣ್ಣು ಮುಚ್ಚಿದವರು

"ಕಣ್ಣಾ ಮುಚ್ಚೆ ಕಾಡೇಗೋಡೇ
ಉದ್ದಿನ ಮೂಟೆ ಉರುಳಿ ಹೋಯಿತು
ನಮ್ಮಯ ಹಕ್ಕಿ ಬಿಟ್ಟೆ ಬಿಟ್ಟೆ
ನಿಮ್ಮಯ ಹಕ್ಕಿ ಮುಚ್ಚಿಕೊಳ್ಳಿ ಕಟ್ಟೆಮನೆ ಹಾಳಾಯ್ತು"

ಈ ರೀತಿಯಾಗಿ ಹಾಡುತ್ತಾ ಮುಚ್ಚಿದ ಕಣ್ಣನ್ನು ಬಿಡುವರು. ಆಗ ಅವನು ಅಡಗಿಕೊಂಡವರನ್ನು ಹಿಡಿಯಲು ಪ್ರಯತ್ನಿಸುವನು. ಮೊದಲು ಮುಟ್ಟಿಸಿಕೊಂಡವರು ಮುಂದಿನ ಆಟದಲ್ಲಿ ಕಣ್ಣು ಕಟ್ಟಿಸಿಕೊಳ್ಳಬೇಕು.



### ಗಣಪತಿ ಬಪ್ಪಾ ಮೋರಯಾ ಆಟ

ಈ ಆಟಕ್ಕೆ ಮೂವರು ಬೇಕು. ಇವರಲ್ಲಿ ಇಬ್ಬರು "ಅವ್ವಪ್ಪಚ್ಚಿ" ಎಂದು ಬಾಯಿಗೆ ಚೌಕಾಕಾರದಲ್ಲಿ ಹಿಡಿದುಕೊಳ್ಳಬೇಕು. ಉಳಿದ ಇನ್ನೊಬ್ಬ ಚೌಕಾಕಾರದ ಖಾನೆಯೊಳಗೆ ಎರಡು ಕಾಲುಗಳನ್ನಿಟ್ಟು ಕುಳಿತುಕೊಳ್ಳುತ್ತಾನೆ. ಆಗ ಅವನನ್ನು ಎತ್ತಿಕೊಂಡು "ಗಣಪತಿಬಪ್ಪ ಮೋರಯ" ಎಂದು ಆಚೆ ಈಚೆ ಓಡಾಡುತ್ತಾರೆ. ಈ ಆಟಕ್ಕೆ ಚಿಕ್ಕ ಹುಡುಗನನ್ನೇ ಆಯ್ಕೆ ಮಾಡಿಕೊಳ್ಳುತ್ತಾರೆ. ಗಣಪತಿಯನ್ನು ಮೇಲೆ ಎತ್ತಲು ಅನುಕೂಲವಾಗಬೇಕೆಂಬುದು ಇದರ ಉದ್ದೇಶವಾಗಿರುತ್ತದೆ.

ಇಲ್ಲಿಯವರೆಗೆ ವಿವರಿಸಲಾದ ಆಟಗಳ ಜೊತೆಗೆ ಕಳ್ಳಪೋಲೀಸ್ ಆಟ, ಮರಕೋತಿ ಆಟ, ಹಗ್ಗದಾಟ, ಬುಗುರಿ, ಗೋಲಿ, ಗಜಗದ ಆಟ, ಉಸುಕಿನ ಚೀಲ, ಹುಳ್ಳಿಚೀಲ ಹೊರುವುದು, ಬಂಡಿಗಾಲಿ ಎತ್ತುವುದು, ನಿಂಬೆಹಣ್ಣು ಎಸೆಯುವುದು, ಬರಿಗೈಲಿ ತೆಂಗಿನಕಾಯಿ ಒಡೆಯುವುದು, ಬಣ್ಣ ಎರಚುವ ಆಟ ಮುಂತಾದವುಗಳು ಯಮನೂರಿನ ಪರಿಸರದಲ್ಲಿರುವ ಜನಪದ ಆಟಗಳಾಗಿವೆ.

ಇವುಗಳಲ್ಲದೆ ಶಾಲಾಕಾಲೇಜುಗಳಲ್ಲಿ ಅನೇಕ ಆಟಗಳು ಪ್ರಚಲಿತದಲ್ಲಿವೆ. ಅವುಗಳೆಂದರೆ ವೈಯಕ್ತಿಕ ಓಟ, ಗುಂಪು ಓಟ, ರಿಲೇ, ಜಿಗಿಯುವುದು, ಎತ್ತರ ಜಿಗಿತ, ಉದ್ದ ಜಿಗಿತ, ಗುಂಡು ಎಸೆತ, ಭರ್ಚಿ ಎಸೆತ, ಕೊಕೊ, ವಾಲಿಬಾಲ್, ಥ್ರೋಬಾಲ್, ಟೆನ್ನಿಕಾಯ್ಟ್, ಟೆನ್ನಿಸ್‌ಬಾಲ್, ಚೆಸ್, ಕೇರಂ, ಕ್ರಿಕೆಟ್ ಮುಂತಾದವುಗಳು.

ಜನಪದ ಆಟಗಳಲ್ಲಿ ಹೆಚ್ಚಾಗಿ ಹುಟ್ಟು ಸಾವಿನ ಪರಿಕಲ್ಪನೆಯನ್ನು ಕಾಣುತ್ತೇವೆ. ಅಂದರೆ ಹುಟ್ಟು ಸಂತೋಷದ ಸಂಕೇತವಾದರೆ, ಸಾವು ಭಯಾನಕವಾಗಿರುತ್ತದೆ. ಅಂದರೆ ಯಾವುದೇ ಒಂದು ಆಟ ಆಡುವಾಗ

ಎದುರಾಳಿ ಈಗ ನಾನು ನಿನ್ನ ಕಾಯಿ ಕಡಿತೀನಿ, ಸಾಯಿಸ್ತೀನಿ ಅಂದರೆ ಆ ಸಾವಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವುದನ್ನು ಕಾಣಬಹುದು. ಕೊನೆಗೆ ಎದುರಾಳಿಯಿಂದ ಸೋತು ತನ್ನ ಮನೆಯನ್ನು ಸೇರಿ ಮತ್ತೆ ಗೆಲ್ಲಲು ಪ್ರಯತ್ನಿಸುತ್ತಾರೆ. ಕೊನೆಗೆ ಕಾಯಿ ಎದುರಾಳಿಯಿಂದ ತಪ್ಪಿಸಿಕೊಂಡು ಹಣ್ಣಿನ ಮನೆ ಸೇರಿದರೆ ಆ ಕಾಯಿಗಳಿಗೆ ಮುಕ್ತಿ ಸಿಕ್ಕಂತೆ. ಈ ಆಟಗಳಲ್ಲಿ ಜನಪದರು ತಮ್ಮ ಬದುಕಿನ ಹೋರಾಟದ ಹುಟ್ಟು, ಸಾವು, ಮುಕ್ತಿಗಳನ್ನು ಚಿತ್ರಿಸಿದ್ದಾರೆ.

ಇಲ್ಲಿ ಕಂಡುಬರುವ ಎಲ್ಲ ಆಟಗಳಿಗೂ ಒಂದು ಸೈದ್ಧಾಂತಿಕ ಚೌಕಟ್ಟು ಇದೆ ಎನ್ನಬಹುದು. ಏಕೆಂದರೆ ತಾತ್ವಿಕ ವಿಚಾರಧಾರೆಗಳಿಂದ ತುಂಬಿದಂತಹ ನಮ್ಮ ಜನಪದರ ಬದುಕು ಒಂದು ನಾಟಕರಂಗ. ನಾವಿಲ್ಲಿ ಪಾತ್ರಧಾರಿಗಳು. ಮೇಲೆ ಆಟ ಆಡಿಸಿದಂತೆ ಆಡುತ್ತೇವೆ ಎಂದು ಹೇಳುತ್ತಾರೆ. ಈ ತಾತ್ವಿಕ ಹಿನ್ನೆಲೆಯಲ್ಲಿ ಸಹಿತ ಜನಪದ ಆಟಗಳನ್ನು ಕಾಣಬಹುದು. ಅವುಗಳಲ್ಲಿ ಅಡಗಿರುವ ಹುಟ್ಟು ಸಾವು ಎಲ್ಲ ವರ್ಗ ಸಿದ್ಧಾಂತದ ಹಿನ್ನಲೆಯಲ್ಲಿ ಹುದುಗಿರುವಂತವು. ಅಂದರೆ ಕೆಲವು ಆಟಗಳಲ್ಲಿ ಆಟಗಾರ ತಾನೇ ಪಾತ್ರಧಾರಿಯಾಗಿ ಆಡುವುದು ಒಂದು ಬಗೆಯಾದರೆ ಇನ್ನು ಕೆಲವು ಆಟಗಳಲ್ಲಿ ತಾನು ಕಾಯಿಗಳನ್ನು ಪಾತ್ರಧಾರಿಯನ್ನಾಗಿ ಮಾಡಿಕೊಂಡು ಆಟ ಆಡಿಸುತ್ತಾ ತಾನು ದೇವರಾಗುತ್ತಾನೆ ಎನ್ನುವ ವಿಚಾರ ತಲೆದೋರುತ್ತದೆ.

ಜೀವನಾವರ್ತನ ಕ್ರಿಯೆಗಳಲ್ಲೊಂದಾದ ಮದುವೆಯಲ್ಲಿಯೂ ಸಹ ಜನಪದ ಆಟಗಳು ಪ್ರಮುಖಪಾತ್ರವಹಿಸುತ್ತವೆ. ಬಚ್ಚಿಟ್ಟ ವಧುವನ್ನು ಹುಡುಕಿ ತರುವುದು, ವಧು-ವರರ ಮಧ್ಯದಲ್ಲಿ ನಡೆಯುವ ಅಡಿಕೆಯಾಟ, ಓಕುಳಿಯಾಟ, ಹೂವಿನ ಚೆಂಡಿನಾಟ, ತಾಂಬೂಲದಾಟ, ಹಾಲಿನಲ್ಲಿ ಹಾಕಿದ ಬಂಗಾರದ ಮೂಗುತಿಯನ್ನು ಹುಡುಕುವ ಆಟ, ಇತ್ತೀಚಿನ ದಿನಗಳಲ್ಲಿ ವಧು-ವರರ ಪರಸ್ಪರ ತಲೆಯ ಮೇಲೆ ಅಕ್ಷತೆ, ಮಿಂತು ಬಣ್ಣ ಬಣ್ಣದ ಥರ್ಮಾಕೋಲ್ ಗುಂಡುಗಳ ರಾಶಿಯನ್ನು ಸುರಿಯುವ ಆಟ, ಹೀಗೆ ಅನೇಕ ಆಟಗಳು ಕೇವಲ ಆಟಗಳಾಗದೆ, ವಿನೋದದ ಮೂಲಕ ವಧು-ವರರನ್ನು ಪರಸ್ಪರ ಸಮೀಪಕ್ಕೆ ತರುವ ಉದ್ದೇಶವಾಗಿದೆ. ಹಿಂದೆ ವಧು-ವರರು ಮದುವೆಯ ದಿನದಂದೆ ಪರಸ್ಪರ ಒಬ್ಬರನ್ನೊಬ್ಬರು ನೋಡಬೇಕಾದಂತಹ ಪರಿಸ್ಥಿತಿ ಇತ್ತು. ಇದರಿಂದ ಪರಸ್ಪರರಲ್ಲಿ ಭಯ, ಅಂಜಿಕೆ, ಆತಂಕದಂತಹ ವಾತಾವರಣವಿರುತ್ತಿತ್ತು. ಇಂತಹ ವಾತಾವರಣದಿಂದ ಮುಕ್ತಿಗೊಳಿಸುವ ಉದ್ದೇಶದಿಂದ ಮದುವೆಗಳಲ್ಲಿ ಆಟಗಳು ಅನಿವಾರ್ಯವಾದವು.

ಜನಪದ ಆಟಗಳು ಗ್ರಾಮೀಣ ಬದುಕಿನೊಂದಿಗೆ ಬೆರೆತುಕೊಂಡಿವೆ. ಮನೋರಂಜನೆ ಹಾಗೂ ಶಾರೀರಿಕ ಬಲಸಂವರ್ಧನೆ ಎರಡಕ್ಕೂ ಇವು ಸಹಕಾರಿಯಾಗಿವೆ. ಹಳ್ಳಿ ಮಕ್ಕಳು ಚಿಕ್ಕವರಿರುವಾಗಲೇ ಆಡುವುದನ್ನು ಸಹಜವಾಗಿ ರೂಢಿಸಿಕೊಳ್ಳುತ್ತಾರೆ. ಮಕ್ಕಳಾಗಿರುವಾಗ ಕೇವಲ ಮನೋರಂಜನೆಯಂತಿದ್ದ ಆಟಗಳು, ಆಗಲೇ ಮನುಷ್ಯನ ಹುಟ್ಟು ಪ್ರವೃತ್ತಿಯಾದ ಸ್ಪರ್ಧಾ ಮನೋಭಾವನೆಯನ್ನು ಜಾಗೃತಗೊಳಿಸುತ್ತವೆ. ಅಷ್ಟೇ ಅಲ್ಲದೆ ದೈಹಿಕ ಮತ್ತು ಮಾನಸಿಕವಾಗಿ ಸದೃಢಗೊಳಿಸುತ್ತವೆ. ಮತ್ತು ಮಕ್ಕಳಲ್ಲಿರುವ ಆಲಸಿತನವನ್ನು ದೂರಮಾಡಿ ಕ್ರಿಯಾಶೀಲರಾಗುವಂತೆ ಉತ್ತೇಜನ ನೀಡುತ್ತವೆ. ಆಟಗಳಿಂದ ದೊರಕುವ ವ್ಯಾಯಾಮಗಳಿಂದ ಮಕ್ಕಳ

ಸ್ನಾಯುಬಲ ವೃದ್ಧಿಸುತ್ತದೆ. ಇದರಿಂದ ಮನೋಲ್ಲಾಸ ದೊರೆತು ಬೌದ್ಧಿಕ ವಿಕಾಸವು ಸಿದ್ಧಿಸುತ್ತದೆ. ಆಧುನಿಕತೆಯ ಪ್ರಭಾವದಿಂದಾಗಿ ವೀಡಿಯೋಗೇಮ್, ಕೇರಂ, ದೂರದರ್ಶನ, ಕಂಪ್ಯೂಟರ್, ಪ್ಲಾಸ್ಟಿಕ್ ಆಟಿಕೆಗಳಂತಹ ಮುಂತಾದ ಲಾಭವಿಲ್ಲದ ಆಟಗಳತ್ತ ಮಕ್ಕಳು ಆಕರ್ಷಿತರಾಗುವುದನ್ನು ತಡೆಗಟ್ಟಬೇಕಿದೆ. ಮಕ್ಕಳನ್ನು ನಾಳಿನ ನಾಗರೀಕರನ್ನಾಗಿ ಅಣಿಗೊಳಿಸಲು ಶಾಸ್ತ್ರೀಯ ಆಟ, ತರಬೇತಿಗಳತ್ತ ಗಮನಹರಿಸುವಂತಹ ಪರಿಣಾಮಕಾರಿ ಪ್ರಯತ್ನ ಮಾಡಬೇಕಿದೆ.

### ಪ್ರಾಣಿ ಸಂಬಂಧಿ ಆಟಗಳು

ಜನಪದರು ತಾವಷ್ಟೇ ಆಡಿ ಸಂತಸಪಡುವುದರ ಜೊತೆಗೆ ತಾವು ಪ್ರೀತಿಸುವ ಪ್ರಾಣಿಗಳ ಆಟವನ್ನು ನೋಡಿ ಖುಷಿಪಡುವ ಜನರೂ ಕೂಡಾ ಇದ್ದಾರೆ. ತಾವು ಸಾಕಿರುವಂತ ಪ್ರಾಣಿ ಆಟದಲ್ಲಿ ಗೆದ್ದರೆ ತಾವೇ ಗೆದ್ದಷ್ಟೇ ಸಂತೋಷವಾಗುತ್ತದೆ. ಏಕೆಂದರೆ ಪ್ರಾಣಿಗಳು ಮಾನವನ ಬದುಕಿನ ಅವಿಭಾಜ್ಯ ಅಂಗವೆಂದೇ ಹೇಳಬಹುದು.

ಉತ್ತರ ಕರ್ನಾಟಕದಲ್ಲಿ ಪ್ರಚಲಿತವಿರುವಂತೆ ಯಮನೂರು ಗ್ರಾಮದಲ್ಲಿ ಕಾರುಹುಣ್ಣಿಮೆ ಸಂದರ್ಭದಲ್ಲಿ ಕರಿಹರಿಯುವ ಆಚರಣೆ ನಡೆಯುತ್ತದೆ. ಇದರಲ್ಲಿ ಊರಿನ ಎಲ್ಲ ಎತ್ತುಗಳನ್ನು ಸುಂದರವಾಗಿ ಅಲಂಕರಿಸಿ ಊರೆಲ್ಲಾ ಮೆರವಣಿಗೆ ಮಾಡಿ, ನಂತರ ಊರ ಅಗಸಿಯಲ್ಲಿ ಎತ್ತುಗಳ ಕರಿಹರಿಯುವ ಸ್ಪರ್ಧೆ ಏರ್ಪಡುತ್ತದೆ. ಈ ಸ್ಪರ್ಧೆಯಲ್ಲಿ ಯಾರ ಎತ್ತುಗಳು ಗೆದೆಯುತ್ತವೆಯೋ ಆ ರೈತನಿಗೆ ಸಂಭ್ರಮವೋ ಸಂಭ್ರಮ. ಆ ಎತ್ತುಗಳನ್ನು ಮನೆಗೆ ಕರೆತಂದು ಕುಂಕುಮ ಓಕಳಿಯಿಂದ ದೃಷ್ಟಿ ತೆಗೆದು ಒಳಗೆ ಕಟ್ಟುತ್ತಾರೆ. ಇದನ್ನು ನೋಡಿದರೆ ಮಾನವನಿಗೂ ಪ್ರಾಣಿಗಳಿಗೂ ಇರುವ ಒಂದು ಸಂಬಂಧ ಗೊತ್ತಾಗುತ್ತದೆ.

ಅದೇ ರೀತಿ ದಕ್ಷಿಣ ಕನ್ನಡದಲ್ಲಿ ಕಂಬಳ ಎನ್ನುವ ಕ್ರೀಡೆಯನ್ನು ಎತ್ತುಗಳಿಗೆ, ಕೋಣಗಳಿಗೆ ಏರ್ಪಡಿಸಿರುತ್ತಾರೆ. ಇದನ್ನು ಕೆಸರು ಗದ್ದೆಯಾಟ ಎಂತಲೂ ಕರೆಯುತ್ತಾರೆ. ಹೀಗೆ ಗ್ರಾಮವು ವಿವಿಧ ಜನಪದ ಕ್ರೀಡೆಗಳೊಂದಿಗೆ ಶ್ರೀಮಂತ ಸಂಸ್ಕೃತಿಯನ್ನು ಹೊಂದಿದೆ. ಗ್ರಾಮದ ಜನಪದ ಆಟಗಳು ಜನಪದ ಸಂಸ್ಕೃತಿಯ ಪ್ರತೀಕಗಳಾಗಿವೆ.

### ೩.೧೨. ಜನಪದ ಕಲೆ

ಜನಪದ ಕಲೆ ಆದಿಮಾನವನಷ್ಟು ಹಳೆಯದು. ಎದೆಯಲ್ಲಿ ಹುದುಗಿದ ಕಲೆಯನ್ನು ಅದುಮಿಟ್ಟುಕೊಳ್ಳಲಾರದ ಮನುಷ್ಯ ತನ್ನ ಪರಿಸರದಲ್ಲೆಲ್ಲ ಕಲೆಯನ್ನು ಅಭಿವ್ಯಕ್ತಿಸಿದ. ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದವ ತನಗೆ ಅವಕಾಶ ಸಿಕ್ಕಾಗಲೆಲ್ಲಾ ಚಿತ್ರಗಳನ್ನು ಬಿಡಿಸುತ್ತಿದ್ದನೆಂಬುದಕ್ಕೆ ಅನೇಕ ಸಾಕ್ಷಿಗಳು ದೊರೆಯುತ್ತವೆ. ಹಲವಾರು ವಿದ್ವಾಂಸರು ಕಲೆಯನ್ನು ಕುರಿತು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. "ಮಾನವನ ಕಲ್ಯಾಣಕ್ಕೆ ಹೇತುವಾದ ಕಲೆ" ಎಂದು ಟಾಲ್‌ಸ್ಟಾಯ್, "ಮಾನವನ ಚಿತ್ರರಂಗದರ್ಶನವೇ ಕಲೆ" ಎಂದು ಹೆಬ್ಬೆಲ್, "ಆತ್ಮದರ್ಶನ ಮಾಡಿಸುವುದೇ ಕಲೆ" ಎಂದು ಅರವಿಂದರು, "ಜೀವನ ದರ್ಶನ ಮಾಡಿಸುವುದೇ ಕಲೆ" ಎಂದು ಸಿ.ಇ.ಜೋಡ್, ಇನ್ನೂ ಕೆಲವರು ಕಲೆ ಎಂದರೆ "ಸೌಂದರ್ಯದರ್ಶನ" ಎಂದರು. ಹೀಗೆ ಹೇಳುವ ವ್ಯಾಖ್ಯಾನಗಳು ಜನಪದ ಕಲೆಗೆ ಅನ್ವಯಿಸಿದವುಗಳಾಗಿವೆ. ಜನಪದ ಕಲೆಗಳು

ಇಂದು ನಿನ್ನೆಯದಲ್ಲ. ತಲೆತಲಾಂತರಗಳಿಂದ ಒಕ್ಕಲು ಮಕ್ಕಳ, ಕೂಲಿಯಾಳುಗಳ ಅಂಗಳದಲ್ಲಿ ಹುಟ್ಟಿಕೊಂಡು ಬಂದವುಗಳಾಗಿವೆ.

ಹಾಗೆಯೇ ಯಮನೂರಿನಲ್ಲಿ ಹಲವಾರು ಕಲೆಗಳನ್ನು ಗುರುತಿಸಬಹುದು. ಈ ಕಲೆಯ ಮುಖ್ಯ ಉದ್ದೇಶ ಆನಂದ ನೀಡುವುದಾಗಿದೆ. ಈ ಆನಂದದ ಜೊತೆಗೆ ಹೃದಯ ಸಂಸ್ಕಾರವೂ ನಡೆಯುತ್ತದೆ. ಕಲೆ ಕಲೆಗಾಗಿ ಎಂಬುದನ್ನು ಜನಪದ ಕಲಾವಿದರು ನಿದರ್ಶಿಸಿದರು. ಹಲವಾರು ಕಲೆಗಳು ಬರುಬರುತ್ತಾ ವೃತ್ತಿ ಕಲೆಗಳಾಗಿ ಪರಿವರ್ತಿತವಾಗಿರುವುದನ್ನು ಕಾಣಬಹುದು. ಇಲ್ಲಿ ಕೆಲವು ಕಲೆಗಳು ಉಪಜೀವನದ ಮಾರ್ಗವನ್ನು ಅನುಸರಿಸಿದರೆ ಇನ್ನೂ ಕೆಲವು ಶುದ್ಧ ಮನರಂಜನಾತ್ಮಕವಾದವುಗಳಾಗಿವೆ. ಇಲ್ಲಿ ಕಂಡುಬರುವ ಅನೇಕ ಕಲೆಗಳಲ್ಲಿ ಪ್ರಮುಖವಾದವುಗಳನ್ನು ಇಲ್ಲಿ ಅಭ್ಯಾಸಿಸಲಾಗಿದೆ. ಪಲ್ಲಕ್ಕಿ ಚಿಂತೆ, ಆನೆ ಸಾರಂಗ ಮುಂತಾದ ಪ್ರಾಣಿಗಳ ಒಂಟಿಚಿತ್ರಗಳೇ ಅಲ್ಲದೆ ಒಂಟೆ ಸವಾರರು, ಹೋರಿ ಕಾಳಗದಂತ ಚಿತ್ರಗಳೂ ಇವೆ. ಮನುಷ್ಯ ಮೊದ ಮೊದಲು ಕಲ್ಪನೆಯ ಚಿತ್ರಗಳಿಗಿಂತ ತಾನು ದಿನವೂ ನೋಡುವ ಚಿತ್ರಗಳನ್ನೇ ಚಿತ್ರಿಸಿದ. ಇಂದಿಗೂ ಅಷ್ಟೇ ಜನಪದರು ತಾವು ತಮ್ಮ ಪರಿಸರದಲ್ಲಿ, ಪ್ರಕೃತಿಯಲ್ಲಿ ನೋಡುವ ವಸ್ತು ಪ್ರಾಣಿಗಳನ್ನೇ ತನ್ನ ಮನೆ ಬಟ್ಟೆಗಳ ಮೇಲೆ ಚಿತ್ರಗಳನ್ನು ತೆಗೆಯುವುದರ ಮೂಲಕ ಅನುಕರಿಸುತ್ತಾರೆ.

ಮನೆಯ ಪಡಸಾಲೆಯನ್ನು ಚಿತ್ರಗಳಿಂದ ಅಲಂಕರಿಸುವ ರೀತಿಯನ್ನು ಎಲ್ಲ ಕಡೆಗೆ ನೋಡುತ್ತೇವೆ. ಏಕೆಂದರೆ ಹಗಲೆಲ್ಲಾ ತಾವು ಕುಳಿತುಕೊಳ್ಳುವುದು, ನಿಲ್ಲುವುದು, ಮಾತನಾಡುವುದು, ಪಡಸಾಲೆಯಲ್ಲೇ. ಮನೆಗೆ ಅತಿಥಿಗಳು ಬಂದರೆ ಉಭಯಕುಶಲೋಪರಿ ನಡೆಯುವುದು ಪಡಸಾಲೆಯಲ್ಲೇ. ಹೀಗಾಗಿ ಇದು ಚೆಂದ ಕಾಣಬೇಕು ಎಂಬ ಪ್ರಜ್ಞೆ ಬಹುತೇಕ ಜನರಲ್ಲಿರುತ್ತದೆ. ಆದ್ದರಿಂದ ಪಡಸಾಲೆಯ ಗೋಡೆಗಳನ್ನು ಅಲ್ಲಲ್ಲಿ ಸಿಂಗರಿಸಿರುತ್ತಾರೆ. ಗೋಡೆಗಳ ಮೇಲಿನ ಅಲಂಕಾರ ಸಾಮಾನ್ಯವಾಗಿ ಸುಣ್ಣದ ಬೊಟ್ಟಿನಿಂದ ನಡೆಯುತ್ತದೆ. ತೇರು, ಶಿವಲಿಂಗದ ಚಿತ್ರಗಳನ್ನು ಗೋಡೆಯ ಮೇಲೆ ತೆಗೆದರೆ ಒಳಮನೆ ಬಾಗಿಲಿನ ಆಚೀಚೆ ಗಿಳಿ ತೆಗೆಯುವುದು ಸರ್ವೇಸಾಮಾನ್ಯ. ಕೆಲವರು ಪಡಸಾಲೆಯ ಗೋಡೆಯ ಮೇಲೆ ನೆಲದಿಂದ ೩-೪ ಅಡಿ ಅಂತರದಲ್ಲಿ ಅಡ್ಡಪಟ್ಟಿಕೆ ಮಾಡಿ ಅದರಲ್ಲಿ ಹೂವಿನ ಚಿತ್ರ ಬಿಡಿಸುತ್ತಾರೆ.

ಮನೆಯಂಗಳದಲ್ಲಿ ರಂಗೋಲಿ ಹಾಕುವ ಮುಖಾಂತರ ತಮ್ಮ ಕಲಾಪ್ರೀತಿಯನ್ನಿವರು ವ್ಯಕ್ತಪಡಿಸುತ್ತಾರೆ. ಗ್ರಾಮೀಣರು ದಿನವೂ ರಂಗೋಲಿ ಹಾಕುತ್ತಾರೆಂಬ ವಿಷಯದಲ್ಲಿ ನಿಶ್ಚಿತತೆ ಇಲ್ಲ. ಆದರೂ ಮನೆಯಂಗಳದಲ್ಲಿ ರಂಗೋಲಿಯ ಪ್ರಮಾಣ ಹೆಚ್ಚಿರುವುದು ಇತ್ತೀಚೆಗೆ ಮಾಮೂಲು. ಹಬ್ಬಹರಿದಿನಗಳಲ್ಲಿ ಮಾತ್ರ ರಂಗೋಲಿ ಹಾಕುತ್ತಿದ್ದರು. ಸೀಗೆ ಹುಣ್ಣಿವೆ, ಗೌರಿ ಹುಣ್ಣಿವೆ, ಭಾರತಹುಣ್ಣಿವೆ ಬೆಳದಿಂಗಳಲ್ಲಿ ರಂಗೋಲಿ ಹಾಕುವುದು ಸಾಮಾನ್ಯ. ಕಮಲ, ಸ್ವಸ್ತಿಕ, ತೇರು, ಲಿಂಗ, ತುಳಸಿಕಟ್ಟೆ, ಇವೆಲ್ಲ ಮನೆಯಂಗಳದ ರಂಗೋಲಿಯಲ್ಲಿ ಚಿತ್ರಿಸಲ್ಪಡುತ್ತವೆ. ಗೌರಿ ಹಬ್ಬಕ್ಕೆ ಬೇಕಾಗುವ ಸಕ್ಕರೆಯ ಅಚ್ಚುಗಳನ್ನು ನೈಜವಾಗಿ ಆಕರ್ಷಕವಾಗಿ ತಯಾರಿಸುತ್ತಾರೆ.

ಮದುವೆಯ ಸಂದರ್ಭದಲ್ಲಿ ಮನೆಯ ಗೋಡೆಗೆ ಮೊದಲು ಕೆಮ್ಮಣ್ಣು ಬಡಿದು ತರುವಾಯ ಸುಣ್ಣದಿಂದ ಸೂರ್ಯ, ಚಂದ್ರರ ಆಕೃತಿ ಬರೆದು ಅಲಂಕರಿಸುತ್ತಾರೆ. ಮನೆಬಾಗಿಲಿಗೆ ಹಾಕುವ ಪರದೆಯ

ಮೇಲಿರುವ ಕಸೂತಿಯೂ ಚಿತ್ರಕಲೆಯ ಒಂದು ಭಾಗವೇ. ಪೇಟೆ ವ್ಯವಹಾರಗಳಿಗೆ, ಊರು ಕೇರಿಗಳಿಗೆ ಹಿಡಿದುಕೊಂಡು ಹೋಗುವ ಕೈಚೀಲಗಳ ಮೇಲೆ ಇದರ ದಟ್ಟತೆ ಇನ್ನೂ ಹೆಚ್ಚು. ಬಣ್ಣ ಬಣ್ಣದ ಬಟ್ಟೆ ಸಂಯೋಜಿಸಿಕೊಂಡಿರುವ ಕೌದಿಯನ್ನೂ ಕೂಡ ನಾವು ಇಲ್ಲಿ ಇಂದಿಗೂ ನೋಡಬಹುದು.

ತೊಡುವ ಬಟ್ಟೆಗಳ ಮೇಲೂ ಗ್ರಾಮೀಣ ಜನರ ಚಿತ್ರ ಕಲಾಸಕ್ತಿ ಇದೆ ಎಂಬುದು ಕಸೂತಿಯ ಮೂಲಕ ತೋರ್ಪಡುತ್ತದೆ. ಮಕ್ಕಳ ಕುಂಚಿಗೆಯ ಮೇಲೆ, ಜಂಪರಿನ ತೋಳಿನ ಮೇಲೆ ಹೂ ಹಣ್ಣಿನ ಕಸೂತಿ ಶೋಭಿಸುತ್ತದೆ. ಈಗಲೂ ಕೂಡಾ ಅಜ್ಜಿಯರು ತಮ್ಮ ಸೀರೆಯ ಸೆರಗಿನಲ್ಲಿ ಮಗ್ಗಿ ತೆಗೆದು ಅಲಂಕರಿಸುವುದು ವೈಶಿಷ್ಟ್ಯಪೂರ್ಣವಾಗಿದೆ. ಇತ್ತೀಚೆಗೆ ಕಾಟನ್ ಮತ್ತು ಇತರೆ ಸಾದಾ ಸೀರೆ ಮೇಲೂ ಕಸೂತಿ ಹಾಕಿಸುವುದನ್ನು ಕಾಣಬಹುದು.

ಮಮ್ಮಕ್ಕಳೆತಗೊಂಡ ಮಟಕ್ಕೋಗು ಹಡದವ್ವ

ಸೆರಗೀನ ಮ್ಯಾಲ ಶರಣರ | ಹಡದವ್ನ

ನೀರಿಗಿ ಮ್ಯಾಲ ಲಿಂಗವ ಎಂಬ ತ್ರಿಪದಿ ಸೀರೆ ಮೇಲೆ ತೋರುವ ಕಸೂತಿಯನ್ನೇ ಕುರಿತದ್ದಾಗಿದೆ.

**ಭಜನೆ**

ದೇವರ ಸ್ತುತಿ ಮತ್ತು ಸ್ತೋತ್ರ ರೂಪವಾದ ಹಾಡುಗಳನ್ನು ಭಜನೆ ಎನ್ನಬಹುದು. ದೇವರನ್ನು ಗುಂಪಾಗಿ ಸ್ತುತಿಸುವ ಕ್ರಮವೇ ಭಜನೆ ಆಗಿದೆ. ಪ್ರತಿಯೊಂದು ಆರಾಧನಾ ಕಲೆಗಳಿಗೂ ಸಾಹಿತ್ಯ ಪರಂಪರೆಯೊಂದಿರುವಂತೆ ಭಜನೆ ಸಂಪ್ರದಾಯಕ್ಕೂ ಸಾಹಿತ್ಯ ಪರಂಪರೆಯಿದೆ. ಮಧ್ಯಕಾಲೀನ ಭಕ್ತಿ ಪರಂಪರೆಯೇ ಭಜನೆಗೆ ಹಿನ್ನೆಲೆಯಾಗಿದೆ. ಮೀರಾಭಾಯಿ ಭಜನ್, ಸೂರ್‌ದಾಸ್‌ರ ಅಭಂಗಗಳು ಕಬೀರ್‌ದಾಸರ ದೋಹಾಗಳು, ಇದೇ ಪರಂಪರೆಯಲ್ಲಿ ಬರುತ್ತವೆ. ಇತ್ತೀಚಿನ ದಿನಗಳಲ್ಲಿ ಭಜನೆಯನ್ನು ಜನಪದ ಪರಂಪರೆಗೆ ತಂದು ನಿಲ್ಲಿಸಿದ ಅನೇಕ ಹಿರಿಯ ಕವಿಗಳು ಇಲ್ಲಿ ಕಂಡುಬರುತ್ತಾರೆ. ಗದುಗಿನ ಗಾನಯೋಗಿ ಪುಟ್ಟರಾಜ ಗವಾಯಿಗಳು, ಶಿಶುನಾಳ ಶರೀಫ, ಕಡಕೋಳ ಮಡಿವಾಳಪ್ಪ ಇವರೆಲ್ಲ ಉತ್ತರ ಕರ್ನಾಟಕದಲ್ಲಿ ಭಜನೆ ಸಂಪ್ರದಾಯವನ್ನು ಹಿರಿದಾಗಿ ಬೆಳೆಸಿದರು.

ಯಮನೂರಿನ ಜನಪದರಲ್ಲಿ ಭಜನೆಯ ಕಲೆ ಮೊದಲಿನಿಂದಲೂ ಇದೆ. ಅಮವಾಸೆ, ಹಬ್ಬ ಹರಿದಿನಗಳಲ್ಲಿ, ಜಾತ್ರೆ, ಶ್ರಾವಣ, ಕಾರ್ತಿಕ ಮಾಸದಲ್ಲಿ, ಮಳೆಬಾರದ ಸಂದರ್ಭದಲ್ಲಿ ಯಾರಿಗಾದರೂ ಹಾವು ಕಚ್ಚಿದಾಗ, ಸತ್ತಾಗ ಹೀಗೆ ನಾನಾ ಸಂದರ್ಭಗಳಲ್ಲಿ ಭಜನೆ ಮಾಡುವುದು ಕಂಡುಬರುತ್ತದೆ. ಭಜನೆಯು ತಂಡದ ಹಿಮ್ಮೇಳದೊಂದಿಗೆ ಕೂಡಿರುತ್ತದೆ. ನಿಧಾನಗತಿಯಲ್ಲಿ ಆರಂಭವಾಗಿ ತ್ವರಿತಗತಿಯಲ್ಲಿ ಮುಕ್ತಾಯವಾಗುವುದು ಭಜನೆಯ ಸಾಮಾನ್ಯ ಲಕ್ಷಣವಾಗಿದೆ. ತಾಳ, ದಂಬಡಿ, ತಬಲ, ಹಾರ್ಮೋನಿಯಂ ಇವು ಭಜನೆಗೆ ಸಂಗೀತ ಸಾಮಗ್ರಿಗಳಾಗಿವೆ.

ಯಮನೂರಿನಲ್ಲಿ ಬಸವಣ್ಣನ ದೇವಸ್ಥಾನವಿದೆ. ಊರಿನ ದೇವಸ್ಥಾನದ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಯಮನೂರಿನ ಭಜನಾ ಸಂಘವು ಅಸ್ತಿತ್ವದಲ್ಲಿದ್ದು, ಈ ಸಂಘಕ್ಕೆ ಅಧ್ಯಕ್ಷ, ಕಾರ್ಯದರ್ಶಿ, ಸದಸ್ಯರುಗಳನ್ನು ನೇಮಿಸಲಾಗಿದೆ. ಗ್ರಾಮದ ಆಯಾ ಓಣಿಗಳಲ್ಲಿ ಭಜನೆಯ ಗುಂಪುಗಳು ಕಂಡುಬರುತ್ತವೆ.

ಯಮನೂರಿನ ಭಜನಾ ತಂಡಗಳ ಪ್ರಮುಖರೆಂದರೆ ಮಡಿವಾಳಯ್ಯ ಕಂಬಿ, ಬಸವನಗೌಡ ಪಾಟೀಲ, ಹನುಮಂತ ಹೆಗಡೆ, ಉಮಾಜಿರಾವ್ ಬರ್ಗೆ ಮುಂತಾದವರು.

ಯಮನೂರು ಗ್ರಾಮದ ಭಜನಾ ಮೇಳಗಳನ್ನು ಗಮನಿಸಿದಾಗ, ಭಜನೆಯ ಪದಗಳನ್ನು ಅನುಭವ ಪದಗಳು, ತತ್ವಪದಗಳು ಇತ್ತೀಚೆಗೆ ವಚನಗಳನ್ನು ಹಾಡುವ ರೂಢಿಯಿದೆ. ಭಜನೆ ಜನಪದರ ಸಾಮೂಹಿಕ ಬದುಕಿನಲ್ಲಿ ಮಹತ್ವದ ಪಾತ್ರವಹಿಸುವುದರೊಂದಿಗೆ ದೇವರ ಆರಾಧನೆ, ಜಾತ್ರೆ, ಉತ್ಸವಗಳಷ್ಟೇ ಅಲ್ಲದೇ ಪ್ರತಿವರ್ಷ ಶ್ರಾವಣಮಾಸದಲ್ಲಿ ಪ್ರತಿದಿವಸ ಬೆಳಿಗ್ಗೆ ಭಜನಾ ತಂಡದವರು ಭಜನೆ ಮಾಡುತ್ತಾ ಓಣಿ ಓಣಿಯಲ್ಲಿ ಬರುತ್ತಾರೆ. ಇದು ಶ್ರಾವಣಮಾಸ ಮುಗಿಯುವವರೆಗೂ ನಡೆಯುತ್ತದೆ.

**ಗ್ರಾಮದಲ್ಲಿ ಕಂಡುಬರುವ ಭಜನಾ ಸಂಘಗಳು**

೧. ಶ್ರೀಮಲ್ಲಿಕಾರ್ಜುನ ಭಜನಾ ಸಂಘ

೨. ಶ್ರೀ ಶರಣಬಸವೇಶ್ವರ ಭಜನಾ ಸಂಘ

೩. ಚಾಂಗದೇವರ ಭಜನಾ ಸಂಘ

**ಭಜನಾ ಕಲಾವಿದರ ತಂಡದ ವಿನ್ಯಾಸ ಈ ರೀತಿಯಾಗಿದೆ**

ಮುಖ್ಯ ಗಾಯಕ: ಈತನೇ ತಂಡದ ಮುಖ್ಯಸ್ಥ

ಸಹಗಾಯಕ: ಹಿನ್ನಲೆ ಹಾಡುವುದು ಈತನ ಕಾರ್ಯ.

ಹಾರ್ಮೋನಿಯಂ: ಭಜನೆಯಲ್ಲಿ ಪ್ರಮುಖ ವಾದ್ಯ.

ತಪ್ಪಡಿ: ಚರ್ಮದಿಂದ ಮಾಡಿದ ವಾದ್ಯ

ತಾಳ: ಭಜನೆಯಲ್ಲಿ ತಾಳಗಳು ಪ್ರಮುಖ

ಇವುಗಳು ಹಿತ್ತಾಳೆಯದಾಗಿರುತ್ತವೆ.

**ಕೋಲಾಟ**

ಕೋಲಾಟವು ಭಾರತದಾದ್ಯಂತ ಜನಪ್ರಿಯವಾಗಿರುವ ಒಂದು ಜನಪದ ಕಲೆಯಾಗಿದೆ. "ವೈವಿಧ್ಯತೆಯಲ್ಲಿ ಏಕತೆ" ಎಂಬ ಸಿದ್ಧಾಂತಕ್ಕೆ ಇದೊಂದು ಉದಾಹರಣೆಯಾಗಿದೆ. ಈಗಲೂ ಕೂಡ ಜಾತ್ರೆ ಉತ್ಸವಗಳಲ್ಲಿ ಕೋಲಾಟದ ಸಮೂಹ ಕುಣಿತ ಉತ್ಸವಕ್ಕೆ, ಜಾತ್ರೆಗೆ, ಮೆರುಗು ತರುವಂತಿರುತ್ತದೆ. ಮೊಹರಂ ಹಬ್ಬದಲ್ಲಿಯೂ ಸಹ ಕೋಲಾಟದ ದೃಶ್ಯ ಎಲ್ಲೆಡೆ ಕಂಡುಬರುತ್ತದೆ. ಕೋಲುಗಳಿಗೆ ಬಣ್ಣಹಚ್ಚಿ ಒಂದು ತುದಿಗೆ ರಿಬ್ಬನ್ ಅಥವಾ ಗೆಜ್ಜೆಕಟ್ಟಿ ಕೋಲುಗಳನ್ನು ಅಲಂಕರಿಸುತ್ತಾರೆ. ಕೋಲಾಡುವವರು ದೋತ್ರ, ಬನಿಯನ್, ನಡುವಿಗೆ ಶಲ್ಯಸುತ್ತಿಕೊಂಡು ತಲೆಗೆ ರಿಬ್ಬನ್ ಕಟ್ಟಿಕೊಂಡು ಕಾಲಿಗೆ ಗೆಜ್ಜೆಕಟ್ಟಿಕೊಂಡು ಕೋಲಾಟ ಆರಂಭಿಸುತ್ತಾರೆ. ಕಲಾವಿದರು ಕೋಲುಗಳಿಗೆ ನಮಸ್ಕಾರ ಮಾಡುವುದರೊಂದಿಗೆ ಕೋಲಾಟ ಆರಂಭವಾಗುತ್ತದೆ.

"ಮಾತಾಲಿ ನೆನದೇವು ಗಜಮುಖದೈಯ್ಯನ ಸೊಬಗಿನ ಸರಸ್ವತಿ ಬೆನಕನಾ" ಎಂಬ ಪ್ರಾರ್ಥನೆ ಪದ್ಯದೊಂದಿಗೆ ಆರಂಭವಾಗುತ್ತದೆ. ಹಲಗೆಯ ಗತ್ತಿಗೆ ತಕ್ಕಂತೆ ಏಕಪ್ರಕಾರವಾಗಿ ವಿವಿಧ ಭಂಗಿಗಳಲ್ಲಿ

ನೋಡುಗರ ಮನಸೂರೆಗೊಳ್ಳುವಂತೆ ಹೆಜ್ಜೆ ಹಾಕುತ್ತಾರೆ. ಇದು ಒಂದು ತಂಡದ ಪ್ರದರ್ಶನ ಕಲೆಯಾಗಿರುವುದರಿಂದ ೧೦-೧೨ ಜನರ ಗುಂಪು ಇರುತ್ತದೆ.

ಬೇರೆ ಬೇರೆ ಧಾರ್ಮಿಕ ಸಮಾರಂಭಗಳಲ್ಲಿ, ಶಾಲೆಗಳ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಈಗಲೂ ಕೋಲಾಟವನ್ನು ಆಡುತ್ತಾರೆ. ಶಿಕ್ಷಕರು ಇವರಿಗೆ ತರಬೇತುದಾರರಾಗಿ ಜನಪದ ಕಲೆಯ ಉಳಿವಿಗೆ ಕಾರಣೀಭೂತರಾಗಿದ್ದಾರೆ. ಕೋಲಾಟವನ್ನು ಇಂದಿಗೂ ಜೀವಂತವಾಗಿರಿಸಿದ ಪ್ರಮುಖರು ಮಲ್ಲಪ್ಪ ಬಾರಕೇರ, ರುದ್ರಪ್ಪ ಪವಾಡಿ, ಹನುಮಂತ ಅಗಡಿ.

**ಮೋಹರಂ ಕುಣಿತ (ಅಲಾಯಿ)**

ಹಿಂದೂ ಮುಸ್ಲಿಂರೆನ್ನದೆ ಎಲ್ಲರೂ ಸೇರಿ ಆಚರಿಸುವ ಭಾವೈಕ್ಯತೆಯನ್ನು ಬಿಂಬಿಸುವ ಹಬ್ಬ ಇದಾಗಿದೆ. ರಾತ್ರಿ ಅಲಾಯಿ ದೇವರು ಮೆರವಣಿಗೆ ಹೊರಟ ಸಂದರ್ಭದಲ್ಲಿ ಕತ್ತಲ್ ರಾತ್ರಿಯ ಮೆರವಣಿಗೆ ಸಂದರ್ಭದಲ್ಲಿ ಅಲಾಯಿ ಕುಣಿತ ಹಬ್ಬಕ್ಕೆ ವಿಶೇಷ ಮೆರುಗು ನೀಡುತ್ತದೆ. ಹಲಿಗೆ ಬಡಿಯುವವನ ತಾಳದ ಗತ್ತಿಗೆ ತಕ್ಕಂತೆ ಒಬ್ಬರಿಗೊಬ್ಬರು ಕೈ ಕೈ ಹಿಡಿದುಕೊಂಡು ಒಂದು ವೃತ್ತಾಕಾರವನ್ನು ನಿರ್ಮಿಸಿ ಆಕರ್ಷಿತವಾಗಿ ಕುಣಿಯುತ್ತ ತಿರುಗುವ ಒಂದು ಜನಪದ ಕಲೆಯಾಗಿದೆ. ಮತ್ತು ಈ ಒಂದು ಹಬ್ಬದಲ್ಲಿ ಜನರಿಗೆ ನಂಬಿಕೆ ಹೆಚ್ಚಿರುತ್ತದೆ. ಪ್ರತಿಯೊಬ್ಬರು ಈ ಕುಣಿತದಲ್ಲಿ ಭಾಗವಹಿಸುತ್ತಾರೆ-ಮಡಿವಾಳಯ್ಯ ಕಂಬಿ.

**ಡೊಳ್ಳು ಕುಣಿತ**

ಜಾತ್ರೆ, ಉತ್ಸವಗಳಲ್ಲಿ, ಗ್ರಾಮೀಣ ಜನಪದರ ಧಾರ್ಮಿಕ ಸಮಾರಂಭಗಳಲ್ಲಿ ಡೊಳ್ಳು ಕುಣಿತ ವಿಶೇಷವಾಗಿ ಕಂಡುಬರುತ್ತದೆ. ಕುರುಬರಲ್ಲಿ ಹೆಚ್ಚಾಗಿ ಡೊಳ್ಳಿನ ಕುಣಿತ ಕಂಡುಬರುತ್ತದೆ. ಮತ್ತು ವಿಶೇಷವಾಗಿ ಕುರುಬರು ಮದುವೆ ಸಮಾರಂಭದಲ್ಲಿಯೂ ಡೊಳ್ಳು ಬಾರಿಸುವುದು ಕಂಡುಬರುತ್ತದೆ. ಎಲ್ಲರೂ ಕಪ್ಪು ಬಣ್ಣದ ಕಂಬಳಿಯಿಂದ ಅಲಂಕಾರವಾಗಿರುವುದರ ಜೊತೆಗೆ ಹಣೆ ತುಂಬ ಬಂಡಾರ ಬಳಿದುಕೊಂಡಿರುತ್ತಾರೆ. ಡೊಳ್ಳು ಕುಣಿತದ ಕಲಾವಿದರು-ಚುನುಮರಿ ದೇವಪ್ಪ, ಶೇಕಪ್ಪ ಅಗಡಿ, ಹನುಮಂತ, ಪರಸಪ್ಪ, ಬಾಗಿಲಿನಪ್ಪನವರು.

**ಹಲಗೆ ಬಡಿಯುವ ಕಲೆ**

ಹಲಿಗೆ ಬಡಿಯುವ ಕಲೆ ಯನೂರಿನಲ್ಲಿದೆ. ಒಂದು ಒಂದೂವರೆ ಅಡಿಯ ವೃತ್ತಾಕಾರದ ತಟ್ಟೆಯಾಕಾರದ ಚರ್ಮವಾದ್ಯ ಇದಾಗಿದೆ. ಮೊಹರಂ ಕುಣಿತಕ್ಕೆ, ಡಂಗುರ ಸಾರಲು ಮತ್ತು ವಿಶೇಷವಾಗಿ ಸತ್ತಾಗ ಹಾಗೂ ಹೋಳಿಹಬ್ಬದಲ್ಲಿ ಕಾಮದಹನ ಮಾಡುವ ಸಂದರ್ಭದಲ್ಲಿ ವಿಶೇಷವಾಗಿ ಹಲಿಗೆ ಬಾರಿಸುತ್ತಾರೆ. ಮತ್ತು ಸರಾಯಿ ಕುಡಿದು ಬಾರಿಸಿದರೆ ವಾದ್ಯಕ್ಕೆ ವಿಶೇಷ ರಂಗು ಬರುತ್ತದೆ ಎನ್ನುತ್ತಾರೆ.

**ಪುರವಂತರ ಕುಣಿತ**

ಶೈವ ಪರಂಪರೆಯ ವಿಶಿಷ್ಟವಾದ ಧಾರ್ಮಿಕ ಕಲೆ "ಪುರವಂತಿಕೆ"ಯಾಗಿದೆ. ಈ ಕಲೆಯನ್ನು ಪ್ರದರ್ಶಿಸುವವರು ಪುರವಂತರೆಂದು ಕರೆಯುತ್ತಾರೆ. ಪುರವಂತರು ವೀರಭದ್ರನ ಅವತಾರವೆಂತಲೂ ನಂಬಿಕೆ ಇದೆ. ಅವರ ರೌದ್ರಾವತಾರದ ಕುಣಿತ ಆ ನಂಬಿಕೆಯನ್ನು ದೃಢಪಡಿಸುತ್ತದೆ. ಕಲಾವಿದರ ವೇಷ ಭೂಷಣ

ತುಂಬಾ ವರ್ಣಮಯ ಹಾಗೂ ಆಕರ್ಷಕ. ಪುರವಂತರು ಕಾವಿ ಬಣ್ಣದ ರೇಷ್ಮೆಯ ದೋತ್ರ ಹಾಗೂ ಕಾವಿ ಅಂಗಿ ಧರಿಸಿ ಸೊಂಟಕ್ಕೆ ನಡುಪಟ್ಟಿ ಕಟ್ಟಿರುತ್ತಾರೆ. ಮೈಮೇಲೆ 'ಗಲೀಫ'ದಂತಹ ವಸ್ತ್ರ ಹಾಕಿರುತ್ತಾರೆ. ತಲೆಗೆ ಕಾವಿಯ ರೇಷ್ಮೆಯ ರುಮಾಲು ಹಾಗೂ ಮುಂಗೈಗೆ ರುದ್ರಾಕ್ಷಿಯ ಕೈಕಟ್ಟು ಕೊರಳಿಗೆ ರುದ್ರಾಕ್ಷಿ ಮಾಲೆ, ಬಲಗೈಯಲ್ಲಿ ತ್ರಿಶೂಲ, ಎಡಗೈಗೆ ನಿಂಬೆಹಣ್ಣು ಸಿಕ್ಕಿಸಿದ ಶೂಲ ಹಿಡಿದಿರುತ್ತಾರೆ. ಯಮನೂರು ಗ್ರಾಮದಲ್ಲಿ ಬಸಪ್ಪ ಪತ್ತಾರ ಎಂಬುವರು ಪುರವಂತರ ಕಾರ್ಯ ನಿರ್ವಹಿಸುತ್ತಾರೆ.

**ನಾಟಕ**

'ಜಗವೇ ನಾಟಕ ರಂಗ' ಎನ್ನುವ ಹಾಗೆ ಜಗತ್ತನ್ನಲ್ಲಿರುವುದೆಲ್ಲಾ ನಾಟಕದಲ್ಲಿದೆ. ನಾಟಕವು ಸಾಹಿತ್ಯ ಅಭಿನಯಗಳ ಮುಖಾಂತರ ರಸಚೇತನ ಕಾರ್ಯಗಳನ್ನು ಮಾಡುತ್ತದೆ. ಇಂತಹ ರಸಚೇತನ ಕಾಯಕ ಮಾಡುವ ನಾಟಕ ಮನುಷ್ಯ ಜೀವನದಲ್ಲಿ ಹಾಸುಹೊಕ್ಕಾಗಿದೆ. ನಾಟಕ ಎಲ್ಲ ಕಲೆಗಳನ್ನು ಒಳಗೊಂಡಿದೆ.

ಯಮನೂರಿನ ಜನಪದರು ತಮ್ಮ ಕಷ್ಟ ಸುಖಗಳ ನಡುವೆ ನಾಟಕದ ಕಲೆಯನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಹಿಂದಿನಿಂದ ಇಂದಿನವರೆಗೂ ಪೌರಾಣಿಕ, ಸಾಮಾಜಿಕ ನಾಟಕಗಳ ನಾಡಿ. ಹೆಸರು ಮಾಡಿದ ನಾಟಕ ಕಲಾವಿದರು ಯಮನೂರಿನಲ್ಲಿ ಅನೇಕರಿದ್ದಾರೆ. ಹಬ್ಬ ಹರಿದಿನಗಳಲ್ಲಿ, ಸುಗ್ಗಿಯ ದಿನಗಳಲ್ಲಿ ನಾಟಕ ಪ್ರದರ್ಶನ ಮಾಡುತ್ತಾರೆ. ಪುರುಷ ಪಾತ್ರಗಳಿಗೆ ಸ್ಥಳೀಯರೆ ಅಭಿನಯಿಸಿದರೆ ಸ್ತ್ರೀ ಪಾತ್ರಗಳಿಗೆ ನಟನೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಸ್ತ್ರೀಯರನ್ನು ಬೇರೆ ಬೇರೆ ಕಡೆಯಿಂದ ಕರೆಸುತ್ತಾರೆ. ಯಮನೂರಿನ ಪ್ರಮುಖ ಕಲಾವಿದರೆಂದರೆ ಪಂಚಾಕ್ಷರಯ್ಯ ಹಿರೇಮಠ, ನಾಗಯ್ಯ ಕರ್ಣೆವರ, ಬಾಲಪ್ಪ ಸಂಜೀವಣ್ಣವರ, ಶಿವಪ್ಪ ಹೆಗಡೆ, ಈಶ್ವರಗೌಡ, ಸರನಾಡಗೌಡ ಮುಂತಾದವರು. "ಹೆಸರು ತಂದ ಹೆಣ್ಣು", "ಹಡೆದವ್ವ", "ತಂಗಿ ಕೊಟ್ಟ ಕಾಣಿಕೆ", "ಶಿವಭಕ್ತಬೇಡರ ಕಣ್ಣಪ್ಪ" ಮುಂತಾದ ನಾಟಕಗಳು ಇಲ್ಲಿ ಪ್ರದರ್ಶನ ಕಂಡಿವೆ. ನಾಟಕದಲ್ಲಿ ಅಭಿನಯಿಸುವವರು ನಾಟಕ ನೋಡಲು ತಮ್ಮ ಬಂಧು ಬಳಗದವರನ್ನು ಕರೆಸಿಕೊಳ್ಳುವ ಪದ್ಧತಿ ಇದೆ. ನಾಟಕ ನೋಡಲು ಬಂದ ಬಂಧು ಬಳಗವು ತಮಗೆ ಸಂಬಂಧಿಸಿದ ಕಲಾವಿದರಿಗೆ ೧೦೧, ೫೦೧, ರೂಪಾಯಿ ಬಂಗಾರ, ವಸ್ತ್ರ ಒಡವೆಗಳನ್ನು ಹೀಗೆ ಅವರವರ ಯೋಗ್ಯತಾನುಸಾರವಾಗಿ ಮುಯ್ಯಿ ಹಾಕುವುದುಂಟು. ನಾಟಕವು ಬೆಳಗಾಗುವವರೆಗೂ ಪ್ರದರ್ಶನಗೊಳ್ಳುತ್ತದೆ.

**೩.೧೩. ಧರ್ಮ ಮತ್ತು ದೇವಾಲಯಗಳು**

ಜನಪದರು ಜೀವನದಲ್ಲಿ ಪ್ರಾಚೀನಕಾಲದಿಂದಲೂ ರೂಢಿಸಿಕೊಂಡು ಬಂದಿರುವ ದೇವರ ಆರಾಧನೆ ಬದಲಾವಣೆಗೆ ಒಳಗಾಗುತ್ತಿದೆ. ವೈಜ್ಞಾನಿಕ ಸಂಶೋಧನೆ, ಕೈಗಾರಿಕೀಕರಣ, ನಗರೀಕರಣ ಇವುಗಳ ಫಲವಾಗಿ ಮಾನವನ ಆಲೋಚನೆಯ ರೀತಿಯು ಬದಲಾಗುತ್ತಿದೆ. ಹೊಸ ಬಗೆಯ ವಿಚಾರಗಳಿಗೆ, ಬದುಕಿಗೆ ಮನುಷ್ಯ ತನ್ನನ್ನು ಒಡ್ಡಿಕೊಂಡು ಜಗತ್ತಿನ ನಾನಾ ವಿಷಯಗಳ ಕಡೆಗೆ ಕಣ್ಣಾಡಿಸುತ್ತಿದ್ದಾನೆ. ಮಾನವ ಮಂಗಳ ಗ್ರಹಕ್ಕೂ ಹಾಗೂ ಚಂದ್ರಗ್ರಹಕ್ಕೂ ಹೋಗಿ ಬಂದಿದ್ದಾನೆ. ಇಂತಹ ಸ್ಥಿತಿಯಲ್ಲಿ ನಮ್ಮ ಜನಪದ ಸಂತತಿಯ ರೂಪವು ಬದಲಾವಣೆಯಾಗುತ್ತದೆ ಎನ್ನುತ್ತಾರೆ. ನಗರೀಕರಣಕ್ಕೊಳಗಾಗುತ್ತಿರುವ ಯಮನೂರಿನ ಜನಪದರು ದೇವರ ಆರಾಧನೆ ಇಲ್ಲದೆ ಯಾವ ಕಾರ್ಯವನ್ನು ಆರಂಬಿಸುವುದಿಲ್ಲ. ಇವರಿಗೆಲ್ಲ ದೇವರ ಬಗೆಗೆ ಇರುವ ಭಯ, ಭಕ್ತಿ ಶ್ರದ್ಧೆಯನ್ನು ಗಮನಿಸಿ ಕೇಳಿದಾಗ "ನಂಬಿದ ದೇವರು ಕೈ ಬಿಡುವುದಿಲ್ಲ" ಎನ್ನುವ ನಿಶ್ಚಲ

ಮನಸ್ಸು ಇಲ್ಲಿನ ಜನರದು. ಎಷ್ಟೇ ಮುಂದುವರೆದ ಸಮುದಾಯದವರೂ ದೇವರ ಪೂಜೆ, ಆರಾಧನೆ ಇಲ್ಲದೆ ನಮ್ಮ ದೈನಂದಿನ ಚಟುವಟಿಕೆಗಳಿಲ್ಲ ಎನ್ನುತ್ತಾರೆ. ಇದಕ್ಕೆ ಸಾಕ್ಷಿ ಎನ್ನುವಂತೆ ಇಲ್ಲಿನ ದೇವಾಲಯಗಳು.

ಈ ದೇವಾಲಯಕ್ಕೆ ಸಂಬಂಧಿಸಿದಂತೆ, ಊರಿನ ಎಲ್ಲಾ ಸಮುದಾಯಕ್ಕೂ ಒಂದೊಂದು ಜವಾಬ್ದಾರಿ ವಿತರಣೆಯಾಗುತ್ತಿದೆ. ಈ ಜವಾಬ್ದಾರಿಗಳಿಂದಲೇ ಗ್ರಾಮದ ಐಕ್ಯತೆ, ಸಾಮರಸ್ಯ ಸಾಧ್ಯವಾಗಿದೆ. ಆದ್ದರಿಂದ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ವ್ಯಕ್ತಿಯ ಮತ್ತು ಊರಿನ ಸಮೂಹದ ಮಾನಸಿಕ ನಿಯಂತ್ರಣಕ್ಕೆ ನಮ್ಮ ಈ ದೇವಾಲಯಗಳೇ ಕಾರಣ ಎಂದರೆ ತಪ್ಪಾಗಲಾರದು. ನನ್ನ ಕ್ಷೇತ್ರಕಾರ್ಯದಲ್ಲಿ ಇಲ್ಲಿನ ದೇವಾಲಯಗಳ ಬಗ್ಗೆ ಅನೇಕ ರೀತಿಯ ಕಥೆಗಳು, ಆಚರಣೆಗಳನ್ನು ಹಾಡುಗಳನ್ನು ಸಂಗ್ರಹಿಸಿದ್ದೇನೆ.

ಇಲ್ಲಿನ ಬಹುತೇಕ ದೇವಾಲಯಗಳು, ಒಂದೊಂದು ಸಮುದಾಯದ ಉಸ್ತುವಾರಿಯಲ್ಲಿ ಪೂಜೆಗೊಳ್ಳುತ್ತಿವೆ. ಈ ದೇವಾಲಯಗಳಿಗೆ ಸರ್ಕಾರದ ಅಥವಾ ಪ್ರಾಚ್ಯವಸ್ತು ಇಲಾಖೆಯಿಂದ ಯಾವುದೇ ತರಹದ ನೆರವು ಅಥವಾ ಪ್ರಾಚ್ಯವಸ್ತು ಇಲಾಖೆಯಿಂದ ಯಾವುದೇ ತರಹದ ನೆರವು ಇಲ್ಲದಿದ್ದರೂ ಸಹ ಸುಣ್ಣ ಬಣ್ಣ ಪೂಜೆ ಪುನಸ್ಕಾರ ಉತ್ಸವಾದಿಯಾಗಿ ಅನೇಕ ಧಾರ್ಮಿಕ ಚಟುವಟಿಕೆಗಳು ಮಾತ್ರ ವೈಭವದಿಂದ, ವಿಜೃಂಭಣೆಯಿಂದ ನಡೆಯುತ್ತವೆ. ಇತ್ತೀಚೆಗೆ ಹುಟ್ಟಿಕೊಂಡ ದೇವಾಲಯಗಳೇ ಇಲ್ಲಿ ಕಂಡುಬರುತ್ತವೆ. ಇಲ್ಲಿಯೂ ಸಹ ಧರ್ಮ, ಸಂಸ್ಕೃತಿ ಕ್ರಿಯಾಶೀಲವಾಗಿದೆ.

## ಗ್ರಾಮದ ದೇವಾಲಯಗಳು

### ವೀರಭದ್ರೇಶ್ವರ ದೇವಸ್ಥಾನ

ಈ ಗ್ರಾಮದ ದೊಡ್ಡ ಕೆರೆ ಪೂರ್ವದ ಮೇಲ್ದಂಡೆಯ ಮೇಲೆ ನಿರ್ಮಿತವಾಗಿದ್ದು, ಆಧುನಿಕ ರೀತಿಯ ಕಟ್ಟಡವಾಗಿದೆ. ಇದು ಸಂಪೂರ್ಣ ಇಟ್ಟಿಗೆ, ಗಾರೆಯಿಂದ ನಿರ್ಮಿತವಾಗಿದೆ. ಚೌಕಾಕಾರದ ನಾಲ್ಕು ಗೋಡೆಗಳಿಂದ ಕೂಡಿದ ಚಿಕ್ಕ ಕಟ್ಟಡವಾಗಿದ್ದು, ದೇವಾಲಯದ ಒಳಗಡೆ ವೀರಭದ್ರೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದ್ದು ದೇವಾಲಯ ಪೂರ್ವಾಭಿಮುಖವಾಗಿದೆ. ಅಲ್ಲದೆ ಈ ದೇವಾಲಯ ಇತ್ತೀಚಿನ ವರ್ಷಗಳಲ್ಲಿ ನಿರ್ಮಿತವಾಗಿದೆ.

ಸಾದಾ ಕೆತ್ತನೆ ಇರುವ ಈ ಗುಡಿಯ ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ವೀರಭದ್ರನ ಉಬ್ಬು ಶಿಲ್ಪವಿದೆ. ಇದು ತ್ರಿಭಂಗದಲ್ಲಿದ್ದು, ನಾಲ್ಕು ಕೈಗಳಿದ್ದು, ಕೈಗಳಲ್ಲಿ ಬಾಣ, ಬಿಲ್ಲು, ಖಡ್ಗ ಮತ್ತು ಬೇಟಕಗಳಿಗೆ ಕಿರೀಟ, ಮುಕುಟ, ಪುಷ್ಪಕುಂಡಲಗಳು, ಯಜ್ಞೋಪವೀತ, ಭುಜಹಾರ ಉದರಬಂಧ ತೋಳ್ಬಂಧಿ ಕೈ ಮತ್ತು ಕಾಲ್ಗಡಗಗಳು ಇಳಿಬಿದ್ದ ಕುಂಡಲ ಮಾಲೆ ಧರಿಸಲಾಗಿದೆ.ಈ ದೇವಾಸ್ಥಾನವು ನಿತ್ಯ ಪೂಜಿಸಲ್ಪಡುತ್ತದೆ. ಲಿಂಗಾಯತ ಸಮುದಾಯದವರು ಇಲ್ಲಿ ಧಾರ್ಮಿಕ ಚಟುವಟಿಕೆಗಳನ್ನು ನಡೆಸುತ್ತಾರೆ. ಶ್ರಾವಣ, ಕಾರ್ತೀಕ ಮಾಸಗಳಲ್ಲಿ ವೀರಭದ್ರೇಶ್ವರ ಗುಗ್ಗಳ ಮುಂತಾದ ಸಂದರ್ಭಗಳಲ್ಲಿ ವಿಜೃಂಭಣೆಯ ಪೂಜೆ ಪುನಸ್ಕಾರಗಳು ನಡೆಯುತ್ತವೆ.

### ಮಲ್ಲಿಕಾರ್ಜುನ ದೇವಸ್ಥಾನ

ದೊಡ್ಡ ಕೆರೆ ಪೂರ್ವ ಭಾಗದಲ್ಲಿರುವ ಈ ದೇವಾಲಯ ೩೫ ವರ್ಷಗಳ ಹಿಂದೆ ರಚಿತವಾಗಿದ್ದು,

ಗರ್ಭಗೃಹ ಆಧುನಿಕ ರೀತಿಯ ನಿರ್ಮಾಣವಾಗಿದ್ದು, ಗರ್ಭಗೃಹದ ಮುಂದೆ ಹಂಚು ಮತ್ತು ಕಟ್ಟಿಗೆಯಿಂದ ನಿರ್ಮಿಸಿದ ಕಟ್ಟಡ ಇದಾಗಿದೆ. ಗರ್ಭಗೃಹದಲ್ಲಿ ಈಶ್ವರ ಮತ್ತು ನಂದಿ ವಿಗ್ರಹಗಳನ್ನು ಸ್ಥಾಪಿಸಲಾಗಿದ್ದು ಈಶ್ವರನ ಎದುರಿಗೆ ನಂದಿ ವಿಗ್ರಹವಿದೆ. ಈ ದೇವಾಲಯವು ಸಹ ಪೂರ್ವಾಭಿಮುಖವಾಗಿದೆ.

ಕೆಲವರು ಈ ದೇವರನ್ನು ಮಲ್ಲಯ್ಯ ಎಂತಲೂ ಕರೆಯುತ್ತಾರೆ. ಕಾರ್ತಿಕ ಅಮವಾಸ್ಯೆಯಂದು ದೊಡ್ಡ ಕಾರ್ತಿಕವೆಂದು ದೀಪ ಹಚ್ಚುತ್ತಾರೆ. ಪ್ರತಿ ರವಿವಾರದಂದು ಭಕ್ತರು ಈ ದೇವರಿಗೆ ನಡೆದುಕೊಳ್ಳುತ್ತಾರೆ. ಇಲ್ಲಿನ ಅನೇಕ ದೇವಾಲಯಗಳು ಇಲ್ಲಿನ ಸಮುದಾಯಗಳ ಅಕ್ಕಪಕ್ಕದವರ ನೆರವಿನೊಂದಿಗೆ ವರ್ಷವಿಡೀ ಪೂಜಿಸಲ್ಪಡುತ್ತಿರುವುದು ಒಂದು ವಿಶೇಷ ಸಂಗತಿಯಾಗಿದೆ.

### ವಿಠ್ಠಲ ಮಂದಿರ

ಈ ದೇವಾಲಯ ಯಮನೂರ ಗ್ರಾಮದ ಪ್ರಮುಖ ದೇವಾಲಯಗಳಲ್ಲಿ ಒಂದಾಗಿದ್ದು, ಪೂರ್ವಾಭಿಮುಖವಾಗಿ ನಿರ್ಮಿತವಾಗಿರುವ ಇದರ ಗರ್ಭಗೃಹವನ್ನು ಕಲ್ಲಿನಿಂದ ಕಟ್ಟಲಾಗಿದೆ. ಗರ್ಭಗೃಹಕ್ಕೆ ಪ್ರದಕ್ಷಿಣಾ ಪತವಿದ್ದು, ಸುತ್ತಲೂ ಇಟ್ಟಿಗೆ ಗೋಡೆಯನ್ನು ಒಳಗೊಂಡಿದೆ. ದೇವಾಲಯವು ಕಟ್ಟಿಗೆಯಿಂದ ನಿರ್ಮಿಸಿದ ಮಡಿಗೆ ಮತ್ತು ಶಿಲೆಗಳನ್ನು ಬಳಸಿ ಮೇಲ್ಛಾವಣಿಯನ್ನು ನಿರ್ಮಿಸಲಾಗಿದೆ. ಶ್ರೀ ಬಸಪ್ಪ ಬ ಹೆಬ್ಬಳ್ಳಿ ಇವರು ಈ ಮಂದಿರದ ನಿತ್ಯ ಪೂಜಾ ವಿಧಿ ವಿಧಾನಗಳನ್ನು ನಿರ್ವಹಿಸುತ್ತಾರೆ. ಇದಲ್ಲದೆ ಪ್ರತಿ ವರ್ಷ ಶ್ರೀರಾಮ ನವಮಿ ಮತ್ತು ದಶಮಿಗಳನ್ನು ದಿಂಡಿ ಉತ್ಸವವನ್ನು ನಡೆಸಲಾಗುತ್ತದೆ. ಗ್ರಾಮದ ಎಲ್ಲ ಸಂತರು ಅನೇಕ ಊರುಗಳಿಂದ ಬಂದ ಭಕ್ತರು ಸ್ಥಳೀಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವರು.

### ಮಾರುತಿ ದೇವಾಲಯ

ಗೌಡರ ಓಣಿಯಲ್ಲಿರುವ ಈ ದೇವಾಲಯ ಹತ್ತು ವರ್ಷಗಳ ಹಿಂದೆ ಸಾರ್ವಜನಿಕರಿಂದ ನಿರ್ಮಿತವಾಗಿದೆ. ಮಾರುತಿ ಅಥವಾ ಹನುಮಂತ ದೇವರ ದೇವಾಲಯ ಹತ್ತು ವರ್ಷಗಳ ಹಿಂದಿನ ನಿರ್ಮಾಣವಷ್ಟೇ. ಇದು ಸಂಪೂರ್ಣ ಇಟ್ಟಿಗೆ ಮತ್ತು ಸಿಮೆಂಟ್ ಬಳಸಿ ನಿರ್ಮಿಸಿದ ದೇವಾಲಯವಾಗಿದ್ದು, ದಕ್ಷಿಣಾಭಿಮುಖವಾಗಿದೆ. ದೇವಾಲಯ ಎರಡು ಗರ್ಭಗೃಹಗಳನ್ನು ಒಳಗೊಂಡಿದ್ದು, ಬಲ ಭಾಗದ ಗರ್ಭಗೃಹದಲ್ಲಿ ಮಾರುತಿ ವಿಗ್ರಹ ಎಡ ಭಾಗದ ಗರ್ಭಗೃಹದಲ್ಲಿ ಬಸವಣ್ಣ ಧೇವರ (ನಂದಿ) ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಹಾಗೂ ಈ ದೇವಾಲಯ ಮುಂಚಾಚಿದ ಮೇಲ್ಛಾವಣಿಯನ್ನು ಒಳಗೊಂಡ ಗ್ರಾಮದ ಆಕರ್ಷಕ ಧಾರ್ಮಿಕ ಕೇಂದ್ರಗಳಲ್ಲಿ ಒಂದಾಗಿದೆ. ಶ್ರೀ ಮಲ್ಲಿಕಾರ್ಜುನ ಬ ಹೂಗಾರ ಈ ದೇವಸ್ಥಾನದ ಪೂಜಾರಿಕೆಯನ್ನು ನಿರ್ವಹಿಸುತ್ತಾರೆ.

ಈ ದೇವಾಲಯದಲ್ಲಿ ವಿಶೇಷ ಶಕ್ತಿ ಇದೆ ಎಂದು ಭಾವಿಸುವ ಭಕ್ತಾದಿಗಳು ಅನೇಕ ರೀತಿಯ ಹರಕೆಗಳನ್ನು ಹೊರುತ್ತಾರೆ. ಪ್ರತಿ ಶನಿವಾರ ಇಲ್ಲಿ ಎಲ್ಲ ವರ್ಗದ ಭಕ್ತಾದಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಾರೆ. ಇದಲ್ಲದೆ ಕಾರ್ತಿಕ, ಶ್ರಾವಣದಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಮುಂಜಿವಿ, ಜವುಳ ಮುಂತಾದ ಆಚರಣೆಗಳು ಇಲ್ಲಿ ನಡೆಯುತ್ತಿರುತ್ತವೆ.

### ದ್ಯಾಮವ್ವ ಮತ್ತು ದುರ್ಗವ್ವ ದೇವಸ್ಥಾನ

ಗೌಡರ ಓಣಿಯಲ್ಲಿ ಇರುವ ಶ್ರೀದೇವಿ ಮತ್ತು ದುರ್ಗಾ ದೇವಸ್ಥಾನ ಉತ್ತರಾಭಿಮುಖವಾಗಿದ್ದು, ಮಣ್ಣಿನ ಗೋಡೆ ಮತ್ತು ಕಟ್ಟಿಗೆಯ ಮಡಿಗೆಯಿಂದ ನಿರ್ಮಿತವಾಗಿದೆ. ದೇವಾಲಯವು ಗರ್ಭಗೃಹ ಮತ್ತು ಅದರ ಮುಂದುಗಡೆ ವಿಶಾಲವಾದ ಪ್ರಾಂಗಣವನ್ನು ಹೊಂದಿದೆ. ಗರ್ಭಗೃಹದ ದಕ್ಷಿಣ ಭಾಗದ ಗೋಡೆಗೆ ಅಂಟಿಕೊಂಡು ಚಿಕ್ಕದಾದ ಕಟ್ಟೆಯೊಂದನ್ನು ನಿರ್ಮಿಸಿ ಅದರ ಮೇಲೆ ಕಟ್ಟಿಗೆಯಲ್ಲಿ ಕೆತ್ತಿದ ಶ್ರೀದೇವಿ ಮತ್ತು ಶ್ರೀದುರ್ಗಾ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿದೆ.

ದಸರಾ ಹಬ್ಬದ ಸಂದರ್ಭದಲ್ಲಿ ನಡೆಯುವ ನವರಾತ್ರಿ ಉತ್ಸವ, ಜಾತ್ರೆಯಲ್ಲಿ ಸಹಸ್ರಾರು ಭಕ್ತರು ಇಲ್ಲಿ ಪಾಲ್ಗೊಳ್ಳುತ್ತಾರೆ. ಮಂಗಳವಾರ ಶುಕ್ರವಾರ ಭಕ್ತರು ಇಲ್ಲಿಗೆ ಹೆಚ್ಚಾಗಿ ಬರುತ್ತಾರೆ. ಈ ದೇವಸ್ಥಾನಕ್ಕೆ ಯಾವುದೇ ಜಾತಿ ಮತವೆಣಿಸದೆ ಎಲ್ಲ ಧರ್ಮದವರು ಈ ದೇವಸ್ಥಾನಕ್ಕೆ ಬಂದು ತಮ್ಮ ಇಷ್ಟಾರ್ಥವನ್ನು ಈಡೇರಿಸಿಕೊಳ್ಳುತ್ತಾರೆ.

### ಈಶ್ವರ ದೇವಸ್ಥಾನ

ಉತ್ತರಾಭಿಮುಖವಾಗಿರುವ ಈಶ್ವರ ದೇವಾಲಯವು ಮಣ್ಣಿನ ಗೋಡೆ ಹಾಗೂ ಕಟ್ಟಿಗೆಯ ಮಡಿಗೆಯಿಂದ ರಚಿತವಾಗಿದೆ. ಇದು ಗರ್ಭಗೃಹ ಮತ್ತು ವಿಶಾಲವಾದ ಪ್ರಾಂಗಣವನ್ನು ಒಳಗೊಂಡಿದೆ. ಗರ್ಭಗೃಹದ ಹೊರಭಾಗದ ಮೇಲ್ಛಾವಣಿ ನಿರ್ಮಿಸಲು ಕಟ್ಟಿಗೆ ಮತ್ತು ಹಂಚು ಬಳಸಲಾಗಿದೆ. ಶ್ರೀಮಲ್ಲಿಕಾರ್ಜುನ ಬ ಹೂಗಾರ ಈ ದೇವಸ್ಥಾನದ ಪೂಜಾರಿಕೆಯನ್ನು ನಿರ್ವಹಿಸುತ್ತಾರೆ.

ಎಲ್ಲ ಸಮುದಾಯದವರು ಈ ದೇವಾಲಯಕ್ಕೆ ಹೋಗುತ್ತಾರೆ. ಪ್ರತಿವರ್ಷ ಶಿವರಾತ್ರಿಯಂದು ಉಪವಾಸ ವ್ರತ ಮಾಡಿದವರು ಉಪವಾಸ ಬಿಡುವುದಕ್ಕಿಂತ ಪೂರ್ವದಲ್ಲಿ ಈ ದೇವರ ದರ್ಶನ ಮಾಡಿಕೊಂಡು ಬರುತ್ತಾರೆ. ಈಶ್ವರ ದೇವರು ಹಿಂದುಗಳಿಗೆ ಪ್ರಿಯವಾದ ದೇವರು. ಶ್ರಾವಣ ಮಾಸದಲ್ಲಿ ಗ್ರಾಮದ ಜನರು ಪ್ರತಿದಿನ ಮುಂಜಾನೆ ಈ ದೇವಸ್ಥಾನಕ್ಕೆ ಹೋಗುವ ಸಂಪ್ರದಾಯವಿದೆ.

### ವೀರಶೈವ ಗುರುಮಠ

ಗ್ರಾಮದ ವೀರಶೈವ ಧರ್ಮದವರಿಗೆ ಗುರುಮಠ ಇದೆ. ಆದರೆ ಈಗ ಈ ಮಠದ ಕಟ್ಟಡ ಸಂಪೂರ್ಣ ನೆಲಸಮವಾಗಿದ್ದು, ಗದ್ದುಗೆಯನ್ನು ಮಾತ್ರ ಒಳಗೊಂಡಿದೆ. ಇದು ಈ ಮೊದಲು ಪಂಚಾಕ್ಷರಯ್ಯ ಹಿರೇಮಠ ಇವರ ಹೆಸರಿನಲ್ಲಿದ್ದು ಇತ್ತೀಚೆಗೆ ಇದನ್ನು ಸಾರ್ವಜನಿಕರಿಗೆ ಬಿಟ್ಟುಕೊಡಲಾಗಿದೆ.

### ಮಲ್ಲಮ್ಮನ ದೇವಸ್ಥಾನ

ಗ್ರಾಮದ ದಕ್ಷಿಣ ಭಾಗದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹ ಮತ್ತು ವಿಸಾಲವಾದ ಪ್ರಾಂಗಣವನ್ನು ಒಳಗೊಂಡಿದೆ. ಸಂಪೂರ್ಣ ಇಟ್ಟಿಗೆ ಹಾಗೂ ಸಿಮೆಂಟ್ ಗೋಡೆಗಳಿಂದ ನಿರ್ಮಿತವಾಗಿದ್ದು, ದೇವಾಲಯದ ಮೇಲ್ಭಾಗ ಕಾಂಕ್ರೀಟ್‌ಮಯವಾಗಿದೆ. ಈ ದೇವಾಲಯವನ್ನು ಶ್ರೀ ಚನ್ನಪ್ಪ ಸರಾವರಿ ಎಂಬುವರು ನಿತ್ಯವು ಪೂಜಿಸುತ್ತಾರೆ.

### ಉಡಚಮ್ಮ ದೇವಸ್ಥಾನ

ಗ್ರಾಮದ ದಕ್ಷಿಣ ಭಾಗದಲ್ಲಿರುವ ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಗರ್ಭಗೃಹ ಮತ್ತು ವಿಶಾಲವಾದ ಪ್ರಾಂಗಣವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಶ್ರೀ ಉಡಚಮ್ಮಳ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ದೇವಾಲಯವು ಇಟ್ಟಿಗೆ ಗೋಡೆಗಳನ್ನು ಹಾಗೂ ಕಟ್ಟಿಗೆಯಿಂದ ನಿರ್ಮಿಸಿದ ಮಡಿಗೆ ವದಿಸಿದ ಕಟ್ಟಡವಾಗಿದೆ. ಈ ದೇವಾಲಯವು ನಿತ್ಯವು ಶ್ರೀ ಮಹಾದೇವಪ್ಪ ಪದ್ಮಣ್ಣವರ ಇವರಿಂದ ಪೂಜಿಸಲ್ಪಡುತ್ತಿದೆ.

ಈ ದೇವಸ್ಥಾನಕ್ಕೆ ಗ್ರಾಮದ ಎಲ್ಲ ಜನರು ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಪ್ರತಿ ನಿತ್ಯವು ಪೂಜಾ ವಿಧಿ ವಿಧಾನಗಳು ನಡೆಯುತ್ತವೆ. ವಿಶೇಷವಾಗಿ ಕಾರ್ತಿಕ, ಶ್ರಾವಣ ಮಾಸದಲ್ಲಿ ಅನೇಕ ಭಕ್ತಾದಿಗಳು ಈ ದೇವಸ್ಥಾನಕ್ಕೆ ನಡೆದುಕೊಳ್ಳುತ್ತಾರೆ. ಸಾಮಾನ್ಯವಾಗಿ ಸ್ತ್ರೀಯರು ಮಂಗಳವಾರ ಶುಕ್ರವಾರ ಹೆಚ್ಚಿನ ಸಂಖ್ಯೆಯಲ್ಲಿ ಹೋಗಿ ತಮ್ಮ ಇಷ್ಟಾರ್ಥಗಳನ್ನು ತೀರಿಸಿಕೊಳ್ಳುತ್ತಾರೆ.

### ಶರಣಬಸವೇಶ್ವರ ದೇವಸ್ಥಾನ

ಈ ದೇವಾಲಯವು ಗ್ರಾಮದ ಪ್ರಮುಖ ಧಾರ್ಮಿಕ ಕೇಂದ್ರಗಳಲ್ಲಿ ಒಂದಾಗಿದ್ದು, ದಕ್ಷಿಣಾಭಿಮುಖವಾಗಿದೆ. ಇದು ಇಟ್ಟಿಗೆ ನಿರ್ಮಿತ ಸುಸಜ್ಜಿತ ಕಟ್ಟಡವಾಗಿದ್ದು, ಗ್ರಾಮದಲ್ಲಿಯೇ ವಿಶಾಲ ವ್ಯಾಪ್ತಿಯನ್ನು ಹೊಂದಿದ ದೇವಾಲಯವಾಗಿದೆ. ಈ ದೇವಸ್ಥಾನದಲ್ಲಿ ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ಶರಣ ಬಸವೇಶ್ವರ ಪುರಾಣ ಪ್ರವಚನ ನಡೆಸಲಾಗುತ್ತಿದೆ. ಇದರಿಂದ ಈ ಗ್ರಾಮದಲ್ಲಿ ಒಂದು ತಿಂಗಳ ಪರ್ಯಂತ ವಿಶೇಷ ಧಾರ್ಮಿಕ ವಾತಾವರಣ ನಿರ್ಮಿಸುವಲ್ಲಿ ಇದು ಪ್ರಮುಖ ಪಾತ್ರವನ್ನು ವಹಿಸಿದೆ. ಶ್ರೀ ಶರಣಪ್ಪ ಬ ಹುಬ್ಬಳ್ಳಿ ಹಾಗೂ ಶ್ರೀ ಭರಮನಗೌಡ ಪಾಟೀಲ ಇವರು ಈ ದೇವಾಲಯದ ನಿತ್ಯ ಪೂಜಾ, ಪುನಸ್ಕಾರಗಳನ್ನು ನೆರವೇರಿಸಿಕೊಂಡು ಬರುತ್ತಿದ್ದಾರೆ.

### ಚಾಂಗದೇವರ ದೇವಸ್ಥಾನ

ಇದು ಗ್ರಾಮದ ಅತ್ಯಾಕರ್ಷಕ ದೇವಾಲಯವಾಗಿದೆ. ನಾಡಿನ ಬೇರೆ ಬೇರೆ ಕಡೆಯಿಂದ ತಂಡೋಪ ತಂಡವಾಗಿ ಇಲ್ಲಿಗೆ ಭಕ್ತರು ಬರುತ್ತಾರೆ. ಈ ಭಕ್ತ ಸಮೂಹವನ್ನು ನೋಡಲು ಎರಡು ಕಣ್ಣು ಸಾಲದು, ನಾಡಿನ ಉದ್ದಗಲಕ್ಕೂ ಎಲ್ಲರ ಗಮನ ಸೆಳೆವ ದೇವಾಲಯ ಇದಾಗಿದೆ. ಚಾಂಗದೇವರ ಗದ್ದುಗೆ ಪೂಜೆಯು ದಿನಾಲು ಎರಡು ಸಲ ಆಗುವುದು ಮುಂಜಾನೆ ದೇವರನ್ನು ವಿಭೂತಿಯಿಂದ ಬೆಳಗಿ, ನೀರಿನಿಂದ ತೊಳೆದು ಗಂಧ ಪುಷ್ಪ ಅಕ್ಷತೆಗಳನ್ನು ಅರ್ಪಿಸಿ ದೂಪ ದೀಪಗಳ ಆರತಿ ಮಾಡುವರು. ಹೂ ಹಣ್ಣು ಅರ್ಪಿಸುವರು. ಆಗ ನಗಾರೆ, ಗಂಟೆ ಜಾಗಟೆ ಬಾರಿಸುವರು.

ಚಾಂಗದೇವರ ಗುಡಿಯ ಹೆಬ್ಬಾಗಿಲಿನ ಎಡಭಾಗದಲ್ಲಿ ಬ್ರಹ್ಮದೇವ (ಭರಮಪ್ಪ)ನ ಶಿಲ್ಪ ಇದ್ದು, ಜನರು ಅದಕ್ಕೆ ಕಾಯಿ ಒಡೆಸಿ, ಹಣ್ಣು ಏರಿಸಿ, ಹಣ್ಣು ಹಾಗೂ ಪುಟಾಣಿ ಸಕ್ಕರೆ ಹಂಚುವರು. ಹೀಗೆ ಮಾಡುವುದರಿಂದ ಅಳುವ ಕೂಸುಗಳು ಸುಮ್ಮನಾಗುವವು. ಸಣ್ಣ ಮಕ್ಕಳ ರೋಗಗಳು ವಾಸಿಯಾಗುವುವು. ಇದು ಇಂದಿಗೂ ನಡೆದುಕೊಂಡು ಬರುತ್ತಿದೆ.

ಹೆಬ್ಬಾಗಿಲು ದಾಟಿ ಒಳಗೆ ಹೋದರೆ ಕ್ಷೇತ್ರೋಜಿಯವರ ಸಮಾಧಿ ಮತ್ತು ಅದರ ಮುಂದೆ ತುಳಸಿ ಕಟ್ಟೆಯ ಗದ್ದುಗೆ ಇದ್ದು ಅದು ನರಸೂಬಾಯಿಯವರ ವೃಂದಾವನವಿರುವುದು. ಈ ದೇವಾಲಯದ ಆವರಣದಲ್ಲಿ ಒಂದು ಬೇವಿನಗಿಡವಿದೆ. ಈ ಗಿಡದ ಕೆಳಗೆ ಭೂತಪೀಡೆಯಾದವರನ್ನು ತಂದರೆ ಪಿಶಾಚಿ ಬಾಧೆ ತೊಲಗುವುದು ಎಂಬ ನಂಬಿಕೆ ಇದೆ. ಅದರ ಮುಂದೆ ಗುಡಿಯ ಕಟ್ಟೆಯ ಪಟಾಂಗಣವಿದೆ. ಬಾಗಿಲನ್ನು ದಾಟಿ, ಒಳಸೇರಿದರೆ ಚಾಂಗದೇವರ ಗದ್ದುಗೆಯಿದೆ. ಅದರ ಮೇಲೆ ಅವರ ಆಯುಧಗಳು, ಕುದುರೆ, ಹೂ, ಮೂರ್ತಿಗಳು ಪಂಜಾಗಳು ಭಕ್ತರು ಕೊಟ್ಟ ಬೆಳ್ಳಿ ಬಂಗಾರದ ತೊಟ್ಟಿಲು, ಸರಿಗೆಗಳಿರುವುವು. ಈ ಗದ್ದುಗೆಯ ಮುಂದೆ ಒಂದು ನೆಲಮನೆಯಿದೆ. ಅದರ ಒಳಗಡೆ ಒಂದು ನರಸಿಂಹ ಮೂರ್ತಿಯು ಇದೆ. ಈ ಮೂರ್ತಿಗೆ ಕ್ಷತ್ರೋಜಿಯು ದಿನಾಲು ತಮ್ಮ ೫ ಹನಿ ರಕ್ತ ತರ್ಪಣ ಮಾಡುತ್ತಿದ್ದರು ಎಂದು ಅಲ್ಲಿಯ ಅರ್ಚಕರಿಂದ ತಿಳಿದುಬರುತ್ತದೆ. ಆದರೆ ಮುಂದೆ ತಮ್ಮ ವಂಶಜರು ರಕ್ತದಾನ ಮಾಡಲಿಕ್ಕಿಲ್ಲವೆಂದು ಸಂಗಮವರಿ ಕಲ್ಲಿನ ಬಾಗಿಲ ಮಾಡಿಸಿ ಮೂರ್ತಿ ಕಾಣದಂತೆ ಕೋಣೆಯ ಬಾಗಿಲು ಮುಚ್ಚಿರುವರು. ಪೂಜೆಯ ನೀರನ್ನು ತುಳಸಿಕಟ್ಟೆಯ ಮಣ್ಣಿನಲ್ಲಿ ಹಾಕಿ ಲೇಪಿಸಲು ಚರ್ಮರೋಗಗಳು ಅಳಿಯುವವು.

ಪ್ರತಿವರ್ಷ ಪಾಲ್ಗುಣ ಮಾಸ ಪಂಚಮಿಗೆ ದೊಡ್ಡ ಜಾತ್ರೆಯಾಗುವುದು. ಅಂದು ದೇವರ ಜಂಡಾ, ಹಸ್ತಗಳನ್ನು ಊರ ಪ್ರಮುಖರು ಅರ್ಚಕರು ವಾಧ್ಯದೊಂದಿಗೆ ಛತ್ರ ಚಾಮರಗಳಲ್ಲಿ ಮೆರವಣಿಗೆ ಮಾಡಿ, ಊರಿನಿಂದ ಅರ್ಧಮೈಲಿ ದೂರವಿರುವ ಬೆಣ್ಣೆ ಹಳ್ಳದಲ್ಲಿ ಸ್ನಾನ ಮಾಡಿಸಿ, ನೀರನ್ನು ತಂದು ಅದೇ ದಿನ ರಾತ್ರಿ ಆ ನೀರನ್ನು ಪಣತಿಯಲ್ಲಿ ಹಾಕಿ ದೀಪ ಹಚ್ಚಿದರೆ ದೀಪ ಉರಿಯುತ್ತದೆ ಎಂದು ಬರ್ಗೆಯವರಿಂದ ತಿಳಿದು ಬಂದಿದೆ. ಇದಕ್ಕೆ ಮುಸ್ಲಿಂರು ಉರುಸು (ಆರಾಧನೆ) ಎನ್ನುವರು.

ಈ ಜಾತ್ರೆಯ ವ್ಯವಸ್ಥೆಯನ್ನು ಧಾರವಾಡ ಜಿಲ್ಲೆಯ ಲೋಕಲ್ ಬೋರ್ಡಿನವರೂ, ನಂತರ ನವಲಗುಂದ ಮುನಸಿಪಾಲಿಟಿಯವರೂ ಮಾಡುತ್ತಿದ್ದು, ಈಗ ಸರಕಾರವೇ ಮಾಡುತ್ತಿದೆ. ಜಾತ್ರೆಗೆ ಭಾರತದ ಮೂಲೆ ಮೂಲೆಗಳಿಂದ ಎಲ್ಲ ರಾಜ್ಯಗಳಿಂದ ಹಿಂದು, ಮುಸ್ಲಿಂ, ಕ್ರೈಸ್ತ, ಬೌದ್ಧ ಭಕ್ತರು ಬರುವರು. ಅದು ಹೋಳಿ ಹುಣ್ಣಿಮೆಯಾಗಿ ೨ನೆಯ ದಿನದಂದು ೫ ದಿನ ದೊಡ್ಡ ಪ್ರಮಾಣದಲ್ಲಿ, ನಂತರ ಯುಗಾದಿವರೆಗೆ ಸಣ್ಣ ಜಾತ್ರೆ ನಡೆಯುವುದು. ತೊನ್ನು ರೋಗಿಗಳು, ಸಂತಾನಹೀನರು, ಕುಷ್ಟರೋಗಿಗಳು ಬಂದು ಸೇವೆ ಮಾಡಿ ಇಷ್ಟಾರ್ಥ ಪೂರೈಸಿಕೊಳ್ಳುತ್ತಾರೆ. ಹುರುಕು ಖಜ್ಜಿಯಾದವರು ಗುರುವಾರ ಮತ್ತು ರವಿವಾರ ಬೆಣ್ಣೆ ಹಳ್ಳದಲ್ಲಿ ಮಿಂದು ಸಕ್ಕರೆ ಓದಿಸಿಕೊಂಡು ಹೋದರೆ ರೋಗ ನಿವಾರಣೆಯಾಗುತ್ತದೆ. ಇದು ಸುಮಾರು ವರ್ಷಗಳಿಂದ ನಡೆದುಕೊಂಡು ಬರುತ್ತಿದೆ.

### ಯಮನೂರು ದೇವಾಲಯಗಳು ಸೂಚಿಸುವ ಸಾಂಸ್ಕೃತಿಕ ಸಂಬಂಧಗಳು

ಒಟ್ಟಾರೆಯಾಗಿ ಹೇಳುವುದಾದರೆ ಧರ್ಮ ನಮ್ಮ ಸಂಸ್ಕೃತಿಯ ಬೆನ್ನೆಲುಬು. ಜೀವನದ ಎಲ್ಲ ಆಚಾರ ವ್ಯವಹಾರಗಳನ್ನೂ ಅದು ವ್ಯಾಪಿಸಿದೆ. ಹಿಂದೆ ನೋಡಿದಂತೆ ಇಹಪರಗಳೆರಡರ ಸಮನ್ವಯ ಸಿದ್ಧಾಂತ ಜನಜೀವನವನ್ನು ಹಾಸುಹೊಕ್ಕಾಗಿ ಸೇರಿದೆ. ಪರಂಪರೆಯಿಂದ ಬಂದ ಧಾರ್ಮಿಕ ಶ್ರದ್ಧೆಯೇ ಹಳ್ಳಿಗಳ ಬಾಳಿನ ಆಧಾರ. ಅದೇ ಅವರ ಜೀವನದ ಊರುಗೋಲು. ಜೀವನದಲ್ಲಿ ಬರುವ ಕಷ್ಟ ಸುಖಗಳಿಗೂ,

ಒಳಿತು ಕೆಡಕುಗಳಿಗೂ, ಮೂಲಭೂತವಾದ ಕಾರಣಶಕ್ತಿಯೊಂದಿದೆ. ಅದರ ಇಚ್ಛೆಯಂತೆ ಇವೆಲ್ಲಾ ನಡೆಯುತ್ತವೆ. ಆ ಶಕ್ತಿಯ ವಿರುದ್ಧ ಹೋಗುವುದು ಸಾಧ್ಯವಿಲ್ಲ ಎಂಬುದು ಹಳ್ಳಿಗರ ಜೀವನದಲ್ಲಿ ರಕ್ತಗತವಾದ ತತ್ವ.

ದೇವರನ್ನು ಅನೇಕ ರೂಪಗಳಲ್ಲಿ ಕಂಡು ಸತತ ಅವನ ಸಾನಿಧ್ಯವನ್ನು ಕಲ್ಪಿಸಿಕೊಳ್ಳುವ ಶಕ್ತಿ ಹಳ್ಳಿಗರದ್ದು. ಇವರು ಅನೇಕ ದೇವರುಗಳನ್ನು ಪೂಜಿಸುವವರು. ಅನೇಕ ವೇಳೆ ಪ್ರಕೃತಿಯ ಒಂದೊಂದು ವಸ್ತುವೂ ಅವರಿಗೆ ದೈವಸಕ್ತಿಯ ಸಂಕೇತವಾಗಿರುತ್ತದೆ. ನಿತ್ಯ ಬಳಸುವ ಉದ್ಯೋಗದ ಉಪಕರಣಗಳಲ್ಲಿಯೂ ದೈವತ್ವವನ್ನು ಕಾಣುವ ಭಾವುಕ ಆಸಕ್ತಿ ಅವರದು. ಆಗಾಗ ಮನುಷ್ಯನನ್ನು ಪೀಡಿಸುವ ರೋಗರುಜಿನಾದಿಗಳಿಗೂ ದೈವತ್ವವನ್ನು ಆರೋಪಿಸಿ, ಅವುಗಳ ಪೂಜೆಯನ್ನು ಕೈಗೊಳ್ಳುವವರೆಗೂ ಅವರ ದೈವನಿಷ್ಠೆ ಬೆಳೆದಿದೆ.

ವಿವಿಧ ಸಂಸ್ಕೃತಿಯ ಜನ ಒಂದೇ ಗ್ರಾಮದಲ್ಲಿ ಬದುಕಬೇಕಾಗಿ ಬಂದಾಗ, ಪರಸ್ಪರ ಹೊಂದಾಣಿಕೆಯಿಂದ ಪರಸ್ಪರ ಗೌರವದಿಂದ ಬದುಕುವುದು ಅನಿವಾರ್ಯವಾಗಿ ಬಿಡುತ್ತದೆ. ಸಾಮಾನ್ಯವಾಗಿ ಗ್ರಾಮವೊಂದರಲ್ಲಿರುವ ದೇವಾಲಯಗಳು, ವಿವಿಧ ದರ್ಮ, ಸಮುದಾಯದ ಹಿನ್ನಲೆಯಲ್ಲಿ, ಆಚರಣೆಯಲ್ಲಿ ಭಿನ್ನತೆಗಳು ಇರುವುದು ಸಹಜ. ಆದರೆ ಒಂದು ನಿರ್ದಿಷ್ಟ ಸಮುದಾಯದವರು ಮಾಡುವ ಆಚರಣೆಯಲ್ಲಿ ಬೇರೆ ಸಮುದಾಯದವರು ಭಾಗವಹಿಸುವುದು ಸಾಂಸ್ಕೃತಿಕ ದೃಷ್ಟಿಯಿಂದ ವಿಶೇಷವೆಂದೇ ಹೇಳಬಹುದು. ಹಲವಾರು ಸಂದರ್ಭಗಳು ಸನ್ನಿವೇಶಗಳು ಯಮನೂರು ಗ್ರಾಮದಲ್ಲಿವೆ ಎಂಬುದು ಕಂಡುಬರುತ್ತದೆ.

ಸಾಮಾನ್ಯವಾಗಿ ಗ್ರಾಮದ ದೇವರೆಂದರೆ ಶ್ರೀಚಾಂಗದೇವರ ದೇವಾಲಯ. ಈ ದೆವಾಲಯದಲ್ಲಿ ನಡೆಯುವ ಜಾತ್ರಾ ಮಹೋತ್ಸವದಲ್ಲಿ ಯಾವುದೇ ಜಾತಿ, ಮತ, ಪಂಥದ ಭೇದವಿಲ್ಲದೇ ಎಲ್ಲ ಸಮುದಾಯದ ಜನ ಪಾಲ್ಗೊಳ್ಳುತ್ತಾರೆ. ಆ ಕಾರ್ಯಕ್ರಮಗಳೆಂದರೆ.

೧. ಶ್ರೀ ಚಾಂಗದೇವರ ಉರುಸಿನ (ಆರಾಧನೆ) ಸಂದರ್ಭದಲ್ಲಿ ಎಲ್ಲ ಸಮುದಾಯಗಳ ಜನರು ಪಾಲ್ಗೊಳ್ಳುತ್ತಾರೆ.

೨. ಶ್ರೀ ಶರಣಬಸವೇಶ್ವರ ಪುರಾಣ ಪ್ರವಚನ ಕಾರ್ಯಕ್ರಮದಲ್ಲಿ ಎಲ್ಲ ಸಮುದಾಯದವರು ಪಾಲ್ಗೊಳ್ಳುತ್ತಾರೆ. ಶ್ರಾವಣದ ಕಡೆಯ ಸೋಮವಾರ ಅನ್ನ ಸಂತರ್ಪಣಾ ಕಾರ್ಯಕ್ರಮ ನಡೆಯುತ್ತದೆ. ಇದರಲ್ಲಿ ಎಲ್ಲ ಸಮುದಾಯದವರಿಗೂ ಅವಕಾಶವಿದೆ.

೩. ಇನ್ನು ಮೊಹರಂ ಸಂದರ್ಭದಲ್ಲಿ ಇಲ್ಲಿರುವ ಮಸೂತಿಯಲ್ಲಿ ಅಲೆದೇವರುಗಳ ಮೆರವಣಿಗೆ ಕಾರ್ಯಕ್ರಮ ನಡೆಯುತ್ತದೆ. ಈ ಮೆರವಣಿಗೆ ಕಾರ್ಯಕ್ರಮದಲ್ಲಿ ಹಿಂದೂಗಳು, ಮುಸ್ಲಿಂರು, ಊರಿನ ಪ್ರಮುಖರು ಪಾಲ್ಗೊಳ್ಳುತ್ತಾರೆ. ಅಲ್ಲದೆ ಮೊಹರಂ ಸಂದರ್ಭದಲ್ಲಿ ವಿವಿಧ ಸಮುದಾಯದವರು ಓಣಿಯಿಂದ ಒಂದೊಂದು ಕೋಲಾಟ ಮೇಳ, ಹೆಜ್ಜೆ ಮೇಳ, ಭಜನಾ ಸಂಘುಗಳು, ಜಾಂಜ್ ಮೇಳ ಹಾಡುವುದು ಅವರಿವರೆನ್ನದೇ ಎಲ್ಲ ಸಮುದಾಯದವರು ಭಾಗವಹಿಸುತ್ತಾರೆ.

೪. ಅದರಂತೆ ರಂಜಾನ್ ಕೊನೆಯ ದಿವಸ ಮುಸಲ್ಮಾನ್ ಬಾಂಧವರೆಲ್ಲಾ, ಹಿಂದೂಗಳನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಊಟ ಮಾಡಿಸುತ್ತಾರೆ. ಮನೆ ಮನೆಗೆ ಸುರುಕುರುಮ ಕೊಟ್ಟು ಕಳಿಸುವ ಸಂಪ್ರದಾಯವಿದೆ.

ಹೀಗೆ ಅನೇಕತೆಯಲ್ಲಿ ಏಕತೆಯನ್ನು ಬಿಂಬಿಸುವುದು ಭಾರತೀಯ ಸಂಸ್ಕೃತಿಯಾಗಿದೆ. ಅದು ನಮ್ಮ ಗ್ರಾಮದಲ್ಲಿಯೂ ಕಂಡುಬರುತ್ತದೆ. ಗ್ರಾಮದ ಜನತೆ ಪರಸ್ಪರ ಸಾಮರಸ್ಯದಿಂದ ಬದುಕುವುದು ತಿಳಿದು ಬರುತ್ತದೆ.

**೩.೧೪. ಆರ್ಥಿಕ ಸ್ಥಿತಿಗತಿ**

ಆರ್ಥಿಕ ವ್ಯವಸ್ಥೆಯ ಅಧ್ಯಯನ ಮಾಡದಿದ್ದರೆ ಗ್ರಾಮದ ಅಧ್ಯಯನ ಪೂರ್ಣವಾಗುವುದಿಲ್ಲ. ಏಕೆಂದರೆ ಆ ಗ್ರಾಮದ ಸಂಪೂರ್ಣ ಸರ್ವತೋಮುಖ ಬೆಳವಣಿಗೆ ಮತ್ತು ಅಭಿವೃದ್ಧಿಯು ಅಲ್ಲಿನ ಆರ್ಥಿಕ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ.

ಭಾರತ ದೇಶದಲ್ಲಿರುವ ಪ್ರತಿಯೊಂದು ಗ್ರಾಮವು ಬಡತನ, ದಾರಿದ್ರ್ಯ, ನಿರುದ್ಯೋಗ, ಅನಕ್ಷರತೆಯಿಂದ ಬಳಲುತ್ತಿದ್ದರೂ ಜನಪದ ಕ್ಷೇತ್ರ ಈ ಸಂವೇದನೆಗಳಿಂದಲೇ ಅರಳುತ್ತಿರುವುದನ್ನು ಕಾಣಬಹುದಾಗಿದೆ. ಬದುಕಿಗೆ ಅಥವಾ ಜೀವನ ನಡೆಸಲಿಕ್ಕೆ ಅಗತ್ಯವಾದ ಕಸುಬು ಉಪಕಸುಬುಗಳೇ ಗ್ರಾಮೀಣ ಜನರ ಆದಾಯದ ಮೂಲಗಳಾಗಿರುತ್ತವೆ. ಅರ್ಥವ್ಯವಸ್ಥೆಯ ಅಧ್ಯಯನದಿಂದ ಒಂದು ಗ್ರಾಮವು ನಾಗರೀಕತೆಯು ಯಾವ ಮಟ್ಟದಲ್ಲಿದೆ ಎಂಬುದರ ಅರಿವು ಆಗಿರುತ್ತದೆ. ಯಮನೂರು ಗ್ರಾಮದ ಅರ್ಥವ್ಯವಸ್ಥೆಯಲ್ಲಿ ಹಲವಾರು ಆದಾಯದ ಮೂಲಗಳನ್ನು ಗುರುತಿಸಿ ಆ ಹಿನ್ನಲೆಯಲ್ಲಿ ಇಲ್ಲಿನ ಅಧ್ಯಯನವನ್ನು ಮಾಡಲಾಗಿದೆ.

**ಕೃಷಿ**

ಗ್ರಾಮ ಸಮುದಾಯದ ಪ್ರಧಾನ ಮಾನದಂಡ ಅದರ ಉದ್ಯೋಗ ಎಂದು ಸಮಾಜಶಾಸ್ತ್ರಜ್ಞರಾದ ಸೊರೊಕೆನ್ ಮತ್ತು ಜಮ್ಮರ್‌ಮನ್ ಎಂಬುವರು ಹೇಳಿದ್ದಾರೆ. ಸಾಮಾಜಿಕ ವಿಕಾಸದ ಒಂದು ಮಹತ್ವದ ಹಂತವೇ ಗ್ರಾಮ. ವಿವಿಧ ಕಸುಬು ಮಾಡುವ ಕುಟುಂಬಗಳು, ವಿವಿಧ ಜಾತಿಗಳವರು, ವೃತ್ತಿಗಳವರು ನೆಲೆಸಿರುವ ತಾಣವೇ ಗ್ರಾಮ. ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಸಘುದಾಯಗಳು ಕೃಷಿಯನ್ನೇ ಅವಲಂಬಿಸಿರುತ್ತವೆ. ಗ್ರಾಮಗಳಲ್ಲಿ ಜೀವನ ಮಾಡುವ ಆ ಜನರಿಗೆ ಕೃಷಿಯೇ ಜೀವನಾಧಾರವಾಗಿರುತ್ತದೆ. ಕೃಷಿ ಕೇವಲ ಉದ್ಯೋಗವಲ್ಲ, ಬದುಕುವ ಕಲೆಯನ್ನು ಕಂಡುಕೊಳ್ಳುವ ಒಂದು ಮಾರ್ಗ.

ಯಮನೂರು ಗ್ರಾಮದ ಜನರು ಮಳೆಗಾಲದಲ್ಲಿ ಹೆಸರು, ಶೇಂಗಾ, ಬೆಳೆಯುವುದರೊಂದಿಗೆ ಸೂರ್ಯಕಾಂತಿ, ಹುರುಳಿ, ಹವೀಜ, ಕಡಲೆ, ಮೆಣಸಿನಕಾಯಿ, ಗೋದಿ, ಜೋಳ ಮುಂತಾದ ಕಾಳುಕಡಿಗಳನ್ನು ಬೆಳೆಯುತ್ತಾರೆ. ಒಳ್ಳೆಯ ರೀತಿಯಲ್ಲಿ ಮಳೆಯಾದರೆ ಕೆಲವೊಂದು ಕಾಯಿಪಲ್ಯೆ ಬೆಳೆಯುತ್ತಾರೆ. ನಿತ್ಯ ಉಪಯೋಗಿಸಬಹುದಾದ ಬದನೆಕಾಯಿ, ಚವಳಿಕಾಯಿ, ಸವತೆಕಾಯಿ, ಟೊಮೆಟೋ, ಬೆಂಡೆಕಾಯಿ ಮುಂತಾದ ತರಕಾರಿ ಬೆಳೆಯುತ್ತಾರೆ.

ಚಳಿಗಾಲ, ಮಳೆಗಾಲ, ಬೇಸಿಗೆಕಾಲಗಳೆನ್ನದೆ, ಮುದುಕರು, ಮಕ್ಕಳು, ವಯಸ್ಸಿನವರೆಲ್ಲರೂ ಕಾಲಗಳನ್ನು ಲೆಕ್ಕಿಸದೆ ಹಗಲಿರುಳು ದುಡಿದು ಇಷ್ಟೆಲ್ಲಾ ಬೆಳೆಗಳನ್ನು ಬೆಳೆಯುತ್ತಾರೆ. ಆದರೆ ರೈತರು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ ಸಿಗದೇ ಇರುವುದು, ಮಾರುಕಟ್ಟೆಯಲ್ಲಿನ ಬೆಲೆಯ ಅನಿಶ್ಚಿತತೆ, ದಲ್ಲಾಳಿಗಳ ಹಾವಳಿಯಿಂದಾಗಿ ರೈತನ ಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಮತ್ತು ರೈತರ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುತ್ತಿಲ್ಲ. 'ಬೆಟ್ಟ ಅಗೆದು ಇಲಿ ಹಿಡಿದರು' ಎಂಬ ಗಾದೆಯಂತೆ ಊಟದ ಹೊತ್ತಿಗೆ ಊಟ, ಉಪಹಾರದ ಹೊತ್ತಿಗೆ ಉಪಹಾರ, ನಿದ್ದೆಯ ಹೊತ್ತಿಗೆ ನಿದ್ದೆ ಇಲ್ಲದೇ ದುಡಿದರೂ ರೈತರಿಗೆ ನಾನಾ ರೀತಿಯ ಅದಾಯಕ್ಕಿಂತ ನಷ್ಟವೇ ಹೆಚ್ಚಾದಾಗ ವ್ಯವಸಾಯವನ್ನೇ ಮಾಡುವುದು ಬೇಡ ಎನ್ನುವಷ್ಟು ಬೇಸತ್ತಿದ್ದಾರೆ. ಇತ್ತೀಚಿಗೆ ಮೂರು ವರ್ಷಗಳಲ್ಲಿ ಸಂಪೂರ್ಣ ಬರಗಾಲ ಆವರಿಸಿದೆ.

ಜಮೀನು ಹೊಂದಿದ ರೈತರು ದಿನೇ ದಿನೇ ಏರುತ್ತಿರುವ ರಸಗೊಬ್ಬರಗಳ ಬೆಲೆ ಹಾಗೂ ಆಳುಗಳಿಗೆ ನೀಡಬೇಕಾದ ಹೆಚ್ಚಿನ ಕೂಲಿ, ಅದರ ಜೊತೆಗೆ ದುಡಿಯುವ ಕೂಲಿ ಆಳುಗಳು ಶೋಕಿವಾಲಾಗಳಾಗಿ ಹೊತ್ತು ಕಳೆಯುವುದು, ಇದೆಲ್ಲದರಿಂದ ಬೇಸತ್ತ ರೈತರು ವ್ಯವಸಾಯ ಮಾಡುವುದನ್ನು ಕಡಿಮೆ ಮಾಡುತ್ತಿದ್ದಾರೆ.

ಜಮೀನುಗಳಿಲ್ಲದ ಮಂದಿ ಉಳ್ಳವರ ಜಮೀನುಗಳನ್ನು ಲಾವಣಿ ಮಾಡಿಕೊಂಡು ದುಡಿಯುತ್ತಿದ್ದವರೂ, ವ್ಯವಸಾಯದಿಂದ ಏನೇನೂ ಲಾಭ ದೊರೆಯದ್ದರಿಂದ ವ್ಯವಸಾಯವನ್ನು ಮರೆತು, ಕೂಲಿ ಹಾಗೂ ತಮಗೆ ಅನುಕೂಲವಾದ ಉದ್ಯೋಗಗಳನ್ನು ಮಾಡುತ್ತಿದ್ದಾರೆ. ಅಲ್ಪಸ್ವಲ್ಪ ವಿದ್ಯಾವಂತ ಜನರು ಮೈ ಕೈ ಕೆಸರು ಮಾಡಿಕೊಳ್ಳದೇ ಹಣ ಸಂಪಾದನೆ ಮಾಡಬಹುದಾದಂತ ವಿವಿಧ ವೃತ್ತಿ, ಬೇರೆ ಬೇರೆ ಉದ್ಯೋಗಗಳನ್ನು ಅರಸಿ ಗ್ರಾಮದ ಬಹುತೇಕ ಮಂದಿ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿದ್ದಾರೆ. ವಿದ್ಯಾವಂತರೆನಿಸಿಕೊಂಡ ಜನರು ವ್ಯವಸಾಯ ಮಾಡಿದರೆ ತಮಗೆ ಅಸಹ್ಯವಾಗುವುದೆಂದು ತಿಳಿದು, ವ್ಯವಸಾಯ ಮಾಡದೆ, ಅತ್ತ ವಿದ್ಯೆಗೆ ತಕ್ಕ ಉದ್ಯೋಗ ದೊರೆಯದೇ ನಿರುದ್ಯೋಗಿಗಳಾಗಿ ಊರಲ್ಲಿ ಕೆಲಸವಿಲ್ಲದೇ ಕಟ್ಟೆಗೆ ಕುಳಿತುಕೊಂಡು ಕಾಲಕಳೆಯುವಂತಾಗಿದೆ. ಈ ಎಲ್ಲ ಕಾರಣಗಳಿಂದ "ದುಡಿಮೆಯೇ ದುಡ್ಡಿನ ತಾಯಿ" ಎಂಬ ಗಾದೆ "ಕುಳಿತು ಉಂಡರೆ ಕುಡಿಕೆ ಹೊನ್ನು ಸಾಲದು" ಎನ್ನುವಂತ ಗಾದೆ ಮಾತುಗಳು ಅರ್ಥಕಳೆದುಕೊಳ್ಳುತ್ತವೆ ಏನೋ ಅನಿಸುತ್ತದೆ. ಆದರೆ ಈ ಗಾದೆ ಮಾತುಗಳನ್ನು ಅರ್ಥಮಾಡಿಕೊಂಡರೆ ಜೀವನ ಬಂಡಿ ಸುಗಮವಾಗಿ ಸಾಗುತ್ತದೆ.

### ಗ್ರಾಮದ ಅರ್ಥವ್ಯವಸ್ಥೆಯಲ್ಲಿ ಕೃಷಿಯ ಪಾತ್ರ

ಕೃಷಿಯೇ ಗ್ರಾಮದ ಜೀವಾಳ. ರೈತನೇ ದೇಶದ ಬೆನ್ನೆಲುಬು, ದೇಶಕ್ಕೆ ಕೃಷಿಯಿಂದ ಸಾಕಷ್ಟು ನೆಮ್ಮದಿಯಿದೆ. ಏಕೆಂದರೆ ಕೃಷಿಯಿಂದ ಸಂಪದ್ಭರಿತವಾದ ದೇಶದಲ್ಲಿ ಜನರು ಕೂಡಾ ನೆಮ್ಮದಿಯಿಂದ ನಿಟ್ಟುಸಿರು ಬಿಡುವಂತಾಗುತ್ತದೆ. ಏಕೆಂದರೆ ಕೃಷಿಯು ಜನರಿಗೆ ಬೇಕಾಗುವ ಆಹಾರ ಮತ್ತು ಪ್ರಾಣಿಗಳಿಗೆ ಬೇಕಾಗುವ ಹೊಟ್ಟು, ಮೇವು ಮುಂತಾದವನ್ನು ಒದಗಿಸುತ್ತದೆ. ಆಹಾರ ಧಾನ್ಯಗಳಾದ ಜೋಳ, ಗೋದಿ, ಕಡಲೆ, ಹೆಸರು, ಮೆಣಸಿನಕಾಯಿ ಬೆಳೆಯುವುದರ ಜೊತೆಗೆ ಎಣ್ಣೆ ಕಾಳುಗಳಾದ ಶೇಂಗಾ, ಕುಸುಬೆ, ಸೂರ್ಯಕಾಂತಿ ಮುಂತಾದವುಗಳನ್ನು ಬೆಳೆಯಬಹುದು. ಹೀಗೆ ಬೆಳೆದಿರುವ ಕಾಳುಗಳನ್ನು ಮನೆಗೆ

ಸಾಕಾಗುವಷ್ಟನ್ನು ಬಿಟ್ಟು ಉಳಿದವನ್ನು ಮಾರಿಬಿಡುತ್ತಾರೆ. ಇದರಿಂದ ಮನೆಯನ್ನು ನಡೆಸಲು ಅನುಕೂಲವಾಗಿ ಆರ್ಥಿಕ ಹೊರೆ ಕಡಿಮೆಯಾಗುತ್ತದೆ.

ಕೃಷಿಯಿಂದ ಕೇವಲ ಆಹಾರ ಸಾಮಗ್ರಿಗಳು ಅಷ್ಟೇ ಅಲ್ಲದೆ, ಸಣ್ಣ ಕೈಗಾರಿಕೆಗಳಿಗೆ ಕಚ್ಚಾ ಸಾಮಾಗ್ರಿಗಳನ್ನು ಪಡೆಯಬಹುದು. ಉದಾಹರಣೆಗೆ ಹತ್ತಿ, ಎಣ್ಣೆ ಕಾಳುಗಳು. ಗ್ರಾಮಕ್ಕೆ ಸಾಕಷ್ಟು ವರಮಾನ ಬರುವುದು ಕೃಷಿಯಿಂದ. ಗ್ರಾಮದ ಒಂದು ಮೂರಾಂಶದಷ್ಟು ವರಮಾನವನ್ನು ಕೃಷಿಯಿಂದಲೆ ಪಡೆಯಬಹುದು.

ಸರ್ಕಾರಿ ನೌಕರಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯನ್ನು ಹೊಂದಿದ್ದ ಇಂದಿನ ಯುವ ಪೀಳಿಗೆ ಸರ್ಕಾರಿ ನೌಕರಿ ಸಿಗದೇ ಊರಲ್ಲಿ ಪುಂಡ ಪೋಕರಿಗಳಾಗಿ ಊರಲ್ಲಿ ನಿರುದ್ಯೋಗಿಯಾಗಿ ಅಡ್ಡಾಡದೆ, ವರ್ಷವಿಡಿ ವ್ಯವಸಾಯ ಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು "ಕೋಟಿ ವಿದ್ಯೆಗಿಂತಲೂ ಮೇಟಿ ವಿದ್ಯೆಯೇ ಮೇಲು" ಎಂಬ ಗಾದೆಯನ್ನು ಅವರು ಸಾರ್ಥಕಪಡಿಸುತ್ತಾರೆ. ಹೀಗಾಗಿ ಕೃಷಿಯು ಗ್ರಾಮದ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ.

ಕೃಷಿಯು ಗ್ರಾಮದ ಮುಖ್ಯ ಉದ್ಯೋಗವಾಗಿರುವುದರಿಂದ ರಾಜ್ಯ, ದೇಶದ ಬೊಕ್ಕಸಕ್ಕೆ ತೆರಿಗೆ, ಸುಂಕ ಕಂದಾಯ, ರಫ್ತು ಆಮದು ಮುಂತಾದವುಗಳಿಂದ ರಾಜ್ಯ ಹಾಗೂ ದೇಶಕ್ಕೆ ಆದಾಯ ಬರುತ್ತವೆ. ಹೀಗೆ ಕೃಷಿಯೇ ಗ್ರಾಮದ ಪ್ರಮುಖ ಆರ್ಥಿಕ ಸುಧಾರಣೆಯಲ್ಲಿ ದಾಪುಗಾಲಿಡುತ್ತದೆ.

ನಾಡಿನ ಜನಜೀವನದ ಮುಖ್ಯ ವೃತ್ತಿಗಳಲ್ಲಿ ಕೃಷಿಯೂ ಒಂದಾಗಿದೆ. ಕೃಷಿಯು ಸಂಸ್ಕೃತಿಯ ಆರ್ಥಿಕ ಚಟುವಟಿಕೆಗಳಲ್ಲಿ ಮಾನವಶಾಸ್ತ್ರಜ್ಞರು ಹೇಳುವಂತೆ ಪಶುಪಾಲನೆಯ ಹಂತ ಕಳೆದ ಮೇಲೆ ಅಥವಾ ಅದರೊಟ್ಟಿಗೆ ಬೆಳೆದುಬಂದದ್ದಾಗಿದೆ. ಆಹಾರ ಉತ್ಪಾದನೆಯೇ ಮುಖ್ಯ ಗುರುಯಾಗಿದ್ದ ಈ ಚಟುವಟಿಕೆಯ ಸ್ವರೂಪ ಸಹಸ್ರಾರು ವರ್ಷಗಳಿಂದ ತೀವ್ರ ರೂಪದ ಬದಲಾವಣೆಗೆ ಒಳಗಾಗದೇ ಉಳಿದಿದೆ. ಆದರೆ ಆಧುನಿಕ ತಂತ್ರಜ್ಞಾನದ ಪ್ರವೇಶದಿಂದಾಗಿ ಕೃಷಿ ತನ್ನ ಸಾಂಪ್ರದಾಯಿಕ ಲಕ್ಷಣಗಳನ್ನು ಬಿಟ್ಟುಕೊಡುವುದು ಅನಿವಾರ್ಯವಾಗಿದೆ. ಜೊತೆಗೆ ರಾಜ್ಯ ವ್ಯವಸ್ಥೆ ಕೃಷಿಯನ್ನು ಯೋಜನೆಯ ವ್ಯಾಪ್ತಿಗೆ ತಂದಿದೆ. ಬೇಸಾಯಗಾರ ಹಲವಾರು ಯೋಜನೆಗಳಿಂದ ನಿರ್ದೇಶಿತನಾಗುತ್ತಿದ್ದಾನೆ. ಯಾವ ಬೆಳೆ ಬೆಳೆಯಬೇಕು? ಬೀಜ ಯಾವುದು? ಗೊಬ್ಬರದ ಬಳಕೆ ಹೇಗೆ? ರೋಗ ನಿಯಂತ್ರಣ ಹೇಗೆ? ಇವೆಲ್ಲ ಬೇಸಾಯಗಾರನ ಆಯ್ಕೆಗೆ ಮೀರಿದುದು. ಅವೆಲ್ಲವೂ ಅವನಿಗಾಗಿ ಆಗಲೇ ಆಯ್ಕೆಯಾಗಿರುತ್ತವೆ. ಬೆಳೆದ ಬೆಳೆ ಕೇವಲ ಬೆಳೆದವನ ಕುಟುಂಬದ ಬಳಕೆಗೆ ಮಾತ್ರ ಎನ್ನುವಂತಿಲ್ಲ. ಮಾರುಕಟ್ಟೆ ಬೃಹತ್ ರೀತಿಯಲ್ಲಿ ಕೃಷಿಯ ಕ್ಷೇತ್ರದಲ್ಲಿ ಪ್ರವೇಶ ಮಾಡಿದೆ. ಕೃಷಿಯು ಕೂಡ ಒಂದು ಉದ್ಯಮವಾಗಿದೆ. ಏಕೆಂದರೆ ಕೃಷಿಯಲ್ಲಿರುವ ಆರ್ಥಿಕ ಸಾಮರ್ಥ್ಯವೀಗ ಬಹುರಾಷ್ಟ್ರೀಯ ಕಂಪನಿಗಳನ್ನು ತನ್ನತ್ತ ಸೆಳೆಯುತ್ತದೆ. ಇವೆಲ್ಲದರ ಪರಿಣಾಮವಾಗಿ ಕೃಷಿ ಒಂದು ಬಹು ಆಸಕ್ತಿಗಳುಳ್ಳ ರೈತನು ಮಳೆಯ ನಕ್ಷತ್ರಗಳನ್ನು ಪ್ರಾಕೃತಿಕ ವ್ಯಾಪಾರಗಳನ್ನು ಬಳಸಿ ತನ್ನ ಚಟುವಟಿಕೆಗಳ ಬಗ್ಗೆ ನಿರ್ಣಯಿಸುತ್ತಿರುವಾಗಲೇ ಅತ್ಯಾಧುನಿಕ ಯಂತ್ರಗಳ ಬಳಕೆಗೆ ಬಂದವು. ಬೆಳೆಗೆ ನೀರನ್ನು ಒದಗಿಸಲು ಸಾವಿರಾರು ವರ್ಷಗಳಷ್ಟು ಹಳೆಯದಾದ ಮೂಲಗಳನ್ನು ವಿಧಾನಗಳನ್ನು ಬಳಸುತ್ತಿರುವಾಗಲೇ ಬೃಹತ್ ಅಣೆಕಟ್ಟುಗಳು ನೀರನ್ನು ಶೇಖರಿಸಿ

ನೀರಾವರಿ ಜಾಲವನ್ನು ಬೆಳೆಸಿದ್ದನ್ನು ಇಂದು ನಾವು ಕಾಣುತ್ತೇವೆ. ಅದರ ಮೂಲಕ ಕೃಷಿಕ ಬೆಳೆಗಳನ್ನು ಬೆಳೆದು ತನ್ನ ಜೀವನವನ್ನು ನಡೆಸುತ್ತಾ ಬಂದಿರುವುದನ್ನು ಕಾಣುತ್ತೇವೆ.

ಮಾನವನ ವಿಕಾಸದ ದಾರಿಯನ್ನು ಶೋಧಿಸುತ್ತ ಹೋದಂತೆ ನಮಗೆ ಸಹಜವಾಗಿ ಅವನ ವಿಕಾಸಕ್ರಮದ ಕುರುಹು ಅಥವಾ ಹಂತಗಳನ್ನೇ "ಮಂಗನಿಂದ ಮಾನವ"ನ ಹಂತವೆನ್ನಬಹುದು. ಮಾನವನ ಸಂಸ್ಕೃತಿಯ ವಿಕಾಸವನ್ನು ಈ ರೀತಿಯಾಗಿ ವಿಂಗಡಿಸಬಹುದು.

೧. ಆದಿವಾಸಿ ಸಂಸ್ಕೃತಿ (Primitive Culture) ೨. ಗ್ರಾಮೀಣ ಸಂಸ್ಕೃತಿ (Rural Culture) ೩. ನಗರ ಸಂಸ್ಕೃತಿ (Urban Culture). ಈ ಮೂರು ಅವಸ್ಥೆಗಳಲ್ಲಿ ಮನುಷ್ಯನ ವೃತ್ತಿ ಬದುಕು ಬೇರೆ ಬೇರೆ ನೆಲೆಗಳಲ್ಲಿ ರೂಪಿತಗೊಂಡಿರುತ್ತದೆ. ಆದಿವಾಸಿ ಮಾನವನು ತನ್ನ ಉಪಜೀವನಕ್ಕೆ ಅಥವಾ ತನ್ನ ಹೊಟ್ಟೆ ತುಂಬಿಸಿಕೊಳ್ಳಲಿಕ್ಕೆ ಅಥವಾ ಹಸಿವನ್ನು ಇಂಗಿಸಿಕೊಳ್ಳುವುದಕ್ಕೆ ಕಾಡಿನಲ್ಲಿರುವ ಹಸಿದಾದ ಗಡ್ಡೆ ಗೆಣಸು, ಮಾಂಸ ತಿನ್ನುತ್ತಾ ಕಾಡಿನಲ್ಲಿ ಜೀವಿಸುತ್ತಿದ್ದನಾದ್ದರಿಂದ ಅವನ ಸಂಸ್ಕೃತಿಯು ಸಹ ಅಲ್ಲಿನ ಜೀವನ ವಿಧಾನವನ್ನಾಧಾರಿಸಿ ರೂಪಿತಗೊಂಡಿತ್ತು.

ಗ್ರಾಮೀಣ ಸಂಸ್ಕೃತಿ ರೂಪ ತಳೆಯುವ ಕಾಲಕ್ಕೆ ಮನುಷ್ಯ ಕಾಡನ್ನು ತೊರೆದು ಅಲೆಮಾರಿ ಜೀವನವನ್ನು ತ್ಯಜಿಸಿ ಒಂದೆಡೆ ಬೀಡುಬಿಟ್ಟು ತನ್ನ ಬದುಕಿಗೆ ಪಶುಪಾಲನೆ ಮತ್ತು ಕೃಷಿಯನ್ನು ಆಧರಿಸಿ ಜೀವನ ಕ್ರಮವನ್ನು ರೂಪಿಸಿಕೊಂಡನು. ಹೀಗೆ ಕೃಷಿಯನ್ನು ಅವಲಂಬಿಸಿದ ಮಾನವನ ಇತಿಹಾಸದಲ್ಲಿ ಗ್ರಾಮ ಸಮುದಾಯಗಳು ಏಳಿಗೆಯನ್ನು ಪಡೆದು ವಿವಿಧ ರೀತಿಯ ಸಾಮಾಜಿಕ ಲಕ್ಷಣಗಳು ಕಾಣಿಸಿಕೊಂಡವು. ಮಾನವನ ವೃತ್ತಿ ವಿವರಗಳು, ವೈಯಕ್ತಿಕ ಸುಖ ದುಃಖಗಳು ಕೌಟುಂಬಿಕ ರೀತಿ ನೀತಿಗಳು, ಸಹಕಾರ ಸಂಬಂಧಗಳು, ಧಾರ್ಮಿಕ ಅಂಶಗಳು, ಸಾಮಾಜಿಕ ಜೀವನ, ಆರ್ಥಿಕ ಜೀವನ ಮುಂತಾದವುಗಳು, ಗ್ರಾಮೀಣ ಸಂಸ್ಕೃತಿಯನ್ನು ಹೆಚ್ಚು ಸಮೃದ್ಧಿಗೊಳಿಸಿದವು. ಇಂತಹ ಗ್ರಾಮ ಸಂಸ್ಕೃತಿ ಪ್ರಧಾನವಾಗಿ ಕೃಷಿಗೆ ಸಂಬಂಧಿಸಿರುವುದು ಸಹಜವಾಗಿದೆ. ಏಕೆಂದರೆ "ರೈತನೇ ದೇಶದ ಬೆನ್ನೆಲುಬು" ಆದರೆ ಕೃಷಿ ಸನ್ನಿವೇಶ, ಸಂದರ್ಭಗಳನ್ನು ಅನುಸರಿಸಿ ಮತ್ತು ಸಾಮಾಜಿಕ ಸ್ವರೂಪವನ್ನಾಧರಿಸಿ ರೂಪಿತವಾಗಿರುತ್ತದೆ. ಆದುದರಿಂದ ಕೃಷಿ ಸಂಸ್ಕೃತಿಯ ಸ್ವರೂಪವನ್ನು ಆಯಾ ಪ್ರಾದೇಶಿಕ ಪರಿಸರವನ್ನು ಅನುಸರಿಸಿ ಅವುಗಳ ವಿಶಿಷ್ಟತೆಯನ್ನು ಗುರುತಿಸುವುದು ಅವಶ್ಯಕವೆನಿಸುತ್ತದೆ.

ಪ್ರಸ್ತುತ ಅಧ್ಯಯನವಾದ ಯಮನೂರು ಗ್ರಾಮೀಣ ಪ್ರದೇಶವಾಗಿದ್ದು, ಮಿಶ್ರ ಬೇಸಾಯವನ್ನು ಅನುಸರಿಸಿಕೊಂಡು ಬಂದಿದೆ. ಇಂತಹ ಪರಿಸ್ಥಿತಿ ಕರ್ನಾಟಕದ ಇತರ ಪ್ರದೇಶಗಳಲ್ಲಿ ಕಂಡುಬರುತ್ತಿದೆ. ಆದರೆ ಜಾನಪದೀಯವಾಗಿ ಅನೇಕ ಸಾಂಸ್ಕೃತಿಕ ವೈಶಿಷ್ಟ್ಯಗಳು ಪ್ರತಿಯೊಂದು ಪ್ರದೇಶಕ್ಕೆ ಭಿನ್ನವಾದ ಆಯಾಮವನ್ನು ತಂದುಕೊಟ್ಟಿರುತ್ತವೆ. ಹೀಗಾಗಿ ಇಲ್ಲಿನ ಕೃಷಿ ಪದ್ಧತಿಯ ಮೂಲಕ ಜಾನಪದ ವಿವರಗಳನ್ನು ಪರಿಶೀಲಿಸಬಹುದಾಗಿದೆ.

'ಗ್ರಾಮ' ಎಂಬುದಾಗಿ ಕರೆಯಲು ಮುಖ್ಯವಾದ ಕಾರಣ ವ್ಯವಸಾಯ. ಈ ವ್ಯವಸಾಯ ಎಂಬುದನ್ನು ಭಾರತದ ಗ್ರಾಮದ ಬಗೆಗೆ ಒಂದು ಸಾಮಾನ್ಯ ವ್ಯಾಖ್ಯೆ ಈ ರೀತಿಯಾಗಿದೆ. ಸುಮಾರು ೫೦೦೦ಕ್ಕಿಂತಲೂ ಕಡಿಮೆ ಜನಸಂಖ್ಯೆಯಿದ್ದು, ಚದರ ಕಿಮೀಟರಿಗೆ ೪೦೦ಕ್ಕಿಂತಲೂ ಕಡಿಮೆ ಜನಸಾಂದ್ರತೆಯಿರುವ, ಹೆಚ್ಚಾಗಿ ಕೃಷಿಯನ್ನು ಹೊಂದಿದ್ದು, ನಿಸರ್ಗ ಆಧಾರಿತವಾದ ಬೇರೊಂದು ಮುಖ್ಯ ಉದ್ಯೋಗ ಹೊಂದಿರುವ

ಹಾಗೂ ಗ್ರಾಮೀಣ ಲಕ್ಷಣಗಳಿಂದ ಕೂಡಿರುವ ಕಿರಿಯ ಸಮುದಾಯಗಳೇ ಗ್ರಾಮಗಳು ಎಂದು ಹೇಳಬಹುದು. ಕೌಟಿಲ್ಯನು ಗ್ರಾಮಗಳ ಸ್ವರೂಪವನ್ನು ಕುರಿತು ನೂರಕ್ಕೆ ಕಡಿಮೆಯಿಲ್ಲದಷ್ಟು ಆದರೆ ೫೦೦ಕ್ಕೆ ಮೀರದ ಶೂದ್ರರಾದ ಕೃಷಿಕರ ಕುಟುಂಬಗಳಿರುವ ಒಂದು ಕ್ರೋಶ ಅಳತೆಯ ದೂರದವರೆಗೆ ಹರಡಿರುವ ನದಿ, ಪರ್ವತ, ಕಾಡು, ಹೂ ಬಿಡುವ ಮರಗಳಿಂದ ಕೂಡಿದ ಮೇರೆಗಳೆನ್ನುವ ಮತ್ತು ತಮ್ಮನ್ನು ತಾವೆ ಸಂರಕ್ಷಿಸಿಕೊಳ್ಳಬಲ್ಲ ಜನವಸತಿಯನ್ನು 'ಗ್ರಾಮ' ಎಂದು ಹೇಳಿದ್ದಾನೆ. ಇಲ್ಲಿ ಗ್ರಾಮದ ವಿಸ್ತಾರಕ್ಕಿಂತಲೂ ಪ್ರಧಾನವಾಗಿ ಅಲ್ಲಿಯ ಕೃಷಿ ಮತ್ತು ಕೃಷಿಕರು ಗ್ರಾಮದ ಮುಖ್ಯ ಅಂಶವಾಗಿರುವುದರಿಂದ ಗ್ರಾಮೀಣ ಪರಿಸರದ ಜನಪದ ಕೃಷಿ ಪ್ರಧಾನವಾದುದೇ ಆಗಿದೆ.

ಯಮನೂರು ಗ್ರಾಮದಲ್ಲಿ ಕೃಷಿಕಾರ್ಯ ಮಾಡುವ ಕಸುಬುದಾರರನ್ನು ರೈತ, ಒಕ್ಕಲಿಗ, ವ್ಯವಸಾಯಗಾರ ಎಂಬುದಾಗಿ ಕರೆಯುತ್ತಾರೆ. ಗ್ರಾಮಪಂಚಾಯಿತಿ ವ್ಯಾಪ್ತಿ ಮಲಪ್ರಭಾ ನೀರಾವರಿ ಕಾಲುವೆ ನೀರಿನ ಲಭ್ಯತೆ ಇರುವುದರಿಂದ ಹೆಚ್ಚಿನ ರೈತರ ಭೂಮಿ ನೀರಾವರಿ ಇದೆ. ಹೀಗಿದ್ದರೂ ಹೆಚ್ಚಿನ ವ್ಯವಸಾಯ ಮಳೆಯನ್ನು ಕೂಡಾ ಆಧರಿಸಿದೆ. ಈ ಭಾಗದಲ್ಲಿ ಕೃಷಿಯೇ ಪ್ರಮುಖ ಕಸುಬಾಗಿದೆ. ಆದ್ದರಿಂದ ಗ್ರಾಮದಲ್ಲಿ ಮುಂಗಾರು ಹಿಂಗಾರು ಮಳೆ ಮಾರುತಗಳನ್ನಾಧರಿಸಿ ಬೆಳೆ ಬೆಳೆಯುವ ಪದ್ಧತಿಯೂ ರೂಢಿಯಲ್ಲಿದೆ. ನೀರಾವರಿ ಪ್ರದೇಶಗಳಲ್ಲಿ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಆದರೂ ಬೇಸಾಯದ ಬಹುಭಾಗ ಸಾಂಪ್ರದಾಯಿಕ ಮಾದರಿಯಲ್ಲೇ ನಡೆಯುತ್ತದೆ.

### ಮುಂಗಾರು ಮತ್ತು ಹಿಂಗಾರು ಕೃಷಿ ಕ್ಷೇತ್ರ ಹಾಗೂ ಬೆಳೆಗಳು

ಸಾಮಾನ್ಯವಾಗಿ ಗ್ರಾಮದ ಒಟ್ಟು ಕೃಷಿ ಕ್ಷೇತ್ರವನ್ನು ಮುಂಗಾರು ಕೃಷಿಕ್ಷೇತ್ರ ಹಾಗೂ ಹಿಂಗಾರು ಕೃಷಿಕ್ಷೇತ್ರ ಮತ್ತು ಮುಂಗಾರು ಹಿಂಗಾರು ಬೆಳೆಗಳನ್ನು ತಿಳಿದುಕೊಳ್ಳುವುದು ಇಲ್ಲಿ ಅತಿ ಅವಶ್ಯಕವಾಗಿದೆ. ಗ್ರಾಮವು ೬೮೭೫.೩೦ ಹೆಕ್ಟೇರ್ ಭೂಮಿ ವಿಸ್ತೀರ್ಣವನ್ನು ಹೊಂದಿದೆ. ಇದರಲ್ಲಿ ಸಾಗುವಳಿ ಕ್ಷೇತ್ರ ೫೨೦೧.೫೧ ಹೆಕ್ಟೇರ್ ಭೂಮಿಯನ್ನು ಹೊಂದಿದೆ.

### ಮುಂಗಾರು ಬೆಳೆಗಳು

ಗ್ರಾಮದಲ್ಲಿ ಅನೇಕ ಮುಂಗಾರು ಬೆಳೆಗಳನ್ನು ಬೆಳೆಯುತ್ತಾರೆ. ಆ ಪ್ರದೇಶದ ಭೂಮಿ ಗುಣಧರ್ಮಗಳ ಹಿನ್ನಲೆಯಲ್ಲಿ ಮಳೆಯ ಪ್ರಮಾಣವನ್ನು ಅನುಸರಿಸಿ ಬೆಳೆಯನ್ನು ಬೆಳೆಯುತ್ತಾರೆ. ಸಾಮಾನ್ಯವಾಗಿ ಹೆಸರು, ಅಲಸಂದಿ, ಶೆಂಗಾ, ಸೂರ್ಯಕಾಂತಿ, ಈರುಳ್ಳಿ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

### ಹಿಂಗಾರು ಬೆಳೆಗಳು

ಪ್ರಮುಖವಾಗಿ ಜೋಳ, ಮುಸುಕಿನ ಜೋಳ, ಗೋಧಿ, ಕಡಲೆ, ಶೆಂಗಾ, ತೊಗರಿ, ಬಿಳಿಕುಸುಬಿ, ಸೂರ್ಯಕಾಂತಿ, ಗುರುಳ್ಳು, ಎಳ್ಳು ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

### ನೀರಾವರಿ ಬೆಳೆಗಳು

ಮಳೆಯನ್ನೆ ಅವಲಂಬಿಸಿ ಬೆಳೆಯುವ ಬೆಳೆಗಳಿಗೆ ಒಣಬೇಸಾಯದ ಬೆಳೆಗಳು ಎನ್ನುತ್ತಾರೆ. ಜನಪದರ ಭಾಷೆಯಲ್ಲಿ ಹೇಳುವುದಾದರೆ ಹೊಲ ಅಥವಾ ಹೊಲದ ಬೇಸಾಯ ಎಂದು ಕರೆಯುತ್ತಾರೆ. ಹೊಲಗಳಲ್ಲಿ ಜೋಳ,

ಗೋಧಿ, ಕಡಲೆ, ನವಣೆ, ತೊಗರಿ, ಹುರುಳಿ, ಶೇಂಗಾ, ಮೆಣಸಿನಕಾಯಿ, ಈರುಳ್ಳಿ, ಹವೀಜ ಮುಂತಾದ ಬೆಳೆಗಳನ್ನು ಬೆಳೆಯುತ್ತಾರೆ.

**ಮಿಶ್ರ ಬೆಳೆಗಳು**

ವಿಶೇಷವಾಗಿ ಮಿಶ್ರ ಬೆಳೆಗಳಾದ ಮೆಣಸಿನಕಾಯಿ ಬೆಳೆಯುವುದರೊಂದಿಗೆ ಅದರಲ್ಲಿ ಈರುಳ್ಳಿ, ಹವೀಜ, ಜೋಳ, ಕಡಲೆ, ಕುಸುಬಿಯನ್ನು, ಮೇರೆಯಲ್ಲಿ ಅಗಸಿ, ಎಳ್ಳು, ಗುರೆಳ್ಳು ಕೂಡಾ ಬೆಳೆಯುತ್ತಾರೆ. ಜೋಳ, ತೊಗರಿ, ಹುರುಳಿ ಮುಂತಾದ ಮಿಶ್ರ ಬೆಳೆಯನ್ನು ಬೆಳೆಯುತ್ತಾರೆ. ಹೀಗೆ ಮಿಶ್ರ ಬೆಳೆಯನ್ನು ಬೆಳೆಯುವುದರ ಉದ್ದೇಶವೇನೆಂದರೆ ಮುಷ್ಯನ ಆಹಾರಧಾನ್ಯಗಳ ಜೊತೆಗೆ ಪಶುಗಳಿಗೆ ಮೇವನ್ನು, ಹೊಟ್ಟನ್ನು ಪಡೆಯುವ ಉದ್ದೇಶವಾಗಿದೆ.

ಹೀಗಾಗಿ ಮಳೆಯನ್ನು ಅವಲಂಬಿಸಿದ ಭೂಮಿಯೇ ಗ್ರಾಮಸ್ಥರಿಗೆ ಜೀವನಾಧಾರವಾಗಿದೆ. ಏಕೆಂದರೆ ಎಲ್ಲದಕ್ಕೂ ಮಳೆಯೇ ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತದೆ. ಹೀಗಾಗಿ ಒಣಬೇಸಾಯದ ಭೂಮಿಯೇ ಗ್ರಾಮದ ಜೀವಾಳ ಎನ್ನಬಹುದು.

**ಉಪಕರಣಗಳು**

ಕೃಷಿಕರ ಕೈಗಳ ಮುಂದುವರಿಕೆಯೇ ಕೃಷಿ ಉಪಕರಣಗಳು. ಕೊಯ್ಯುವ ಚಿಕ್ಕ ಕುಡುಗೋಲಿನಿಂದ ಹಿಡಿದು ಹಲವಾರು ಸಂಕೀರ್ಣ ಅಂಶಗಳಿರುವ ನೇಗಿಲು ಬಂಡಿಗಳವರೆಗೆ ಉಪಕರಣಗಳ ವ್ಯಾಪ್ತಿ ಹರಡಿದೆ. ಬೇಸಾಯಕ್ಕಾಗಿ ಬಳಸುವ ಪರಿಕರಗಳು, ಅವುಗಳ ಸ್ವರೂಪ ಮತ್ತು ವೈಶಿಷ್ಟ್ಯವನ್ನು ಕುರಿತು ಈ ಭಾಗದಲ್ಲಿ ವಿವರಿಸಲಾಗಿದೆ.

**ನೇಗಿಲು**

ಭೂಮಿಯನ್ನು ಊಳಲು ಬಳಸುವ ಸಾಧನ. ಇದಕ್ಕೆ ಗ್ರಾಮದ ರೈತರು ಗಳೆ ಹೊಡೆಯುವುದು ಎನ್ನುತ್ತಾರೆ. ಈ ನೇಗಿಲಿನಲ್ಲಿ ಅನೇಕ ವಿಧಗಳುಂಟು.

೧. ಕಬ್ಬಿಣದ ನೆಗ್ಲು ಭೂಮಿಯನ್ನು ಊಳಲು ಬಳಸುವ ನೇಗಿಲು ಇದಾಗಿದೆ. ಟ್ರ್ಯಾಕ್ಟರ್ ಮೂಲಕ ಭೂಮಿಯನ್ನು ಊಳಲು ಈ ನೇಗಿಲನ್ನು ಬಳಸುತ್ತಾರೆ.

೨. ದೊಡ್ಡ ನೇಗಿಲು ಎರಡರಿಂದ ಐದು ಜೊತೆ ಎತ್ತು ಬಳಸಿ ಭೂಮಿಯನ್ನು ಊಳಲು ಬಳಸುತ್ತಾರೆ.

೩. ನಾಡನೇಗಿಲು ಒಣ ಭೂಮಿಯನ್ನು ಊಳಲು ಹಳ್ಳಿಗರು ಬಳಸುತ್ತಿದ್ದ ನೇಗಿಲು ಮತ್ತು ಟ್ರ್ಯಾಕ್ಟರ್ ಸಹಾಯದಿಂದ ಊಳಲು ಬಳಸುವ ದೊಡ್ಡ ನೇಗಿಲು ಇದಾಗಿದೆ. ಇದನ್ನು ಹೆಚ್ಚಾಗಿ ಮೆಣಸಿನ ಹೊಲ ಹರಗಲು ಬಳಸುತ್ತಾರೆ.

೪. ಮಣ್ಣೇರಿಸುವ ನೇಗಿಲು ಇದನ್ನು ಮಣ್ಣೇರಿಸಲು ಮತ್ತು ಸಾಲು ಬಿಡಲು ಬಳಸಲು ಉಪಯೋಗಿಸುತ್ತಾರೆ.

೫. ಬಲರಾಮಗಳೆ ಒಂದು ಕಡೆ ರೆಕ್ಕೆ ಇರುವ ನೆಲವನ್ನು ಊಳಲು ಬಳಸುವ ನೇಗಿಲು ಇದಾಗಿದೆ. ಬಲಿಷ್ಠವಾದ ದೊಡ್ಡ ನೇಗಿಲು ಇದಾಗಿರುವುದರಿಂದ ಇದಕ್ಕೆ ಬಲರಾಮಗಳೆ ಎಂದು ಕರೆಯುತ್ತಾರೆ.

**ಕಟ್ಟಿಗೆ ನೇಗಿಲು**

ಮೂರು ಅಡಿ ಮರಕೆತ್ತಿ ಒಂದು ತುದಿ ಚೂಪಾಗಿದ್ದು, ತಲೆಯಭಾಗದಲ್ಲಿ ಚಪ್ಪಟೆಯಾಗಿದ್ದು ಮೇಳಿ ಸೇರಿಸಲು ಅದರಲ್ಲಿ ಸಣ್ಣ ಕುಳಿ ಮಾಡಿರುತ್ತಾರೆ.

**ಮೇಳಿ**

ನೇಗಿಲನ್ನು ಮತ್ತು ಕುಂಟೆಯನ್ನು ನಿಯಂತ್ರಿಸಲು ಇರುವ ಹಿಡಿ ಸೇರಿದ ಭಾಗವಾಗಿದೆ. ಇದು ಇಂಗ್ಲೀಷಿನ ಐ ಆಕಾರದಲ್ಲಿ ಇರುತ್ತದೆ. ಇದನ್ನು ಹರಗುವ ದಿಂಡು, ಬಿತ್ತುವ ಕೂರಿಗೆ ಬಲರಾಮಗಳೆ ಮುಂತಾದ ಎಲ್ಲ ಸಾಧನಗಳಿಗೂ ಅತ್ಯವಶ್ಯಕವಾಗಿ ಬಳಸುತ್ತಾರೆ.

**ಈಸು**

ನೇಗಿಲು ಮತ್ತು ನೋಗವನ್ನು ಸೇರಿಸುವ ಮರದ ತುಂಡು. ಇದನ್ನು ನೇಗಿಲು ಉಳುಮೆಗೆ ಅಥವಾ ಕುಂಟಿ ದಿಂಡಿಗೆ, ಎಡಿ ಹೊಡೆಯುವ ದಿಂಡಿಗೆ ಬಿತ್ತುವ ಕೂರಿಗೆಗೆ, ಎತ್ತಿನ ಬಂಡಿಗೆ ಎತ್ತುಗಳು ಹೊತ್ತಿರುವ ನೊಗಕ್ಕೆ ಬಂಧಿಸುವ ಉದ್ದನೆಯ ದಂಡವನ್ನು 'ಈಸು' ಎಂದು ಕರೆಯುತ್ತಾರೆ.

**ಜತಿಗಿ**

ಎತ್ತುಗಳನ್ನು ನೊಗಕ್ಕೆ ಕಟ್ಟಲು ಬಳಸುವ ಚರ್ಮದ ಸಾಧನವಾಗಿದೆ.

**ನಗ**

ಎರಡು ಎತ್ತುಗಳ ಹೆಗಲ ಮೇಲೆ ಇಡುವ ಕಟ್ಟಿಗೆಯ ಸಾಧನವಾಗಿದೆ. ಹೊಲಕ್ಕೆ ಎತ್ತುಗಳನ್ನು ಹೊಡೆದುಕೊಂಡು ಹೋಗುವಾಗ ಈ ನಗದ ಸಹಾಯವನ್ನು ಪಡೆಯುತ್ತಾರೆ. ಮತ್ತು ಎತ್ತುಗಳ ಸಹಾಯದಿಂದ ಕೆಲಸ ಮಾಡುವ ಉಪಕರಣಗಳನ್ನು ಬಂಧಿಸುತ್ತಾರೆ.

**ಹಗ್ಗ**

ಕೃಷಿ ಚಟುವಟಿಕೆಯ ಉಪಕರಣಗಳಲ್ಲಿ ಹಗ್ಗವೂ ಒಂದು. ಇದನ್ನು ಎತ್ತು ಕಟ್ಟಲು, ಚಕ್ಕಡಿಯ ಮೇಲೆ ಮೇವು, ಹತ್ತಿಕಟ್ಟಿಗೆ, ಮೆಣಸಿನ ಕಟ್ಟಿಗೆಯನ್ನು ಹೇರಿಕೊಂಡು ಬರುವಾಗ ಹಗ್ಗದಿಂದ ಬಿಗಿದು ಕಟ್ಟುತ್ತಾರೆ. ನಾರು ಮತ್ತು ಕಲ್ಲುನಾರಿನಿಂದ ಈ ಹಗ್ಗವನ್ನು ತಯಾರಿಸಿರುತ್ತಾರೆ.

**ಕುಂಟಿ**

ನೆಲವನ್ನು ಮಡಿಮಾಡಿ, ಸಾಲುಗಳನ್ನು ಕ್ರಮಬದ್ಧಗೊಳಿಸಿ, ಅವುಗಳ ನಡುವೆ ಇರುವ ಕಳೆಯನ್ನು ತೆಗೆಯಲು ಉಪಯೋಗಿಸುವ ಉಪಕರಣ ಇದಾಗಿದೆ. ಇದರಲ್ಲಿ ನಾಲ್ಕೆತ್ತಿನ ಕುಂಟೆ, ಆರೆತ್ತಿನಕುಂಟೆ, ಎಂಟೆತ್ತಿನ ಕುಂಟೆ, ಮೂರೇಣು ಕುಂಟೆ ಎಂಬ ಬಗೆಗಳಿರುತ್ತವೆ. ಕುಂಟೆಯನ್ನು ಭೂಮಿ ಹಸನು ಮಾಡಲು ಬಳಸುತ್ತಾರೆ. ಮತ್ತು ಕಾಳುಗಳನ್ನು ಬಿತ್ತಿದ ಮೇಲೆ ಬಳಸಾಲು ಹೊಡೆದು ಬಿತ್ತಿದ್ದ ಸಾಲಿನ ಮೇಲೆ ಮಣ್ಣು ಹಾಕಲು ಬಳಸುತ್ತಾರೆ. ಕಳೆ ಕುಂಟೆ ಹೊಡೆದ ಮೇಲೆ ಈ ಕುಂಟೆಯನ್ನು ಬಳಸುತ್ತಾರೆ. ಇದು ಮಣ್ಣನ್ನು ಪೈರಿನ ಬುಡಕ್ಕೆ ತಳ್ಳುತ್ತದೆ. ಕಳೆಗುಂಟೆ, ಕಳೆ ತೆಗೆಯಲು ಬಳಸುವ ಸಾಧನ. ಕಿರುಗುಂಟೆ ಕೈಯಿಂದ ಎಳೆಯುವ ಮರದ ಹಲಗೆಯುಳ್ಳ ಕುಂಟೆ. ಗೊಬ್ರಗುಂಟೆ ಹೊಲದ ನಡುವೆ ರಾಶಿ ಹಾಕಿದ ಗೊಬ್ಬರವನ್ನು ಸಮನಾಗಿ ಹರಡಲು ಬಳಸುವ ಕುಂಟೆ.

ಕುಂಟೆಯನ್ನು ಖಾಲಿ ಭೂಮಿಯಲ್ಲಿ ಎತ್ತುಗಳಿಂದ ಮಣ್ಣನ್ನು ಸಡಿಲಗೊಳಿಸಲು ಬಳಸುತ್ತಾರೆ. ಮಳೆ ಬರುವುದಕ್ಕಿಂತ ಮೊದಲು ಎರಡು ಮೂರು ಬಾರಿ ಕುಂಟೆ ಹೊಡೆದು ಬೀಜವನ್ನು ಬಿತ್ತುವುದಕ್ಕೆ ಮಣ್ಣನ್ನು ಹದಗೊಳಿಸಲು ಬಳಸುತ್ತಾರೆ.

**ಕೂರಿಗೆ**

ಬೀಜ ಬಿತ್ತಲು ಬಳಸುವ ಉಪಕರಣ. ಇದು ಕೊಳವೆಯ ರೂಪದಲ್ಲಿದ್ದು, ಮೇಲಿನ ಬಾಯಿಯಿಂದ ಬೀಜವನ್ನು ಹಾಕಿದಾಗ ಇನ್ನೊಂದು ತುದಿಯಿಂದ ಕೆಳಗೆ ಭೂಮಿಗೆ ಬೀಜ ಬೀಳುತ್ತದೆ. ಜೋಳ, ಗೋದಿ, ಕಡಲೆ, ಸೂರ್ಯಕಾಂತಿ, ಅಲಸಂದಿ, ಹೆಸರು, ತೊಗರಿ, ಗೋವಿನಜೋಳ, ಶೇಂಗಾ ಮುಂತಾದ ಧಾನ್ಯಗಳನ್ನು ಬಿತ್ತಲು ಬಳಸುತ್ತಾರೆ. ಇದನ್ನು ಲಕ್ಷ್ಮಿ ಎಂದು ಕರೆಯುವುದುಂಟು. ದಸರಾ ದಿವಸ ಒಕ್ಕಲುತನ ಇರುವವರ ಮನೆಯಲ್ಲಿ ಜೋಡು ಕೂರಿಗೆಗಳನ್ನು ನಿಲ್ಲಿಸಿ ತೆಂಗಿನಕಾಯಿ ತೆಗೆದುಕೊಂಡು ಲಕ್ಷ್ಮಿಯ ಮುಖ ಮಾಡಿ ಕೂರಿಗೆ ಮೇಲಿಟ್ಟು ಸೀರೆ ಉಡಿಸಿ ಅಲಂಕಾರ ಮಾಡುತ್ತಾರೆ. ಹೀಗೆ ಅಲಂಕಾರ ಮಾಡಿದ ಕೂರಿಗೆಯನ್ನು ಹಾಸಕ್ಕಿ ಹಾಕಿದ ಕಂಬಳಿಯ ಮೇಲಿಟ್ಟು ಪೂಜಿಸುತ್ತಾರೆ. ಇದನ್ನು ಒಕ್ಕಲುತನದ ಮನೆ ತನದಲ್ಲಿ ಅತ್ಯಂತ ವಿಜೃಂಭಣೆಯಿಂದ ಮಾಡುವ ಪದ್ಧತಿಯನ್ನು ಇಂದಿಗೂ ಕಾಣಬಹುದು.

**ಬಾರಕೋಲು**

ಎತ್ತುಗಳನ್ನು, ದನಗಳನ್ನು ಬೆದರಿಸಲು ಉಪಯೋಗಿಸುವ ಸಾಧನ. ಇದನ್ನು ನಾರಿನ ಹಗ್ಗದಿಂದ ಮಾಡಿರುತ್ತಾರೆ. ಇದನ್ನು ಸುಂದರವಾದ ಕುಚ್ಚುಗಳಿಂದ ಅಲಂಕರಿಸುತ್ತಾರೆ. ಹೆಸರೇ ಸೂಚಿಸುವ ಹಾಗೆ ಬಾರು ಎಂದರೆ ತೊಗಲಿನಿಂದ ಮಾಡಿದ ಉದ್ದನೆಯ ಭಾವಟಿ. ಕೋಲು ಎಂದರೆ ಅದಕ್ಕೆ ತೊಡಕು ಹಾಕಿದ ಕಟ್ಟಿಗೆ.

**ಗುದ್ದಲಿ**

ನೆಲ ಅಗೆಯಲು ಬಳಸುವ ಸಾಧನ. ಆಳವಾಗಿ ಬೇರು ಬಿಟ್ಟಿರುವ ಗಿಡವನ್ನು ಕಡಿಯಲು ಬಳಸುತ್ತಾರೆ. ಇದು ಹರಿತವಾದ ಚೂಪಾದ ಮುಖವನ್ನು ಹೊಂದಿರುತ್ತದೆ. ಕೈಯಲ್ಲಿ ಹಿಡಿಯಲು ಸಹಾಯಕವಾದ ಕಟ್ಟಿಗೆ ಇರುತ್ತದೆ. ಆಳವಾಗಿ ಬೇರುಬಿಟ್ಟಿರುವ ಗರಿಕೆ ಹುಲ್ಲನ್ನು ಕಡಿಯಲು, ಮರ ಕಡಿಯಲು ಬಳಸುತ್ತಾರೆ. ಇದನ್ನು ನಟ್ ಕಡಿಯುವುದು ಎನ್ನುತ್ತಾರೆ.

**ಸಲಿಕೆ**

ಇದು ಮಣ್ಣನ್ನು ಎಳೆಯಲು, ಕೆಸರು ತೆಗೆಯಲು ಬಳಸುವ ಉಪಕರಣ, ಅಗಲವಾದ ತಗಡಿನಿಂದ ಮಾಡಿದ್ದಾಗಿರುತ್ತದೆ.

**ಕುರ್ಚಿಗಿ**

ಇದನ್ನು ಬೆಳೆಯಲ್ಲಿ ಬೆಳೆದಿರುವ ಕಳೆ ತೆಗೆಯಲು ಬಳಸುವ ಕಬ್ಬಿಣದ ಸಾಧನ. ಇದರ ಹಿಂದಿರುವ ಭಾಗವನ್ನು ಹಿಡಿಕೆ ಎನ್ನುತ್ತಾರೆ. ಇದನ್ನು ಕಟ್ಟಿಗೆಯಿಂದ ಮಾಡಿರುತ್ತಾರೆ. ಕೈಗೆ ಕಬ್ಬಿಣದ ಅಂಚು ಚುಚ್ಚಬಾರದೆಂದು ಮತ್ತು ಹಿಡಿತಕ್ಕಾಗಿ ಇದನ್ನು ಬಳಸುತ್ತಾರೆ.

**ಕುಡುಗೋಲು**

ಇದನ್ನು ಜೋಳ, ಗೋದಿ, ಬತ್ತ ಕೊಯ್ಯಲು ಬಳಸುತ್ತಾರೆ. ಎತ್ತರದಲ್ಲಿರುವ ಕಾಯಿ, ಸೊಪ್ಪನ್ನು ಕತ್ತರಿಸಲು ಬಳಸುತ್ತಾರೆ. ದನಗಳಿಗೆ ಹಾಕುವ ಹುಲ್ಲನ್ನು ಕೊಯ್ಯಲು ಕೂಡಾ ಇದನ್ನು ಬಳಸುತ್ತಾರೆ.

**ಕಲ್ಲಿ**

ಎತ್ತಿಗೆ ಹಾಕುವ ಬಾಯಿ ಚಾಳಿಗೆ ಎಂತಲೂ ಕರೆಯುತ್ತಾರೆ. ಚಚೌಕದ ಹಲವಾರು ತೂತುಗಳನ್ನು ಹೊಂದಿರುತ್ತದೆ. ಗೋದಿ ಹುಲ್ಲು ತುಳಿಸುವಾಗ ಈ ಕಲ್ಲಿಯನ್ನು ಎತ್ತಿನ ಬಾಯಿಗೆ ಕಟ್ಟಿರುತ್ತಾರೆ. ಹೀಗೆ ಕಟ್ಟಿದರೆ ಎತ್ತುಗಲಿಗೆ ಯಾವುದೇ ಬೆಳೆಯನ್ನು ತಿನ್ನಲು ಬರುವುದಿಲ್ಲ.

**ಎತ್ತಿನ ಗಾಡಿ**

ಎತ್ತುಗಳ ಸಹಾಯದಿಂದ ಅನೇಕ ಕೃಷಿಗೆ ಉಪಯೋಗಿಸುವ ಸಲಕರಣೆಗಳನ್ನು ತೆಗೆದುಕೊಂಡು ಹೊಲಕ್ಕೆ ಹೋಗಲು ಮತ್ತು ಹೊಲದಿಂದ ವಕ್ಕಲಾದ ದವಸ ಧಾನ್ಯಗಳನ್ನು ಮನೆಗೆ ತರಲು ಬಳಸುತ್ತಾರೆ. ಜಾತ್ರೆಯ ಸಂದರ್ಭದಲ್ಲಿ ಜನರನ್ನು ಜಾತ್ರೆಗೆ ಕರೆದುಕೊಂಡು ಹೋಗಲು ಬಳಸುತ್ತಾರೆ. ಇದಕ್ಕೆ ಚಕ್ಕಡಿ ಎಂದೂ ಕೂಡಾ ಕರೆಯುತ್ತಾರೆ.

**ಉಡಿಚೀಲ**

ಬಿತ್ತುವಾಗ ಬೀಜ ಹಾಕಿಕೊಳ್ಳಲು ಮಾಡಿದ ಸಣ್ಣ ಚೀಲ.

**ಉದ್ದಿಗಿ**

ಕುಂಟೆ ಎಳೆಯಲು ಸಹಾಯವಾಗುವಂತೆ ಕುಂಟೆಗೆ ಜೋಡಿಸಿರುವ ಉದ್ದನೆಯ ಬೊಂಬಿನ ಕಟ್ಟಿಗೆ.

**ಎರೆಣ್ಣೆ**

ಗಾಡಿಯ ಗಾಲಿಗಳು ಅಂದರೆ ಚಕ್ಕಡಿಯ ಗಾಲಿಗಳು ಸರಾಗವಾಗಿ ಚಲಿಸಲು ಹಾಕುವ ಎಣ್ಣೆ.

**ಡಂಬರಗಿ**

ಚಕ್ಕಡಿಯ ಮೇಲೆ ಕಣಗಗಳು ಅಲುಗಾಡದಂತೆ ಹಿಡಿಯಲು ಮೇಲ್ಭಾಗದಲ್ಲಿ ಚಕ್ಕಡಿಯ ಎರಡೂ ಬದಿಗೆ ಉದ್ದಕ್ಕೆ ಚಾಚಿಕೊಂಡಿರುವ ಕಟ್ಟಿಗೆಗಳು.

**ಡಬ್ಬಣ**

ಕಾಳು ತುಂಬಿದ ಚೀಲ ಹೊಲಿಯಲು ಉಪಯೋಗಿಸುವ ಸೂಜಿಯಾಕಾರದ ದೊಡ್ಡ ಸಾಧನ.

**ಬೆಳೆಗೆ ಆವರಿಸುವ ರೋಗಗಳು**

ಬೆಳೆಗಳಿಗೆ ರೋಗಗಳು ಬರುವುದು ಮತ್ತು ಅವುಗಳನ್ನು ನಿವಾರಿಸುವುದು ಕೃಷಿಯ ಮುಖ್ಯ ಚಟುವಟಿಕೆಗಳಲ್ಲಿ ಒಂದಾಗಿದೆ.

ಪಾರಂಪರಿಕವಾದ ರೋಗಗಳ ಸಂಖ್ಯೆ ಈಗ ಹೆಚ್ಚಾಗಿದೆ. ಆದ್ದರಿಂದ ಒಣಬೇಸಾಯ ಮಾಡುವ ರೈತನ ಬದುಕು ಎಂದೂ ಸುಸೂತ್ರವೆಂದು ಹೇಳಲು ಸಾಧ್ಯವಿಲ್ಲ. ಎಲ್ಲವೂ ಪರಾವಲಂಬಿ ಎಂದೇ ಹೇಳಬೇಕು. ಏಕೆಂದರೆ ಮಳೆ ಬಂದರೆ ಬೆಳೆ ಬರುವುದು, ಬೆಳೆ ಬಂದ ಮೇಲೆ ಅವುಗಳಿಗೆ ಕೀಟಗಳ ಕಾಟ.

ಹೀಗೆ ಎಲ್ಲದರಲ್ಲೂ ಜಯಸಿ ಬಂದ ರೈತನಿಗೆ ತಾನು ಬಿತ್ತಿದ ಬೆಳೆಯನ್ನು ಪಡೆಯಲು ಸಾಧ್ಯವಾಗುತ್ತದೆ.

**ಹೆಸರು**

ಹೆಸರು ಈ ಪ್ರದೇಶದ ದ್ವಿದಳ ಧಾನ್ಯದ ಬೆಳೆಗಳಲ್ಲಿ ಒಂದಾಗಿದೆ. ಇದು ೭೦ ದಿವಸಗಳಲ್ಲಿ ಬರುವ ಬೆಳೆಯಾಗಿದ್ದರಿಂದ ಎರಡು ಬೆಳೆ ತೆಗೆಯಲು ಅನುಕೂಲವಾಗಿದೆ. ಸಕಾಲಕ್ಕೆ ಮಳೆ ಬರದೆ ಇದ್ದ ಪಕ್ಷದಲ್ಲಿ ಈ ಬೆಳೆಗೆ ನಂಜುರೋಗ, ಬೂದಿರೋಗ ಮತ್ತು ಎಲೆಚುಕ್ಕೆರೋಗ ತಗುಲುತ್ತದೆ. ಹೀಗಿದ್ದಾಗ ಹೆಕ್ಟೇರಿಗೆ ೫ ರಿಂದ ೭ ಕ್ವಿಂಟಲ್ ಇಳುವರಿಯನ್ನು ರೈತ ನಿರೀಕ್ಷಿಸುತ್ತಾನೆ. ಹೆಸರು ಬಿತ್ತನೆ ಕಾಲ ಜೂನ್‌ದಿಂದ ಜುಲೈ ಮಧ್ಯದವರೆಗೆ.

**ಕಡಲೆಗೆ**

ಕಡಲೆ ಬೇಳೆಯನ್ನು ಹೆಚ್ಚಾಗಿ ಆಳವಾದ ಕಪ್ಪು ಭೂಮಿ ಇರುವ ಪ್ರದೇಶಗಳಲ್ಲಿ ಬೆಳೆಯುತ್ತಾರೆ. ಇದು ಕೂಡಾ ಈ ಪ್ರದೇಶದ ಮುಖ್ಯ ದ್ವಿದಳ ಬೆಳೆಗಳಲ್ಲಿ ಒಂದಾಗಿದೆ. ಬಿತ್ತನೆಕಾಲ ಸೆಪ್ಟೆಂಬರ್ ಎರಡನೇ ಪಕ್ಷದಿಂದ ಅಕ್ಟೋಬರ್ ಮೊದಲನೇ ಪಕ್ಷವು ಬಿತ್ತನೆಗೆ ಕಾಲ ಉತ್ತಮ. ಸರಿಯಾಗಿ ಮಳೆಯಾಗದೇ ಹೋದರೆ ಕಾಯಿ ಕೊರೆಯುವ ಹುಳು (ಕೀಡೆ) ಹತ್ತಿ ಇಡೀ ಕಾಳನ್ನೇ ನಾಶ ಮಾಡುತ್ತದೆ. ಇದಕ್ಕೆ ತಗಲುವ ರೋಗ ಗಿಡ ಸೊರಗು. ನೀರು ಸಿಂಪಡಿಸಿದರೆ ಈ ರೋಗದಿಂದ ಬೇಳೆಯನ್ನು ರಕ್ಷಿಸಬಹುದು. ಹೆಕ್ಟೇರಿಗೆ ೮ ರಿಂದ ೧೦ ಕ್ವಿಂಟಾಲ್ ಇಳುವರಿ ನಿರೀಕ್ಷಿಸಬಹುದು.

**ಶೇಂಗಾ**

ಶೇಂಗಾ ಬೆಳೆಯನ್ನು ಈ ಪ್ರದೇಶದಲ್ಲಿ ಪ್ರಮುಖವಾಗಿ ಮುಂಗಾರಿನಲ್ಲಿ ಬೆಳೆಯಲಾಗಿದೆ. ಹಬ್ಬುವ ತಳಿಗಳು ಕೀಳು ಶೆಂಗಾ ತಳಿಗಳಿಗಿಂತ ಉತ್ತಮ ಇಳುವರಿ ಕೊಡುತ್ತವೆ. ಕೀಳು ಶೆಂಗಾ ತಳಿಯನ್ನು ಮೇ ಮಧ್ಯದಿಂದ ಜೂನ್ ಕೊನೆಯವರೆಗೂ ಮತ್ತು ಹಬ್ಬುವ ತಳಿಗಳನ್ನು ಜೂನ್‌ದಿಂದ ಜುಲೈ ಕೊನೆಯವರೆಗೂ ಬಿತ್ತನೆ ಮಾಡಬಹುದು. ಸರಿಯಾಗಿ ಮಳೆ ಬರದೆ ಹೋದರೆ ಬಳ್ಳಿಯಲ್ಲಿ ಕಡಿಮೆ ಶೆಂಗಾ ಇರುತ್ತದೆ. ಅತೀ ಮಳೆಯಾದರೆ ಶೇಂಗಾ ಕೀಳುವಾಗ ಭೂಮಿಯಲ್ಲೇ ಬಿಚ್ಚಿ ಬೀಳುತ್ತವೆ. ಕಾಳು ವಿಷಪೂರಿತವಾಗುತ್ತವೆ.

**ಸೂರ್ಯಕಾಂತಿ**

ಈ ಪ್ರದೇಶದಲ್ಲಿ ಸೂರ್ಯಕಾಂತಿಯನ್ನು ಮುಂಗಾರು ಮತ್ತು ಹಿಂಗಾರು ಹಂಗಾಮಿನಲ್ಲಿ ಎಲ್ಲ ತರಹದ ಮಣ್ಣಿನಲ್ಲಿ ಬೆಳೆಯುತ್ತಾರೆ. ಸರಿಯಾದ ಸಮಯಕ್ಕೆ ಬಿತ್ತದೆ ಹೋದರೆ ಕೀಟಬಾಧೆ ಹೆಚ್ಚಾಗಿ ಕೀಟಗಳಿಂದ ತೊಂದರೆಯಾಗುತ್ತದೆ. ಇದರಿಂದ ಹೆಕ್ಟೇರ್‌ಗೆ ೭.೫ ರಿಂದ ೧೦ ಕ್ವಿಂಟಾಲ್ ಇಳುವರಿ ಪಡೆಯಬಹುದು. ಆಗಸ್ಟ್ ತಿಂಗಳಲ್ಲಿ ಸೂರ್ಯಕಾಂತಿಯನ್ನು ಬಿತ್ತದರೆ ಹೆಚ್ಚಿನ ಇಳುವರಿ ಪಡೆಯಬಹುದು. ಇದಲ್ಲದೆ ಕೈಯಿಂದ ಕಾಳುಗಳನ್ನು ಭೂಮಿಯ ಒಳಭಾಗಕ್ಕೆ ಊರಿ ಮೇಲೆ ಮಣ್ಣು ಹಾಕಿದರೆ ಹೆಚ್ಚಿಗೆ ಕಾಳು ಕಟ್ಟುತ್ತವೆ ಎಂಬುದು ಗ್ರಾಮದ ಜನರ ಅಂಬೋಣ.

**ಗೋದಿ**

ಈ ಪ್ರದೇಶದಲ್ಲಿ ಗೋದಿಯನ್ನು ಹೆಚ್ಚಾಗಿ ಬೆಳೆಯುತ್ತಾರೆ. ಈ ಬೆಳೆಯನ್ನು ಬಿತ್ತುವ ಕಾಲ ಅಕ್ಟೋಬರ್ ಮೊದಲವಾರ ಪ್ರಶಸ್ತಕಾಲ. ಇದಕ್ಕೆ ಇಟ್ಟಂಗಿ ರೋಗ ಬರುವುದರಿಂದ ಹಳದಿ ವರ್ಣಕ್ಕೆ ತಿರುಗಿ ಗೋದಿ ಬೆಳೆಯಲ್ಲಿ ಇಳುವರಿ ಕುಂಟಿತವಾಗುತ್ತದೆ.

**ಗೋವಿನ ಜೋಳ, ಮುಸುಕಿನ ಜೋಳ**

ಗೋವಿನ ಜೋಳವು ಮುಖ್ಯವಾದ ಬೆಳೆಯುವ ಧಾನ್ಯವಾಗಿದ್ದು, ಇದನ್ನು ಹೆಚ್ಚಾಗಿ ನೀರಾವರಿ ಆಶ್ರಯದಲ್ಲಿ ಬೆಳೆಯಲಾಗುತ್ತದೆ. ಇದನ್ನು ವರ್ಷದ ಎಲ್ಲಾ ಕಾಲದಲ್ಲಿಯೂ ಬೆಳೆಯಬಹುದು. ಇದಕ್ಕೆ ತಗಲುವ ರೋಗಗಳು ಕೇದಿಗೆ ರೋಗ, ತುಕ್ಕುರೋಗ, ಕಾಂಡ ಕೊರೆಯುವ ರೋಗ ಮತ್ತು ಎಲೆ ಚುಕ್ಕೆರೋಗ ಬಾಧಿಸುತ್ತದೆ. ಈ ರೋಗ ತಗುಲುವುದರಿಂದ ಬೆಳೆ ಕಡಿಮೆ ಬರುತ್ತದೆ.

**ಬೆಳೆಗಳಿಗೆ ರಸಗೊಬ್ಬರದ ಬಳಕೆ**

ಹಲವಾರು ಸಸ್ಯ ಪೋಷಕಾಂಶಗಳನ್ನು ಎಲೆ ಮತ್ತು ಕಾಂಡಗಳ ಮೂಲಕ ಬೆಳೆಗೆ ಒದಗಿಸಬಹುದು. ಈ ರೀತಿ ಎಲೆ ಮತ್ತು ಕಾಂಡಗಳ ಮೇಲೆ, ಸಿಂಪಡಿಸುವಾಗ ಸಸ್ಯಗಳು ಅವನ್ನು ಹೀರಿ ಉಪಯೋಗಿಸಿಕೊಳ್ಳುತ್ತವೆ. ಸಸ್ಯಪೋಷಣಕಾಂಶಗಳನ್ನು ಪ್ರತ್ಯೇಕವಾಗಿಯೂ ಕೆಲವು ಪೋಷಣಕಾಂಶಗಳನ್ನು ಒಟ್ಟಾಗಿಯೂ ಬೆರೆಸಿ ಸಿಂಪಡಿಸಬಹುದು. ಇತ್ತೀಚೆಗೆ ಹಲವಾರು ದ್ರವರೂಪದ ರಸಗೊಬ್ಬರಗಳು ಬಳಕೆಗೆ ಬಂದಿವೆ. ಇವನ್ನು ಸಿಂಪರಣೆಯ ಮೂಲಕ ಒದಗಿಸಬಹುದು. ಎಲೆ ಮತ್ತು ಕಾಂಡಗಳ ಮೂಲಕ ರಸಗೊಬ್ಬರಗಳನ್ನು ಒದಗಿಸಿದಾಗ ಸಸ್ಯವು ಅದನ್ನು ಬಹಳ ಶೀಘ್ರವಾಗಿ ಬಳಸಿಕೊಳ್ಳುತ್ತದೆ. ಬೆಳೆಯಲ್ಲಿ ಕಂಡುಬರುವ ಪೋಷಕಾಂಶಗಳ ಕೊರತೆಯನ್ನು ಈ ಕ್ರಮಗಳಿಂದ ಶೀಘ್ರವಾಗಿ ಸರಿಪಡಿಸಬಹುದು. ಜೊತೆಗೆ ಸಂಧಿಗ್ದ ಪರಿಸ್ಥಿತಿಯಲ್ಲಿ ಬೆಳೆಗೆ ಬೇಕಾಗುವ ಆಹಾರಾಂಶಗಳನ್ನು ಈ ಪದ್ಧತಿಯಲ್ಲಿ ಸುಲಭವಾಗಿ ಒದಗಿಸಬಹುದು. ಈ ಕ್ರಮದಿಂದ ಖರ್ಚಿನಲ್ಲಿ ಉಳಿತಾಯವು ಆಗುತ್ತದೆ. ಇತ್ತೀಚೆಗೆ ರಸಗೊಬ್ಬರಗಳ ಬೆಲೆ ಗಗನಕ್ಕೇರಿರುವುದರಿಂದ ಸಿಂಪರಣೆ ಮೂಲಕ ರಸಗೊಬ್ಬರಗಳನ್ನು ಒದಗಿಸುವುದರ ಕಡೆಗೆ ಗಮನಕೊಡುವುದು ಅಗತ್ಯವಾಗಿದೆ.

**ಗ್ರಾಮೀಣ ಸಮಾಜ ಮತ್ತು ಆಧುನಿಕ ಕೃಷಿ**

ಗ್ರಾಮ ಸಮುದಾಯವು ಕೃಷಿ ಆಧಾರಿತವಾದುದು. ಕೃಷಿಯು ಗ್ರಾಮೀಣ ಅರ್ಥ ವ್ಯವಸ್ಥೆಯ ಬೆನ್ನೆಲುಬು. ಕೃಷಿಕನೇ ರಾಷ್ಟ್ರದ ಬೆನ್ನೆಲುಬು. ಅವನೇ ಅದರ ಅಡಿಗಲ್ಲು ಕೂಡಾ ಆಗಿರುವುದರಿಂದ ಇವರ ಬದುಕನ್ನು ಮೊದಲು ಭದ್ರಪಡಿಸಬೇಕು. ಹಳ್ಳಿಗಳನ್ನು ಭಾರತದ ಜೀವನಾಡಿಗಳೆಂದು ಹೇಳಬಹುದು. ಗ್ರಾಮಗಳು ಕೃಷಿ ಮತ್ತು ಕೃಷಿ ಉತ್ಪಾದನೆಯನ್ನೇ ಆಧರಿಸಿ ನಿಂತಿವೆ. ರಾಷ್ಟ್ರೀಯ ಆದಾಯದಲ್ಲಿ ಕೃಷಿ ಕ್ಷೇತ್ರದ ಪಾಲು ಕುಸಿಯುತ್ತಾ ಹೋಗಿದ್ದರೂ, ಇಂದಿಗೂ ನಮ್ಮ ನಾಡು ಶೇ.೭೫ರಷ್ಟು ಕೃಷಿಯನ್ನೇ ಅವಲಂಬಿಸಿದೆ. ಗ್ರಾಮಗಳೇ ದೇಶದ ಸಂಪತ್ತಿನ ಮೂಲಗಳು. ರೈತನ ಉದ್ಧಾರವೇ ದೇಶದ ಉದ್ಧಾರ ಹಾಗೂ ಏಳಿಗೆ. ರೈತನು ನಗುನಗುತಾ ನೆಮ್ಮದಿಯಿಂದ ಜೀವನ ಸಾಗಿಸುತ್ತಾನೆಂದರೆ ದೇಶವು ನೆಮ್ಮದಿಯಿಂದ ನಿಟ್ಟುಸಿರು ಬಿಡುತ್ತದೆ. ಒಟ್ಟಿನಲ್ಲಿ ದೇಶಕ್ಕೆ ಗ್ರಾಮಗಳೇ ಆಧಾರಸ್ತಂಭಗಳು ಎನ್ನಬಹುದು.

ಹೀಗಿದ್ದಾಗ ಕೃಷಿಯ ಕ್ಷೇತ್ರ ಹಲವಾರು ಸಮಸ್ಯೆಗಳಿಗೆ ಸಿಲುಕಿರುವುದರಿಂದ ಗ್ರಾಮಗಳ ಸ್ಥಿತಿ ತುಂಬಾ ಶೋಚನೀಯವಾಗಿದೆ. ಭಾರತದ ಗ್ರಾಮಗಳು ಹಲವಾರು ಆರ್ಥಿಕ ಸಮಸ್ಯೆಗಳಿಂದಾಗಿ ಹಿಂದುಳಿದಿವೆ. ಗ್ರಾಮದ ಕೃಷಿ ಚಟುವಟಿಕೆಗಳಲ್ಲಿ ಆಧುನಿಕತೆ ಎಲ್ಲೆಡೆ ಗೋಚರಿಸುತ್ತದೆ. ಇಂದು ಗ್ರಾಮದಲ್ಲಿ ಹೊಲ ಊಳಲು ಎತ್ತುಗಳಿದ್ದರೂ ಟ್ರ್ಯಾಕ್ಟರಗಳ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಮತ್ತು ಯಂತ್ರೋಪಕರಣಗಳ ಬಳಕೆ ಕಂಡುಬರುತ್ತದೆ.

### ಯಂತ್ರಗಳ ಬಳಕೆ

ಇಂದು ಭೂಮಿಯನ್ನು ಊಳಲು ಹರಗಲು, ನೆಲವನ್ನು ಸಮತಟ್ಟಾಗಿ ಮಾಡಲು ಟ್ರ್ಯಾಕ್ಟರನ್ನೇ ಹೆಚ್ಚಾಗಿ ಬಳಸುತ್ತಾರೆ. ಅಷ್ಟೇ ಅಲ್ಲದೆ ಬಿತ್ತನೆ ಕಾರ್ಯವನ್ನು ಟ್ರ್ಯಾಕ್ಟರಗಳಿಂದಲೇ ಮಾಡಿಸುತ್ತಾರೆ. ಶೇಂಗಾ ಕಟಾವ ಮಾಡಲಿಕ್ಕೆ ಕಡಲೆ, ಜೋಳ ಇನ್ನು ಮುಂತಾದ ಬೆಳೆಗಳನ್ನು ಕೊಯ್ಯಲು ಯಂತ್ರಗಳನ್ನೇ ಬಳಸುತ್ತಾರೆ. ಹಿಂದೆ ಕಾಳುಗಳು ಮನೆ ತಲುಪಬೇಕಾದರೆ ತಿಂಗಳು ಬೇಕಾಗುತ್ತಿತ್ತು. ಆದರೆ ಇಂದು ಯಂತ್ರವನ್ನು ಹೊಲಕ್ಕೆ ತೆಗೆದುಕೊಂಡು ಹೋದರೆ ನೇರವಾಗಿ ಕಾಳುಗಳನ್ನು ಚೀಲದಲ್ಲಿ ತುಂಬಿಕೊಂಡು ಮನೆಗೆ ತಂದುಬಿಡುತ್ತಾರೆ. ಇನ್ನು ಎಲ್ಲ ಬೆಳೆಗಳಿಗೂ ಔಷಧಿ ಸಿಂಪಡಿಸುವುದರಿಂದ ಪೌಷ್ಠಿಕವಾದ ಆಹಾರ ನಮಗೆ ದೊರೆಯಲ್ಲ. ಔಷಧಿ ಸಿಂಪಡಿಸಲೂ ಕೂಡಾ ಔಷಧಿ ಸಿಂಪಡಣೆ ಪಂಪನ್ನು ಬಳಸುತ್ತಾರೆ.

### ರಾಸಾಯನಿಕ ಗೊಬ್ಬರದ ಬಳಕೆ

ಬೆಳೆಗೆ ಪೋಷಕವಾಗಿ ಗೊಬ್ಬರಗಳನ್ನು ನೀಡುತ್ತಾರೆ. ರೈತರೇ ಕಂಡುಕೊಂಡ ಗೊಬ್ಬರಗಳ ಜೊತೆಗೆ ರಾಸಾಯನಿಕ ಗೊಬ್ಬರಗಳು ಬಂದಿವೆ. ರೈತರು ರಾಸಾಯನಿಕ ಗೊಬ್ಬರವನ್ನು ಅಧಿಕ ಪ್ರಮಾಣದಲ್ಲಿ ಉಪಯೋಗಿಸುತ್ತಾರೆ. ಸಸ್ಯ ಬೆಳವಣಿಗೆಗೆ ವಿವಿಧ ತೆರನಾದ ಗೊಬ್ಬರ ಬಳಸುವುದುಂಟು. ಹಿಂಗಾರಿ ಮುಂಗಾರಿ ಕ್ಷೇತ್ರಗಳನ್ನು ಗಮನಿಸಿದರೆ ರಾಸಾಯನಿಕ ಗೊಬ್ಬರ ಬಳಸಿ ಅಲ್ಪ ಜಮೀನಿನಲ್ಲಿ ಅಧಿಕ ಇಳುವರಿ ಪಡೆಯುತ್ತಾರೆ. ಮಳೆ ಆಶ್ರಿತ ಭೂಮಿಯಲ್ಲಿಯೂ ಕೂಡಾ ರಾಸಾಯನಿಕ ಗೊಬ್ಬರದ ಬಳಕೆ ಇಲ್ಲದೆ ಬಿತ್ತನೆ ಕಾರ್ಯ ನಡೆಯುವುದಿಲ್ಲ.

ಮಂಗಳ, ಯೂರಿಯಾ, ಡಿ.ಎ.ಪಿ, ಬೋರಾನ್, ಪ್ಯಾಪ್ಪಂಪಾಸ್, ಪಾಸ್ಪೇಟ್, ಕಾಂಪೋಸ್ಟ್ ಗೊಬ್ಬರ, ರಸಗೊಬ್ಬರ, ವಿಜಯಾಗೊಬ್ಬರ, ಸಿ.ಎ.ಎನ್, ಕ್ಯಾಲ್ಸಿಯಂ, ಅಮೋನಿಯಂ ನೈಟ್ರೇಟ್‌ನಿಂದ ಕೂಡಿದ ಗೊಬ್ಬರ, ಸುಫಲ, ಸಾರಜನಕ, ರಂಜಕ ಪೊಟ್ಯಾಷ್‌ಗಳ ಮಿಶ್ರಣವಿರುವ ರಾಸಾಯನಿಕ ಗೊಬ್ಬರ, ಹತ್ತೊಂಬತ್ತು ಹತ್ತೊಂಬತ್ತು, ಆಧುನಿಕ ರಾಸಾಯನಿಕ ಗೊಬ್ಬರ ಈ ಎಲ್ಲ ತರಹದ ಗೊಬ್ಬರಗಳನ್ನು ಅಧಿಕ ಇಳುವರಿಗಾಗಿ ಗ್ರಾಮದಲ್ಲಿ ಬಳಸುತ್ತಾರೆ.

### ದೂರವಾಣಿ ಮತ್ತು ವಾಹನ ಸೌಲಭ್ಯ

ನಗರಗಳಲ್ಲಿ ಕಾಣಬರುವ ಆಧುನಿಕ ಮಾದರಿಯ ಸಾರಿಗೆ ಸಂಪರ್ಕಗಳಲ್ಲಿ ಬಹಳಷ್ಟು ನಮೂನೆಯಗಳು ಗ್ರಾಮಗಳಲ್ಲೂ ಈಗ ಹೇರಳವಾಗಿ ಲಭ್ಯವಾಗಿವೆ. ಸೈಕಲ್‌ಗಳು, ಸ್ಕೂಟರ್, ಮೋಟಾರ್‌ಬೈಕ್‌ಗಳು, ಕಾರು ಜೀಪುಗಳು, ಟ್ರ್ಯಾಕ್ಟರ್ ಇವು ಹಳ್ಳಿಗಳಲ್ಲೂ ಓಡಾಡುತ್ತಿವೆ. ರೇಡಿಯೋ ಟ್ರಾನ್ಸಿಸ್ಟರ್‌ಗಳ ಬಳಕೆ ಅಂದು ಬೆರಗುಗೊಳಿಸುತ್ತು. ಆದರೆ ಇಂದು ಪ್ರತಿಯೊಬ್ಬ ರೈತನ ಹತ್ತಿರ ಮೊಬೈಲ್‌ನ್ನು ಕಾಣುತ್ತೇವೆ. ಅದರ ಮೂಲಕವೇ ಆತ ಹಾಡುಕೇಳುತ್ತಾನೆ. ತನ್ನ ಸಾದ್ಯಾಸಧ್ಯತೆಗಳನ್ನು ಪೂರೈಸಿಕೊಳ್ಳುತ್ತಾನೆ. ಇದರ ಜೊತೆಗೆ ಎಷ್ಟೋ ಹಳ್ಳಿಗಳಲ್ಲಿ ದೂರದರ್ಶನದ ಸೌಲಭ್ಯವೂ ಇದೆ. ಉಳ್ಳವರ ಕೆಲವು ಮನೆಗಳಲ್ಲಿ ಕಂಪ್ಯೂಟರ್‌ಗಳು ಇವೆ. ಕೆಲವೆಡೆಗಳಲ್ಲಿ ಕೃಷಿಕಾರ್ಯಗಳು ಮೆಲ್ಲನೆ ಯಾಂತ್ರಿಕರಣದ ಪ್ರಭಾವಕ್ಕೆ ಒಳಪಡುತ್ತಿವೆ. ಇದಕ್ಕೆ ಯಮನೂರು ಗ್ರಾಮವು ಹೊರತಾಗಿಲ್ಲ.

### ಕಾಳು ಕಡಿ ಸಂಗ್ರಹ

ಇಂದು ವ್ಯಾಪಾರಸ್ಥರು ರೈತರಿಂದ ಕೃಷಿ ಉತ್ಪನ್ನಗಳನ್ನು ಅವರ ಮನೆಗಳಿಗೆ ಬಂದು ಅತ್ಯಂತ

ಕಡಿಮೆ ಬೆಲೆಗೆ ಕೊಂಡುಕೊಂಡು ಹೋಗುತ್ತಾರೆ. ಮತ್ತು ತಾವು ಅಧಿಕ ಲಾಭ ಪಡೆಯುತ್ತಾರೆ. ಏಕೆಂದರೆ ಇಂದು ರೈತರು ತಾವು ಬೆಳೆದ ಧಾನ್ಯಗಳನ್ನು ಕೆಡದಂತೆ ರಕ್ಷಿಸಿಕೊಳ್ಳಲು ಅಥವಾ ಉತ್ತಮ ಬೆಲೆ ಬರುವವರೆಗೆ ಸಂಗ್ರಹಿಸಿಟ್ಟುಕೊಳ್ಳಲು ಸೂಕ್ತ ಅನುಕೂಲತೆಗಳಿಲ್ಲ. ಬೆಳೆಗಾರರೇ ತಮ್ಮ ವಸ್ತುಗಳನ್ನು ಮಾರಾಟ ಮಾಡುವುದಕ್ಕಾಗಿ "ಸಹಕಾರೀ ಮಾರುಕಟ್ಟೆ"ಗಳನ್ನು ರಚಿಸಿಕೊಂಡಿದ್ದರೂ ಅದು ವ್ಯಾಪಕವಾಗಿಲ್ಲ, ಹೀಗಾಗಿ ರೈತರು ಬೆಳೆ ಬಂದಾಗ ಬಹಳ ಸಂಕಷ್ಟಕ್ಕೆ ಗುರಿಯಾಗುತ್ತಾರೆ.

ಆದರೆ ಹಿಂದೆ ಕಾಳು ಕಡಿ ಸಂಗ್ರಹ ಮಾಡಿಕೊಳ್ಳಲು 'ಹಗೇವು' ಎಂದು ಮಾಡಿಕೊಳ್ಳುತ್ತಿದ್ದರು. ಹಗೇವು ಎಂದರೆ "ಆಳವಾದ ತಗ್ಗು" ಇದರಲ್ಲಿ ಕಾಳುಗಳನ್ನು ಸಂಗ್ರಹಿಸುವ ಪದ್ಧತಿಯಿತ್ತು. ಹೀಗಾಗಿ ಗ್ರಾಮಗಳಲ್ಲಿ ಸಾಕಷ್ಟು ಹಗೇವುಗಳಿರುತ್ತಿದ್ದವು. ಆದರೆ ಇಂದು ಅವೆಲ್ಲಾ ಮುಚ್ಚಿಹೋಗಿವೆ. ಇದರಲ್ಲಿ ಹಾಕಿದ ಕಾಳುಗಳಿಗೆ ನುಸಿ ಆಗುತ್ತಿರಲಿಲ್ಲ. ಸುರಕ್ಷಿತವಾಗಿಡಲು ಪ್ರತಿಯೊಬ್ಬರ ಮನೆಯಲ್ಲೂ ಹಗೇವುಗಳಿರುವುದು ಕಂಡುಬರುತ್ತದೆ. ಆದರೆ ಇಂದು ಸಣ್ಣ ಕುಟುಂಬ ಇರುವುದರಿಂದ ಕಾಳುಗಳನ್ನು ಡಬ್ಬದಲ್ಲಿ ಹಾಕಿಡುವ ಪದ್ಧತಿ ಬೆಳೆದಿದೆ. ನಗರ ಪ್ರದೇಶದಲ್ಲಂತೂ ಮೋರ್‌ನಂತೆ ಅಂಗಡಿಗಳಿದ್ದು, ನಗರವಾಸಿಗಳಿಗೆ ಬಹಳಷ್ಟು ಅನುಕೂಲವಾಗಿದೆ. ಅಂಗಡಿಯಿಂದ ತಂದು ಸೀದಾ ನಾವು ಅಡಿಗೆಗೆ ಉಪಯೋಗಿಸಬಹುದು, ಗಿರಣಿಗೆ ಕಳಿಸಬಹುದು. ಅಷ್ಟು ಅನುಕೂಲವಿದೆ.

**ಸಾಕು ಪ್ರಾಣಿಗಳು**

ಕೃಷಿ ಆಧಾರಿತ ಕುಟುಂಬಗಳಲ್ಲಿ ಸಾಕು ಪ್ರಾಣಿಗಳು ಕೃಷಿಗೆ ಮಾತ್ರ ಸಹಕಾರಿ ಆಗದೆ ಅವರ ಆದಾಯದ ಮೂಲವೂ ಕೂಡ ಆಗಿವೆ. ಹಸು, ಎತ್ತು, ಎಮ್ಮೆ, ಆಡು, ಕುರಿ, ಕೋಳಿ ಮುಂತಾದ ಪ್ರಾಣಿಗಳನ್ನು ಸಾಕುವ ಯಮನೂರು ಗ್ರಾಮದ ಜನತೆ ಆ ಮೂಲಕವಾಗಿ ತಮ್ಮ ಆರ್ಥಿಕ ಉತ್ತಮಪಡಿಸಿಕೊಳ್ಳುತ್ತಿದ್ದಾರೆ.

ಹಿಂದೆ ಈ ಗ್ರಾಮದಲ್ಲಿ ಆಡು, ಕುರಿ ಹೋರಿ, ಕರುಗಳನ್ನು ಹಿಂಡು ಹಿಂಡಾಗಿ ಸಾಕುತ್ತಿದ್ದರು. ಜಾತ್ರೆಗಳಲ್ಲಿ, ಹಬ್ಬ ಹರಿದಿನಗಳಲ್ಲಿ ಮತ್ತು ಯಮನೂರಿನ ಸಮೀಪದ ತಾಲೂಕಾ ಪ್ರದೇಶವಾದ ನವಲಗುಂದದಲ್ಲಿ ವಾರಕ್ಕೊಮ್ಮೆ ದನದ ಸಂತೆಯಾಗುತ್ತದೆ. ಅಲ್ಲಿ ಹೋಗಿ ದನಗಳನ್ನು ಮಾರಾಟ ಮಾಡಿ ಹಣ ಸಂಪಾದಿಸುತ್ತಿದ್ದರು. ಇದರಿಂದ ತಮ್ಮ ಆರ್ಥಿಕ ಬದುಕನ್ನು ಸುಧಾರಿಸಿಕೊಳ್ಳುತ್ತಿದ್ದರು. ಹಿಂದೆ ಅವಿಭಕ್ತ ಕುಟುಂಬಗಳು ಬಹಳ ಇದ್ದವು. ಆ ಜನರು ಹೆಚ್ಚು ವಿದ್ಯಾವಂತರಲ್ಲದಿದ್ದರೂ ದಡ್ಡರು, ಆಲಸಿಗಳು, ಸೋಮಾರಿಗಳು ಆಗಿರಲಿಲ್ಲ. ಅವಿಭಕ್ತ ಕುಟುಂಬದ ಏಳಿಗೆಗೆ ಒಬ್ಬರೇ ದುಡಿದರೆ ಸಾಕಾಗುತ್ತಿರಲಿಲ್ಲ. ಪ್ರತಿಯೊಬ್ಬ ಸದಸ್ಯರುಗಳು, ಒಂದೊಂದು ಕೆಲಸವನ್ನು ನಿರ್ವಹಿಸುವ ಜವಾಬ್ದಾರಿ ಹೊತ್ತು ಕುಟುಂಬದ ಏಳಿಗೆಗೆ ಹಗಲಿರುಳು ದುಡಿಯುತ್ತಿದ್ದರು. ಓರ್ವ ಆಡು ಕುರಿ ಮೇಯಿಸುವುದು, ವ್ಯವಸಾಯ ಮಾಡುವುದು, ಹಾಲು ಮಾರುವುದು, ದನಕರುಗಳನ್ನು ಮೇಯಿಸುವುದು ಇವು ಕುಟುಂಬದಲ್ಲಿನ ಸದಸ್ಯರುಗಳು ಮಾಡುವ ಕಾರ್ಯ ಚಟುವಟಿಕೆಗಳಾಗಿರುತ್ತಿದ್ದವು.

ಆಧುನಿಕತೆಯ ಪರಿಣಾಮದಿಂದಾಗಿ ಅವಿಭಕ್ತ ಕುಟುಂಬಗಳು ಒಡೆದು ಪರಸ್ಪರರಲ್ಲಿ ನಂಬಿಕೆ, ವಿಶ್ವಾಸ, ಸಹಕಾರ ಮನೋಭಾವನೆ ಹೋಗಿ ಸಂಕುಚಿತ ಮನೋಭಾವನೆ ಜನರಲ್ಲಿ ಮೂಡಿದೆ. ಈ ಕುಟುಂಬದ ಸದಸ್ಯರುಗಳು ತಮ್ಮ ಹೊರೆ ಜವಾಬ್ದಾರಿ, ತಾಪತ್ರಯಗಳನ್ನು ಕಡಿಮೆ ಮಾಡಿಕೊಂಡಿದ್ದರಿಂದಾಗಿ ಕುರಿ, ಆಡು, ಕೋಳಿ ಸಾಕುವ ಪ್ರವೃತ್ತಿ ಕಡಿಮೆಯಾಗಿ ಆ ಮೂಲಕ ಬರುತ್ತಿದ್ದ ಆದಾಯ ಕಡಿಮೆಯಾಗಿದೆ.

ವ್ಯವಸಾಯದ ಅನುಕೂಲಕ್ಕೆ ಸಾಕುತ್ತಿದ್ದ ಹಸು, ಎತ್ತು, ಎಮ್ಮೆ, ಕುರಿ, ಆಡುಗಳ ಗೊಬ್ಬರ ವ್ಯವಸಾಯಕ್ಕೆ ಉಪಯೋಗವಾಗುತ್ತಿದೆ. ಹಾಗೆಯೇ ಅವುಗಳಿಂದ ದೊರೆಯುತ್ತಿದ್ದ ಹಾಲು, ಮನೆ ಬಳಕೆಗೆ ಅಂದರೆ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ, ಕಾಫಿ, ಚಹಾ ಹಾಗೂ ಮಕ್ಕಳಿಗೆ ಕುಡಿಯಲು ಬಳಸುತ್ತಿದ್ದರು. ಸಾಕಾಗಿ ಉಳಿದದ್ದು, ನೆರೆಹೊರೆಯವರಿಗೆ ನೀಡುವುದರಿಂದ ಆರ್ಥಿಕ ಪ್ರಗತಿ ಸುಧಾರಿಸುವುದಲ್ಲದೆ ಪರಸ್ಪರ ಸಹಬಾಳ್ವೆಗೆ ಕಾರಣವಾಗಿತ್ತು. ಆದರೆ ಇಂದು ಸರ್ಕಾರ, ಸರ್ಕಾರಿ ಬ್ಯಾಂಕುಗಳು ಹಾಗೂ ಸಹಕಾರ ಸಂಘಗಳು ಸಾಲ ಸೌಲಭ್ಯ ನೀಡುತ್ತ ಹೋದ ಹಾಗೆ, ಸಾಲ ಸೌಲಭ್ಯಗಳನ್ನು ಪಡೆದ ಜನರು ಹಲವಾರು ಹೊಸ ಹೊಸ ತಳಿಗಳ ಆಕಳುಗಳನ್ನು, ಎಮ್ಮೆಗಳನ್ನು ಸಾಕಿ ಹಾಲು ಉತ್ಪಾದಕರ ಸಂಘಗಳಿಗೆ ಹಾಲು ಹಾಕುತ್ತಿರುವುದರಿಂದ ದಿನವೊಂದಕ್ಕೆ ಗ್ರಾಮದಲ್ಲಿ ಐದುನೂರು ಲೀಟರ್‌ವರೆಗೆ ಹಾಲು ಸಂಗ್ರಹವಾಗುತ್ತಿದೆ.

**ವ್ಯಾಪಾರ ವಹಿವಾಟು**

ಇತ್ತೀಚೆಗೆ ಗ್ರಾಮ ಸಮುದಾಯದ ಕಾರ್ಯಗಳು ತೀವ್ರವಾಗಿ ಬದಲಾಗುತ್ತಿವೆ. ವಿಶ್ವದ ಎಲ್ಲೆಡೆ ಸಾಂಪ್ರದಾಯಿಕ ಗ್ರಾಮ ಸಮುದಾಯಗಳು, ಆಧುನೀಕರಣಕ್ಕೆ ಗರಿ ಆದಂತೆ ಯಮನೂರು ಗ್ರಾಮವು ಸ್ವಲ್ಪ ಮಟ್ಟಿಗೆ ಆಧುನೀಕರಣಕ್ಕೆ ಗುರಿಯಾಗುತ್ತಲಿದೆ.

ಯಮನೂರು ಗ್ರಾಮವು ಹೋಬಳಿ ಗ್ರಾಮವಾಗಿದೆ. ಆದ್ದರಿಂದ ಹಿಂದಿನಿಂದ ಇಂದಿನವರೆಗೂ ಕುಟುಂಬಕ್ಕೆ ಅನುಕೂಲವಾಗುವ ಹಾಗೆ ಚಿಕ್ಕಪುಟ್ಟ ವ್ಯಾಪಾರಗಳು ನಡೆಯುತ್ತಲಿವೆ. ಗ್ರಾಮದ ಹಲವಾರು ವ್ಯಾಪಾರಿಗಳು ದಿನನಿತ್ಯದ ಆಹಾರ ಸಾಮಗ್ರಿಗಳಿಂದ ಹಿಡಿದು ದವಸ ಧಾನ್ಯದವರೆಗೆ ವ್ಯಾಪಾರ ವಹಿವಾಟು ನಡೆಸುತ್ತಾರೆ.

ಗ್ರಾಮದಲ್ಲಿನ ವಿವಿಧ ಉದ್ಯೋಗಗಳನ್ನು ಈ ರೀತಿಯಾಗಿ ಕ್ಷೇತ್ರಕಾರ್ಯದ ಮೂಲಕ ಗುರುತಿಸಲಾಗಿದೆ. ಅಂತೆಯೇ ಗ್ರಾಮದಲ್ಲಿ ಚಿಕ್ಕ ಪಾನಬೀಡಾ ಅಂಗಡಿಯಿಂದ ಹಿಡಿದು ವಿವಿಧ ವ್ಯಾಪಾರವನ್ನು ಮಾಡುವವರು ಗ್ರಾಮದಲ್ಲಿದ್ದಾರೆ.

**ಕಿರಾಣಿ ಅಂಗಡಿಗಳು**

ಈಶ್ವರಪ್ಪ ಈ ಕೆಸರಪ್ಪನವರ

ಕುಮಾರೇಶ ಈ ಕೆಸರಪ್ಪನವರ

ನಾರಾಯಣರಡ್ಡಿ ಹೆ ನಿತ್ತಿ

ಮಹಾದೇವಪ್ಪ ತಿ. ಮುಳ್ಯಾಳ

ಶಾಂತಪ್ಪ ದಾ ಕೆಸರಪ್ಪನವರ

ಮಾಂತೇಶ ಫ ಹಿರೇಮಠ

ಮಳಿಸಿದ್ದಪ್ಪ ಚ.ಕೆಸರಪ್ಪನವರ

ಸೋಮನಾಥಗೌಡ ಮ.ಸರನುಡಗೌಡರ

ಶಂಕರರಾವ್ ಮಾ.ಮುಧೋಳ

**ಪಾನ್ ಶಾಪ್‌ಗಳು**

ಶಿವರಡ್ಡಿ ಹ ನಿಂಗರಡ್ಡಿ

ಹಸನಸಾಬ ಖಾ ಮುಲ್ಲಾ

ಯಲ್ಲರಡ್ಡಿ ಹನಮರಡ್ಡಿ ಲಿಂಗರಡ್ಡಿ

ರೋಕನಸಾಬ ವ ಮಕಾನದಾರ

ಕಲ್ಲಪ್ಪ ಗು ಜುಮ್ಮನ್ನವರ

ಕೊಟ್ರಯ್ಯಾ ಈ ಗೌರಿಮಠ

ಶ್ರೀಮತಿ ಗಂಗಮ್ಮ ಅ.ಬಾರಕೇರ

**ಕೂಲ್‌ಡ್ರಿಂಕ್ಸ್ ಅಂಗಡಿಗಳು**

ಗುರಪ್ಪ ಅನವಾಲ

ಪವಡಪ್ಪ ನಿ ಪವಾಡಿ

ಮಂಜುನಾಥ ಮ.ಕೆಸರಪ್ಪನವರ

ಅಶೋಕ ನಾ.ಲಿಂಗರಡ್ಡಿ

ಶಂಕ್ರಪ್ಪ ಮ.ಕೆಸರಪ್ಪನವರ

ವಿಶ್ವನಾಥ ಸು.ನಾಯ್ಕ

**ಮುಕ್ತುಮ್ ಸಕ್ಕರೆ ಅಂಗಡಿಗಳು**

ಶ್ರೀಮತಿ ಸುವರ್ಣಾ ಕಂಬಿ

ಮಹಮ್ಮದ್‌ಗೌಸ ಮೀ ಅತ್ತಾರ

ಆನಂದ ಕೆಸರಪ್ಪನವರ

ಇಮಾಮಸಾಬ ಮ.ದಿಲಿಗಾರ

ಮಹಮ್ಮದಲಿ ತಹಶೀಲ್ದಾರ

ಮುಕ್ತುಸಾಬ ಬಡದಿ

ಭಾಸ್ಕರಸಾಬ ಮ.ಎಲಿಗಾರ

ಹನುಮಂತಪ್ಪ ಪ.ಅಚ್ಚಲಕರ

ಶ್ರೀಮತಿ ಪಾತೋಬಿ ಅ.ಲಕ್ಕುಂಡಿ

ಪತ್ತೆಸಾಬ ಎಲಿಗಾರ

ಶಿವಾನಂದ ಪಾಲಂಕಿಮಠ

ಸಿದ್ದಯ್ಯ ಕಿರಗಿ

ಸಿದ್ದರಾಮಯ್ಯ ಕಂಬಿ

ಮಿಯಾಸಾಬ ಅತ್ತಾರ

ನೀಲವ್ವ ದೆ.ಕೋಳಿವಾಡ

ರಾಘವೇಂದ್ರ ಕೋಳಿವಾಡ

ಮಂಜುನಾಥ ಕಮ್ಮಾರ

ಶಮ್ಮು ಹಳೆಮನಿ

ನಾರಾಯಣ ಬರ್ಗೆ

ಭಾಷಾಸಾಬ ಎಲಿಗಾರ

**ಹೊಟೇಲ್‌ಗಳು**

ಸಿದ್ದಪ್ಪ ಫ.ಬೇವಿನಕಟ್ಟಿ

ಶೇಖಪ್ಪ ಬಿ.ಹೆಬ್ಬಳ್ಳಿ

ಶೇಷರಡ್ಡಿ ಬ.ಲಿಂಗರಡ್ಡಿ

ಪ್ರಕಾಶ ಲ.ಲಿಂಗರಡ್ಡಿ

ಹನುಮಂತಪ್ಪ ಕ.ಚುಳಕಿ

ಹೇಮರಡ್ಡಿ ನಾ.ಲಿಂಗರಡ್ಡಿ (ಡಾಬಾ)

**ಮೊಬೈಲ್ ಕರೆನ್ಸಿ ಅಂಗಡಿಗಳು**

ಶಿವರಡ್ಡಿ ಹ.ಲಿಂಗರಡ್ಡಿ ಕರೆನ್ಸಿ ಮತ್ತು ಜೆರಾಕ್ಸ್

ನಾರಾಯಣರಡ್ಡಿ ಹೆ.ರಿತ್ತಿ

ಕುಮಾರ ಕೆಸರಪ್ಪನವರ

ಈಶ್ವರಪ್ಪ ಕೆಸರಪ್ಪನವರ

**ಟೇಲರಿಂಗ್**

೧. ಶ್ರೀ ಪ್ರಭು ಬಸಯ್ಯ ಹಿರೇಮಠ

೨. ಶ್ರೀ ಸಿದ್ದಲಿಂಗಯ್ಯ ಈರಯ್ಯ ರ‍್ಯಾವಣ್ಣವರ

೩. ಹನುಮಪ್ಪ ಬಸಪ್ಪ ಆಚಲಕರ್

೪. ಶ್ರೀ ಉಲಾಸರಾವ್ ನಾನಾಸಾಬ ಬರ್ಗೆ

೫. ಶಿವಾನಂದ ಯಲ್ಲಪ್ಪ ಪೂಜಾರಿ

೬. ಶ್ರೀಮತಿ ಚಂದ್ರವ್ವ ಶೇಖಪ್ಪ ಚುರಮರಿ

೭. ಶ್ರೀಮತಿ ಬಸವ್ವ ಸಿದ್ದಲಿಂಗಯ್ಯ ಹಿರೇಮಠ

**ಹಿಟ್ಟಿನ ಗಿರಣಿ**

ಮಲ್ಲಪ್ಪ ದೊ.ಸಾರಾವರಿ

ಶಿವನಗೌಡ ಫ.ಪಾಟೀಲ

ಮಡಿವಾಳಯ್ಯ ಮ.ಕಂಬಿ (ಚಾಲನೆ ಇಲ್ಲ)

ರುದ್ರಗೌಡ ಮ.ಸರನಾಡಗೌಡರ (ಚಾಲನೆ ಇಲ್ಲ)

**ಮನೆ ಬಾಗಿಲು ಮತ್ತು ಕಿಟಕಿ ಮಾರಾಟದ ಅಡ್ಡೆ (ಅಂಗಡಿ)**

೧. ರುದ್ರಪ್ಪ ಶೇಷರಡ್ಡಿ ಹಳ್ಳಿಕೇರಿ

೨. ಬಾಬುಸಾಬ ಖೋತಬಾಳ

೩. ದಾವಲಸಾಬ ಜೆ.ನಾಯಕರ

**ಖಾನಾವಳಿಗಳು**

೧. ಸಿದ್ಧಲಿಂಗಯ್ಯ, ಈರಯ್ಯಾ, ರ್‍ಯಾವಣ್ಣವರ

೨. ವೀರಭದ್ರಯ್ಯ ವಿ.ರ್‍ಯಾವಣ್ಣವರ

೩. ಸದಾ ಫ.ಕಲಾಲ

೪. ಮಹಾಂತೇಶ ಕೃ.ಕಲಾಲ

**ಫೋಟೊ ಸ್ಟುಡಿಯೋ**

೧. ರಾಮರಡ್ಡಿ ಬ.ಕುರಹಟ್ಟಿ

**ಫೋಟೋ ಅಂಗಡಿಗಳು**

೧. ಶ್ರೀಕಾಂತ ಅ.ಜಕ್ಕಲಿ

೨. ಅಬ್ದುಲ್ ಬಸರಿ

**ಬಟ್ಟೆ ಅಂಗಡಿಗಳು**

೧. ಬಸವರಾಜ ಮಡ್ಡೆಣ್ಣವರ

**ಮಿಠಾಯಿ ಅಂಗಡಿ**

೧. ಬಾಬುಸಾಬ ರಾ.ಎಲಿಗಾರ

**ಪೆಟ್ರೋಲ್ ಬಂಕ್**

ಚಂದ್ರಶೇಖರಪ್ಪ ಬ.ಸಿದ್ರಾಮಶೆಟ್ಟಿ

**ಕೆ.ಜಿ.ಎನ್.ಶಾಮಿಯಾನ**

೧. ರಾಜೇಸಾಬ ಮಕಾನದಾರ

೨. ಇಮಾಮಸಾಬ ಎಲಿಗಾರ

**ಆರ್ಥಿಕ ಸಂಘ ಸಂಸ್ಥೆಗಳು**

ತೀರ ಸಣ್ಣ ಗ್ರಾಮವಾಗಿರುವುದರಿಂದ ಇಲ್ಲಿ ಯಾವುದೇ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿಲ್ಲ. ಆದರೆ ಈ ಗ್ರಾಮದಲ್ಲಿರುವ ಜನರ ಆರ್ಥಿಕ ವಹಿವಾಟಿಗೆ ಯಮನೂರಿಗೆ ಸಮೀಪದ ತಾಲೂಕಾ ಕ್ಷೇತ್ರವಾದ

ನವಲಗುಂದದ ಬ್ಯಾಂಕಿನೊಂದಿಗೆ ವ್ಯವಹಾರ ಇಟ್ಟುಕೊಂಡಿದ್ದಾರೆ. ಮತ್ತು ಯಮನೂರಿಗೆ ಸಮೀಪದಲ್ಲಿರುವ ಗ್ರಾಮವಾದ ಆರೇಕುರಹಟ್ಟಿಯಲ್ಲಿರುವ ಬ್ಯಾಂಕಿನೊಂದಿಗೆ ವ್ಯವಹರಿಸುತ್ತಿದ್ದಾರೆ. ಆ ಗ್ರಾಮದಲ್ಲಿ ೧.ಎಂ.ಜಿ.ಬ್ಯಾಂಕ್ ಕೊಂ. ಈ ಬ್ಯಾಂಕಿನಲ್ಲಿ ಪ್ರತಿಶತ ೭೫%ರಷ್ಟು ಸಾಲವನ್ನು ಪಡೆದುಕೊಳ್ಳುತ್ತಾರೆ. ಅದೇ ರೀತಿ ೨.ಸ್ಟೇಟ್‌ಬ್ಯಾಂಕ್ ಆಫ್ ಇಂಡಿಯಾ ನವಲಗುಂದ ಈ ಬ್ಯಾಂಕಿನಲ್ಲಿ ಪ್ರತಿಶತ ೨೫%ರಷ್ಟು ಸಾಲ ಪಡೆದುಕೊಳ್ಳುತ್ತಾರೆ. ೩. ಕೋ ಆಪರೇಟಿವ್ ಸೊಸೈಟಿ ನವಲಗುಂದ ಈ ಸೊಸೈಟಿಯ ಮೂಲಕ ಅನೇಕ ಜನ ಸಾಲ ಸೌಲಭ್ಯ ಪಡೆದಿದ್ದಾರೆ. ಸರ್ಕಾರದ ಸಹಾಯಧನ, ಸಬ್ಸಿಡಿಯಂತಹ ಅನುಕೂಲತೆಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಎಲ್ಲ ಬ್ಯಾಂಕುಗಳು ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುತ್ತಿರುವುದರಿಂದ ಆರ್ಥಿಕವಾಗಿ ಸಬಲತೆಯನ್ನು ಸಾಧಿಸಿಕೊಳ್ಳುತ್ತಿದ್ದಾರೆ. ಆರ್ಥಿಕ ಸಬಲನಾಗದೇ, ಹಳ್ಳಿಯ ಗಮಾರ ಎನಿಸಿಕೊಳ್ಳಲು ಇಷ್ಟಪಡದೆ ಸಾಲಮಾಡಿಯಾದರೂ ಬದುಕನ್ನು ಸುಧಾರಿಸಿಕೊಳ್ಳಲು ಬಯಸುತ್ತಿದ್ದಾನೆ. ಹಾಗೆಂದೇ ಎಂ.ಜಿ.ಬ್ಯಾಂಕ್ ಆರೇಕುರಹಟ್ಟಿ ಬ್ಯಾಂಕಿನಿಂದ ಅತಿ ಹೆಚ್ಚು ಸಾಲವನ್ನು (೭೫%) ಯಮನೂರು ಗ್ರಾಮದಲ್ಲಿ ಪಡೆದಿದ್ದು ಕಂಡುಬರುತ್ತದೆ. ಗ್ರಾಮದಲ್ಲಿ ಕೃಷಿಗೆ ಬೇಕಾಗುವ ಉಪಕರಣಗಳನ್ನು ಕೊಳ್ಳಲು ಈ ಬ್ಯಾಂಕಿನ ಸಹಾಯವೂ ಪ್ರಯೋಜನಕಾರಿಯಾಗಿದೆ. ಕೋ ಆಪರೇಟಿವ್ ಸೊಸೈಟಿ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎಂ.ಜಿ. ಬ್ಯಾಂಕ್ ಆರೇಕುರಹಟ್ಟಿ, ಮುಂತಾದ ಕಡೆಗಳಿಂದ ಸಾಲ ಸೌಲಭ್ಯ ಪಡೆದು ವಾಹನ, ಕೃಷಿ ಉಪಕರಣಗಳು, ಟ್ರ್ಯಾಕ್ಟರ್ (ಒಟ್ಟು ೩೨ ಟ್ರ್ಯಾಕ್ಟರ್)ಗಳನ್ನು ತೆಗೆದುಕೊಂಡಿದ್ದಾರೆ. ದ್ವಿಚಕ್ರ ವಾಹನಗಳನ್ನು ಖರೀದಿಸಿದ್ದಾರೆ. ಎಷ್ಟೋ ವೇಳೆ ಬರಗಾಲ ಬಂದಾಗ ಸಾಲತೀರಿಸುವಷ್ಟೇ ಅಲ್ಲ ಅದರ ಬಡ್ಡಿ ಕಟ್ಟಲು ಆಗದೇ ಪರದಾಡುವ ಸ್ಥಿತಿಯನ್ನು ಕಾಣುತ್ತೇವೆ.

ಅಂತಹ ಸಂದರ್ಭದಲ್ಲಿ ಸರಕಾರದ ಸಾಲಮನ್ನಾದಂತಾ ಕಾರ್ಯಕ್ರಮಗಳು ಸ್ವಲ್ಪಮಟ್ಟಿಗೆ ಆರ್ಥಿಕ ಬದುಕಿಗೆ ಹುರುಪು, ಹುಮ್ಮಸ್ಸನ್ನು ನೀಡಿದರೂ ಸಂಪೂರ್ಣವಾಗಿ ಸಾಲಮುಕ್ತರಾಗುವುದು ಸಾಧ್ಯವಿಲ್ಲದ ಮಾತಾಗಿದೆ.

**ಗ್ರಾಮೀಣ ಸ್ವ-ಸಹಾಯ ಸಂಘಗಳು**

ಗ್ರಾಮದ ಆರ್ಥಿಕ ಅಭಿವೃದ್ಧಿಗೆ ಅನೇಕ ಸ್ವ-ಸಹಾಯ ಸಂಘಗಳನ್ನು ಸಂಘಟಿಸಲಾಗುತ್ತದೆ. ಗ್ರಾಮದಲ್ಲಿ ಪುರುಷ ಹಾಗೂ ಮಹಿಳಾ ಸಂಘಗಳನ್ನು ಸ್ಥಾಪಿಸಿ, ಅವರಲ್ಲಿ ಚಿಕ್ಕ ಉಳಿತಾಯದ ಅರಿವು ಮೂಡಿಸಿ ಪುರುಷ ಹಾಗೂ ಮಹಿಳಾ ಆರ್ಥಿಕ ಸಬಲೀಕರಣಕ್ಕೆ ಹೆಚ್ಚು ಒತ್ತು ನೀಡಲಾಗಿದೆ.

**ಈ ಸಂಘಗಳ ಸ್ಥಾಪನೆಯ ಉದ್ದೇಶಗಳು ಈ ರೀತಿಯಾಗಿವೆ**

೧. ಮಹಿಳಾ ನಿರುದ್ಯೋಗ ನಿರ್ಮೂಲನೆ

೨. ಮಹಿಳಾ ಸಬಲೀಕರಣ

೩. ಸಾಮರ್ಥ್ಯ ಬಲವರ್ಧನೆ

೪. ನಾಯಕತ್ವ ತರಬೇತಿ

೫. ಆದಾಯ ಉತ್ಪನ್ನ ಚಟುವಟಿಕೆಗಳನ್ನು ರೂಪಿಸುವುದು.

೬. ಸ್ತ್ರೀಯರನ್ನು ಕ್ರಿಯಾಶೀಲರನ್ನಾಗಿ ಮಾಡುವುದು. ಹೀಗೆ ವಿವಿಧ ಉದ್ದೇಶಗಳ ಈಡೇರಿಕೆಗಾಗಿ ಗ್ರಾಮದಲ್ಲಿ ಸಂಘ ಸಂಸ್ಥೆಯ ಮೂಲಕ ಸಾರ್ವಜನಿಕರ ಪಾಲುದಾರಿಕೆಯಲ್ಲಿ ಈ ಕಾರ್ಯಗಳು ಜರುಗುತ್ತಿರುವುದು ವಿಶೇಷವಾಗಿದೆ.

ಜಮೀನು ಇರಲಾರದ ಸಂಘದ ಸದಸ್ಯರಿಗೆ ಬಡ್ಡಿರಹಿತ ಸಾಲ ನೀಡುವುದು. ಕೃಷಿಭೂಮಿ ಇರುವವರಿಗೆ ಕಡಿಮೆ ಬಡ್ಡಿಯ ಮೂಲಕ ಸಾಲ ನೀಡುವರು. ಇದರಿಂದ ಅವರು ತಮ್ಮ ಆರ್ಥಿಕ ಬದುಕನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಸಂಘದ ಸದಸ್ಯರು ನಿಗದಿಪಡಿಸಿದ ಅವಧಿಗೆ ಸರಿಯಾಗಿ ಸಾಲದ ಕಂತು ಮರುಪಾವತಿಸಲು ಸಾಲಗಾರರು ಶ್ರಮಿಸುತ್ತಾರೆ. ಜವಾಬ್ದಾರಿ ಅರಿತುಕೊಂಡು ಆರ್ಥಿಕ ಸಬಲೀಕರಣದತ್ತ ಸಾಗುವುದು ಇದರ ಉದ್ದೇಶವಾಗಿದೆ.

ಹೀಗೆ ವಿವಿಧ ಕಾರ್ಯಕ್ರಮಗಳ ಮೂಲಕ ಸಾರ್ವಜನಿಕ ಆರ್ಥಿಕ ಹೊಣೆಗಾರಿಕೆ ನಿರ್ವಹಿಸುವಲ್ಲಿ ಗ್ರಾಮದ ಸ್ತ್ರೀಯರು ಜಾಗೃತರಾಗಿದ್ದಾರೆ. ಮತ್ತು ಸ್ವಾವಲಂಬಿಗಳಾಗಿ ಬದುಕಲು ಅವಕಾಶ ನೀಡಿದಂತಾಗುತ್ತದೆ. ಇದರ ಮೂಲಕ ಸಾಲ ತೆಗೆದುಕೊಂಡು ಸಣ್ಣಪುಟ್ಟ ವ್ಯಾಪಾರ ಮಾಡಲು ತೊಡಗಿದ್ದಾರೆ.

ಉದಾಹರಣೆಗಾಗಿ ಒಳ್ಳೆಯ ತಳಿಯ ಎಮ್ಮೆಗಳನ್ನು ಕೊಂಡುಕೊಂಡು, ಹೈನುಗಾರಿಕೆ ಮಾಡುತ್ತಾರೆ. ಇದರಿಂದ ಇವರು ತಕ್ಕಮಟ್ಟಿನ ಜೀವನ ಸಾಗಿಸಲು ಅನುಕೂಲವಾಗುತ್ತದೆ. ಹೊಲಿಗೆ ಕಲಿತ ಹೆಣ್ಣುಮಕ್ಕಳು ಹೊಲಿಗೆ ಯಂತ್ರಗಳನ್ನು ಖರೀದಿಸುತ್ತಾರೆ. ಗುಡಿಕೈಗಾರಿಕೆಗಳಾದ ಶ್ಯಾವಿಗೆ ತಯಾರಿಸುವುದು, ಸೆಣಬಿನ ಉತ್ಪಾದನೆ, ಕೋಳಿ ಸಾಕುವುದು, ಆಡು ಖರೀದಿಸುವುದು ಇವೆಲ್ಲಾ ಜೀವನೋಪಾಯಕ್ಕಾಗಿ ಮಾಡುವ ಆರ್ಥಿಕ ಸೌಲಭ್ಯಗಳು.

**ಮಹಿಳಾ ಸ್ವ ಸಹಾಯ ಸಂಘಗಳು**

| ಅ ನಂ. | ಸಂಘದ ಹೆಸರು | ಸದಸ್ಯರು | ಪ್ರತಿನಿಧಿ ೧ | ಪ್ರತಿನಿಧಿ ೨ | ಸದಸ್ಯರ ಸಂಖ್ಯೆ | ವಾರದ ಉಳಿತಾಯ |
|---|---|---|---|---|---|---|
| ೧. | ಶ್ರೀ ಲಕ್ಷ್ಮಿ ಸ್ವ ಸಹಾಯ ಸಂಘ | ಜಯಶ್ರೀ ಈರಣ್ಣಾ ಕೆಸರಪ್ಪನವರ | ಜಯಶ್ರೀ ಈ ಕೆಸರಪ್ಪನವರ | ಕಲ್ಲವ್ವ ಶಿ ಪಾಲಂಕಿ ಮಠ | ೧೦ | ೧೦ |
| ೨. | ವಿದ್ಯಾಶ್ರೀ ಸ್ವ ಸಹಾಯ ಸಂಘ | ವಿಜಯಲಕ್ಷ್ಮಿ ದೇವೇಂದ್ರಪ್ಪ ಪತ್ತಾರ ಹಾದೋಡಿ | ರಾಜಾಬಿ ಹು. ಭಿಷ್ಟಪ್ಪನವರ | ಕಸ್ತೂರಿ ಬಾ | ೧೩ | ೨೦ |
| ೩. | ಮಲ್ಲಮ್ಮ ತಾಯಿ ಸ್ವ ಸಹಾಯ ಸಂಘ | ಚಂದ್ರಪ್ಪ ಶೇಕಪ್ಪ ಚುರಮರಿ ಗಿರಿಜವ್ವ ಪರಸಪ್ಪ ಮರಿಶಿದ್ದಣ್ಣವರ | ನೀಲವ್ವ ಶೇಖಪ್ಪ ಚುರಮರಿ | ಮಲ್ಲವ್ವ ದೇವಪ್ಪ ಸಾರಾವರಿ | ೧೧ | ೨೫ |
| ೪. | ಸರಸ್ವತಿ ಸ್ತ್ರೀಶಕ್ತಿ ಸ್ವ ಸಹಾಯ ಸಂಘ | ಬಸವ್ವ ರುದ್ರಯ್ಯ ಕರಣ್ಣವರ (ಜಡಿಮಠ) | ಸಿದ್ದವ್ವ ಕ. ಕಲನಾಯ್ಕರ | ಬಸವ್ವ ರು. ಕರಣ್ಣವರ (ಜಡಿಮಠ) | ೧೦ | ೧೦ |
| ೫. | ವೈಭವ ಸ್ತ್ರೀಶಕ್ತಿ ಸಂಘ | ಕಸ್ತೂರೆವ್ವ ಬಸವರೆಡ್ಡಿ ಕುರಹಟ್ಟಿ | ರಿಂದ್ರವ್ವ ಬ. ತಮ್ಮನಗೌಡ್ರು | ಕಸ್ತೂರೆವ್ವ ಬ.ಕುರಹಟ್ಟಿ | ೧೦ | ೨೫ |

### ೩.೧೫. ಶೈಕ್ಷಣಿಕ ಸ್ಥಿತಿಗತಿ

ಭರತಖಂಡದ ಒಂದು ಅಂಗವಾದ ಕರ್ನಾಟಕ ಇತರ ಅಂಶಗಳಂತೆ ವಿದ್ಯಾಭ್ಯಾಸದ ವಿಚಾರದಲ್ಲಿಯೂ ಅದರ ಇತಿಮಿತಿ, ವ್ಯಾಪ್ತಿಗಳನ್ನು ಅವಲಂಬಿಸಿ ಬೆಳೆದರೂ ತನ್ನದೇ ಆದ ವೈಶಿಷ್ಟ್ಯವನ್ನು ತೋರ್ಪಡಿಸಲು ಶಕ್ತವಾಯಿತು. ಪ್ರಾಚೀನ ಕರ್ನಾಟಕದ ವಿದ್ಯಾಭ್ಯಾಸದಲ್ಲಿ ಕಂಡುಬರುವ ಒಂದು ಪ್ರಮುಖವಾದ ಅಂಶವೆಂದರೆ ವಿದ್ಯಾಭ್ಯಾಸವು ಊರೂರುಗಳಲ್ಲಿ, ಹಳ್ಳಿಹಳ್ಳಿಗಳಲ್ಲಿ, ಅಗ್ರಹಾರಗಳು, ಮಠಗಳು, ಘಟಿಕಾ ಸ್ಥಾನಗಳು ನಿರ್ಮಾಣವಾಗಿ ವಿದ್ಯೆಯನ್ನು ಕೊಡುವ ಕೇಂದ್ರಗಳಾದವು. ಇವುಗಳಷ್ಟೇ ಅಲ್ಲದೇ ಪ್ರಾಚೀನ ಕರ್ನಾಟಕದಲ್ಲಿ ಅನೇಕ ದೇವಾಲಯಗಳು, ಜೈನ, ಬೌದ್ಧ ಬಸ್ತಿಗಳು, ವಿಹಾರಗಳು ವಿದ್ಯೆಯನ್ನು ಕಲಿಸುವ ಕೇಂದ್ರಗಳಾಗಿದ್ದವು.

ಘಟಿಕಾ, ಬ್ರಹ್ಮಪುರಿ, ಅಗ್ರಹಾರಗಳು ವಿದ್ಯಾಸಂಸ್ಥೆಗಳಾಗಿದ್ದವು. ಘಟಿಕಾ ಎನ್ನುವುದು ಧಾರ್ಮಿಕ ಶಿಕ್ಷಣ ಕೇಂದ್ರವಾಗಿದೆ. ಅದರ ವ್ಯಾಪ್ತಿ ಕಿರಿದಾಗಿತ್ತು. ಅಂದರೆ ಈಗ್ಗಿನ ಪ್ರಾಥಮಿಕ ಶಾಲೆಗಳ ಹಾಗಿತ್ತು. ಅಗ್ರಹಾರ ಮತ್ತು ಬ್ರಹ್ಮಪುರಿಗಳು, ಪಠ್ಯ ವಿಷಯಗಳ ದೃಷ್ಟಿಯಿಂದಲೂ, ವಿದ್ಯಾರ್ಥಿಗಳ ಸಂಖ್ಯೆಯ ದೃಷ್ಟಿಯಿಂದಲೂ ಬಹಳ ವ್ಯಾಪಕವಾಗಿದ್ದವು. ಅಂದರೆ ಈಗಿನ ಪ್ರೌಢಶಾಲೆಯನ್ನು ಹೋಲುತ್ತಿದ್ದವು. ಪ್ರಾಚೀನ ಕಾಲದಲ್ಲಿ ಬ್ರಾಹ್ಮಣರೇ ವಿದ್ಯೆಯನ್ನು ಕಲಿಸುವ ವಿದ್ಯಾಗುರುಗಳಾಗಿದ್ದರು. ಸಾರ್ವಜನಿಕರ ನೆರವಿನಿಂದಲೇ ನಡೆಯುತ್ತಿದ್ದ ವಿದ್ಯಾಸಂಸ್ಥೆಗಳಿದ್ದವು. ಸರ್ಕಾರ ವಿದ್ಯಾಭ್ಯಾಸದಲ್ಲಿ ನೇರವಾಗಿ ಕೈಹಾಕದಿದ್ದರೂ ವಿದ್ಯಾಸಂಸ್ಥೆಗಳ ಖರ್ಚುವೆಚ್ಚಕ್ಕಾಗಿ ಉದಾರವಾದ ದಾನವನ್ನು ಕೊಡುತ್ತಿತ್ತು. ಹೀಗೆ ವಿದ್ಯಾಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದವು.

ಈಚೆಗೆ ಪಾಶ್ಚಾತ್ಯ ಆಗಮನದಿಂದ ಶಿಕ್ಷಣ ಕ್ಷೇತ್ರದಲ್ಲಿ ಒಂದು ಹೊಸಗಾಳಿ ಬೀಸತೊಡಗಿತು. ಅದರ ಪರಿಣಾಮವಾಗಿ ವಿದ್ಯಾಭ್ಯಾಸದಲ್ಲಿ ಒಂದು ಹೊಸ ಯುಗವೇ ಆರಂಭವಾಯಿತು. ಇತ್ತೀಚಿನವರೆಗೂ ಅಂದರೆ ೧೮-೧೯ನೇ ಶತಮಾನದವರೆಗೂ ಇದ್ದ ಅಗ್ರಹಾರಗಳು, ಘಟಿಕಾಸ್ಥಾನಗಳು ಮರೆಯಾಗಿ ಆಂಗ್ಲ ವಿದ್ಯಾಭ್ಯಾಸದ ಪ್ರಭಾವಕ್ಕೆ, ಭಾರತದ ಇತರ ಭಾಗಗಳಂತೆಯೇ ಕರ್ನಾಟಕವೂ ಒಂದು.

ಪಾಶ್ಚಾತ್ಯರ ಪ್ರಭಾವದಿಂದಾಗಿ ನಗರಗಳಲ್ಲಿ ಗ್ರಾಮಗಳಲ್ಲಿ ಅತ್ಯಂತ ಸಣ್ಣ ಘಟಕವಾದ ಅಂಗನವಾಡಿಯಿಂದ ಹಿಡಿದು ಪದವಿ ಶಿಕ್ಷಣದವರೆಗೂ ಶಿಕ್ಷಣ ಕೇಂದ್ರಗಳು ತಲೆ ಎತ್ತಿದವು. ಮೊದಲು ಬೆರಳೆಣಿಕೆಯಷ್ಟು ಅಂಗನವಾಡಿ ಕೇಂದ್ರ, ಪ್ರಾಥಮಿಕ ಶಾಲೆ, ಪ್ರೌಢಶಾಲೆಗಳು, ಪದವಿಪೂರ್ವ ಕಾಲೇಜುಗಳು, ಪದವಿಕಾಲೇಜುಗಳು ಕಂಡುಬರುತ್ತಿದ್ದವು. ಆದರೆ ಇಂದು ನಾಯಿ ಕೊಡೆಗಳ ಹಾಗೆ ವಿದ್ಯಾಕೇಂದ್ರಗಲು ತಲೆಎತ್ತಿರುವುದು ಕಂಡುಬರುತ್ತಿವೆ.

ಹೀಗೆ ಶೈಕ್ಷಣಿಕ ಪ್ರಗತಿ ನಾಗಾಲೋಟದಲ್ಲಿ ಸಾಗಿದರೂ ಹಳ್ಳಿಗಳ ಸ್ಥಿತಿ ಮತ್ತು ನಗರವನ್ನು ಅವಲಂಬಿಸುವ ಹಾಗಿದೆ. ಇದಕ್ಕೆ ಯಮನೂರು ಗ್ರಾಮವೂ ಹೊರತಾಗಿಲ್ಲ. ಯಮನೂರು ಗ್ರಾಮ ಅಷ್ಟೊಂದು ಶೈಕ್ಷಣಿಕ ಪ್ರಗತಿ ಸಾಧಿಸಿಲ್ಲ, ಅಂದರೆ ಎರಡು ಅಂಗನವಾಡಿ ಕೇಂದ್ರಗಳು, ಒಂದು ಖಾಸಗಿ ಪೂರ್ವಪ್ರಾಥಮಿಕಶಾಲೆ, ಒಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು ಮಾತ್ರ ಇವೆ. ಹೀಗಿದ್ದರೂ ನಗರ ಪ್ರದೇಶದ ಪ್ರಭಾವದಿಂದ ಪ್ರೌಢಶಿಕ್ಷಣಕ್ಕಾಗಿ ಯಮನೂರು ಸಮೀಪದ ತಾಲೂಕು ಕೇಂದ್ರವಾದ ನವಲಗುಂದಕ್ಕೆ ಹೋಗುತ್ತಾರೆ. ಸಮೀಪದ ಬ್ಯಾಹಟ್ಟಿ ಪ್ರದೇಶಕ್ಕೆ ಹೋಗುತ್ತಾರೆ. ಅಷ್ಟೇ ಅಲ್ಲದೆ ಕಾಲೇಜು ಶಿಕ್ಷಣ ಪಡೆಯಲು ಹಾಗೂ ಉನ್ನತ ಶಿಕ್ಷಣ ಪಡೆಯಲು ಯಮನೂರು ಗ್ರಾಮದ ಸಮೀಪದ

ವಾಣಿಜ್ಯ ನಗರವಾದ ಹುಬ್ಬಳ್ಳಿಗೆ ಹೋಗುತ್ತಾರೆ. ಏಕೆಂದರೆ ಶೈಕ್ಷಣಿಕ ಮಟ್ಟ ಪ್ರಾಥಮಿಕ ಹಂತದಲ್ಲೇ ಮುಗಿಯುವಂತಹುದಲ್ಲ. ಅದಕ್ಕಾಗಿ ವಿದ್ಯೆಯನ್ನು ಅರಸಿಕೊಂಡು ವಿದ್ಯಾರ್ಥಿಗಳು ಬೇರೆ ಊರಿಗೆ ಹೋಗುವ ಪರಿಸ್ಥಿತಿ ಗ್ರಾಮದಲ್ಲಿ ತಲೆದೋರಿದೆ.

ಹೀಗಿದ್ದರೂ ಸಹ ೪೦-೫೦ ಜನರು ಪದವೀಧರರಿದ್ದಾರೆ. ಉನ್ನತ ಶಿಕ್ಷಣವನ್ನು ಪಡೆದಿರುವ ಶ್ರೀ ನಿಜಗುಣ ಶಿವಯೋಗಿ ಬಸಯ್ಯಾ ಹಿರೇಮಠ ಇವರು ಅರ್ಥಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದು ಜೀವವಿಮಾನಿಗಮ ನವಲಗುಂದ ಶಾಖೆಯಲ್ಲಿ ಚೀಫ್ ಲೈಫ್ ಇನ್ಸೂರನ್ಸ್ ಅಡ್ವೈಯ್ಸರ್ ಆಗಿ ಕಾರ್ಯನಿರ್ವಹಿಸುವುದು ಗ್ರಾಮಕ್ಕೆ ಕೀರ್ತಿ ತಂದ ವಿಷಯವಾಗಿದೆ.

ಚಿಕ್ಕಮಕ್ಕಳಿಗೆ ಶಿಕ್ಷಣ ನೀಡಲು ಗ್ರಾಮದಲ್ಲಿ ಎರಡು ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತವೆ. ಅವುಗಳ ವಿವರ ಗಮನಿಸಿದಾಗ

೧. ಗೌಡರ ಓಣಿ ಅಂಗನವಾಡಿ ಕೇಂದ್ರ

೨. ಜನತಾಪ್ಲಾಟ ಅಂಗನವಾಡಿ ಕೇಂದ್ರ

ಹೀಗೆ ಒಟ್ಟು ೨ ಅಂಗನವಾಡಿಗಳು ಕಾರ್ಯನಿರ್ವಹಿಸುತ್ತಿದ್ದು, ಗ್ರಾಮದ ಚಿಕ್ಕಮಕ್ಕಳ ಶೈಕ್ಷಣಿಕ ಅಗತ್ಯತೆಯನ್ನು ಪೂರೈಸುತ್ತಿವೆ. ಜೊತೆಗೆ ಸರ್ಕಾರದ ಪೌಷ್ಠಿಕ ಆಹಾರ ನೀಡುವಲ್ಲಿ ತಮ್ಮ ಪಾತ್ರ ನಿರ್ವಹಿಸುತ್ತಿವೆ.

ಇನ್ನು ಗ್ರಾಮದಲ್ಲಿ ಒಂದು ಹಿರಿಯ ಪ್ರಾಥಮಿಕ ಶಾಲೆ, ಒಂದು ಕಿರಿಯ ಪ್ರಾಥಮಿಕ ಶಾಲೆ ಇವೆ. ಅವುಗಳ ವಿವರವನ್ನು ಈ ಕೆಳಗಿನಂತೆ ಗಮನಿಸಲಾಗಿದೆ.

| ಅ ನಂ. | ಶಾಲೆಯ ಹೆಸರು | ಆರಂಭವಾದ ವರ್ಷ | ಪ್ರಧಾನ ಗುರುಗಳು | ಸಿಬ್ಬಂಧಿ ಸಂಖ್ಯೆ | ಕೊಠಡಿ ಗಳು | ಶಾಲೆಯ ಪ್ರಕಾರ | ಪಟ್ಟದ ಸಂಖ್ಯೆ | | ಒಟ್ಟು |
|---|---|---|---|---|---|---|---|---|---|
| | | | | | | | ಗಂ | ಹೆ | |
| ೧ | ಸರಕಾರಿ ಹಿರಿಯ ಪ್ರಾಥಮಿಕ ಶಾಲೆ | ೧೯೧೧ | ಶ್ರೀ ಎಲ್.ಟಿ. ದಾಸರ | ೦೭ | ೦೮ | ೧ ರಿಂದ ೮ | ೭೮ | ೮೩ | ೧೬೧ |
| ೨. | ವಿವೇಕಾನಂದ ಪೂರ್ವ ಪ್ರಾಥಮಿಕ ಶಾಲೆ | ೨೦೧೧ | ಎಸ್.ಆರ್. ಸರನಾಡ ಗೌಡರು | ೦೨ | ೦೪ | LKG UKG | ೨೨ | ೧೮ | ೪೦ |

**ಶೈಕ್ಷಣಿಕ ಪ್ರಗತಿಯ ನೋಟ**

ಇಷ್ಟೆಲ್ಲಾ ಶೈಕ್ಷಣಿಕ ಪ್ರಗತಿಯಲ್ಲಿ ಅಡೆತಡೆಗಳಿದ್ದರೂ ಗ್ರಾಮದ ಶೈಕ್ಷಣಿಕ ಸಾಧನೆಯಲ್ಲೂ ಸ್ವಲ್ಪಮಟ್ಟಿಗೆ ಸಾಧನೆಗೈದ ಮಹನೀಯರಿದ್ದಾರೆ. ಇಂತಹ ಸಣ್ಣ ಗ್ರಾಮದಲ್ಲಿ ಜನಿಸಿದರೂ, ಅನೇಕರು ಪ್ರಾಥಮಿಕ ಶಾಲಾ ಶಿಕ್ಷಕರು, ಪ್ರೌಢಶಾಲಾ ಶಿಕ್ಷಕರು, ಭಾರತೀಯ ರಕ್ಷಣಾ ಇಲಾಖೆಯಲ್ಲಿ, ಪೊಲೀಸ್ ಇಲಾಖೆಯಲ್ಲಿ, ರಸ್ತೆ ಸಾರಿಗೆ ನಿಗಮದಲ್ಲಿ, ಬ್ಯಾಂಕ್ ಉದ್ಯೋಗಿಗಳು ಸಹ ಈ ಗ್ರಾಮದಲ್ಲಿದ್ದಾರೆ. ಭಾರತೀಯ ಸಂಚಾರ ನಿಗಮ ಘಟಕದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇಷ್ಟೇ ಅಲ್ಲದೇ ಗ್ರಾಮದ ಶ್ರೀ ಲಿಂಗಾರೆಡ್ಡಿ ಎಂಬುವರು ಬಿ.ಇ. ಪದವಿ ಪಡೆದು ಪಿ.ಡಬ್ಲ್ಯು.ಡಿ. ಇಲಾಖೆಯಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಇನ್ನೋರ್ವ ಇಂಜನಿಯರಿಂಗ್ ಪದವೀಧರರಾದ ಗಂಗಾಧರ ಹಿರೇಮಠ ಇವರು ಪ್ರಥಮದರ್ಜೆ ಗುತ್ತಿಗೆದಾರರಾಗಿ ಖಾಸಗಿ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಗ್ರಾಮದ ಶ್ರೀ

ಡಿ.ಕೆ.ಕುಲಕರ್ಣಿ ಎಂಬುವರು ಬಿ.ಇ. ಪದವಿ ಪಡೆದು ದುಬೈಯಲ್ಲಿ ಶ್ರೇಷ್ಠ ಉದ್ಯಮಿದಾರರಾದದ್ದು, ಹೆಮ್ಮೆಯ ಸಂಗತಿಯಾಗಿದೆ. ಹೀಗೆ ಸಣ್ಣ ಗ್ರಾಮವಾದರೂ ಹಿರಿದಾದ ಸೇವೆಯನ್ನು ಸಲ್ಲಿಸುವ ಸಾಧಕರನ್ನು ಈ ಗ್ರಾಮವು ಒಳಗೊಂಡಿರುತ್ತದೆ.

**೩.೧೬. ರಾಜಕೀಯ ಸ್ಥಿತಿಗತಿ**

ಆಕಾರ ದೊಡ್ಡದು, ಸಾಮರ್ಥ್ಯವೂ ಹೆಚ್ಚು, ಭಾರಕ್ಕೆ ಬಾಗದು, ಸಣ್ಣಪುಟ್ಟದಕ್ಕೆ ಅಂಜದು, ದೇಶಕ್ತಿಗೆ ಸರಿದೂಗುವ ಸೂಕ್ಷ್ಮದೃಷ್ಟಿ, ಆಕಾರಕ್ಕೆ ತಕ್ಕ ಗಾಂಭೀರ್ಯ.

ಆನೆಯನ್ನು 'ಗಜರಾಜ'ನೆಂದೇ ಕರೆಯುವುದುಂಟು. ರಾಜಗಾಂಭೀರ್ಯವೆಂಬುದು ಒಂದು ವಾಡಿಕೆಯ ಮಾತು. ರಾಜನಿಗೆ ಗಾಂಭೀರ್ಯ ಬೇಕಲ್ಲ! ಇಂಥ 'ಗಜರಾಜ'ನಿಗೂ ಅಂಕುಶವಿಲ್ಲದಿದ್ದರೆ ದಿಕ್ಕು ತಪ್ಪುವ ಸಂಭವವಿರುತ್ತದೆ. ಆನೆಗೆ ಅಂಕುಶವಿದ್ದರೆ ಒಳಿತು, ಇಲ್ಲದಿದ್ದರೆ ನಿರಂಕುಶ. ಅಂದರೆ ತೊಂದರೆಯಾಗುವುದು ಖಚಿತ. ಇವೆ ಮಾತುಗಳು ರಾಜನಿಗೂ ಅನ್ವಯಿಸುತ್ತವೆ. ರಾಜ ಯಾವುದೇ ಹಿಡಿತ-ಹತೋಟಿಗಳಿಲ್ಲದ ಸ್ವೇಚ್ಛಾವರ್ತಿಯಾದರೆ 'ನಿರಂಕುಶ'ಪ್ರಭು. ಹಿಡಿತ ಹತೋಟಿಗಳಿದ್ದರೆ "ಸಾಂಕುಶ"ಪ್ರಭು ಹೀಗೆ ರಾಜ್ಯದ ಆಡಳಿತವನ್ನು ನೋಡಿಕೊಲ್ಲುವುದಕ್ಕೆ ರಾಜರು ಇರುತ್ತಿದ್ದರು. ಆದರೆ ಈಗ ಸರ್ಕಾರವೇ ರಾಜ್ಯದ ಆಡಳಿತವನ್ನು ನೋಡಿಕೊಳ್ಳುತ್ತದೆ. ಈ ರಾಜ್ಯಾಡಲಿತವನ್ನು ಅನುಕೂಲದ ದೃಷ್ಟಿಯಿಂದ ನಗರಾಡಳಿತ, ಗ್ರಾಮಾಡಳಿತ ಎಂದು ವಿಭಾಗಿಸುವುದುಂಟು. ನಗರಾಡಳಿತದೊಳಗೆ ಜಿಲ್ಲಾವಾರು, ತಾಲೂಕುವಾರು, ಸಚಿವರುಗಳ ಮಾರ್ಗದರ್ಶನದಲ್ಲಿ ಜಿಲ್ಲಾ ಪರಿಷತ್ ಕಾರ್ಯನಿರ್ವಹಿಸುತ್ತದೆ. ಅದೇ ರೀತಿ ಗ್ರಾಮಾಡಳಿತದ ವಿಷಯಕ್ಕೆ ಬಂದಾಗ,

ಗ್ರಾಮಾಡಳಿತವನ್ನು 'ಗ್ರಾಮಸಭೆ' ಮತ್ತು ದೊಡ್ಡ ಪ್ರದೇಶದಲ್ಲಿ 'ನಾಡು' ನೋಡಿಕೊಳ್ಳುತ್ತಿದ್ದವು. ಜತೆಗೆ ವರ್ತಕ ಮಂಡಲದಂತಹ ಕಸುಬು ಕೂಟಗಳೂ, ದೇವಾಲಯದ ಮಂಡಲಿಗಳೂ ಕಾರ್ಯ ನಿರ್ವಹಿಸುತ್ತಿದ್ದವು. ಸ್ಥಳೀಯ ತೆರಿಗೆಗಳ ಸಂಗ್ರಹ ದೂರುಗಳ ವಿಚಾರಗಳು, ಅಧಿಕಾರ ವ್ಯಾಪ್ತಿಯಲ್ಲಿದ್ದವು, 'ಅಗ್ರಹಾರ' ಸರ್ವಮಾನ್ಯ ಮತ್ತು ದೇವಾದಾಯ ಗ್ರಾಮಗಳನ್ನು' ಪಡೆದವರಿಗೆ ಅನುಭವಿಸಿಕೊಂಡಿರುವ ಅಧಿಕಾರವಿತ್ತು. ಅವನ್ನು ಮಾರಾಟ ಮಾಡುವ ಸ್ವಾತಂತ್ರ್ಯವಿರಲಿಲ್ಲ.

ಗ್ರಾಮಾಡಳಿತದಲ್ಲಿ ಪಟೇಲನೇ ಮುಖ್ಯಾಧಿಕಾರಿಯಾಗಿರುತ್ತಿದ್ದನು. ಶಾನುಭೋಗ ಕಾರ್ಯದರ್ಶಿ, 'ತಲಾಟಿ' ವೀರಶಾಲಿ, ಸಹಾಯಕರು ಇರುತ್ತಿದ್ದರು. ಗ್ರಾಮಸಭೆಯಲ್ಲಿ ಜ್ಯೋತಿಷಿಯ ಪಾತ್ರವೂ ಮುಖ್ಯವಾಗಿರುತ್ತಿತ್ತು. ಮಳೆ ಬೆಳೆಗಳ ಮುನ್ಸೂಚನೆ ನೀಡುವ ಜ್ಯೋತಿಷಿಗೆ ಗ್ರಾಮಸಭೆಯ ಪೋಷಣೆ ದೊರೆಯುತ್ತಿತ್ತು. ಬಡಗಿ, ಕಮ್ಮಾರ-ಚಮ್ಮಾರ, ನಾಯಿಂದ ಕುಂಬಾರ ಅಕ್ಕಸಾಲಿಗ ಗ್ರಾಮಜೀವನದ ಒಂದು ಭಾಗವಾಗಿ ತಮ್ಮ ದುಡಿಮೆಗೆ ಪ್ರತಿಫಲಪಡೆಯುತ್ತಿದ್ದರು.

ಗ್ರಾಮ ಜೀವನದಲ್ಲಿ ದೇವಾಲಯಕ್ಕೆ ವಿಶೇಷ ಪ್ರಾಧಾನ್ಯತೆ ಇತ್ತು. ದೇವಾಲಯಗಳು, ಹಲವರಿಗೆ ನೌಕರಿ ನೀಡುವ ಸಂಸ್ಥೆಯೂ ಆಗಿದ್ದವು. ಕೆಲವು ಸಂದರ್ಭದಲ್ಲಿ ನ್ಯಾಯಾಲಯವಾಗಿಯೂ ಮಾರ್ಪಡುತ್ತಿದ್ದ, ದೇವಾಲಯ ತನ್ನ ಬೊಕ್ಕಸದಿಂದ ಜನರ ಅಗತ್ಯ ಗಮನಿಸಿ ಸಾಲದ ನೆರವು ನೀಡುವ 'ಬ್ಯಾಂಕ್' ಕೂಡ

ಆಗಿರುತ್ತಿದ್ದವು. ಸ್ಥಳೀಯ ಕುಶಲಕರ್ಮಿಗಳಿಗೆ ಆಸರೆಯಾಗಿತ್ತು. ಗ್ರಾಮ ಅಧಿಕಾರವಿತ್ತು, ಜನಹಿತಕ್ಕಾಗಿ ಚಿಕಿತ್ಸಾಲಯಗಳನ್ನೂ ನಡೆಸುತ್ತಿತ್ತು. ಹೀಗೆ ಹಿಂದೆ ಗ್ರಾಮದ ಆಡಳಿತ ನಡೆಯುತ್ತಿತ್ತು. ಪ್ರಸ್ತುತ ರಾಜಕೀಯ ವ್ಯವಸ್ಥೆಯನ್ನು ನೋಡಿದಾಗ ಹಿಂದಿನಂತೆ ಆಡಳಿತ ವ್ಯವಸ್ಥೆಯಲ್ಲಿ ಹೋಲಿಕೆ ಇದೆಯಾದರೂ ಸ್ವಲ್ಪ ಮಟ್ಟಿಗೆ ಬದಲಾವಣೆಯನ್ನು ಕಾಣಬಹುದು.

ಗ್ರಾಮದ ಸಂಪೂರ್ಣ ಆಡಳಿತ ವ್ಯವಸ್ಥೆಯನ್ನು ಗ್ರಾಮಪಂಚಾಯತಿ ನಿರ್ವಹಿಸಿಕೊಂಡು ಬರುತ್ತಿದೆ. ಗ್ರಾಮದ ಆಗು ಹೋಗುಗಳು, ಸಮಸ್ಯೆಗಳು, ಕೊರತೆಗಳನ್ನು ಗ್ರಾಮಪಂಚಾಯತಿಯ ಅಧಿಕಾರಗಳೇ ಕಾರ್ಯ ನಿರ್ವಹಿಸಿಕೊಂಡು ಬರುತ್ತಾರೆ. ಯಮನೂರಿನಲ್ಲಿ ಗ್ರಾಮಪಂಚಾಯತಿ ವ್ಯವಸ್ಥೆಯನ್ನು ಈ ಅಧ್ಯಾಯದಲ್ಲಿ ನೋಡಲಾಗಿದೆ.

**ಗ್ರಾಮ ಪಂಚಾಯತಿ**

ಗ್ರಾಮವೊಂದರ ಅಧ್ಯಯನ ಕೈಗೊಂಡಾಗ ಆಡಳಿತದ ಕೇಂದ್ರಸ್ಥಾನ ಪಂಚಾಯಿತಿ. ಹೀಗಾಗಿ ಪಂಚಾಯ್ತಿ ಆಡಳಿತದ ದೃಷ್ಟಿಯಿಂದ ಮಹತ್ವ ಪಡೆದುಕೊಳ್ಳುತ್ತದೆ. ಏಕೆಂದರೆ ಗ್ರಾಮದ ರಾಜಕೀಯ ಕೇಂದ್ರವಾಗಿ ಸರಕಾರದ ಪಾಲುದಾರ ಪ್ರತಿನಿಧಿಯಾಗಿ ಸಾರ್ವಜನಿಕ ಸಮಸ್ಯಾ ಪರಿಹಾರದ ನ್ಯಾಯಕೇಂದ್ರವಾಗಿ ಪಂಚಾಯಿತಿಗೆ ವಿಶೇಷ ಸ್ಥಾನವಿದೆ. ಯಮನೂರು ಗ್ರಾಮದಲ್ಲಿ ಕ್ರಿ.ಶ.೧೯೫೭ರಲ್ಲಿ ಪಂಚಾಯಿತಿ ಸ್ಥಾಪನೆಯಾಗಿದೆ.

ಧಾರವಾಡ ಜಿಲ್ಲೆ ೫ ತಾಲೂಕುಗಳನ್ನು ಒಳಗೊಂಡಿದ್ದು, ಇವುಗಳಲ್ಲಿ ಒಂದಾದ ನವಲಗುಂದ ತಾಲೂಕಿನಲ್ಲಿ ಒಟ್ಟು ೨೨ಗ್ರಾಮ ಪಂಚಾಯತಿಗಳಿವೆ. ಇದರಲ್ಲಿ ಒಂದಾದ ಯಮನೂರು ಗ್ರಾಮಪಂಚಾಯತಿಯು ತಾಲೂಕು ಕೇಂದ್ರ ನವಲಗುಂದದಿಂದ ೫.ಕಿ.ಮೀ. ಮತ್ತು ಜಿಲ್ಲಾ ಕೇಂದ್ರ ಧಾರವಾಡಕ್ಕೆ ೪೬ ಕಿ.ಮೀ. ಅಂತರದಲ್ಲಿ ಹುಬ್ಬಳ್ಳಿ, ಬಿಜಾಪುರ ಹೆದ್ದಾರಿಗೆ ಹೊಂದಿಕೊಂಡ ಪೂರ್ವಕ್ಕೆ ಕುಮಾರಗೊಪ್ಪ ಪಶ್ಚಿಮಕ್ಕೆ ತಿರ್ಲಾಪೂರ, ಉತ್ತರಕ್ಕೆ ಪಡೇಸೂರ ಹಾಗೂ ದಕ್ಷಿಣಕ್ಕೆ ಆರೆಕುರಹಟ್ಟಿ ಗ್ರಾಮಗಳಿವೆ. ಈ ಗ್ರಾಮಪಂಚಾಯತಿಯು ೧೯೫೭-೮೭ರ ಅವಧಿಯಲ್ಲಿ ವಿಲೇಜ ಪಂಚಾಯತಿ ಕಮೀಟಿ ಆಗಿದ್ದು, ೬ ಗ್ರಾಮಗಳನ್ನು ಒಳಗೊಂಡಿದ್ದು ೧೯೯೩ಕ್ಕೆ ಮೊದಲು ಮಂಡಲಪಂಚಾಯತಿಯಾಗಿ ಬದಲಾವಣೆಹೊಂದಿ ಯಮನೂರು, ಪಡೆಸೂರ, ಕುಮಾರಗೊಪ್ಪ ಮತ್ತು ಆರೇಕುರಹಟ್ಟಿ ಗ್ರಾಮಗಳನ್ನೊಳಗೊಂಡು ಗ್ರೇಡ ೧ ಪಂಚಾಯಿತಿ ಆಯಿತು.

ಯಮನೂರು ಗ್ರಾಮ ಪಂಚಾಯಿತಿ, ಗ್ರೂಪ್ ಪಂಚಾಯಿತಿ ಮತ್ತು ವಿಲೇಜ್ ಪಂಚಾಯಿ ಕಾಲದಿಂದಲೇ ಆಡಳಿತ ಕೇಂದ್ರವಾಗಿ ನಂತರ ಮಂಡಲ ಪಂಚಾಯಿತಿ ವ್ಯವಸ್ಥೆಯಲ್ಲಿ ಕೇಂದ್ರ ಸ್ಥಾನವಾಗಿದ್ದು, ಬಳಿಕ ಗ್ರಾಮ ಪಂಚಾಯಿತಿ ವ್ಯವಸ್ಥೆಯಲ್ಲಿ ಕೇಂದ್ರ ಸ್ಥಾನವಾಗಿದ್ದು, ಬಳಿಕ ಗ್ರಾಮ ಪಂಚಾಯಿತಿ ವ್ಯವಸ್ಥೆ ಜಾರಿಗೊಂಡ ಬಳಿಕ ಕೇಂದ್ರ ಸ್ಥಾನವಾಗಿದೆ. ಈ ಗ್ರಾಮಪಂಚಾಯತಿಯು ೬ ವಾರ್ಡುಗಳನ್ನೊಳಗೊಂಡಿದ್ದು, ೧೨ ಪುರುಷ ೯ ಮಹಿಳಾ ಸದಸ್ಯರು ಸೇರಿ ಒಟ್ಟು ೨೧ ಸದಸ್ಯರನ್ನೊಲಗೊಂಡಿದೆ. ಈ ಗ್ರಾಮಪಂಚಾಯತಿಯು ಮೊರಬ ಹೋಬಳಿಗೆ ಸೇರಿದ್ದು, ನವಲಗುಂದ ವಿಧಾನಸಭಾ ಕ್ಷೇತ್ರ ಹಾಗೂ ಧಾರವಾಡ ಉತ್ತರ ಲೋಕಸಭಾ ಕ್ಷೇತ್ರಕ್ಕೆ ಒಳಪಡುತ್ತದೆ. ಗ್ರಾಮದ ಈ ಕೆಳಕಂಡ ಸದಸ್ಯರು ಯಮನೂರು ಗ್ರಾಮ ಪಂಚಾಯಿತಿಗೆ ಆಯ್ಕೆಯಾದರು.

### ಯಮನೂರು ಮಂಡಲ ಪಂಚಾಯತ ಸದಸ್ಯರು ಹಾಗೂ ಪ್ರತಿನಿಧಿಗಳು-೧೯೮೯

| ಕ್ರ.ಸಂ. | ಹೆಸರು | ಹುದ್ದೆ | ಅವಧಿ |
|---|---|---|---|
| ೧. | ಶ್ರೀ ಎಸ್.ಬಿ.ಪಾಟೀಲರು | ಪ್ರಧಾನರು | ೧೯೮೯-೯೪ |
| ೨. | ಶ್ರೀ ಹನಮರಡ್ಡಿ ಕೃ.ಲಕ್ಕಣ್ಣವರ | ಉಪ ಪ್ರಧಾನರು | ೧೯೮೯-೯೪ |
| ೩. | ಶ್ರೀಮತಿ ಪಾರ್ವತೆವ್ವ ಕೊಂ ಚ. ಕಂಬಿ | ಸದಸ್ಯರು | ೧೯೮೯-೯೪ |
| ೪. | ಶ್ರೀ ಜಯಸಿಂಗರಾವ್ ಅ ಬರ್ಗೆ | ಸದಸ್ಯರು | ೧೯೮೯-೯೪ |
| ೫. | ಶ್ರೀ ವೀರಣ್ಣಾ ಫ ಚುಳಕಿ | ಸದಸ್ಯರು | ೧೯೮೯-೯೪ |
| ೬. | ಶ್ರೀ ಈರಣ್ಣಾ ಚ ಹಡಪದ | ಸದಸ್ಯರು | ೧೯೮೯-೯೪ |
| ೭. | ಶ್ರೀ ಬಸವರಾಜು ಬು ಚಲವಾದಿ | ಸದಸ್ಯರು | ೧೯೮೯-೯೪ |
| ೮. | ಶ್ರೀ ದುರ್ಗಪ್ಪ ಫ ಮಾಳ್ಗಿಮನಿ | ಸದಸ್ಯರು | ೧೯೮೯-೯೪ |
| ೯. | ಶ್ರೀಮತಿ ಗುರುಸಿದ್ದವ್ವ ಕೊಂ ಮ ಕಲಕರ್ಣಿ | ಸದಸ್ಯರು | ೧೯೮೯-೯೪ |
| ೧೦. | ಶ್ರೀಮತಿ ಮಲ್ಲವ್ವ ಕೊಂ ಮ ಕಲಕರ್ಣಿ | ಸದಸ್ಯರು | ೧೯೮೯-೯೪ |
| ೧೧. | ಶ್ರೀ ಉಡಚಪ್ಪ ಹ ಕಾಳಿ | ಸದಸ್ಯರು | ೧೯೮೯-೯೪ |
| ೧೨. | ಶ್ರೀಮತಿ ಶಿದ್ಲಿಂಗವ್ವ ಕೊಂ.ರಾ.ಅಂಗಡಿ | ಸದಸ್ಯರು | ೧೯೮೯-೯೪ |
| ೧೩. | ಶ್ರೀ ಹನುಮಂತಪ್ಪ ಯ ರಂಗರಡ್ಡಿ | ಸದಸ್ಯರು | ೧೯೮೯-೯೪ |
| ೧೪. | ಶ್ರೀ ಶಂಕ್ರಯ್ಯ ವಿ ಗುಗ್ಗರಿ | ಸದಸ್ಯರು | ೧೯೮೯-೯೪ |
| ೧೫. | ಶ್ರೀ ಮಲಪ್ಪ ನಿಂ ಕರೆಣ್ಣವರ | ಸದಸ್ಯರು | ೧೯೮೯-೯೪ |
| ೧೬. | ಶ್ರೀ ಅಂದಾನಪ್ಪ ಗೀ ಕಲಕರ್ಣಿ | ಸದಸ್ಯರು | ೧೯೮೯-೯೪ |
| ೧೭. | ಶ್ರೀ ಮಲ್ಲಪ್ಪ ಬ ಮಡಿವಾಳರ | ಸದಸ್ಯರು | ೧೯೮೯-೯೪ |
| ೧೮. | ಶ್ರೀ ಭರಮಪ್ಪ ಮ ನಡವಿನಮನಿ | ಸದಸ್ಯರು | ೧೯೮೯-೯೪ |
| ೧೯. | ಶ್ರೀಮತಿ ಕಸ್ತೂರೆವ್ವ ಕೊಂ ಶಿ ಲಕ್ಕಣ್ಣವರ | ಸದಸ್ಯರು | ೧೯೮೯-೯೪ |

### ಯಮನೂರು ಮಂಡಲ ಪಂಚಾಯತ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹಾಗೂ ಸದಸ್ಯರು -೧೯೯೪

| ಕ್ರ.ಸಂ. | ಹೆಸರು | ಹುದ್ದೆ | ಅವಧಿ |
|---|---|---|---|
| ೧. | ಶ್ರೀಮತಿ ಬಸವ್ವ ನಿಂಗಪ್ಪ ಕಾಳಿ | ಅಧ್ಯಕ್ಷರು | ೧೯೯೪-೯೯ |
| ೨. | ಶ್ರೀ ಶಿವನಗೌಡ ಪರ್ವತಗೌಡ ಪಾಟೀಲ | ಉಪಾಧ್ಯಕ್ಷರು | ೧೯೯೪-೯೯ |
| ೩. | ಶ್ರೀ ಬಸವರಡ್ಡಿ ಹನುಮರಡ್ಡಿ ಕುರಹಟ್ಟಿ | ಸದಸ್ಯರು | ೧೯೯೪-೯೯ |
| ೪. | ಶ್ರೀ ಲಿಂಗರಡ್ಡಿ ಹೇಮರಡ್ಡಿ ನಾಗರಡ್ಡಿ | ಸದಸ್ಯರು | ೧೯೯೪-೯೯ |
| ೫. | ಶ್ರೀಮತಿ ಶಾಂತವ್ವ ಕಲ್ಲಪ್ಪ ಸುಬೇದಾರ | ಸದಸ್ಯರು | ೧೯೯೪-೯೯ |
| ೬. | ಶಿವಲಿಂಗಯ್ಯ ನಿಂಗಯ್ಯ ಮುರಗೋಡಮಠ | ಸದಸ್ಯರು | ೧೯೯೪-೯೯ |
| ೭. | ಶ್ರೀ ಹನಮರಡ್ಡಿ ಕೃಷ್ಣರೆಡ್ಡಿ ಲಕ್ಕಣ್ಣನವರ | ಸದಸ್ಯರು | ೧೯೯೪-೯೯ |
| ೮. | ಶ್ರೀ ಬುದಪ್ಪ ಹನುಮಂತಪ್ಪ ಹುಚ್ಚುನಾಯ್ಕರ | ಸದಸ್ಯರು | ೧೯೯೪-೯೯ |
| ೯. | ಶ್ರೀಮತಿ ಯಲ್ಲವ್ವ ಗುರಪ್ಪ ನಾಯ್ಕರ | ಸದಸ್ಯರು | ೧೯೯೪-೯೯ |

| | | | |
|---|---|---|---|
| ೧೦. | ಶ್ರೀಮತಿ ದ್ಯಾಮವ್ವ ಹನಮಪ್ಪ ಅಳಗವಾಡಿ | ಸದಸ್ಯರು | ೧೯೯೪-೯೯ |
| ೧೧. | ಶ್ರೀ ರುದ್ರಪ್ಪ ಶಿವರಡ್ಡಿ ಲಕ್ಕಣ್ಣವರ | ಸದಸ್ಯರು | ೧೯೯೪-೯೯ |
| ೧೨. | ಶ್ರೀಮತಿ ಸರಸ್ವತಿ ಶಂಕ್ರಪ್ಪ ಅಕ್ಕಿ | ಸದಸ್ಯರು | ೧೯೯೪-೯೯ |
| ೧೩. | ಶ್ರೀ ನಾಗಪ್ಪ ಹವಳಪ್ಪ ಜಯಮ್ಮನವರ | ಸದಸ್ಯರು | ೧೯೯೪-೯೯ |
| ೧೪. | ಶ್ರೀ ಶಂಕ್ರಪ್ಪ ಯಲ್ಲಪ್ಪ ದೊಡ್ಡಮನಿ | ಸದಸ್ಯರು | ೧೯೯೪-೯೯ |
| ೧೫. | ಶ್ರೀ ನಿಂಗಪ್ಪ ಚುಳಚವ್ವ ಚಲವಾದಿ | ಸದಸ್ಯರು | ೧೯೯೪-೯೯ |
| ೧೬. | ಶ್ರೀ ಮಹಾದೇವಪ್ಪ ಲಕ್ಷ್ಮಪ್ಪ ಲಿಂಗದಾಳ | ಸದಸ್ಯರು | ೧೯೯೪-೯೯ |
| ೧೭. | ಶ್ರೀ ಸಿದ್ದಲಿಂಗೇಶ ಮಹಾದೇವಪ್ಪ ಹಡಗಲಿ | ಸದಸ್ಯರು | ೧೯೯೪-೯೯ |
| ೧೮. | ಶ್ರೀ ಗುರುಸಿದ್ಧಯ್ಯ ಬಸಲಿಂಗಯ್ಯ ಹಿರೇಮಠ | ಸದಸ್ಯರು | ೧೯೯೪-೯೯ |
| ೧೯. | ಶ್ರೀಮತಿ ಸಕ್ರವ್ವ ಬಸವಣ್ಣೆಪ್ಪ ಮೊರಬದ | ಸದಸ್ಯರು | ೧೯೯೪-೯೯ |
| ೨೦. | ಶ್ರೀಮತಿ ಬಸವಣ್ಣೆವ್ವ ಬಸನಗೌಡ ಧರ್ಮಗೌಡ | ಸದಸ್ಯರು | ೧೯೯೪-೯೯ |

ಯಮನೂರು ಗ್ರಾಮ ಪಂಚಾಯತ ಸದಸ್ಯರು ಹಾಗೂ ಪ್ರತಿನಿಧಿಗಳು - ೨೦೦೦

| ಕ್ರ.ಸಂ. | ಹೆಸರು | ಹುದ್ದೆ | ಅವಧಿ |
|---|---|---|---|
| ೧. | ಶ್ರೀ ಈರಪ್ಪ ದಾನಪ್ಪ ಕೆಸರಪ್ಪನವರ | ಅಧ್ಯಕ್ಷರು | ೨೦೦೦-೦೫ |
| ೨. | ಶ್ರೀ ವೀರಯ್ಯ ಅಂದಾನಯ್ಯ ಕಂಬಿ | ಉಪಾಧ್ಯಕ್ಷರು | ೨೦೦೦-೦೫ |
| ೩. | ಶ್ರೀಮತಿ ಅನ್ನಕ್ಕ ರಾಮಪ್ಪ ಮಾಳೋಜಿ | ಸದಸ್ಯರು | ೨೦೦೦-೦೫ |
| ೪. | ಶ್ರೀಮತಿ ನೀಲವ್ವ ಬಸಯ್ಯ ಕಂಬಿ | ಸದಸ್ಯರು | ೨೦೦೦-೦೫ |
| ೫. | ಶ್ರೀ ನಿಂಗಪ್ಪ ಶಿದ್ದಪ್ಪ ಬಾರಕೇರ | ಸದಸ್ಯರು | ೨೦೦೦-೦೫ |
| ೬. | ಶ್ರೀ ಮಲ್ಲಪ್ಪ ಹನಮಪ್ಪ ನವಲಗುಂದ | ಸದಸ್ಯರು | ೨೦೦೦-೦೫ |
| ೭. | ಶ್ರೀಮತಿ ವೆಂಕವ್ವ ವಿಠ್ಠಪ್ಪಗೌಡ ಪಾಟೀಲ | ಸದಸ್ಯರು | ೨೦೦೦-೦೫ |
| ೮. | ಶ್ರೀ ಬಸವರಾಜ ಶಿವಪುತ್ರಪ್ಪ ಗಿರಿಯಣ್ಣವರ | ಸದಸ್ಯರು | ೨೦೦೦-೦೫ |
| ೯. | ಶ್ರೀ ಶಂಕರಗೌಡ ಕೃಷ್ಣಗೌಡ ಪಾಟೀಲ | ಸದಸ್ಯರು | ೨೦೦೦-೦೫ |
| ೧೦. | ಶ್ರೀ ಬಸಪ್ಪ ಯಲ್ಲಪ್ಪ ಸಾತಗೇರಿ | ಸದಸ್ಯರು | ೨೦೦೦-೦೫ |
| ೧೧. | ಶ್ರೀಮತಿ ಲಲಿತಾ ಕೃಷ್ಣರಂಗರಡ್ಡಿ | ಸದಸ್ಯರು | ೨೦೦೦-೦೫ |
| ೧೨. | ಶ್ರೀ ಮಕ್ತುಮಸಾಬ ಖಾದರಸಾಬ ಸಂಗಟಿ | ಸದಸ್ಯರು | ೨೦೦೦-೦೫ |
| ೧೩. | ಶ್ರೀ ಹನಮರಡ್ಡಿ ನಿಂಗರಡ್ಡಿ ರಂಗರಡ್ಡಿ | ಸದಸ್ಯರು | ೨೦೦೦-೦೫ |
| ೧೪. | ಶ್ರೀಮಲ್ಲೇಶಪ್ಪ ನಿಂಗಪ್ಪ ಬಾರಕೇರ | ಸದಸ್ಯರು | ೨೦೦೦-೦೫ |
| ೧೫. | ಶ್ರೀಮತಿ ವೀರವ್ವ ರಾಮಪ್ಪ ಕೊಳ್ಳನ್ನವರ | ಸದಸ್ಯರು | ೨೦೦೦-೦೫ |
| ೧೬. | ಶ್ರೀ ಪರಮೇಶ್ವರಪ್ಪ ಶಿವಪ್ಪ ಅಂಗಡಿ | ಸದಸ್ಯರು | ೨೦೦೦-೦೫ |
| ೧೭. | ಶ್ರೀಮತಿ ಪಾರ್ವತವ್ವ ಹನಮಪ್ಪ ಮುಂದಿನಮನಿ | ಸದಸ್ಯರು | ೨೦೦೦-೦೫ |
| ೧೮. | ಶ್ರೀಮತಿ ರೇಣವ್ವ ಭೀಮಪ್ಪ ತುರಮರಿ | ಸದಸ್ಯರು | ೨೦೦೦-೦೫ |
| ೧೯. | ಶ್ರೀ ಮಹಾಂತೇಶ ಯಲ್ಲಪ್ಪ ಗುನ್ನಾರ | ಸದಸ್ಯರು | ೨೦೦೦-೦೫ |
| ೨೦. | ಶ್ರೀಮತಿ ಹನಮವ್ವ ದೇವಪ್ಪ ನಾಯ್ಕರ | ಸದಸ್ಯರು | ೨೦೦೦-೦೫ |

ಯಮನೂರು ಗ್ರಾಮ ಪಂಚಾಯತ ಸದಸ್ಯರು ಹಾಗೂ ಪ್ರತಿನಿಧಿಗಳು - ೨೦೦೫

| ಕ್ರ.ಸಂ. | ಹೆಸರು | ಹುದ್ದೆ | ಅವಧಿ |
|---|---|---|---|
| ೧. | ಶ್ರೀ ಎಚ್.ಎನ್.ಲಿಂಗರಡ್ಡಿ | ಅಧ್ಯಕ್ಷರು | ೨೦೦೫-೧೦ |
| ೨. | ಶ್ರೀಮತಿ ಎಸ್.ಬಿ.ಮದ್ದಣ್ಣವರ | ಉಪಾಧ್ಯಕ್ಷರು | ೨೦೦೫-೧೦ |
| ೩. | ಶ್ರೀ ಚಂದ್ರಪ್ಪ ಶೇಕಪ್ಪ ಚುರಮರಿ | ಸದಸ್ಯರು | ೨೦೦೫-೧೦ |
| ೪. | ಬಿಬಿಜಾನ ಇ.ಎಲಿಗಾರ | ಸದಸ್ಯರು | ೨೦೦೫-೧೦ |
| ೫. | ನಿಂಗಪ್ಪ ದೇ ಪೂಜಾರ | ಸದಸ್ಯರು | ೨೦೦೫-೧೦ |
| ೬. | ಶ್ರೀ ಉದಾಜಿರಾವ್ ಭ ಮೋಹಿತೆ | ಸದಸ್ಯರು | ೨೦೦೫-೧೦ |
| ೭. | ಶ್ರೀಮತಿ ಮಂಜುಳಾ ಮ ಹೊಸಮನಿ | ಸದಸ್ಯರು | ೨೦೦೫-೧೦ |
| ೮. | ಶ್ರೀ ಸಿದ್ಧಲಿಂಗಪ್ಪ ಚ ಕಲಕರ್ಣಿ | ಸದಸ್ಯರು | ೨೦೦೫-೧೦ |
| ೯. | ಶ್ರೀಮತಿ ಗಂಗವ್ವ ಶಿ.ಪೂಜಾರ | ಸದಸ್ಯರು | ೨೦೦೫-೧೦ |
| ೧೦. | ಶ್ರೀ ಶಂಕ್ರಪ್ಪ ಬಸಪ್ಪ ಬಾಡಿಗಿ | ಸದಸ್ಯರು | ೨೦೦೫-೧೦ |
| ೧೧. | ಶ್ರೀಮತಿ ಗಿರಿಜವ್ವ ರಾ ಬುಜಂಗನವರ | ಸದಸ್ಯರು | ೨೦೦೫-೧೦ |
| ೧೨. | ಶ್ರೀ ಹನುಮಂತಗೌಡ ಕಾ ನೀಲಪ್ಪಗೌಡ್ರ | ಸದಸ್ಯರು | ೨೦೦೫-೧೦ |
| ೧೩. | ಶ್ರೀ ದಾವಲಸಾಬ ಅ ಕರ್ನಾಚಿ | ಸದಸ್ಯರು | ೨೦೦೫-೧೦ |
| ೧೪. | ಶ್ರೀಮತಿ ಗಂಗವ್ವ ತ ಹಿರೇಹಳ್ಳಿ | ಸದಸ್ಯರು | ೨೦೦೫-೧೦ |
| ೧೫. | ಶ್ರೀ ನಾಗಪ್ಪ ಶಿ ಮಾವಿನಕಾಯಿ | ಸದಸ್ಯರು | ೨೦೦೫-೧೦ |
| ೧೬. | ಶ್ರೀ ವಿಶ್ವನಾಥ ಬ ಮುಳಗುಂದಮಠ | ಸದಸ್ಯರು | ೨೦೦೫-೧೦ |
| ೧೭. | ಶ್ರೀಮತಿ ಬಸವ್ವ ಯಲ್ಲಪ್ಪ ಖಾಳನ್ನವರ | ಸದಸ್ಯರು | ೨೦೦೫-೧೦ |
| ೧೮. | ಶ್ರೀಮತಿ ಬಸವ್ವ ಶಂ ಹಾಲಪ್ಪನವರ | ಸದಸ್ಯರು | ೨೦೦೫-೧೦ |
| ೧೯. | ಶ್ರೀ ವೀರಣ್ಣ ಸಿದ್ದಪ್ಪ ಶಿರಕೋಳ | ಸದಸ್ಯರು | ೨೦೦೫-೧೦ |
| ೨೦. | ಶ್ರೀ ಪಾಂಡುರಂಗರಡ್ಡಿ ಶಿ ಹೆಬ್ಬಾಳ | ಸದಸ್ಯರು | ೨೦೦೫-೧೦ |
| ೨೧. | ಶ್ರೀ ವಿರುಪಾಕ್ಷಪ್ಪ ಚ.ಮನಕವಾಡ | ಸದಸ್ಯರು | ೨೦೦೫-೧೦ |

ಯಮನೂರು ಗ್ರಾಮ ಪಂಚಾಯತ ಚುನಾಯಿತ ಸದಸ್ಯರು ಹಾಗೂ ಪ್ರತಿನಿಧಿಗಳು - ೨೦೧೦-೧೩

| ಕ್ರ.ಸಂ. | ಹೆಸರು | ಹುದ್ದೆ | ಅವಧಿ |
|---|---|---|---|
| ೧. | ಶ್ರೀಮತಿ ಸವಿತಾ.ಅ.ಸುಳ್ಳದ | ಅಧ್ಯಕ್ಷರು | ೨೦೧೦-೧೩ |
| ೨. | ಶ್ರೀ ಮಲ್ಲಪ್ಪ ಹ.ನವಲಗುಂದ | ಉಪಾಧ್ಯಕ್ಷರು | ೨೦೧೦-೧೩ |
| ೩. | ಶ್ರೀಮತಿ ಶಾಂತವ್ವ ಫ.ಕಳ್ಳಿ | ಸದಸ್ಯರು | ೨೦೧೦-೧೩ |
| ೪. | ಶ್ರೀಮತಿ ಸಾವಂತ್ರವ್ವ ಫ.ಕಳ್ಳಿ | ಸದಸ್ಯರು | ೨೦೧೦-೧೩ |
| ೫. | ಶ್ರೀ ಕಲ್ಲಪ್ಪ.ಹ.ಯಕ್ಕೂಂಡಿ | ಸದಸ್ಯರು | ೨೦೧೦-೧೩ |
| ೬. | ಶ್ರೀಮತಿ ಸುಶೀಲಾ.ಅ.ಚುಳಕಿ | ಸದಸ್ಯರು | ೨೦೧೦-೧೩ |
| ೭. | ಶ್ರೀ ನಿಂಗಪ್ಪ ಶಿ ಬಾರಕೇರ | ಸದಸ್ಯರು | ೨೦೧೦-೧೩ |

| ೮. | ಶ್ರೀಮತಿ ಸುನಂದಾ ಶಿ ಕುಲಕರ್ಣಿ | ಸದಸ್ಯರು | ೨೦೧೦-೧೩ |
|---|---|---|---|
| ೯. | ಶ್ರೀ ಈರಯ್ಯ ಚ ಹಿರೇಮಠ | ಸದಸ್ಯರು | ೨೦೧೦-೧೩ |
| ೧೦. | ಶ್ರೀಮತಿ ಚಾಂದಬಿ ಇ ಮುಲ್ಲಾನವರ | ಸದಸ್ಯರು | ೨೦೧೦-೧೩ |
| ೧೧. | ಶ್ರೀಮತಿ ಶಾಂತವ್ವ ಮ ಕಂಬಿ | ಸದಸ್ಯರು | ೨೦೧೦-೧೩ |
| ೧೨. | ಶ್ರೀ ವರುಣ ಅ ಲಕ್ಕಣ್ಣವರ | ಸದಸ್ಯರು | ೨೦೧೦-೧೩ |
| ೧೩. | ಶ್ರೀಮತಿ ಸೋಮವ್ವ ರಾ | ಸದಸ್ಯರು | ೨೦೧೦-೧೩ |
| ೧೪. | ಶ್ರೀಮತಿ ಶೇಖವ್ವ ರು ಅರೇ ಗೌಡ್ರ | ಸದಸ್ಯರು | ೨೦೧೦-೧೩ |
| ೧೫. | ಶ್ರೀ ರಾಮಪ್ಪ ಶಂಕ್ರಪ್ಪ ಅಕ್ಕಿ | ಸದಸ್ಯರು | ೨೦೧೦-೧೩ |
| ೧೬. | ಶ್ರೀ ಮೋನಪ್ಪ ಶಿವಪ್ಪ ಅಣ್ಣಿಗೇರಿ | ಸದಸ್ಯರು | ೨೦೧೦-೧೩ |
| ೧೭. | ಶ್ರೀಮತಿ ನಿಂಗಬಸಪ್ಪ ಸಿದ್ರಾಮಪ್ಪ ಕಾಳಿ | ಸದಸ್ಯರು | ೨೦೧೦-೧೩ |
| ೧೮. | ಶ್ರೀಮತಿ ನಿರ್ಮಲಾಯ ನವಲಗುಂದ | ಸದಸ್ಯರು | ೨೦೧೦-೧೩ |
| ೧೯. | ಶ್ರೀ ಮುದಕಪ್ಪ ಶಿ.ತೂರನೂರ | ಸದಸ್ಯರು | ೨೦೧೦-೧೩ |
| ೨೦. | ಶ್ರೀಮತಿ ನೀಲವ್ವ ಚ ಸವದಿ | ಸದಸ್ಯರು | ೨೦೧೦-೧೩ |
| ೨೧. | ಶ್ರೀ ಗುರಪ್ಪ ಶಿ ಹಂಜಿ | ಸದಸ್ಯರು | ೨೦೧೦-೧೩ |

**ಗ್ರಾಮ ಪಂಚಾಯತಿ ಅಡಿಯಲ್ಲಿ ನಿರ್ವಹಿಸಲಾದ ಕಾರ್ಯಗಳು ಈ ಕೆಳಗಿನಂತಿವೆ**

**೧. ಕೃಷಿ ಮತ್ತು ಕೃಷಿ ಸಂಬಂಧಿತ ವಲಯದಲ್ಲಿ ಸುಧಾರಣಾ ಕಾರ್ಯಗಳು**

* ಯಮನೂರು ಗ್ರಾಮದಲ್ಲಿ ಜಲ ಸಂಪನ್ಮೂಲವಾದ ದೊಡ್ಡ ಕೆರೆಯನ್ನು ಹೂಳೆತ್ತುವ ಕಾರ್ಯ.
* ಶೆಟ್ಟರ ಕೆರೆಯ ಕೋಡಿ ಹೂಳೆತ್ತುವುದು
* ೨೦೦ ಅಡಿ ಉದ್ದ ೧೮ ಅಡಿ ಎತ್ತರದವಾದ ಹೂಲಿ ಹಳ್ಳದ ಹತ್ತಿರ ಚೆಕ್ ಡ್ಯಾಂ ನಿರ್ಮಾಣಕಾರ್ಯ ನಡೆದಿದೆ.
* ರೈತರ ಜಮೀನುಗಳಲ್ಲಿ ಸಮಪಾತಳಿಯ ಬದು ನಿರ್ಮಾಣ ಹಾಗೂ ಜಮೀನು ಅಭಿವೃದ್ಧಿ ಕಾರ್ಯ ಕೈಗೊಂಡದ್ದಾರೆ.

**೨. ಕುಡಿಯುವ ನೀರು ಮತ್ತು ನೈರ್ಮಲ್ಯ**

* ಶೆಟ್ಟರ ಕೆರೆಯ ಮೇಲೆ ನೀರಿನ ಟ್ಯಾಂಕ್ ನಿರ್ಮಾಣ ಮಾಡಿದ್ದಾರೆ.
* ಹಳೆಯ ಕನ್ನಡ ಶಾಲೆಯ ಹತ್ತಿರವಿರುವ ಅಂಗನವಾಡಿಗೆ ಮುಖ್ಯವಾಗಿ ಶೌಚಾಲಯ ಕಾರ್ಯನಿರ್ಮಾಣ ಮಾಡಿದ್ದಾರೆ.
* ಆಶ್ರಯ ಕಾಲೋನಿಯಲ್ಲಿ ಚರಂಡಿ ನಿರ್ಮಾಣಕಾರ್ಯ
* ರನ್ನನವರ ಮನೆಯಿಂದ ವಿಠೋಬ ದೇವಸ್ಥಾನದವರೆಗೆ ೧೦೦ ಫೂಟು ನೀರಿನ ಪೈಪ್‌ಲೈನ್ ಅಳವಡಿಸಿದ್ದಾರೆ.
* ೨೦೦ ವೈಯಕ್ತಿಕ ಶೌಚಾಲಯಕಾರ್ಯ ಮಾಡಿದ್ದು, ಅತ್ಯಂತ ಮಹತ್ವದ ಕೆಲಸವಾಗಿದೆ.

೩. ರಸ್ತೆ, ಬೀದಿ ದೀಪ ಮತ್ತು ವಿದ್ಯುತ್

* ಚಾಂಗ ದೇವರ ಗುಡಿಯಿಂದ ಆದೋಡಿಯವರ ಮನೆಯವರೆಗೆ ೧೦೦ ಅಡಿ ರಸ್ತೆ ನಿರ್ಮಾಣಕಾರ್ಯ ನಡೆದಿದೆ.
* ಗ್ರಾಮದಲ್ಲಿ ೧೫ ಸೋಲಾರ ದೀಪ ಅಳವಡಿಸಿದ್ದಾರೆ.
* ಚಾಂಗದೇವರ ಗುಡಿಯಿಂದ ಮುಖ್ಯ ರಸ್ತೆಯವರೆಗೆ ೨೫೦ ಅಡಿ ಕಾಂಕ್ರೀಟ್ ರಸ್ತೆ ನಿರ್ಮಾಣ ಮಾಡಲಾಗಿದೆ.
* ಹುಬ್ಬಳ್ಳಿ ಮುಖ್ಯ ರಸ್ತೆಯಿಂದ ಆಶ್ರಯ ಕಾಲನಿಯವರೆಗೆ ೫೦೦ ಅಡಿ ಕಾಂಕ್ರೀಟ್ ರಸ್ತೆ ನಿರ್ಮಾಣ ಮಾಡಿದ್ದಾರೆ.
* ಗ್ರಾಮದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಂಕ್ರೀಟ್ ರಸ್ತೆ ಮಾಡುವುದರ ಜೊತೆಗೆ ರಸ್ತೆಯ ಒಂದು ಬದಿಯಲ್ಲಿ ಪಕ್ಕಾ ಗಟಾರ ನಿರ್ಮಾಣ ಮಾಡಿ ಗ್ರಾಮದ ಸ್ವಚ್ಛತೆ ಕಾಪಾಡಿದ್ದಾರೆ.
* ವಸತಿ ರಹಿತರಿಗೆ ವಸತಿ ಒದಗಿಸಿದ್ದಾರೆ.

ಇಷ್ಟಲ್ಲದೇ ಇನ್ನೂ ಅನೇಕ ಕಾಮಗಾರಿ ಕೆಲಸಗಳನ್ನು ಕೈಗೊಂಡಿದ್ದಾರೆ ಅಂದರೆ ಚಾಂಗದೇವರ ಉರುಸಿಗೆ ಬರುವ ಎಲ್ಲ ಭಕ್ತಾದಿಗಳಿಗೆ ಸುಮಾರು ೧೪ ಕೊಠಡಿಗಳನ್ನು ಕಟ್ಟಿ ಅವರಿಗೆ ವಸತಿ ಸೌಕರ್ಯವನ್ನು ಒದಗಿಸುವಲ್ಲಿ ತಮ್ಮ ಸಾರ್ಥಕತೆಯನ್ನು ಮೆರೆದಿದ್ದಾರೆ. ಹೀಗೆ ಗ್ರಾಮಪಂಚಾಯತಿಯು ಗ್ರಾಮದ ಜನರ ಮೂಲಭೂತ ಸೌಕರ್ಯಗಳನ್ನು ಒದಗಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ.

## ಅಧ್ಯಾಯ ೪

# ಆಚರಣೆಗಳು

### ಆಚರಣೆಗಳು

ಮನುಷ್ಯ ಅಗೋಚರವಾದ ದೈವಶಕ್ತಿಗಳ ಪ್ರಭಾವದಿಂದ ನಡೆಸುವ ಮತಾಚರಣೆಗಳು ಮತ್ತು ಕಾರ್ಯ ವಿಧಿಗಳನ್ನು ಆಚರಣೆಗಳು ಒಳಗೊಂಡಿರುತ್ತವೆ. ಆಚರಣೆ ಇಲ್ಲದೆ ಯಾವುದೇ ಸಮುದಾಯವಿಲ್ಲ. ಜನಪದರ ಜೀವನದ ತಳಹದಿ ಅವರ ಬಲವಾದ ನಂಬಿಕೆಗಳಾಗಿವೆ. ಈ ನಂಬಿಕೆಗಳ ಮೊತ್ತವೆ ಆಚರಣೆಯಾಗುತ್ತದೆ. ಆಚರಣೆಗಳ ಅಭ್ಯಾಸ ಮಾಡದೇ ಇದ್ದರೆ ಗ್ರಾಮವೊಂದರ ಅಧ್ಯಯನ ಪೂರ್ಣವಾಗುವುದಿಲ್ಲ.

ಕಿಟೆಲ್ ಕೋಶದಲ್ಲಿ ಆಚರಣೆ ಎಂಬುದಕ್ಕೆ Ritual ಎನ್ನಲಾಗಿದೆ. ನಂಬಿಕೆ ನಡಾವಳಿಕೆಗಳು ಎನ್ನುವ ಸಮಾನ ಪದಗಳು ಇವೆ. ಪ್ರತಿಯೊಂದು ಸಮಾಜಕ್ಕೂ ತನ್ನದೆ ಆದ ನಿಯಮವಿರುತ್ತದೆ. ಸಂಪ್ರದಾಯದ ಚೌಕಟ್ಟಿನೊಳಗೆ ಈ ಆಚರಣೆಗಳು ಬರುತ್ತವೆ. ಆಚರಣೆಗಳು ಅನೇಕ ಸಂಪ್ರದಾಯಗಳ ವಿಭಾಗಗಳು. ನಿರ್ಧಿಷ್ಟ ಸ್ವರೂಪ, ವಿನ್ಯಾಸ ಹೊಂದಿರುವ ಆಚರಣೆಗಳು ಸಮಾಜವನ್ನು ನಿಯಂತ್ರಿಸುವ ಶಕ್ತಿಯಾಗಿವೆ. ನಿರ್ಧಿಷ್ಟ ಸಂದರ್ಭಗಳಲ್ಲಿ ಈ ಆಚರಣೆಗಳನ್ನು ಆಚರಿಸುತ್ತಾರೆ. ಕ್ರಿಯೆ ಇಲ್ಲದಿದ್ದರೆ ಅದು ಆಚರಣೆ ಎನಿಸಿಕೊಳ್ಳುವುದಿಲ್ಲ. ಹೇಳಬೇಕೆಂದರೆ ಚಲನಶೀಲ ಬದುಕಿನಲ್ಲಿ ಆಚರಣೆ ಇರುತ್ತದೆ. ಆಚರಣೆಗಳನ್ನು ಜೀವನಾವರ್ತನದ ಆಚರಣೆಗಳು ಮತ್ತು ವಾರ್ಷಿಕ ಆವರ್ತನದ ಆಚರಣೆಗಳು ಎಂದು ಎರಡು ರೀತಿಯಲ್ಲಿ ವಿಂಗಡಣೆ ಮಾಡಬಹುದು.

ಜನಪದರ ಜೀವನದಲ್ಲಿ ಮಹತ್ವದ ಎರಡು ಘಟ್ಟಗಳೆಂದರೆ ಜನನ ಮತ್ತು ಮರಣ. ಜನನ ಒಂದು ಮುಖವಾದರೆ, ಮರಣ ಮತ್ತೊಂದು ಮುಖ. ಹುಟ್ಟಿನ ಬಗ್ಗೆ ನಂಬಿಕೆ ಆಚರಣೆಗಳಿರುವಂತೆ ಸಾವಿನ ಬಗೆಗೂ ಹಲವು ನಂಬಿಕೆ ಆಚರಣೆಗಳಿವೆ.

ಹಲವು ಜಾತಿಗಳಿರುವ ಯಮನೂರು ಗ್ರಾಮದ ಆಚರಣೆ, ನಂಬಿಕೆಗಳು ಇಲ್ಲಿನ ಎಲ್ಲ ವರ್ಗದ ಜನಪದರ ಬದುಕಿನ ವ್ಯವಹಾರದ ನೆಲೆಗಟ್ಟಾಗಿ ನಿಂತಿವೆ. ನಂಬಿಕೆ ಜನಪದರ ಜ್ಞಾನ. ಅದನ್ನು ಬಿಟ್ಟು ಜನಪದರ ಬದುಕಿಲ್ಲ, ಜನಪದರ ಜೀವನದಲ್ಲಿ ನಂಬಿಕೆಗಳು ಸಾವಿರಾರು ವರ್ಷಗಳಿಂದ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಅವು ಜನಪದರ ಜೀವನದ ಮೇಲೆ ನೇರವಾಗಿ ಪ್ರಭಾವ ಬೀರಿರುವುದರಿಂದ ಗ್ರಾಮದ ಅಧ್ಯಯನದಲ್ಲಿ ಇವುಗಳ ಅಭ್ಯಾಸವು ಮುಖ್ಯವಾಗುತ್ತದೆ.

### ೪.೧. ವ್ಯಕ್ತಿ ಜೀವನದಲ್ಲಿ ಆಚರಣೆಗಳ ಪಾತ್ರ

ಮತಧರ್ಮಗಳಿಗೆ ಸಂಬಂಧಿಸಿದಂತೆ ನಡೆಸುವ ಕ್ರಿಯೆ ಹಾಗೂ ವಿಧಿಗಳಿಗೆ ನಾವು ಆಚರಣೆ ಎನ್ನಬಹುದು. ಆಚರಣೆ ಒಂದು ಸಂಸ್ಕೃತಿಯ ಪ್ರತಿಬಿಂಬವಾಗಿ ಪರಿಣಮಿಸುತ್ತದೆ. ಒಂದು ಸಮುದಾಯದ ಸಂಸ್ಕೃತಿಯನ್ನು

ಅರಿತುಕೊಳ್ಳಬೇಕಾದರೆ ಆ ಸಂಸ್ಕೃತಿಗೆ ಸಂಬಂಧಿಸಿದ ಆಚರಣೆಯನ್ನು ತಿಳಿದುಕೊಳ್ಳಬೇಕಾಗುತ್ತದೆ. ಜನಪದ ಧರ್ಮ ನಂಬಿಕೆ, ಪುರಾಣ ಕಲ್ಪನೆ, ಸಂಪ್ರದಾಯ ಇವುಗಳೆಲ್ಲವೂ ಆಚರಣೆಯ ಆಧಾರದಿಂದಲೇ ಇಂದಿನವರೆಗೂ ನಡೆದುಕೊಂಡು ಬಂದಿವೆ. ಆಚರಣೆ ಎಂದರೆ ಅನುಸರಿಸುವುದು, ಆಚರಿಸುವುದು, ಸಂಪ್ರದಾಯದಂತೆ ನಡೆಯುವುದು ಎಂಬಂತಹ ಅರ್ಥವನ್ನು ಕೊಡುತ್ತದೆ.

ಇಂದಿನದು ವೈಜ್ಞಾನಿಕಯುಗ, ನಾಗಾಲೋಟದಲ್ಲಿ ಹೊರಟ ಆಧುನಿಕ ಮಾನವನ ವಿಚಾರಧಾರೆ ಪ್ರತಿಯೊಂದು ವಿಷಯವನ್ನು ವೈಜ್ಞಾನಿಕವಾಗಿ ನೋಡುವ ಚಿಕಿತ್ಸಕ ಬುದ್ಧಿಯಾಗಿದೆ. ಇವೆಲ್ಲ ಹತ್ತುಪಟ್ಟಾದರೂ ಮೂಲಭೂತವಾಗಿ ಮನುಷ್ಯನ ಮನಸ್ಸಾವರಿಸಿದ ಅಂಧಶ್ರದ್ಧೆ, ಮೂಢನಂಬಿಕೆಗಳು, ಅರ್ಥಹೀನ ಸಂಪ್ರದಾಯ, ಆಚರಣೆಗಳು ಧರ್ಮದ ಹೆಸರಿನಲ್ಲಿ ಇನ್ನೂ ನಡೆಯುತ್ತಾ ಬಂದಿವೆ. ಇವು ಸಾಮಾನ್ಯ ಜನರಲ್ಲಿ ರಕ್ತಗತವಾಗಿ ಬಂದು, ಆಳವಾಗಿ ಬೇರುಬಿಟ್ಟಿವೆ. ಅವುಗಳು ಧಾರ್ಮಿಕ ಭಾವನೆಯನ್ನು ಉದ್ದೇಶಿಸಿ, ಭಕ್ತಿ ಭಾವವನ್ನು ಪೋಷಿಸಿ ಧಾರ್ಮಿಕ ವಾತಾವರಣವನ್ನು ನೆಲೆಗೊಳಿಸುವುದೇ ಈ ಆಚರಣೆಗಳಿಂದ. ವ್ಯಷ್ಠಿ ಹಾಗೂ ಸಮಷ್ಠಿ ಹಿತವನ್ನು ಏಕ ಕಾಲದಲ್ಲಿ ಸಾಧಿಸಿದಂತೆ ಗೋಚರವಾಗುತ್ತದೆಯೇ ಹೊರತು ಬಿಡುಗಡೆಯ ಹಾದಿಯಿಂದ ಬಹುಬೇಗನೆ ಹಿಂದಕ್ಕೆ ಎಳೆದುಕೊಳ್ಳುತ್ತವೆ. ಅವುಗಳು ಅನಿಷ್ಟವಂತಿಕೆಯ ನಿವಾರಕಗಳು, ಫಲವಂತಿಕೆಯ ಸಂಕೇತವಾಗಿ ಕಂಡರೂ ಒಮ್ಮೊಮ್ಮೆ ಮಾನವನನ್ನು ದಿಗ್ಮೂಢನನ್ನಾಗಿ ಮಾಡಿ ತನ್ನ ಹಿಡಿತದಲ್ಲಿ ಬಂಧಿಸಿಬಿಡುತ್ತವೆ.

ಆಚರಣೆಗಳು ಭಾವನಾತ್ಮಕ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಕೇಂದ್ರಿತ ನೆಲೆಗಳಲ್ಲಿ ಮನುಷ್ಯನನ್ನು ಕಟ್ಟಿ ಹಾಕುತ್ತವೆ. ಆಚರಣೆಗಳಿಂದ ಸಂಪ್ರದಾಯ ಬದ್ಧವಾದ ಜಾತಿಶೋಷಣೆ, ದೇವಾಲಯಗಳ ಪ್ರವೇಶಿಕೆಗೆ ತೊಡಕು ಹಾಗೂ ಸಾಮಾಜಿಕ ಅಸ್ತಿತ್ವದ ಅಲುಗಾಡುವಿಕೆಗೆ ನಾಂದಿಯಾಗಿಬಿಡುತ್ತವೆ. ಆಚರಣೆಗಳಲ್ಲಿ ಜೀವಂತಿಕೆಯ ಲಕ್ಷಣಗಳು ಕಂಡುಬರುತ್ತವೆ ನಿಜ, ಆದರೆ ಕೆಲವು ವೇಳೆ ಅವು ಸಮ್ಮತವಾದಂತೆ ಕಂಡು ಬರುಬರುತ್ತಾ ನಿರ್ಲಿಪ್ತತೆಯನ್ನುಂಟು ಮಾಡುತ್ತವೆ. ಆಚರಣೆಯಲ್ಲಿ ವೈಯಕ್ತಿಕ ಆಚರಣೆಗಳು, ಸಾಮಾಜಿಕ ಆಚರಣೆಗಳು, ವ್ಯವಸಾಯಾತ್ಮಕ ಆಚರಣೆಗಳು, ಧಾರ್ಮಿಕ ಆಚರಣೆಗಳು, ವಿವಿಧ ಆಚರಣಾ ಪದ್ಧತಿಗಳು ಇಂಡಿಯಾದ ಸಂಸ್ಕೃತಿಯೊಳಗೆ ಬೆರೆತುಕೊಂಡಿವೆ.

ವೈಯಕ್ತಿಕ ಕಾರಣದಿಂದ ಅಂದರೆ ವ್ಯಕ್ತಿಗತ ನಂಬಿಕೆಯಿಂದ ನಡೆಯುವ ಆಚರಣೆಗಳಾಗಿದ್ದು ಬಾಯಿಬೀಗ ಹಾಕುವುದು, ಕೆಂಡ ಹಾಯುವುದು ಮುಂತಾದವುಗಳು. ಕುಟುಂಬದ ಯೋಗಕ್ಷೇಮದ ಕಾರಣಕ್ಕಾಗಿ ಮುಡಿಕೊಡುವುದು ಕೌಟುಂಬಿಕ ಆಚರಣೆಗೆ ಸಂಬಂಧಿಸಿದ್ದು, ವರ್ಣಸಂಬಂಧಿ ಆಚರಣೆಗಳೇ ಇಲ್ಲಿ ಮುಖ್ಯವಾಗಿ ಬಿಡುತ್ತವೆ. ಬಹುತೇಕ ಆಚರಣೆಗಳಿಗೆ ಹರಕೆ ಹಾಗೂ ನಂಬಿಕೆಗಳು ಮೂಲ ಕಾರಣವಾಗಿವೆ. ಹರಕೆ ಆಚರಣೆಯ ಪ್ರಮುಖ ಅಂಗವಾಗಿದೆ. ನಂಬಿಕೆ ಹರಕೆಯ ಅಡಿಪಾಯ ಅಥವಾ ತಳಹದಿ. ಒಟ್ಟಿನಲ್ಲಿ ಮಾನವ ನಂಬಿಕೆಯ ಆಧಾರದ ಮೇಲೆ ಹರಕೆಯನ್ನು ಕಟ್ಟುತ್ತಾನೆ. ಈ ರೀತಿಯಾಗಿ ಆಚರಣೆಗಳು ಅಸ್ತಿತ್ವಕ್ಕೆ ಬರುತ್ತವೆ. ಸಾಮಾನ್ಯವಾಗಿ ಪ್ರತಿಗ್ರಾಮದವರು ತಮ್ಮ ತಮ್ಮ ಗ್ರಾಮದೇವತೆಗೆ, ಗ್ರಾಮದೈವಕ್ಕೆ ಹರಕೆಯನ್ನು ಒಪ್ಪಿಸುವುದು ವಾಡಿಕೆಯಾಗಿದೆ. ಎಲ್ಲಮ್ಮನಿಗೆ ಹರಕೆ ಹೊತ್ತವರು ನಡೆಸಿಕೊಂಡು ಬಂದಿರುವ ಗಂಡಸು ಹೆಂಗಸಾಗುವ, ಹೆಂಗಸು ಗಂಡಸಾಗುವ ಜೋಗತಿ ಸಂಪ್ರದಾಯ, ತಿರುಪತಿ ತಿಮ್ಮಪ್ಪನಿಗೆ ತಲೆಕೂದಲು

ಕೊಡುವ ಸಂಪ್ರದಾಯ ಇನ್ನು ಕೆಲವು ಸೇವೆಗಳು ಜನಪದ ದೇವರುಗಳಿಗೆ ಸಲ್ಲುತ್ತವೆ. ಹೀಗೆ ಆಚರಣೆಗಳನ್ನೊಳಗೊಂಡ ಸಂಕೀರ್ಣ ಸ್ವರೂಪವನ್ನು ಹಬ್ಬ ಎಂದು ಕರೆಯಬಹುದು. ಸಂಪ್ರದಾಯ, ಹಬ್ಬ, ಆಚರಣೆ ಈ ಮೂರಕ್ಕೂ ನಂಬಿಕೆಯೇ ಜೀವಧಾತು. ಆಚರಣೆಗಳು ಬಹುತೇಕ ಧಾರ್ಮಿಕ ಮತ್ತು ದೈವಿಕ ಸಂಬಂಧವನ್ನು ಹೊಂದಿರುತ್ತವೆ. ಇದು ನಂಬಿಕೆಯನ್ನು ಆಧರಿಸಿದ್ದು, ವಿಶೇಷ ಸಂದರ್ಭಗಳಲ್ಲಿ ಅನ್ವಯಿಸುತ್ತವೆ. ಹಾಗೂ ಆಚರಿಸಲ್ಪಡುತ್ತವೆ. ನಿತ್ಯ ಜೀವನದಲ್ಲಿ ವ್ಯಕ್ತಿಗತ ಬದುಕು ಅನೇಕ ಸಂಕ್ರಮಣಗಳಿಗೆ ಒಳಗಾಗುತ್ತದೆ. ಇಂತಹ ಸಂಕ್ರಮಣಗಳು ಜೀವನದಲ್ಲಿ ನಡೆಯದಿರುವಂತೆ ಮಾನವ ಎಚ್ಚರವಹಿಸುತ್ತಾನೆ. ಇಂತಹ ಎಚ್ಚರಗಳು, ಕಾಳಜಿಗಳೇ ಅನೇಕ ಆಚರಣೆಗಳ ಹುಟ್ಟಿಗೆ ಕಾರಣವಾಗಿವೆ. ವ್ಯಕ್ತಿಯ ಬದುಕು ಬಾಲ್ಯದಿಂದ ಮುಪ್ಪಿನವರೆಗೂ ಅಪಾರ ನಂಬಿಕೆಗಳಿಂದ ಕೂಡಿರುತ್ತದೆ ಹಾಗೂ ಆಚರಣೆಗಳನ್ನೆ ಒಳಗೊಂಡಿರುತ್ತವೆ.

ಆಚರಣೆಗಳು ಪ್ರದೇಶದಿಂದ ಪ್ರದೇಶಕ್ಕೆ, ದೇಶದಿಂದ ದೇಶಕ್ಕೆ ಭಿನ್ನವಾಗಿ ಕಂಡರೂ ಅವುಗಳಲ್ಲಿ ಸಾಮ್ಯತೆ ಅಥವಾ ಹೋಲಿಕೆಗಳನ್ನು ಕಾಣುತ್ತೇವೆ. ನಮ್ಮ ಸಂಸ್ಕೃತಿಯ ಆಚರಣೆಗಳಲ್ಲಿ ಮುಖ್ಯವಾಗಿ ರೋಗನಿವಾರಕ ಆಚರಣೆಗಳು, ಮಳೆ, ಬೆಳೆ, ಭೂಮಿಗೆ ಸಂಬಂಧಿಸಿದ ಆಚರಣೆಗಳು ಹಬ್ಬ, ಜಾತ್ರೆ, ಉತ್ಸವ, ತೇರುಗಳಿಗೆ ಸಂಬಂಧಿಸಿದ ಆಚರಣೆಗಳು ಇನ್ನು ಕೆಲವು ವಿಶಿಷ್ಟ ಆಚರಣೆಗಳು ಕಂಡುಬರುತ್ತವೆ.

ಅದೇ ರೀತಿಯಾಗಿ ವಿದೇಶಗಳಲ್ಲಿ ಕೆಲವು ಆಚರಣೆಯ ವೈಶಿಷ್ಟ್ಯತೆಯನ್ನು ಗಮನಿಸಿದಾಗ ಈ ರೀತಿಯಾಗಿ ಕಂಡುಬರುತ್ತವೆ. ಮಳೆಯಾಗದ ಸಂದರ್ಭದಲ್ಲಿ ಗುಲಾಮರನ್ನು ಬಲವಂತವಾಗಿ ಸುಡುವುದರ ಮೂಲಕ ಮಳೆಯನ್ನು ಒಲಿಸಿಕೊಳ್ಳುವ ಆಚರಣೆಗಳು ಚೈನಾದೇಶದಲ್ಲಿ ರೂಢಿಯಲ್ಲಿದ್ದವು ಎಂದು ಎಫ್.ಕರೋವಿನ್ ದಾಖಲಿಸಿದ್ದಾರೆ. ಮಳೆ ತರಿಸುವುದಕ್ಕಾಗಿ ಪ್ರಾಚೀನ ಟಿಬೆಟಿಯನ್ನರು ಬೆತ್ತಲೆಯಾದ ಹುಡುಗಿಯ ಮೇಲೆ ನೀರನ್ನು ಸುರಿಸುವ ವಿಧಿಯೊಂದನ್ನು ಆಚರಿಸುತ್ತಿದ್ದರು. ಪ್ರಾಚೀನ ಸ್ಪ್ಯಾನಿಷ್ ಪುರೋಹಿತರು ಮಳೆಬರಿಸುವುದಕ್ಕಾಗಿ ಮೆರವಣಿಗೆಯಲ್ಲಿ ಒಂದು ಪವಿತ್ರಬಾವಿ ಅಥವಾ ಮಾಂತ್ರಿಕ ಚಿಲುಮೆಯ ಬಳಿ ಹೋಗುತ್ತಿದ್ದರು. ಹಾಗೂ ನೀರಿನ ಮೇಲ್ಮೈಯನ್ನು ಕೋಲುಗಳಿಂದ ಬಡಿಯುತ್ತಿದ್ದರು. ಹೀಗೆ ಮಾಡುವುದರಿಂದ ಮಳೆ ಬರುವುದೆಂದು ನಂಬಿದ್ದರು. ಮಳೆಯನ್ನೇ ಕುರಿತಂತೆ ಇರುವ ಆಚರಣೆಗಳಲ್ಲಿ ರಕ್ತಾರ್ಪಣೆ ಮತ್ತು ಬಲಿಗಳು ಅತ್ಯಂತ ಪ್ರಧಾನ ಪಾತ್ರವಹಿಸುತ್ತಿದ್ದುದನ್ನು ಫ್ರೇಜರ್ ತಮ್ಮ ಗೋಲ್ಡನ್ ಬೋ ಪುಸ್ತಕದಲ್ಲಿ ವಿವರಿಸಿದ್ದಾರೆ (ಮಂಜುನಾಥ ಬೇವಿನಕಟ್ಟಿ, ಜಾನಪದ ಉತ್ಖನನ, ಪುಟ.೧೧೬). ಇಂತಹ ಆಚರಣೆಗಳನ್ನು ಕುರಿತು ತಿಳಿದಾಗ ವಿಸ್ಮಯ ಹಾಗೂ ವಿಪರ್ಯಾಸಗಳೆರಡು ಉಂಟಾಗುತ್ತವೆ. ಕೇವಲ ಭಾರತೀಯ ನೆಲದಲ್ಲಿಯೇ ಮಾತ್ರ ನಿಕೃಷ್ಟ ಹಾಗೂ ನಿರ್ಲಿಪ್ತ ಸ್ಥಿತಿಯ ಆಚರಣೆಗಳು ಕಂಡುಬರುತ್ತವೆ ಎನ್ನುವಂತಿಲ್ಲ.

ಹೀಗೆ ಮಾನವನ ಬದುಕಿನುದ್ದಕ್ಕೂ ಹಲವಾರು ಆಚರಣೆಗಳು ನಡೆಯುತ್ತಲೇ ಇರುತ್ತವೆ. "ಸಂಪ್ರದಾಯ ಅಂಗೀಕರಿಸಿದ ಧಾರ್ಮಿಕ ಮಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ" (ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪುಟ.೭೧). ಇಂತಹ ನಂಬಿಕೆಯ ಸಿದ್ಧಾಂತ ಆಚರಣೆಯನ್ನು ಮುಂದುವರೆಸಿಕೊಂಡು ಹೋಗುವಂತೆ ಮಾಡುತ್ತದೆ.

ಮೇಲಿನ ಎಲ್ಲ ರೀತಿಯ ಆಚರಣೆಯ ಒಳನೋಟವನ್ನು ಗಮನಿಸಿದಾಗ ಪ್ರತಿಯೊಂದು ಆಚರಣೆಯ ಉದ್ದೇಶ ಭಿನ್ನವಾಗಿರುತ್ತದೆ. ವೈಯಕ್ತಿಕ ಆಚರಣೆಗಳನ್ನು ಮೊದಲುಗೊಂಡು ಮಳೆ, ಬೆಳೆಗಾಗಿ ನಡೆಸುವ ಈ ಆಚರಣೆಗಳಲ್ಲಿ ಊರುಕೇರಿಯ ಒಳಿತಿಗೆ ಸಂಬಂಧಿಸಿದ ಧ್ಯೇಯೋದ್ದೇಶಗಳಿವೆ. ಪ್ರಾದೇಶಿಕವಾಗಿ ಆಚರಣೆಗಳು ಭಿನ್ನವಾಗಿದ್ದರೂ, ಅವುಗಳನ್ನು ಆಚರಿಸುವ ಉದ್ದೇಶ ಒಂದೇ. ಪ್ರತಿಯೊಂದು ಆಚರಣೆಯು ಸಾಂಕೇತಿಕವಾದ ಅರ್ಥವನ್ನು ಹೊಂದಿರುತ್ತದೆ. ಸಂಸ್ಕೃತಿ ಭಿನ್ನವಾದರೂ, ಭಾಷೆ ಭಿನ್ನವಾದರೂ ಆಚರಣೆಗಳ ಮಹತ್ವ ಇಂದಿಗೂ ಪ್ರಸ್ತುತವಾಗಿದೆ. ಆ ಆಚರಣೆಗಳು ಹಲವಾರು ಕಾರಣಗಳಿಂದ ಬೇಸಿಗೆ ಕಾಲದ ಏಪ್ರಿಲ್ ಹಾಗೂ ಮೇ ತಿಂಗಳಲ್ಲಿ ನೆರವೇರುತ್ತವೆ. ಈ ತಿಂಗಳಲ್ಲಿ ಹಬ್ಬ ಹಾಗೂ ಜಾತ್ರೆಗಳಿಗೆ ಪ್ರಶಸ್ತವಾಗಿವೆ.

ಬಹುತೇಕ ಆಚರಣೆಗಳು ಹುಣ್ಣಿಮೆಯ ರಾತ್ರಿಯಲ್ಲಿ ನಡೆಸಲ್ಪಡುತ್ತವೆ. ಹುಣ್ಣಿಮೆ ರಾತ್ರಿ ಆಚರಣೆಗಳಿಗೆ ಪ್ರಶಸ್ತ ಕಾಲ. ಬೆಳದಿಂಗಳು, ಸುಖ, ಸಮೃದ್ಧಿ, ಶಾಂತಿಯ ಸಂಕೇತವಾಗಿದೆ. ಹಳ್ಳಿಯ ಜನ ಸುಗ್ಗಿ ಆಚರಿಸುವ ಕಾಲವಿದು. ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆಗಳೇ ಹೆಚ್ಚು. ಇವು ಸಂಸ್ಕೃತಿಯನ್ನು ಬಿಂಬಿಸುವುದರ ಜೊತೆಗೆ ಮನೋಲ್ಲಾಸವನ್ನು ನೀಡುತ್ತಾ ಬಂದಿವೆ. ದೇವಸ್ಮರಣೆಯ ಜೊತೆ ಜೊತೆಗೆ ಬಂಧು ಬಾಂಧವರ ಸಾಮೀಪ್ಯವನ್ನು ಒದಗಿಸುತ್ತವೆ.

ಒಂದರ್ಥದಲ್ಲಿ ಆಚರಣೆಗಳು ಎಷ್ಟೇ ಕಠಿಣವಾದರೂ ಅವುಗಳು ಮಾನಸಿಕ ನೆಮ್ಮದಿಯನ್ನು ಕೊಡುತ್ತವೆ. ಆಚರಣೆಗಳನ್ನು ಮಾಡದೇ ಹೋದರೆ ಮನಸ್ಸಿಗೆ ಏನೋ ಅಸಮಾಧಾನವಾಗುತ್ತದೆ. ದುಡಿದು ಬೆಂದು ಬಳಲಿ ಹೋದ ಆತ್ಮಗಳಿಗೆ ಆನಂದ ಹಾಗೂ ಸಮಾಧಾನವನ್ನುಂಟುಮಾಡುವ ಸುಗ್ಗಿಯು ಪರ್ವಕಾಲವಾಗಿದೆ. ಪ್ರತಿಯೊಂದು ಸಮುದಾಯಗಳು ತಮ್ಮ ತಮ್ಮ ಕುಲದೈವ, ಗ್ರಾಮದೈವ ಹಾಗೂ ಮನೆದೇವರುಗಳ ಆಚರಣೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಹೀಗೆ ಮನುಷ್ಯನಿಗೆ ಮಾನಸಿಕ, ಭೌತಿಕ, ಅಗತ್ಯವಾದ ಭಾಗಗಳಾಗಿ ಆಚರಣೆಗಳು ಬೆಳೆದುಕೊಂಡು ಬಂದಿವೆ. ಬಾಲ್ಯದಿಂದಿಡಿದು ಮರಣದವರೆಗೂ ಕೈಗೊಳ್ಳುವ ಆಚರಣೆಗಳು ಬದುಕಿನ ಭಾಗವಾಗಿ ಬಿಡಿಸಲಾರದ ಕಗ್ಗಂಟಾಗಿ, ಜನಪದರ ಆಶೋತ್ತರಗಳ ಈಡೇರಿಕೆಗೆ ಸಹಾಯಕವಾಗಿವೆ.

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳನ್ನು ಸ್ಥಿತ್ಯಂತರದ ವಿಧಿಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು. ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ. ಡಾ.ದೇ.ಜ.ಗೌ ಹೇಳುವಂತೆ 'ಮಾನವ ಜೀವನವನ್ನು ರೂಪಿಸುವಲ್ಲಿ ಬಾಳಿನ ಅವಿಭಾಜ್ಯ ಅಂಗಗಳಾಗಿವೆ.' ಸಮಾಜವನ್ನು ಒಂದು ಗೂಡಿಸುವ ಮತ್ತು ಮುಂದಕ್ಕೊಯ್ಯುವ ಶಕ್ತಿಪುಂಜಗಳಾಗಿವೆ. ಅವನ ನಡಾವಳಿ ಹಾಗೂ ವ್ಯವಹಾರಗಳು, ಸಂಪ್ರದಾಯಬದ್ಧವಾಗಿಯೇ ಜರುಗುತ್ತವೆ. ಭೌಗೋಳಿಕ, ಮತೀಯ ಹಾಗೂ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ಆಯಾ ಜನರ ಮನೋಧರ್ಮವನ್ನವಲಂಬಿಸಿ ಸಂಪ್ರದಾಯಗಳು ಅಥವಾ ಆಚರಣೆಗಳು ಉಗಮಗೊಳ್ಳುತ್ತವೆ. ಇವುಗಳನ್ನು ಜೀವನಾವರ್ತನ ಆಚರಣೆಗಳು ಹಾಗೂ ವಾರ್ಷಿಕಾವರ್ತನ ಆಚರಣೆಗಳೆಂದು ವಿಂಗಡಿಸಿಕೊಂಡು ಅಧ್ಯಯನಕ್ಕೊಳಪಡಿಸಲಾಗಿದೆ.

### ೪.೨. ಜೀವನಾವರ್ತನದ ಆಚರಣೆಗಳು

ಜೀವನಾವರ್ತನವು ಮನುಷ್ಯನ ಹುಟ್ಟಿನಿಂದ ತೊಡಗಿ ಸಾವಿನಲ್ಲಿ ಕೊನೆಗೊಳ್ಳುತ್ತದೆ. ಇವುಗಳ ನಡುವೆ ಅನೇಕ ಸ್ಥಿತ್ಯಂತರದ ಹಂತಗಳಿರುತ್ತವೆ. ಇಂತಹ ಸಂದರ್ಭದಲ್ಲಿ ನಡೆಸುವ ಆಚರಣೆಗಳನ್ನು ಸ್ಥಿತ್ಯಂತರದ ವಿಧಿಗಳು ಅಥವಾ ಪರಿವರ್ತನೆಯ ವಿಧಿಗಳೆಂದು ಕರೆಯಬಹುದು. ಇಂತಹ ವಿಧಿ ಆಚರಣೆಗಳು ಕಾಲದಿಂದ ಕಾಲಕ್ಕೆ ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುತ್ತಾ ಹೋಗುತ್ತವೆ.

ಮನುಷ್ಯನ ಹುಟ್ಟು ಸಾವುಗಳ ನಡುವೆ ನಡೆಯುವ ಅನೇಕ ಚಟುವಟಿಕೆಗಳಿಗೆ ಧಾರ್ಮಿಕತೆಯು ಮೂಲ ಪ್ರೇರಕ ಶಕ್ತಿಯಾಗಿರುತ್ತದೆ. ಧಾರ್ಮಿಕತೆ ಇಲ್ಲದೆ ಯಾವ ಕಾರ್ಯಗಳು ನಡೆಯುವುದಿಲ್ಲ. ಪ್ರತಿ ಸಾಂದರ್ಭಿಕ ಪರಿಸ್ಥಿತಿಯಲ್ಲಿ ಅವನು ಆಚರಿಸುವ ಆಚರಣೆಗಳಿಗೆ ಜೀವನಾವರ್ತನ ಆಚರಣೆಗಳು ಎಂದು ಕರೆಯಬಹುದಾಗಿದೆ. ಅಂತಹವುಗಳಲ್ಲಿ ವೈಯಕ್ತಿಕವಾಗಿ ಕೌಟುಂಬಿಕವಾಗಿ ಇಲ್ಲವೋ ಸಾಮೂಹಿಕವಾಗಿ ಆಚರಣೆಗೆ ಒಳಪಡುತ್ತವೆ. ಗ್ರಾಮ ದೈವಗಳು ಅವರ ಆಚರಣೆಯ ಕೇಂದ್ರತ್ವ ಪಡೆದುಕೊಂಡಿರುವುದು ಸಾಮಾನ್ಯ.

ಊರಿನ ಪ್ರತಿಯೊಂದು ಮನೆಯಲ್ಲಿ, ಸಮುದಾಯಗಳಲ್ಲಿ ಮಂಗಳಕಾರ್ಯ ನಡೆದರೆ ಮೊದಲಿಗೆ ಚಾಂಗದೇವರಿಗೆ ಪೂಜೆ ಸಲ್ಲಿಸಿ, ಕಾರ್ಯವನ್ನು ಮುಂದುವರೆಸುತ್ತಾರೆ. ಅಪಾಯ ಹಾಗೂ ಸಂಕಷ್ಟದ ಪರಿಸ್ಥಿತಿಯಲ್ಲಿ ಮಾನವ ದೇವರ ಮೊರೆ ಹೋಗುವುದು ಸಾಮಾನ್ಯವಾಗಿದೆ. ಆಗ ಅವರು ದೇವರಿಗೆ ಹರಕೆ ಹೊರುತ್ತಾರೆ. ಹರಕೆ ಅಂದರೆ ಅಂದುಕೊಂಡಿದ್ದನ್ನು ತೀರಿಸುವುದು. ಹೊತ್ತ ಹರಕೆಯನ್ನು ಒಳ್ಳೆಯ ಸಂದರ್ಭದಲ್ಲಿ ತೀರಿಸುತ್ತಾರೆ. ಜನನ, ನಾಮಕರಣ, ಜವಳ ಕಾರ್ಯಕ್ರಮ, ಮೈನೆರೆದಾಗ, ವಿವಾಹದ ಸಂದರ್ಭದಲ್ಲಿ ಹಾಗೂ ಮರಣ ಇಂತಹ ಸನ್ನಿವೇಶಗಳು ಹರಕೆಯನ್ನು ತೀರಿಸಲು ಸಹಕಾರಿಯಾಗಿವೆ.ಆದರೆ ಕೆಲವೊಮ್ಮೆ ತನ್ನೂರಗ್ರಾಮ ದೈವಗಳಿಗೆ ಮಾಡಿಕೊಂಡ ಹರಕೆ ವಿಫಲವಾದರೆ, ಬೇರೆ ಊರಿನ ಮತ್ತೊಂದು ದೇವತೆಗೆ ಹರಕೆ ಹೊರುತ್ತಾರೆ. ಉದಾಹರಣೆಗೆ ಧರ್ಮಸ್ಥಳದ ಮಂಜುನಾಥ, ಮಂತ್ರಾಲಯದ ರಾಘವೇಂದ್ರಸ್ವಾಮಿ, ತಿರುಪತಿ ತಿಮ್ಮಪ್ಪ, ಮುನಿರಾಬಾದಿನ ಹುಲಿಗೆಮ್ಮ, ಸವದತ್ತಿಯ ಎಲ್ಲಮ್ಮನಿಗೆ ಹರಕೆ ಹೊರುವ ಜನರಿದ್ದಾರೆ.

ಯಮನೂರು ಗ್ರಾಮದಲ್ಲಿ ವಿವಿಧ ಸಮುದಾಯದ ಜನರು ವಾಸಿಸುತ್ತಾರೆ. ಆದರೆ ಬಹುಸಂಖ್ಯಾತರಾಗಿ ಕುರುಬರು, ಮರಾಠರು, ಲಿಂಗಾಯತರು ಇದ್ದಾರೆ. ಹೀಗಾಗಿ ಅನೇಕ ಸಮುದಾಯದ ಅಲ್ಪಸಂಖ್ಯಾತ ಜನರು, ತಮ್ಮ ಸಮುದಾಯದಲ್ಲಿ ಅಲ್ಪಸ್ವಲ್ಪ ಆಚರಣೆಯಲ್ಲಿ ಬದಲಾವಣೆ ಮಾಡಿಕೊಂಡರೂ, ಕೂಡಾ ಬಹುತೇಕ ಆಚರಣೆಗಳಲ್ಲಿ ಕುರುಬರು, ಲಿಂಗಾಯತ ಸಮುದಾಯದ ಆಚರಣೆಗಳೇ ಕಂಡುಬರುತ್ತವೆ. ಹೀಗಾಗಿ ವಿವಿಧ ಸಮುದಾಯಗಳ ಆಚರಣೆಗಳಲ್ಲಿ ಕಂಡುಬರುವ ವಿಭಿನ್ನ ಆಚರಣೆಗಳನ್ನು ಮಾತ್ರ ಇಲ್ಲಿ ಗುರ್ತಿಸುವ ಪ್ರಯತ್ನವನ್ನು ಮಾಡಲಾಗಿದೆ.

#### ೪.೨.೧. ಸೀಮಂತ

ಗರ್ಭಾವಸ್ಥೆಯಲ್ಲಿದ್ದಾಗ ಹಾಗೂ ಮಗು ಜನನವಾದಾಗ ಅನೇಕ ಧಾರ್ಮಿಕ ಸಂಪ್ರದಾಯಗಳು ರೂಢಿಯಲ್ಲಿವೆ. ಗ್ರಹಣ ಕಾಲದಲ್ಲಿ ಗರ್ಭಿಣಿಯರು ಹೊರಗೆ ಬರಬಾರದೆಂಬ ನಂಬಿಕೆ, ಗರ್ಭಿಣಿಯರಿಗೆ

ಇರಬಹುದಾದ ತಿಂಡಿ ತಿನಿಸುಗಳ ಬಯಕೆಗಳನ್ನು ಪೂರೈಸುವುದು ವಾಡಿಕೆಯಲ್ಲಿದೆ. ಹಿಂದೂಗಳಲ್ಲಿ ಮೊದಲನೇ ಸಲ ಗರ್ಭಿಣಿಯಾದವಳಿಗೆ ಏಳು ಎಂಟನೇ ತಿಂಗಳಲ್ಲಿ ಸೀಮಂತವನ್ನು ಮಾಡುತ್ತಾರೆ. ಇಲ್ಲವೆ ಸೀರೆ ಉಡುಗೊರೆ ಸಮಾರಂಭ ಮಾಡುತ್ತಾರೆ.

**೪.೨.೨. ಜನನ ಮತ್ತು ನಾಮಕರಣ ಸಂಪ್ರದಾಯ**

ಸಾಮಾನ್ಯವಾಗಿ ಮೊದಲ ಹೆರಿಗೆಗೆ ಹೆಣ್ಣು ತವರು ಮನೆಗೆ ಹೋಗುತ್ತಾಳೆ. ಅದೇ ತಾನೇ ಜನನವಾದ ಮಗುವಿಗೆ ಜೇನುತುಪ್ಪವನ್ನು ನೆಕ್ಕಿಸುತ್ತಾರೆ. ಸಾಂಪ್ರದಾಯಿಕ ಆಚರಣೆಯ ಚೌಕಟ್ಟಿನಲ್ಲಿ ಪ್ರಸವವಾದ ಐದನೇ ದಿನ ಕ್ಷುದ್ರಶಕ್ತಿಗಳ ಕಾಟವು ಪ್ರಬಲವಾಗಿರುವುದೆಂದೂ ಜೀವತಿ ದೇವತೆಯನ್ನು ಪೂಜಿಸಿದರೆ ಇದು ಪರಿಹಾರವಾಗುವುದೆಂಬ ನಂಬಿಕೆಯಿದೆ.

'ಜೀವಿತ' ದೇವತೆ ಎಂದರೆ ಪ್ರಸವವಾದ ಐದನೇ ದಿನ ಮಗುವಿಗೆ ಹೊಸಬಟ್ಟೆ ಹೊಸ ಕುಲಾವಿ ಹಾಕುತ್ತಾರೆ. ಮತ್ತು ಗುಂಡುಕಲ್ಲಿನ ಪೂಜೆ ಮಾಡುವ ಸಂಪ್ರದಾಯವೂ ಇದೆ. ಹೀಗೇಕೆ ಪೂಜೆ ಮಾಡುತ್ತಾರೆ ಎಂದು ಹಿರಿಯರನ್ನು ಕೇಳಿದರೆ ಮಗುವಿನ ಹಣೆಬರಹವನ್ನು ಬರೆಯುವ ದೇವತೆ ಎಂದು ಹೇಳುತ್ತಾರೆ. ಅದಕ್ಕೆ ಶೆಟಿಗೆವ್ವನ ಪೂಜೆ ಎಂತಲೂ ಕರೆಯುತ್ತಾರೆ. ಅದನ್ನು ನಮ್ಮ ಮನೆಯಲ್ಲಿಯೂ ಇಂದಿಗೂ ಮಾಡುತ್ತಾರೆ. ಕೆಲವು ಕಡೆ **ಜೀವತ ದೇವತೆ** ಎಂದು ಕರೆದರೆ ಇನ್ನೂ ಕೆಲವು ಕಡೆ **ಶೆಟಿಗೆವ್ವ** ಎಂತಲೂ ಕರೆಯುತ್ತಾರೆ.

ಈ ಕಾರಣದಿಂದಲೇ ಈ ಸಂದರ್ಭದಲ್ಲಿ ಕೆಲವು ಮಕ್ಕಳಿಗೆ ಬುತ್ತಿದಾನವನ್ನು ಮಾಡುತ್ತಾರೆ. ಏಳನೆಯ ದಿನದಲ್ಲಿ ವೀಳ್ಯದೆಲೆ, ಅಡಿಕೆ, ಅರಿಶಿನದ ಕೊಂಬು, ಕೊಬ್ಬರಿಚೂರು, ಹಾಗೂ ದಕ್ಷಿಣೆಯನ್ನು ಒಂಬತ್ತು ಮನೆಗಳಿಗೆ ಕೊಡುತ್ತಾರೆ. ಇದಕ್ಕೆ ಗೆದ್ದ ವೀಳ್ಯ ಎಂದು ಕರೆಯುತ್ತಾರೆ. ಬಾಣಂತಿ ವಾಸಿಸುವ ಕೊಠಡಿಯಲ್ಲಿ ೧೦ ದಿನಗಳವರೆಗೆ ಜೀವತ ದೇವತೆ ವಾಸಿಸುತ್ತಾಳೆಂಬ ನಂಬಿಕೆಯಿದೆ. ಆದ್ದರಿಂದಲೇ ಪ್ರಸವವಾದ ಒಂಭತ್ತು ದಿನದವರೆಗೂ ಬಾಣಂತಿ ಕೊಠಡಿಗೆ ಹೋಗುವ ಪ್ರತಿಯೊಬ್ಬರೂ ತಮ್ಮ ಕಾಲಿಗೆ ಬೇವಿನಸೊಪ್ಪಿನ ನೀರನ್ನು ಪ್ರೋಕ್ಷಿಸಿಕೊಂಡು ಹೋಗುವುದು ರೂಢಿಯಲ್ಲಿದೆ. ಸಾಮಾನ್ಯವಾಗಿ ಮಗು ಹುಟ್ಟಿದ ೧೦ ದಿನಗಳನ್ನು ಮೈಲಿಗೆಯಾಗಿ ಆಚರಿಸಿ ೧೧ ನೇ ದಿನ ಸ್ನಾನ ಶುದ್ಧಿ ಮಾಡಿಕೊಂಡು ಮೈಲಿಗೆಯನ್ನು ನಿವಾರಿಸಿಕೊಳ್ಳುತ್ತಾರೆ. ಈ ಮೈಲಿಗೆಯೂ ಮಗುವಿನ ತಂದೆಯ ಕಡೆಯ ಎಲ್ಲಾ ಸೋದರ ಕುಟುಂಬಗಳಿಗೂ ಇರುತ್ತದೆ. ಜನನವಾದ ೧೧ ನೇ ದಿನ ಮಗುವನ್ನು ತೊಟ್ಟಿಲಿಗೆ ಹಾಕಿ ಮುತ್ತೈದೆಯರನ್ನು ಕರೆದು ಆರತಿ ಬೆಳಗುತ್ತಾರೆ, ಸಾಮಾನ್ಯವಾಗಿ ಅದೇ ದಿನ ಮಗುವಿಗೆ ನಾಮಕರಣ ಮಾಡುತ್ತಾರೆ, ಆದರೆ ಅನಿವಾರ್ಯ ಹಾಗೂ ಅಸಂದರ್ಭವಾದಾಗ ಮೂರು ತಿಂಗಳೊಳಗಾಗಿ ಆಚರಿಸುತ್ತಾರೆ. ಮಗುವಿನ ತಂದೆಯ ಸೋದರಿಗೆ ನಾಮಕರಣ ಸಮಾರಂಭದಲ್ಲಿ ಮಹತ್ವದ ಪಾತ್ರವಿದೆ. ಇತ್ತೀಚಿನ ದಿನಗಳಲ್ಲಿ ಹೆರಿಗೆಯು ಆಸ್ಪತ್ರೆಯಲ್ಲಾಗುವದು ಹೆಚ್ಚಾಗುತ್ತಾ ಬಂದಿರುವುದರಿಂದ ಕೆಲವು ಸಂಪ್ರದಾಯಗಳು ಕಣ್ಮರೆಯಾಗಿವೆ. ಬ್ರಾಹ್ಮಣರು ಹಾಗೂ ವೈದಿಕ ಧರ್ಮವನ್ನಾಚರಿಸುವ ಇತರ ಜಾತಿಗಳಲ್ಲಿ ಹಾಗೂ ಜೈನರು ಗಂಡು ಮಕ್ಕಳಿಗೆ ಉಪನಯನವನ್ನು ಮಾಡುತ್ತಾರೆ. ಲಿಂಗಾಯತರಿಗೆ ಲಿಂಗದೀಕ್ಷೆ ಕೊಡುತ್ತಾರೆ.

ಅದೇ ರೀತಿ ಮುಸಲ್ಮಾನರಲ್ಲಿ ಅನೇಕ ಸಂಪ್ರದಾಯಗಳಿವೆ. ಮಗು ಹುಟ್ಟಿದ ಕೂಡಲೇ ಕಿವಿಯಲ್ಲಿ ಬಾಂಗ್‌ನಮಾಜ್ ಮಾಡುತ್ತಾರೆ. ಆ ತಕ್ಷಣವೇ ಹೆಸರನ್ನೂ ಇಡುತ್ತಾರೆ. ಹೆಸರನ್ನು ಮುಂದೆ ಬದಲಾಯಿಸಲು ಅವಕಾಶವಿದೆ. ಮಗು ಹುಟ್ಟಿದ ಐದನೇ ದಿನ ಮಗುವಿಗೆ ಅರಿವೆಯನ್ನು ಹಾಕಿ ದೃಷ್ಟಿ ಬೀಳದ ಹಾಗೆ ಮಗುವನ್ನು ಅಲಂಕರಿಸುತ್ತಾರೆ. ಇದಕ್ಕೆ ಛಟ್ಟಿ ಎಂದು ಕರೆಯುತ್ತಾರೆ.

**ಋತುಮತಿ**

ಋತುಮತಿಯಾದ ಹುಡುಗಿಗೆ ಹೊಸ ಬಟ್ಟೆ ತರುವದು, ಆರತಿ ಬೆಳಗುವದು, ಬಂಧುವರ್ಗದವರಿಗೆ ಭೋಜನವನ್ನು ಏರ್ಪಡಿಸುವದು, ಇವೇ ಮುಂತಾದ ಸಂಪ್ರದಾಯಗಳು ಇಂದಿಗೂ ಹಿಂದೂಗಳಲ್ಲಿ ಕಂಡುಬರುತ್ತವೆ. ಋತುಮತಿಯಾದಾಗ ಅವಳನ್ನು ಯಾರೂ ಮುಟ್ಟುವಂತಿಲ್ಲ. ಈ ಕಾಲಾವಧಿಯಲ್ಲಿ ಆಕೆಗೆ ವಿಶಿಷ್ಟ ಆಹಾರ, ಕೆಲವೊಂದು ವಿಧಿ-ನಿಷೇಧಗಳಿರುತ್ತವೆ.

ಮೈನೆರೆದ ಹುಡುಗಿಗೆ ಐದುದಿನಗಳವರೆಗೆ ಶ್ಯಾವಿಗೆ, ಕೊಬ್ರಿ, ಬೆಲ್ಲ ತಿನ್ನಲು ಕೊಡುತ್ತಾರೆ. ಹಾಗೆ ಸಿಹಿ ತಿನ್ನುವುದರಿಂದ ಒಳಗಿನ ಕೆಟ್ಟ ರಕ್ತ ಪೂರ್ತಿಯಾಗಿ ಹೊರಹೋಗುತ್ತದೆ ಎಂಬ ನಂಬಿಕೆ ಇದೆ. ಮೈನೆರೆದ ಸಮಯ ಚೆನ್ನಾಗಿಲ್ಲದಿದ್ದರೆ ದಾನ ಕೊಡುತ್ತಾರೆ. ಕಾರ್ಯಕ್ರಮದ ಕೊನೆಯ ದಿನ ಊಟದ ವ್ಯವಸ್ಥೆ ಇದ್ದು ಅಂದು ಮುಖ್ಯವಾಗಿ ಋತುಮತಿಯಾದ ಹುಡುಗಿಯ ಸೋದರಮಾವನು ತಂದಿರುವ ಉಡುಗೊರೆಯನ್ನು ಉಟ್ಟಿರುತ್ತಾಳೆ.

ಮೈನೆರೆದ ಸಂಪ್ರದಾಯವನ್ನು ಕೆಲವು ಹಿಂದುಳಿದ ಸಮುದಾಯದವರು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಆ ಹುಡುಗಿಗೆ ಮೊದಲೇ ಗಂಡು ಗೊತ್ತಾಗಿದ್ದರೆ ಆ ಹುಡುಗನನ್ನು ಅವಳ ಜೊತೆಗೆ ಕೂಡ್ರಿಸಿ ಆರತಿ ಮಾಡುತ್ತಾರೆ. ಅವರು ಸಹ ಅವಳಿಗೆ ಉಡುಗೊರೆಯನ್ನು ತರುತ್ತಾರೆ. ಆದರೆ ಮೇಲ್ವರ್ಗದ ಜನರು ಇತ್ತೀಚೆಗೆ ೫ ದಿವಸ ಕೂಡ್ರಿಸಿ ಆರತಿ ಮಾಡಿ, ಗುಡಿಗೆ ಕಳುಹಿಸಿ ಮುಗಿಸಿ ಬಿಡುತ್ತಾರೆ.

**೪.೨.೩. ಮದುವೆ ಸಂಪ್ರದಾಯ**

ಹಿಂದೂಗಳಲ್ಲಿ ಮದುಮಗಳನ್ನು ಮದುಮಗನಿಗೆ ಕನ್ಯಾದಾನವೆಂದು ಕೊಡುಗೆಯ ರೂಪದಲ್ಲಿ ಮದುವೆ ಮಾಡಿ ಕೊಡುವ ಸಂಪ್ರದಾಯವಿದೆ. ಮದುವೆಯು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ಅಥವಾ ಕೆಲವು ಜಾತಿಗಳಲ್ಲಿ ಮೊದಲೇ ನಿಶ್ಚಯಿಸಿದಂತೆ ಗಂಡಿನ ಮನೆಯಲ್ಲಾಗಲೀ ನಡೆಸುವದು ಸಂಪ್ರದಾಯವಾಗಿದ್ದು, ಇತ್ತೀಚಿನ ದಿನಗಳಲ್ಲಿ ದೇವಸ್ಥಾನಗಳಲ್ಲಿ, ಮಠಗಳಲ್ಲಿ ಇಲ್ಲವೇ ಛತ್ರಗಳಲ್ಲಿ ಬಹುತೇಕವಾಗಿ ಮದುವೆಯು ನಡೆಯುತ್ತದೆ. ಒಂದೇ ಬೆಡಗು ಅಥವಾ ಸಗೋತ್ರಗಳಲ್ಲಿ ವಿವಾಹ ನಿಷಿದ್ಧ.

ವೀಳ್ಯದ ಶಾಸ್ತ್ರ ಅಥವಾ ನಿಶ್ಚಿತಾರ್ಥಗಳಲ್ಲಿ ಮದುವೆಯ ಪ್ರಸ್ತಾಪ ನಿಶ್ಚಿತರೂಪ ತಾಳುತ್ತದೆ. ವರ ಮತ್ತು ವರನ ತಾಯಿ ತಂದೆಯರನ್ನು ಗೌರವದಿಂದ ಬರಮಾಡಿಕೊಳ್ಳುವದು, ವಧುವರನ ಪೂರ್ವಜರನ್ನು ಆಹ್ವಾನಿಸುವುದು, ವಧುವರರು ಪರಸ್ಪರ ಕೈಗೆ ದಾರ ಕಟ್ಟುವುದು, ವಧೂವರರ ಕರಗಳನ್ನು ಜೋಡಿಸಿ ಹಾಲೆರೆಯುವುದು ವಧುವರರ ತಲೆಗಳ ಮೇಲೆ ಅಕ್ಕಿಕಾಳು ಹಾಕುವುದು, ಗುರುಹಿರಿಯರಿಂದ ಮುಟ್ಟಿಸಿದ ಮಂಗಳಸೂತ್ರವನ್ನು ಕಟ್ಟುವುದು, ವಧುವರರು ಪವಿತ್ರ ಅಗ್ನಿಕುಂಡ ಸುತ್ತಿ, ಏಳು ಹೆಜ್ಜೆಗಳನ್ನು ಕ್ರಮಿಸುವುದು, ಇದನ್ನು ಸಪ್ತಪದಿ ಎಂದು ಕರೆಯುವರು. ಇವು ವಿವಾಹದ ಧಾರ್ಮಿಕ ವಿಧಿಗಳಲ್ಲಿ ಮುಖ್ಯವಾದವು.

ಲಿಂಗಾಯಿತರು ನೆರವೇರಿಸುವ ಮದುವೆಗಳಲ್ಲಿ ಹೋಮಕ್ಕೆ ಅವಕಾಶವಿರುವದಿಲ್ಲ. ಇದಕ್ಕೆ ಬದಲಾಗಿ ಪಂಚಕಲಶ, ಅಂದರೆ ಪವಿತ್ರ ಬಿಂದಿಗೆಗಳ ಪ್ರತಿಷ್ಠಾಪನೆಯಾಗುತ್ತದೆ. ವೀರಭದ್ರ ಕುಲದೇವತೆಯನ್ನು ಆರಾಧಿಸುವ ಕೆಲವು ಕುಟುಂಬಗಳು ಮದುವೆಯ ಮೊದಲು ಗುಗ್ಗಳ ಸೇವೆಯನ್ನು ಕೈಗೊಳ್ಳುವರು. ಐದರಲ್ಲಿಯ ೪ ಕಲಶಗಳಲ್ಲಿ ಹಾಲುಮಡ್ಡಿ ಮತ್ತಿತರ ದಾಹಕ ಪದಾರ್ಥಗಳಾದ ಗುಗ್ಗಳ ಧೂಪ ತುಂಬಿ ಕಲಶಗಳನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವರು. ಇದು ಸೂತ್ರವನ್ನು ಕಟ್ಟುವದು ಮತ್ತಿತರ ವಿವಾಹ ವಿಧಿಗಳು ಬೇರೆ ಹಿಂದೂಗಳ ವಿಧಿಗಳಂತೆಯೇ ಇರುತ್ತವೆ. ಸಾಮಾನ್ಯವಾಗಿ ಇವರ ವಿವಾಹ ವಿಧಿಯನ್ನು ಜಂಗಮರು ನಡೆಸಿಕೊಡುತ್ತಾರೆ.

ಲಿಂಗಾಯಿತ ಒಕ್ಕಲಿಗ ಮತ್ತಿತರ ಅನೇಕ ಜಾತಿಗಳಲ್ಲಿ ಮದುವೆಯ ಮೊದಲು ಒಂದು ಕಂಬವನ್ನು ನಿಲ್ಲಿಸಿ ಅದಕ್ಕೆ ಕಳ್ಳಿಕಟ್ಟುತ್ತಾರೆ. ಇದಕ್ಕೆ 'ಹಾಲುಗಂಬ' ಎಂದು ಕರೆಯುತ್ತಾರೆ. ಇದನ್ನು ಮನೆಯ ಮುಂದೆ ನಿಲ್ಲಿಸುತ್ತಾರೆ. ಮಾಂಗಲ್ಯ ಕಟ್ಟುವುದಕ್ಕೆ ಮುಂಚೆ ಇದಕ್ಕೆ ವಾಡಿಕೆಯಂತೆ ಪೂಜಾವಿಧಿಗಳನ್ನು ಸಲ್ಲಿಸುತ್ತಾರೆ. ತೆರ ಪದ್ಧತಿ, ಹಾಗೂ ವರದಕ್ಷಿಣೆ ಪಿಡುಗು ಇಂದಿಗೂ ಅನೇಕ ಸಮುದಾಯಗಳಲ್ಲಿರುವುದು ಕಂಡುಬರುತ್ತದೆ.

ವೈಶ್ಯ ಬ್ರಾಹ್ಮಣರಲ್ಲಿ ಗಂಡು ಹೆಣ್ಣಿನ ಜಾತಕ ಕೂಡಿಬಂದರೆ ವಿವಾಹ ನಿಷ್ಕರ್ಷೆಯಾಗುತ್ತದೆ. ಕೆಲವರಲ್ಲಿ ಎದುರು ಬದುರು ಕೊಡುವ ಪದ್ಧತಿಯೂ ಇದೆ. ಹಿಂದೆ ರಕ್ತಸಂಬಂಧಿಕರಲ್ಲಿ ಮದುವೆ ಮಾಡಿಕೊಳ್ಳುತ್ತಿದ್ದರು. ಏಕೆಂದರೆ ಇದರಿಂದ ಸಂಬಂಧ ಇನ್ನೂ ಗಟ್ಟಿಯಾಗುತ್ತದೆ ಎಂಬ ನಂಬಿಕೆಯಿಂದ. ರಕ್ತ ಸಂಬಂಧದ ಮದುವೆಯಾದರೆ ಮಕ್ಕಳಾಗುವದಿಲ್ಲ ಒಂದು ವೇಳೆ ಹುಟ್ಟಿದರೂ ಅಂಗವಿಕಲರಾಗುತ್ತಾರೆಂಬ ವೈಜ್ಞಾನಿಕ ತಿಳುವಳಿಕೆಯಿಂದ ಇತ್ತೀಚಿನ ಪೀಳಿಗೆಯವರಲ್ಲಿ ನಂಬಿಕೆ ಇರುವುದರಿಂದ ಈಗ ಇಂತಹ ಮದುವೆಗಳು ಕಡಿಮೆಯಾಗುತ್ತಿವೆ. ಈಗ ಬಾಲ್ಯವಿವಾಹ ಪದ್ಧತಿ ಇಲ್ಲ. ಇದ್ದರೂ ಕಡಿಮೆ. ಹೆಂಡತಿಯನ್ನು ಕಳೆದುಕೊಂಡ ವಿದುರರಿಗೆ ಮರು ಮದುವೆ ಎಲ್ಲಾ ಸಮುದಾಯಗಳಲ್ಲಿ ಕಂಡುಬರುತ್ತದೆ. ಆದರೆ ವಿಧವಾ ವಿವಾಹ ತೀರ ವಿರಳವಾಗಿ ಕಂಡುಬರುತ್ತದೆ.

ಒಂದು ಕಾಲಕ್ಕೆ ವಿಭಿನ್ನ ಜಾತಿಗಳ ಹಾಗೂ ಉಪಜಾತಿಗಳ ನಡುವೆ ವಿವಾಹ ಸಂಬಂಧ ಮಾಡುವುದು ಸಾಂಪ್ರದಾಯಿಕವಾಗಿ ಪ್ರಚಲಿತವಿರಲಿಲ್ಲ, ಆದರೆ ಇತ್ತೀಚಿನ ದಿನಗಳಲ್ಲಿ ಅಂತರ್ಜಾತಿ ವಿವಾಹಗಳು ನಡೆಯುತ್ತವೆ.

ಭಾರತ ಸರ್ಕಾರದ ವಿವಾಹ ಕಾಯಿದೆಯನ್ವಯ ಎಲ್ಲರೂ ವಿವಾಹಗಳನ್ನು ಕಡ್ಡಾಯವಾಗಿ ನೋಂದಣೆ ಮಾಡಬೇಕೆನ್ನುವುದು ಸರ್ಕಾರದ ಆದೇಶವಾಗಿದೆ.

**ಕನ್ಯಾ ನೋಡುವ ಶಾಸ್ತ್ರ**

ವೈಶ್ಯ ವೀರಶೈವರಿಂದ ಹಿಡಿದು ಅನೇಕ ಸಮುದಾಯಗಳಲ್ಲಿ ವಧುವಿದ್ದಕಡೆಗೆ ವರನು ಕನ್ಯಾ ನೋಡಲು ಹೋದರೆ, ಬ್ರಾಹ್ಮಣರಲ್ಲಿ ವರನಿರುವ ಕಡೆಗೆ ವಧುವು ಹೋಗಬೇಕು. ಹೀಗೆ ಹೋಗುವಾಗ ಹೆಣ್ಣಿಗೆ ಹೂವು ತೆಗೆದುಕೊಂಡು ಹೋಗುತ್ತಾರೆ. ವಿವಾಹ ಮಾಡುವಾಗ ಬೆಡಗು, ಗೋತ್ರ ಇವುಗಳನ್ನು ನೋಡಿ ಮದುವೆ ಮಾಡುತ್ತಾರೆ. ವೀರಶೈವರಲ್ಲಿ ಕೈಬೆರಳುಗಳಿಗೆ ದಾರ ಹಿಡಿದು ಅಳತೆ ನೋಡುವುದು ರೂಢಿಯಲ್ಲಿದೆ.

ಕನ್ಯಾ ವರನ ಮನಸ್ಸಿಗೆ ಬಂದ ಮೇಲೆ ಗಂಡಿನವರ ಮನೆಗೆ ಮನೆತನ ನೋಡಲು ಹೋಗುತ್ತಾರೆ. ಮನೆತನ ಒಪ್ಪಿಗೆಯಾದಲ್ಲಿ ಅವರವರ ಅನುಕೂಲದ ಮೇಲೆ ಮಾತುಕತೆ, ಕೊಡುಕೊಳ್ಳುವ ವಿಚಾರ ನಡೆಯುತ್ತದೆ. ಕೊಡುಕೊಳ್ಳುವ ವಿಚಾರವನ್ನು ಹಿರಿಯರ ಸಮ್ಮುಖದಲ್ಲಿ ಅವರವರ ಅನುಕೂಲದ ಮೇರೆಗೆ ಮದುವೆ ದಿನ ಗೊತ್ತುಪಡಿಸಲು ಹಿರಿಯರು ತಿಳಿಸುತ್ತಾರೆ.

ನಿಶ್ಚಿತಾರ್ಥ ವಧುವಿನ ಹಾಗೂ ವರನ ಕಡೆಯವರಿಗೆ ವರ, ಕನ್ಯಾ ಒಪ್ಪಿಗೆ, ಕೊಡುಕೊಳ್ಳುವಿಕೆ ಒಪ್ಪಿಗೆಯಾಗಿ ಒಪ್ಪಿದ ಮೇಲೆ ಹೆಣ್ಣಿನವರ ಮನೆಯಲ್ಲಿ ಒಂದು ಗೊತ್ತಾದ ದಿನದಿಂದು ನಡೆಯುವ ಕಾರ್ಯ ಇದಾಗಿದೆ. ಇದು ಬಹುತೇಕ ಎಲ್ಲ ಸಮುದಾಯದಲ್ಲೂ ಕಂಡುಬರುತ್ತದೆ. ಆಯಾ ಸಮುದಾಯದ ಹೆಣ್ಣಿನ ಗಂಡಿನ ಕಡೆಯ ಹಿರಿಯರು ಸೇರಿ ಸಂಬಂಧ ಒಪ್ಪಿಗೆಯಾದ ಸಂಕೇತವಾಗಿ ತಾಂಬೂಲ ಬದಲಾಯಿಸಿಕೊಳ್ಳುತ್ತಾರೆ. ಅಂದು ಬೀಗರಿಗೆ ವಿಶೇಷವಾಗಿ ಶ್ಯಾವಿಗೆ ಪಾಯಸ ಮಾಡಿ ಊಟಕ್ಕೆ ಬಡಿಸುತ್ತಾರೆ. ಆ ಶ್ಯಾವಿಗೆ ಬಳ್ಳಿಯ ಹಾಗೆ ಸಂಬಂಧ ಇರಲಿ ಎಂಬುದು ಇಲ್ಲಿಯವರ ಅಭಿಮತವಾಗಿದೆ. ವಧು-ವರರನ್ನು ಜೊತೆಗೆ ಕೂಡಿಸಿ ಹಾರ ಹಾಕಿ ಆರತಿ ಮಾಡುತ್ತಾರೆ. ಗಂಡಿನ ಕಡೆಯವರು ಹುಡುಗಿಗೆ ಸೀರೆ ಕುಪ್ಪಸ, ಬಂಗಾರ ಹಾಕುತ್ತಾರೆ. ನಿಶ್ಚಿತಾರ್ಥವಾದರೆ ಅರ್ಧ ಮದುವೆ ಆದಂತೆ. ಆಗ ಯಾವುದೇ ಸಣ್ಣ ಕಾರಣಕ್ಕೆ ಮದುವೆ ಮುರಿದುಕೊಳ್ಳುವ ಸಾಧ್ಯತೆ ಕಡಿಮೆ ಎಂಬುದು ಜನಪದರ ನಂಬಿಕೆಯಾಗಿದೆ. ವಡ್ಡರು, ಬ್ರಾಹ್ಮಣರು, ಕ್ಷತ್ರಿಯರು, ಮುಸ್ಲಿಂರಲ್ಲಿ ಹೆಣ್ಣಿನ ಕಡೆಯವರು ಮದುವೆ ಮಾಡಿಕೊಳ್ಳುವ ಪದ್ಧತಿ ಇದೆ. ಕೆಲವು ಸಮುದಾಯದಲ್ಲಿ ಗಂಡಿನ ಕಡೆಯವರು ಮದುವೆ ಮಾಡಿಕೊಳ್ಳಬೇಕು. ಇತ್ತೀಚೆಗೆ ಈ ನಿಯಮಗಳು ಸಡಿಲಗೊಂಡು ಉಭಯತರ ಒಪ್ಪಿಗೆಯಂತೆ ಅನುಕೂಲವಾದ ಕಡೆ ಮದುವೆ ನಡೆಯುತ್ತವೆ.

### ಲಗ್ನ ಪತ್ರಿಕೆ ಕಟ್ಟಿಸುವದು

ಮದುವೆಗೆ ಎರಡು ದಿನ ಇರುವಾಗ ಹಿರಿಯರ ಬಂಧು ಬಳಗದವರ ಸಮಕ್ಷಮದಲ್ಲಿ ಲಗ್ನ ಪತ್ರಿಕೆಗಳನ್ನು ಪೂಜೆ ಮಾಡುತ್ತಾರೆ. ಆಯಾ ಸಮುದಾಯಕ್ಕೆ ತಕ್ಕಂತೆ ಈ ಕಾರ್ಯವನ್ನು ಪುರೋಹಿತರು, ಐನೋರು ಮಾಡಿಸುತ್ತಾರೆ. ವೈಶ್ಯರಲ್ಲಿ, ವೀರಶೈವರಲ್ಲಿ ಗಂಡಸರು ಈ ಕಾರ್ಯ ಮಾಡುತ್ತಾರೆ. ಅಂದು ಆ ಕಾರ್ಯಕ್ಕೆ ಬಂದು ದೈವಕ್ಕೆ ಲಗ್ನ ಪತ್ರಿಕೆ ಕೊಡುತ್ತಾರೆ. ಕೆಲವರು ಮನೆ ದೇವರಿಗೆ ಮೊದಲು ಲಗ್ನಪತ್ರಿಕೆ ತಲುಪಿಸುತ್ತಾರೆ. ಕೆಲವರು ಲಗ್ನದ ಅಕ್ಕಿ ಎಂದು ಐದು ಸೇರು ಅಕ್ಕಿ, ಬೆಲ್ಲ, ಲಗ್ನ ಪತ್ರಿಕೆ, ಕಣ, ಎಲೆ ಅಡಿಕೆ ದಕ್ಷಿಣೆ ತೆಗೆದುಕೊಂಡು ಗಂಡಿನ ಮನೆಗೆ ಹೋಗುತ್ತಾರೆ. ಬೀಗರಾದವರು ಲಗ್ನದಕ್ಕಿ ತಂದವನಿಗೆ ಸಿಹಿ ಊಟ ಮಾಡಿಸಿ ಬಟ್ಟೆ ಕೊಟ್ಟು ಕಳಿಸುತ್ತಾರೆ. ದೇವರೂಟದ ಹಿಂದಿನ ದಿನ ಹತ್ತಿರದ ಸಂಬಂಧಿಕರಿಗೆ, ದೇವರೂಟದ ದಿನ ಊರಿನವರಿಗೆ ಅನುಕೂಲದ ಮೇರೆಗೆ ದೂರದ ಊರಿನ ಬಳಗಕ್ಕೆ ಲಗ್ನ ಪತ್ರಿಕೆ ಹಂಚುತ್ತಾರೆ. ಹತ್ತಿರದ ಬಳಗಕ್ಕೆ ಲಗ್ನ ಪತ್ರಿಕೆಯ ಜೊತೆಗೆ ೨ ಕೊಬ್ಬರಿ ಬಟ್ಟಲು, ೨ ಅಡಿಕೆ ಇಟ್ಟು ಕರೆಯುತ್ತಾರೆ. ವೈಶ್ಯರಲ್ಲಿ ಲಗ್ನ ಪತ್ರಿಕೆ ಕೊಡುವುದರ ಜೊತೆಗೆ ಎಣ್ಣೆ ಬೀರುತ್ತಾರೆ. ವೀರಶೈವರು ಕುಂಕುಮ ಹಚ್ಚುವುದರೊಂದಿಗೆ ಹೆಣ್ಣು ಮಕ್ಕಳನ್ನು ಮದುವೆಗೆ ಆಹ್ವಾನಿಸುತ್ತಾರೆ.

ಮದುವೆಗೆ ಎರಡು ದಿನ ಮುಂಚೆ ಲಕ್ಷ್ಮಿಪೂಜೆ ಎರಡು ದಿನ ಮುಂಚೆ ಹಿರಿಯರಿಗೆ ಹೊಸ ಬಟ್ಟೆ ಏರಿಸುವುದು ಮಾಡುತ್ತಾರೆ. ವೀರಶೈವರು ಕೂಡಾ ಇದೇ ರೀತಿಯಾದ ಆಚರಣೆ ಮಾಡುವುದುಂಟು.

## ದೇವರೂಟ

ಮದುವೆಯ ಹಿಂದಿನ ದಿನ ಹಂದರ ಹಾಕಿ ಮದುಮಕ್ಕಳನ್ನು ಮಾಡಿ ದೈವದೂಟ ನೀಡುತ್ತಾರೆ. ಆದ ಕಾರಣ ಈ ಕಾರ್ಯವನ್ನು ದೇವರೂಟ ಅಥವಾ ದೇವತಾಕಾರ್ಯ ಎಂದು ಕರೆಯುತ್ತಾರೆ. ಹಿಂದೆ ಹಿರೇಹಂದ್ರ ಮತ್ತು ಮರಿಹಂದ್ರ ಎಂದು ಎರಡು ಹಂದ್ರ ಹಾಕುತ್ತಿದ್ದರು. ಈಗ ಹಿರೇ ಹಂದ್ರದ ಬದಲಾಗಿ ಶಾಮಿಯಾನ ಹಾಕಿ ಮರಿಹಂದ್ರ ಮಾತ್ರ ಹಾಕುತ್ತಾರೆ. ಹಾಲುಗಂಬ ಹಾಕುವ ಶಾಸ್ತ್ರ ಮೊದಲು ಮಾಡಿ ನಂತರ ಹಂದ್ರ ಹಾಕುತ್ತಾರೆ. ಹಂದರಗಂಬಕ್ಕೆ ಜಾಜು, ಸುಣ್ಣದ ಪಟ್ಟಿ ಬಳಿದಿರುತ್ತಾರೆ. ಹಂದ್ರದ ಮಧ್ಯದಲ್ಲಿ ಅಂತರಗಾಯಿ ಕಟ್ಟುತ್ತಾರೆ. ಕಂಬದಲ್ಲಿ ಒಂದು ದೀಪವನ್ನು ಹಚ್ಚಿಟ್ಟಿರುತ್ತಾರೆ. ಅಂದೇ ಮನೆಯ ಗೋಡೆಯ ಹೊರಭಾಗದಲ್ಲಿ ಸುಣ್ಣ ಮತ್ತು ಕೆಮ್ಮಣ್ಣಿನ ಜೋರು ಬಿಡುವದು ಮಾಡುತ್ತಾರೆ. ಈ ಕೆಲಸವನ್ನು ಗಂಡಿನ ಮನೆಯಲ್ಲಾದರೆ ಅಕ್ಕ ತಂಗಿಯರು ಮಾಡುತ್ತಾರೆ. ಕೆಲವರಲ್ಲಿ ಸೋದರ ಮಾವ ಮಾಡುತ್ತಾನೆ. ಚಟ್ಟು ಬಡಿದವರಿಗೆ ಆರತಿ ಮಾಡಿ ದೋತ್ರ, ಸೀರೆ, ಕುಪ್ಪಸ ಕೊಡುವುದನ್ನು ಮಾಡುತ್ತಾರೆ. ಈ ಎಲ್ಲ ಪದ್ಧತಿ ಸಾಮಾನ್ಯವಾಗಿ ಎಲ್ಲ ವರ್ಗಗಳಲ್ಲಿ ಕಂಡುಬರುತ್ತದೆ.

## ಸುರಗಿ ನೀರು

ಬ್ರಾಹ್ಮಣ, ವೈಶ್ಯ, ವೀರಶೈವ ಮುಂತಾದ ಸಮುದಾಯಗಳಲ್ಲಿ ಸುರಿಗೆ ನೀರಿನ ಪದ್ಧತಿ ಕಂಡುಬರುತ್ತದೆ. ಮದುವೆ ಹಿಂದಿನ ದಿನ ಮದುಮಗ ಮತ್ತು ಮದುಮಗಳನ್ನು ಮಾಡಬೇಕಾದರೆ ಸುರಿಗೆ ನೀರು ಎರೆಯುತ್ತಾರೆ. ಮದುವೆ ಕಲ್ಯಾಣ ಮಂಟಪದಲ್ಲಾದರೆ ಮದುವೆಯ ದಿನ ಬೆಳಿಗ್ಗೆ ಸುರಿಗೆ ನೀರು ಹಾಕುತ್ತಾರೆ. ವಧು ವರನ ಜೊತೆಯಲ್ಲಿ ತಂದೆ ತಾಯಿ, ಹಾಗೂ ಅಕ್ಕ ತಂಗಿ ಅತ್ತೆ ಆಗುವವರು ಸುರಿಗೆ ನೀರಿಗೆ ಕುಳಿತುಕೊಳ್ಳುತ್ತಾರೆ. ಸುರಿಗೆ ನೀರಿಗೆ ಕುಳಿತುಕೊಂಡವರಿಗೆ ತಲೆಗೆ ಎಣ್ಣೆ ಹಚ್ಚಿ, ಮುಖಕ್ಕೆ ಮೈಗೆ ಅರಿಶಿಣ ಹಚ್ಚಿ ಬಿಸಿ ನೀರು ಮತ್ತು ತಣ್ಣೀರಿನಿಂದ ಸ್ನಾನ ಮಾಡಿಸಿ ಕೊನೆಗೆ ಆರತಿ ಮಾಡಿ ಅವರೆಲ್ಲರಿಗೂ ಹೊಸ ಬಟ್ಟೆ ಕೊಡುತ್ತಾರೆ. ಸುರಿಗೆಗೆ ಮೊದಲು ಸುರಿಗೆ ಹಾಕುವ ಸ್ಥಳದಲ್ಲಿ ಸುತ್ತಲೂ ಐದು ತಂಬಿಗೆಗಳನ್ನು ಇಟ್ಟು ನೀರು ಅರಿಶಿಣ ಹಾಕಿ ಐದು ಸುತ್ತುದಾರ ಸುತ್ತುತ್ತಾರೆ. ಇದರ ಒಳಗಡೆ ನಿಂತು ಸುರಿಗೆ ನೀರು ಹಾಕಬೇಕು. ಸುರಿಗೆ ನೀರು ವಧುವರರ ಮೇಲೆ ಬಿದ್ದರೆ ಮೈ ಒಡೆಯುತ್ತಾರೆ ಎಂಬ ನಂಬಿಕೆ ಇದೆ.

## ಐರಾಣಿ ತರುವುದು

ಮುಸ್ಲಿಂರನ್ನು ಹೊರತು ಪಡಿಸಿ ಬಹುತೇಕ ಸಮುದಾಯಗಳಲ್ಲಿ ಈ ಆಚರಣೆ ಇದೆ. ಐರಾಣಿ ತರುವಾಗ ಕುಂಬಾರರ ಮನೆಯಿಂದ ಅಕ್ಕಿ, ಬೇಳೆ, ಬೆಲ್ಲ ಕೊಟ್ಟು, ಸುಣ್ಣದಿಂದ ಚಿತ್ರಗಳನ್ನು ಬಳಿದ ಚಿಕ್ಕಗಡಿಗೆಗಳಿಂದ ಹಿಡಿದು ದೊಡ್ಡ ಗಡಿಗೆಗಳವರೆಗೆ ಎರಡೆರಡರಂತೆ ತಂದು ಅವುಗಳನ್ನು ಗುಡಿಯಲ್ಲಿ ಇಡುತ್ತಾರೆ. ಮೆರವಣಿಗೆಯ ಮೂಲಕ ಅವುಗಳನ್ನು ದೇವರ ಮನೆಯಲ್ಲಿಟ್ಟು ಪೂಜೆ ಮಾಡುತ್ತಾರೆ. ಇದು ಅಭಿವೃದ್ಧಿಯ ಸಂಕೇತವೆಂದು ಹೇಳುತ್ತಾರೆ.

## ಮದುಮಕ್ಕಳನ್ನು ಮಾಡುವುದು

ಮದುಮಗ ಮತ್ತು ಮದುಮಗಳನ್ನು ಒಂದು ಮಣೆಯ ಮೇಲೆ ಕೂಡಿಸಿ, ಹೊಸ ಬಟ್ಟೆ ತೊಡಿಸಿ,

ಕೈಯಲ್ಲಿ ಒಂದು ತೆಂಗಿನಕಾಯಿ ಕೊಟ್ಟು, ಕೊರಳಲ್ಲಿ ಹೂವಿನ ಹಾರ ಹಾಕಿ ನಾನಾ ರೀತಿಯಲ್ಲಿ ಶೃಂಗರಿಸಿ ಮನೆಯಲ್ಲಿ ಆರತಿ ಮಾಡುತ್ತಾರೆ. ಮದುಮಗಳಾಗಿದ್ದರೆ ಹಸಿರು ಬಳೆ ತೊಡಿಸಿ ಕಾಲಿಗೆ, ಕೆನ್ನೆಗೆ ಅರಿಶಿಣ ಹಚ್ಚುತ್ತಾರೆ. ಬಳೆ ಹಾಕಲು ಬಂದ ಬಳೆಗಾರನಿಗೆ ಅಕ್ಕಿ, ಬೇಳೆ, ಬೆಲ್ಲ, ದಕ್ಷಿಣೆ ಕಟ್ಟು ಕಳುಹಿಸುತ್ತಾರೆ. ಮದುಮಗ ಅಥವಾ ಮದುಮಗಳನ್ನು ಕುಳ್ಳಿರಿಸಿ ಆರತಿ ಮಾಡಿದ ಮೇಲೆ ಸೇರಿದ ದೈವದೊಂದಿಗೆ ದೇವಸ್ಥಾನಕ್ಕೆ ಹೋಗಿ ಬರುತ್ತಾರೆ. ಮದು ಮಕ್ಕಳನ್ನು ಮಾಡಿದ ಮೇಲೆ ಮದುಮಕ್ಕಳು ದೂರ ಪ್ರಯಾಣ ಮಾಡುವಂತಿಲ್ಲ. ಕಂಡಕಂಡಲ್ಲಿ ತಿರುಗಾಡುವಂತಿಲ್ಲ ಮದುಮಕ್ಕಳಿಗೆ ದೃಷ್ಟಿಯಾಗಬಾರದೆಂದು ಕೆನ್ನೆಗೆ ಅಥವಾ ಅಂಗಾಲಿಗೆ ಕಾಡಿಗೆ ಬೊಟ್ಟು ಇಡುತ್ತಾರೆ.

### ಒಳ್ಳುಕಲ್ಲು ಪೂಜೆ

ಒಳ್ಳುಕಲ್ಲು ಮತ್ತು ಬೀಸುವ ಕಲ್ಲುಗಳನ್ನು ತೊಳೆದು ಸುಣ್ಣ ಬಣ್ಣಗಳಿಂದ ಶೃಂಗರಿಸುತ್ತಾರೆ. ಐದೈದು ಜನ ಮುತ್ತೈದೆಯರು ಸೇರಿ ಕುಟ್ಟುವ ಬೀಸುವ ಕೆಲಸ ಮಾಡುತ್ತ ಹಾಡು ಹಾಡುತ್ತಾರೆ. ಒಳ್ಳು ಕಲ್ಲಿನಲ್ಲಿ ಅಕ್ಕಿ ಹಾಕಿ ಹಾಡುತ್ತಾ ಕುಟ್ಟುತ್ತಾರೆ. ಒಳಕಲ್ಲು ಪೂಜೆಯ ನಂತರ ಹಂದ್ರದಲ್ಲಿ ಮುತ್ತೈದೆಯರು ಸೊಂಡಿಗೆ ಶ್ಯಾವಿಗೆ ಇಡುವ ಕೆಲಸದಲ್ಲಿ ತೊಡಗುತ್ತಾರೆ. ಸೊಂಡಿಗೆ ಶ್ಯಾವಿಗೆ ಮಾಡಿದ ಮರವನ್ನು ಪೂಜೆ ಮಾಡಿ ದೇವರ ಮುಂದೆ ಇಡುತ್ತಾರೆ. ಈ ಕಾರ್ಯಕ್ಕೆ ಬಂದ ಮಹಿಳೆಯರಿಗೆ ಉಪಹಾರ, ಊಟದ ವ್ಯವಸ್ಥೆ ಮಾಡಲಾಗಿರುತ್ತದೆ.

### ಎದುರು ಗೊಂಬುವುದು

ಎದುರು ಗೊಂಬುವುದು ಮದುವೆ ಗಂಡಿನ ಮನೆಯಲ್ಲಿ ನಡೆದರೆ ಮದುಮಗಳನ್ನು, ಹೆಣ್ಣಿನ ಮನೆಯಲ್ಲಿ ನಡೆದರೆ ಮದುಮಗನನ್ನು ಆಹ್ವಾನಿಸುವ ಕಾರ್ಯಕ್ಕೆ ಎದುರುಗೊಂಬುವುದು ಎನ್ನುತ್ತಾರೆ. ಮದುಮಗನನ್ನು ಆಹ್ವಾನಿಸಲು ಹಿರಿಯರೆಲ್ಲರೂ ಬ್ಯಾಂಡಿನೊಂದಿಗೆ ಗಂಡಿನವರು ಇದ್ದಲ್ಲಿಗೆ ಆರತಿಯನ್ನು ತೆಗೆದುಕೊಂಡು ಹೋಗುತ್ತಾರೆ. ಅವರಿಗೆ ಕುಂಕುಮ ಕೊಟ್ಟು ಆಹ್ವಾನಿಸುತ್ತಾರೆ. ಮದುಮಗಳ ತಮ್ಮ ಅಥವಾ ಅಣ್ಣ ಆಗುವವರು ಮದುಮಗನಿಗೆ ತಂಬಿಗೆಯಲ್ಲಿರುವ ನೀರಿನಿಂದ ಕಣ್ಣೊರೆಸಿ, ಕರವಸ್ತ್ರದಿಂದ ವರೆಸಿ ಕುಂಕುಮ ಹಚ್ಚಿ ಹೂವಿನ ಹಾರ ಹಾಕಿ ನಗುನಗುತ್ತಾ ಹಾರ್ಧಿಕವಾಗಿ ಮದುಮಗನನ್ನು ಮತ್ತು ಬೀಗರ ತಂಡವನ್ನು ಸ್ವಾಗತಿಸಿ ಅವರಿಗೆ ವಿಶ್ರಾಂತಿ ಸ್ಥಳದ ವ್ಯವಸ್ಥೆ ಮಾಡುತ್ತಾರೆ. ನಂತರ ಅವರಿಗೆ ಉಪಹಾರದ ವ್ಯವಸ್ಥೆ ನಡೆಯುತ್ತದೆ. ಅಂದು ರಾತ್ರಿ ದೊಡ್ಡ ವೀಳ್ಯ ನಡೆಯುತ್ತದೆ. ಅಕ್ಕಿಯಿಂದ ಕಂಬಳಿಯ ಅಥವಾ ಜಮಖಾನದ ಮೇಲೆ ಹಾಸಕ್ಕಿ ಹಾಕುವರು. ಮುಚ್ಚಿಗರು, ಒಡ್ಡರು, ಬೇಡರು, 'ಓಂ' ಎಂದು ಬರೆದು ತುಂಬಿದ ಕಳಸವನ್ನಿಟ್ಟು ಕಾಯಿ ಒಡೆಯುವರು. ಇಲ್ಲಿ ವದುವು ಗಂಡಿನವರು ತಂದ ಸೀರೆಯನ್ನು ಉಟ್ಟುಕೊಂಡು ಗದ್ದುಗೆಯ ಮೇಲೆ ಕೂಡಬೇಕು. ಗಂಡಿನವರು ಅಡಿಕೆ ಎಲೆಯನ್ನು ಮದುಮಗಳಿಗೆ ಕೈಗೆ ತುಂಬುತ್ತಾರೆ. ನಂತರ ಎಲ್ಲರೂ ಆರತಿ ಮಾಡುತ್ತಾರೆ. ನಂತರ ಪರಸ್ಪರ ಗಂಡು ಹೆಣ್ಣಿನವರ ಕಡೆಯವರನ್ನು ಕರೆಸಿ ತೆಂಗಿನ ಕಾಯಿ ಬದಲಾಯಿಸಿ ಗುಲಾಲು ಹಚ್ಚಿ, ಸಕ್ಕರೆ ಹಂಚಿ, ಪರಸ್ಪರ ಆಲಂಗಿಸಿ ಮದುವೆಗೆ ಬಂದವರನ್ನು ಹಾರ್ದಿಕವಾಗಿ ಸ್ವಾಗತಿಸಿ ಸೌಜನ್ಯ ಮೆರೆಯುತ್ತಾರೆ. ಮುಸ್ಲಿಂ ಸಮುದಾಯದಲ್ಲಿ ಮದುವೆ ಹಿಂದಿನ ದಿನವೇ ದಿಬ್ಬಣ ಬರುತ್ತದೆ.

**ಬಾಸಿಂಗ ಕಟ್ಟುವುದು**

ಬಾಸಿಂಗವನ್ನು ವಧುವರರಿಗೆ ಕಟ್ಟುವ ಪದ್ಧತಿ ಸಾಮಾನ್ಯವಾಗಿ ಎಲ್ಲ ವರ್ಗಗಳಲ್ಲಿ ಕಂಡುಬರುತ್ತದೆ. ಮುಸ್ಲಿಂರಲ್ಲಿ ವರನಿಗೆ ಕುದುರೆಯ ಮೇಲೆ ಮೆರವಣಿಗೆ ಮಾಡಿಸುವಾಗ 'ಸೆರಾ' ಅಂದರೆ ಮುಖ ಮುಚ್ಚುವ ಹೂವಿನ ಜಾಲಂದರ ಹಾಕುತ್ತಾರೆ. ಹೂವಿನ ಬಾಸಿಂಗ ಮುತ್ತಿನ ಬಾಸಿಂಗ, ಎಂದು ಎರಡು ರೀತಿಯ ಬಾಸಿಂಗಗಳಿದ್ದು, ಕೆಲವರಲ್ಲಿ ವರನಿಗೆ ಬಾಸಿಂಗವನ್ನು ಸೋದರಮಾವ ಕಟ್ಟಿದರೆ, ಕೆಲವರಲ್ಲಿ ತಾಯಿ ಕಟ್ಟುವ ಪದ್ಧತಿ ಇದೆ.

**ಮಾಂಗಲ್ಯ ಕಟ್ಟುವುದು (ಧಾರೆಮುಹೂರ್ತ)**

ವರನಿಗೆ ಮಡಿ ಧೋತ್ರ ಉಡಿಸಿ ಮೈಮೇಲೆ ಶಲ್ಯೆ ಹೊದಿಸಿ ಬಾಸಿಂಗ ಕಟ್ಟಿ ಕೈಯಲ್ಲಿ ತೆಂಗಿನ ಕಾಯಿಟ್ಟು ಧಾರೆ ಮಂಟಪಕ್ಕೆ ಕರೆತರುತ್ತಾರೆ. ವಧುವಿಗೆ ರೇಷ್ಮೆ ಸೀರೆಯಲ್ಲಿ ಅಲಂಕಾರ ಮಾಡಿ ಬಾಸಿಂಗ ತೊಡಿಸಿ, ಕೈಯಲ್ಲಿ ತೆಂಗಿನ ಕಾಯಿ ಇಟ್ಟು ಧಾರೆ ಮಂಟಪಕ್ಕೆ ದಾರಿಯುದ್ದಕ್ಕೂ ಹಾಕಲಾದ ತಟ್ಟೆಯ ಮೇಲೆ ಕಾಲಿಡುತ್ತಾ ಬರುತ್ತಾಳೆ. ಧರ್ಮ ಶಾಸ್ತ್ರಗಳ ಪ್ರಕಾರ ಸಪ್ತಪದಿ ತುಳಿಯುವುದು. ಮಾಂಗಲ್ಯ ಕಟ್ಟುವುದು ವಿವಾಹದ ಪ್ರಮುಖ ಘಟ್ಟವಾಗಿರುತ್ತದೆ. ಈ ಶಾಸ್ತ್ರಕ್ಕೆ ಮುಸ್ಲಿಂರು 'ನಿಖಾಹ' ಎಂದು ಕರೆಯುವರು. ಎಲ್ಲ ವರ್ಗಗಳಲ್ಲಿ ಈ ಆಚರಣೆ ಪ್ರಮುಖವಾಗಿ ಕಂಡುಬರುತ್ತದೆ. ಆಚರಣೆಯನ್ನು ಬ್ರಾಹ್ಮಣರಿಗೆ, ಕಮ್ಮಾರರಿಗೆ, ಮರಾಠರಿಗೆ, ಪುರೋಹಿತರು ಮಾಡಿಸುತ್ತಾರೆ. ವೀರಶೈವ, ಹರಿಜನ, ಕುಂಬಾರ ಕುರುಬರು, ಬಣಜಿಗ ಮುಂತಾದ ಸಮುದಾಯಗಳ ಮದುವೆಯಲ್ಲಿ ಐನೋರು ಕಾರ್ಯಮಾಡಿಸುತ್ತಾರೆ. ವೀರಶೈವ ಸಮುದಾಯದಲ್ಲಿ ಮದುವೆ ಕಲ್ಯಾಣ ಮಂಟಪದಲ್ಲಿ ನಡೆದರೆ ಮಾಂಗಲ್ಯವನ್ನು ಮನೆಯಲ್ಲಿ ಮುಗಿಸಿಕೊಂಡು ಬರುತ್ತಾರೆ. ದೇವಸ್ಥಾನದಲ್ಲಿ ಮದುವೆಯಾದರೆ ಈ ಪದ್ಧತಿ ಇರುವುದಿಲ್ಲ. ವಡ್ಡರ ಸಮುದಾಯದಲ್ಲಿ ತಾಳಿಕಟ್ಟುವ ಮುನ್ನ ಹಂದರದಲ್ಲಿ ನೆಟ್ಟ ಹಾರೆಗೆ ತಾಳಿ ಮುಟ್ಟಿಸುವರು. ಮುಸ್ಲಿಂರಲ್ಲಿ ಅತ್ತೆ ಅಥವಾ ತಾಯಿ ತಾಳಿ ಕಟ್ಟುತ್ತಾರೆ. ಮೌಲ್ವಿಯು ವಧುವರರ ಒಪ್ಪಿಗೆ ಪಡೆಯುತ್ತಾರೆ. ಅಂದರೆ ಮೂರು ಬಾರಿ 'ಕಬೂಲ್ ಕಿಯಾಕ್ಯಾ' ಎಂದು ಉಚ್ಚರಿಸುವಂತೆ ಹೇಳುತ್ತಾರೆ. ಹಾಗೆಯೆ ಹೆಣ್ಣು ಗಂಡಿನ ಕಡೆಯವರಿಂದ ಸಾಕ್ಷಿ ಹಾಕಿಸುತ್ತಾನೆ. ಪಿಂಜಾರ ಮದುವೆಗಳಲ್ಲಿ ಕೆಲವು ಹಿಂದೂ ಪದ್ಧತಿಗಳನ್ನು ಹೋಲುವುದು ಈ ಭಾಗದಲ್ಲಿ ಕಂಡುಬರುವ ವಿಶೇಷವಾಗಿದೆ.

ಮುಸ್ಲಿಂರನ್ನು ಬಿಟ್ಟು ಉಳಿದ ಬಹುತೇಕ ವರ್ಗಗಳಾದ ವೈಶ್ಯ, ಬ್ರಾಹ್ಮಣರು ಮಾಂಗಲ್ಯ ಮಂಟಪದಲ್ಲಿ ಮಾಂಗಲ್ಯ ಕಟ್ಟುತ್ತಾರೆ. ವೈಶ್ಯರಲ್ಲಿ ಮಾಂಗಲ್ಯಕ್ಕಿಂತ ಮುಂಚೆ ಕಂಡುಬರುವ ವಧುವಿನ ಗೌರಿಪೂಜೆ, ವರನ ಕಾಶಿಯಾತ್ರೆ ವಿಶಿಷ್ಟ ಆಚರಣೆಗಳಾಗಿವೆ. ಹುಡುಗಿಯ ತಂದೆ ತಾಯಿಯರು ಕಾಶಿಗೆ ವಿರಕ್ತನಾಗಿ ಹೊರಟ ಅಳಿಯನನ್ನು ವಾಪಸ್ಸು ಕಾಲ್ತೊಳೆದು ಕರೆತಂದು ಕನ್ಯಾದಾನ ಮಾಡುವ ಸಂಕೇತ ಇದಾಗಿದೆ. ಮಾಂಗಲ್ಯದ ನಂತರ ಹೋಮ, ಅರುಂಧತಿ ನಕ್ಷತ್ರ ದರ್ಶನ ಬಹುತೇಕ ವರ್ಗಗಳಲ್ಲಿ ಕಂಡುಬರುತ್ತದೆ. ಮತ್ತೆ ಕೆಲವರು ನೀರಿನಲ್ಲಿ ಮೂಗುತಿ ಹಾಕಿ ಹುಡುಕಲು ಹೇಳುವರು. ಯಾರು ಹುಡುಕುತ್ತಾರೋ ಅವರೇ ಜೀವನದಲ್ಲಿ ಮುಂದೆ ಅಧಿಕಾರ ಚಲಾಯಿಸುತ್ತಾರೆ ಎಂಬ ನಂಬಿಕೆ ಇದೆ. ಮಾಂಗಲ್ಯ ಕಟ್ಟಿಸುವಾಗ ಹುಡುಗಿಗೆ ಕೆಂಪು

ಅಥವಾ ಹಳದಿ ಸೀರೆ, ಹುಡುಗನಿಗೆ ರೇಶ್ಮೆ ಮಡಿ ಪಂಚೆ, ಅಥವಾ ದೋತ್ರ, ಪೈಜಾಮ ತೊಡಿಸುತ್ತಾರೆ. ಮೈಸೂರು ಪೇಠಾ ತೊಡಿಸುವ ಪದ್ಧತಿ ಸುಶಿಕ್ಷಿತರಲ್ಲಿ ಕಂಡುಬರುತ್ತದೆ.

ಮದುವೆಯಾದ ನಂತರ ಅವರವರ ಅನುಕೂಲಕ್ಕೆ ತಕ್ಕಂತೆ ಗಂಡಿನವರು ಹೇಳಿದ ದಿವಸ ಉಡಿತುಂಬಿಸಿ ಕೊಡುತ್ತಾರೆ. ಉಡಿತುಂಬಿ ಕೊಡುವುದಕ್ಕೆ 'ಸೋಬನ ಪ್ರಸ್ಥ' ಎಂಬಿತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಮುಂದುವರಿದ ಮನೆತನಗಳಲ್ಲಿ ಮದುಮಕ್ಕಳನ್ನು ಮಂಚದ ಮೇಲೆ ಕೂಡಿಸಿ ವಿವಿಧ ತಿಂಡಿ ಪದಾರ್ಥಗಳನ್ನಿಟ್ಟು ಆರತಿ ಮಾಡುತ್ತಾರೆ. ಮುಸ್ಲಿಂ ಸಮುದಾಯದಲ್ಲಿ ಮದುವೆಯಾದ ಐದು ದಿನಗಳವರೆಗೂ ಹೂ ಮುಡಿಸಿ ಆರತಿ ಮಾಡುತ್ತಾರೆ. ಮುದುವೆಯಾದ ೯ನೇ ದಿನ ನಾಗೋಲಿ ಶಾಸ್ತ್ರ ಮಾಡಿ ಹಂದ್ರ ತಿರುವಿ ಹಾಕುತ್ತಾರೆ. ನಂತರ ಬಾಸಿಂಗ, ಹಾರ, ಎಲ್ಲವನ್ನು ತೆಗೆದುಕೊಂಡು ಹೋಗಿ ಗಂಗೆಪೂಜೆ ಮಾಡಿಕೊಂಡು ಬರುತ್ತಾರೆ.

**೪.೨.೩. ಶವಸಂಸ್ಕಾರ ಪದ್ಧತಿ**

ಹುಟ್ಟಿದ ಮನುಷ್ಯ ಸಾಯಲೇಬೇಕು. ಹುಟ್ಟಿದಾಗ ಯಾವ ರೀತಿ ಸಂಸ್ಕಾರ ದೊರೆಯುತ್ತದೆಯೋ ಸತ್ತ ಮೇಲೂ ಅನೇಕ ಸಂಸ್ಕಾರಗಳನ್ನು ನಡೆಸಲಾಗುತ್ತದೆ. ಆಯಾ ಸಮುದಾಯ ಸಂಪ್ರದಾಯದ ಅನುಗುಣವಾಗಿ ಶವವನ್ನು ದಹನ ಹಾಗೂ ಹೂಳುವ ಎರಡು ಪದ್ಧತಿಗಳು ಇವೆ. ಪಂಚಭೂತಗಳಿಂದಾದ ಶರೀರವನ್ನು ಪಂಚಭೂತಗಳಲ್ಲಿ ಲೀನಮಾಡುವಾಗ ದೇಹದಿಂದ ಬಿಟ್ಟು ಹೋದ ಆತ್ಮಕ್ಕೆ ಒಂದು ಉತ್ತಮವಾದ ನೆಲೆಯನ್ನು ಅನುಸಂಧಾನ ಮಾಡುವ ಉದ್ದೇಶವೂ ಆಗಿರುತ್ತದೆ. ಆದ್ದರಿಂದ ಅವು ಅಂತ್ಯಕ್ರಿಯೆಗಳಷ್ಟೆ ಅಲ್ಲ, ಅವು ಉತ್ತರ ಕ್ರಿಯೆಗಳು, ಅವು ಅನೇಕ ಶಾಸ್ತ್ರವಿಧಿಗಳಿಂದ ಕೂಡಿರುವುದರಿಂದ, ನಾವು ಇದನ್ನು 'ಸಂಸ್ಕಾರ' ಎಂದು ಪರಿಗಣಿಸಬಹುದು.

ಸಾಮಾನ್ಯವಾಗಿ ಶವವನ್ನು ಬಿದಿರಿನ ಚೆಟ್ಟದ ಮೇಲೆ ಮಲಗಿಸಿ ಸ್ಮಶಾನಕ್ಕೆ ಕೊಂಡೊಯ್ಯುತ್ತಾರೆ. ಬ್ರಾಹ್ಮಣರು ಹಾಗೂ ಇತರ ವೈದಿಕ ಪದ್ಧತಿಯ ಅನುಯಾಯಿಗಳಲ್ಲಿ ಸಾಯುವುದಕ್ಕೆ ಮುಂಚೆ ಗಂಗಾ ಜಲವನ್ನು ಬಿಡುವುದು ರೂಢಿಯಲ್ಲಿದೆ. ಲಿಂಗಾಯಿತರು, ಕುರುಬ, ಮರಾಠ, ಗಾಣಿಗ, ಮುಚ್ಚಿಗರು ಶವವನ್ನು ಕೂಡಿಸಿ ಗೂಟಕ್ಕೆ ಬಡಿಯುತ್ತಾರೆ. ಶವಕ್ಕೆ ಸ್ನಾನ ಮಾಡಿಸಿ ವಿಭೂತಿ, ಕುಂಕುಮ ಹಚ್ಚಿ, ಕೈಯಲ್ಲಿ ಪತ್ರೆ ಹೂವನ್ನು ಕೊಡುತ್ತಾರೆ. ಬಾಯಲ್ಲಿ ತಾಂಬೂಲ ಕುಟ್ಟಿ ಇಡುವರು, ಶವದ ಹತ್ತಿರ ಅಥವಾ ಡೊಳ್ಳಾರಿ ಕೆಳಗೆ ಆರತಿ ಹಚ್ಚಿ ಇಡುತ್ತಾರೆ. ಇನ್ನಿತರ ಸಮುದಾಯಗಳಾದ ವೈಶ್ಯ, ಬ್ರಾಹ್ಮಣ, ಮುಸ್ಲಿಂರಲ್ಲಿ ಶವವನ್ನು ಮಲಗಿಸುತ್ತಾರೆ. ಇವರು ಶವವನ್ನು ಸುಡುತ್ತಾರೆ. ಕುರುಬರು, ಲಿಂಗಾಯಿತರು, ವಡ್ಡರು ಇನ್ನೂ ಮುಂತಾದವರು ಶವವನ್ನು ಹೂಳುತ್ತಾರೆ. ಎಲ್ಲಾ ಸಮುದಾಯದವರಲ್ಲಿ ಮುಸ್ಲಿಂರನ್ನು ಬಿಟ್ಟು ಬಂಧುಗಳು ಬರುವವರೆಗೆ ಶವದ ಮುಂದೆ ಕುಳಿತು ಭಜನೆ ಮಾಡುತ್ತಾರೆ. ಆದರೆ ಬ್ರಾಹ್ಮಣರು ಮಾತ್ರ ಶವವನ್ನು ಹೆಚ್ಚು ಹೊತ್ತು ಇಡದೇ ಸ್ಮಶಾನಕ್ಕೆ ಕೊಂಡೊಯ್ಯುತ್ತಾರೆ. ಅಷ್ಟೇ ಅಲ್ಲದೇ ಲಿಂಗಾಯತರು ಶವವನ್ನು ಕಾಲುಮಡಿಸಿ ಕೂಡಿಸಿ ಅಲಂಕರಿಸಿ, ವಚನಗಳ ಭಜನೆ ಮಾಡುತ್ತಾ ರುದ್ರಭೂಮಿಗೆ ಕೊಂಡೊಯ್ಯುವರು. ಶವವನ್ನು ಕುಳಿತ ಭಂಗಿಯಲ್ಲಿ ಪೂರ್ವ ಅಥವಾ ಉತ್ತರಕ್ಕೆ ಮುಖಮಾಡಿ ಹೂಳುವುದು ರೂಢಿಯಲ್ಲಿದೆ. ಸಾಮಾನ್ಯವಾಗಿ ವೀರಶೈವ ಜಂಗಮರೇ ಅಂತ್ಯಕ್ರಿಯೆಯನ್ನು ನಿರ್ವಹಿಸುತ್ತಾರೆ. ರುದ್ರಭೂಮಿಗೆ ತೆರಳಿದ್ದ

ಸಂತಾಪ ಸೂಚಕರು ಸ್ನಾನ ಮಾಡಿ ಮೃತರ ಮನೆಗೆ ಬಂದು ಹಿಂದಿರುಗುತ್ತಾರೆ. ಮರಣವಾದ ಹನ್ನೊಂದನೆಯ ದಿನ ಶಿವಗಣಾರಾಧನೆಯನ್ನು ಆಚರಿಸಿ ಬಂಧು ಮಿತ್ರರಿಗೆ ಭೋಜನವೇರ್ಪಡಿಸುವುದು ರೂಢಿಯಲ್ಲಿದೆ.

ಮುಸಲ್ಮಾನರಲ್ಲಿ ಸಾಯುವಾಗ 'ಕಲೀಮಾ' ಓದಿಸಿ ಬಾಯಿಗೆ ನೀರು ಹಾಕುತ್ತಾರೆ. ಸತ್ತನಂತರ ಶವವನ್ನು ಸ್ನಾನದಿಂದ ಶುದ್ಧೀಕರಿಸಿ ಸ್ವಚ್ಛತೆಗೆ ಹೆಚ್ಚು ಗಮನಕೊಟ್ಟು ಪುರುಷನಾದರೆ ಬಿಳಿ ಬಟ್ಟೆಯನ್ನೂ, ಸ್ತ್ರೀಯಾದರೆ ಕೆಂಪು ಬಟ್ಟೆಯನ್ನು ತೊಡಿಸಿ ಸುಗಂಧವನ್ನು ಬಟ್ಟೆಗೆ ಹಚ್ಚಿ ಕಣ್ಣಿಗೆ 'ಸುರ್ಮ' (ಕಾಡಿಗೆ) ಹಚ್ಚುತ್ತಾರೆ. ಸ್ತ್ರೀಯಾದರೆ ಮದುವೆ ವಧುವಿನಂತೆ ಅಲಂಕರಿಸುತ್ತಾರೆ. ಈ ಸಂದರ್ಭದಲ್ಲಿ ಹೊರಗಾದ ಹೆಂಗಸರನ್ನು ಹತ್ತಿರ ಸೇರಿಸುವುದಿಲ್ಲ. ಶವದ ಸುತ್ತ ಬಂಧು ಮಿತ್ರರು ಕುಳಿತು 'ಕುರ್‌ಆನ್'ನ ಪಠನ ಮಾಡುತ್ತಾರೆ.

ಶವವನ್ನು ಕೊಂಡೊಯ್ಯುವಾಗ ಮೊದಲು ಸಂಬಂಧಿಕರೇ ಹೆಗಲನ್ನು ಕೊಡುತ್ತಾರೆ. ನಂತರ ಇತರರು ಹೊರುತ್ತಾರೆ, ಶವವನ್ನು ಕೊಂಡೊಯ್ಯುವಾಗ ಭೇದವಿಲ್ಲದೆ ಸ್ವಲ್ಪ ದೂರ ಹೆಗಲನ್ನು ಕೊಡುತ್ತಾರೆ. ಶವಸಂಸ್ಕಾರಕ್ಕೆ ಮೊದಲು ನಮಾಜ್ ಮಾಡುವರು, ಇದನ್ನು ನಮಾಜೇ ಜನಾಜ್ ಎಂದು ಕರೆಯುತ್ತಾರೆ. ತಲೆಯನ್ನು ಉತ್ತರ ದಿಕ್ಕಿಗೂ, ಮುಖವನ್ನು ಮಕ್ಕಾ ಕಡೆಗೂ ಮಾಡಿ ಶವವನ್ನು ಹೂಳುತ್ತಾರೆ. ಶವಸಂಸ್ಕಾರದ ನಂತರ ಅಲ್ಲಿದ್ದವರಿಗೆ ಉತ್ತತ್ತಿಯನ್ನು ಹಂಚುತ್ತಾರೆ. ಸ್ಮಶಾನದಿಂದ ೪೦ ಹೆಜ್ಜೆ ಬಂದ ನಂತರ ಶವದ ಗೋರಿಯ ಕಡೆ ಮುಖ ಮಾಡಿ ಪ್ರಾರ್ಥನೆಯನ್ನು ಮಾಡಿ ಮೃತರಿಗೆ ಅಂತಿಮ ಗೌರವವನ್ನು ಸಲ್ಲಿಸುತ್ತಾರೆ. ಮೂರನೆಯ ದಿನ ಮುಂಜಾನೆ ಬಂಧುಮಿತ್ರರು ಮಸೀದಿಗೆ ಹೋಗಿ ನಮಾಜ್ ಮಾಡಿ ಅನಂತರ 'ಫಾತೆಹಾಕಾನಿ' (ಪ್ರಾರ್ಥನೆ)ಯನ್ನು ಸಲ್ಲಿಸಿ ಅಲ್ಲಿದ್ದವರಿಗೆ ಸಿಹಿ ಹಂಚಿ ಸ್ಮಶಾನಕ್ಕೆ ಹೋಗಿ ಸತ್ತವರ ಆತ್ಮಕ್ಕೆ ಶಾಂತಿ ಕೋರುತ್ತಾರೆ. ಹಾಗೆಯೇ ಸತ್ತ ೧೦ನೆಯ ಹಾಗೂ ಇಪ್ಪತ್ತನೆಯ ದಿನ ಬಂಧು ಬಳಗದವರಿಗೆ ಮತ್ತು ಮಿತ್ರರಿಗೆ ಹಾಗೂ ಬಡಬಗ್ಗರಿಗೆ ಊಟ ಹಾಕಿ ದಾನಧರ್ಮವನ್ನು ಮಾಡುತ್ತಾರೆ. ಸತ್ತ ಮೊದಲನೇ ವರ್ಷದ ದಿನ ಬಂಧು ಮಿತ್ರರಿಗೆ ಮತ್ತು ಬಡಬಗ್ಗರಿಗೆ ಸಂತರ್ಪಣೆ ಮಾಡುತ್ತಾರೆ.

**೪.೨.೫. ಇತರೆ ಶಾಸ್ತ್ರ ಸಂಪ್ರದಾಯಗಳು**

**ಜವುಳ :** ಹಿಂದೂ ಸಮುದಾಯದ ಗಂಡು ಮಕ್ಕಳಿಗೆ ಸಮವರ್ಷದಲ್ಲಿ ಅಥವಾ ೫, ೯, ೧೧ನೇ ತಿಂಗಳಲ್ಲಿ ತಲೆ ಕೂದಲು ತೆಗೆಯುವ ಶಾಸ್ತ್ರ ಮಾಡುತ್ತಾರೆ. ಇದನ್ನೆ ಜವುಳ ಅಥವಾ ಮುಡಿ ತೆಗೆಯುವುದು ಎನ್ನುತ್ತಾರೆ. ಈ ಜವಳ ತೆಗೆಯುವ ಕಾರ್ಯಕ್ರಮವನ್ನು ಮನೆಯಲ್ಲಿ, ದೇವಸ್ಥಾನದಲ್ಲಿ, ಕುಲದೇವರಲ್ಲಿ ಅಥವಾ ಹರಕೆ ಹೊತ್ತ ದೇವರ ಸನ್ನಿಧಿಯಲ್ಲಿ ಮಾಡುತ್ತಾರೆ. ಹಿಂದೂಗಳಲ್ಲಿ ಜವುಳ ಕಾರ್ಯವನ್ನು ಸೋದರ ಮಾವ ಮಾಡಿಸುತ್ತಾನೆ. ಮಗುವನ್ನು ಮೊದಲು ತೊಡೆಯ ಮೇಲೆ ಕೂಡಿಸಿ ಸೀಳಿದ ವೀಳ್ಯೆದೆಲೆಯಿಂದ ಐದು ಕಡೆಗೆ ಎಲೆಗತ್ತರಿ ಮಾಡಿ ನಂತರ ಕತ್ತರಿಯಿಂದ ೫ ಕಡೆ ಶಾಸ್ತ್ರಕ್ಕೆ ಕತ್ತರಿಸುತ್ತಾರೆ. ನಂತರ ಕ್ಷೌರಿಕರು ತಲೆಯನ್ನು ಬೋಳಿಸುತ್ತಾರೆ. ಮಗುವಿಗೆ ಸ್ನಾನ ಮಾಡಿಸಿ, ದೇವರಿಗೆ ಪೂಜೆಯಾದ ನಂತರ ಬಂಧುಗಳು ಜವುಳ ತೆಗೆಸಿಕೊಂಡ ಮಗುವಿಗೆ ಬಟ್ಟೆ ಕೊಡುತ್ತಾರೆ. ಜವುಳ ತೆಗೆದ ಕೂದಲನ್ನು ಬಟ್ಟೆಯಲ್ಲಿ ಕಟ್ಟಿ ದೇವರ ಸನ್ನಿಧಿಯಲ್ಲಿ ಅಥವಾ ನದಿಯಲ್ಲಿ ಬಿಟ್ಟುಬರುತ್ತಾರೆ.

**ಮುಂಜಿವಿ**

ವೀರಶೈವರಲ್ಲಿ ಅಯ್ಯಾಚಾರವೆಂತಲೂ, ವೈಶ್ಯ, ಬ್ರಾಹ್ಮಣ, ದೇವಾಂಗದವರಲ್ಲಿ ಮುಂಜಿವಿ ಎಂತಲೂ ಕರೆಯುವ ಈ ಆಚರಣೆಯು ಗಂಡು ಮಕ್ಕಳಿಗೆ ಬಾಲ್ಯದಲ್ಲಿ ನಡೆಸುವ ಆಚರಣೆಯಾಗಿದೆ. ಬ್ರಾಹ್ಮಣರಿಗೆ ಇದು ಉಪನಯನದ ವಿಧಿಯಾಗಿದೆ. ಮುಂಜಿವಿ ಒಂದು ರೀತಿಯಲ್ಲಿ ಮದುವೆ ಆದಂತೆಯೆ. ಬ್ರಾಹ್ಮಣರಿಗೆ ಮುಂಜಿವಿ ಕಡ್ಡಾಯ. ಏಕೆಂದರೆ ಮನೆಯಲ್ಲಿ ಮಗುವಿನ ತಂದೆ ತಾಯಿಗಳು ತೀರಿದರೆ ಅಥವಾ ಯಾರಾದರೂ ತೀರಿದರೆ ಕಾಷ್ಟಕೊಡಲು ಮುಂಜಿವಿ ಆದ ಮಗನೇ ಬೇಕು. ಹೀಗಾಗಿ ಮುಂಜಿವಿ ಮಾಡಿಸಿ ಜನಿವಾರ ಹಾಕುತ್ತಾರೆ.

ವೀರಶೈವ ಜಂಗಮರಲ್ಲಿ ಅಯ್ಯಾಚಾರವೆಂಬುದು ಮುಖ್ಯ ವಿಧಿಯಾಗಿದೆ. ಈ ಕಾರ್ಯವನ್ನು ಹೆಚ್ಚಾಗಿ ಎಂಟು ವರ್ಷದ ನಂತರವೇ ಮಾಡುತ್ತಾರೆ. ಖರ್ಚುದಾಯಕವಾಗಿರುವುದರಿಂದ ಈ ಶಾಸ್ತ್ರಗಳನ್ನು ಸಾಮಾನ್ಯವಾಗಿ ಸಾಮೂಹಿಕವಾಗಿ ಮಾಡುತ್ತಾರೆ. ಕೂದಲು ಕತ್ತರಿಸಿಕೊಂಡು ಸ್ನಾನಮಾಡಿ ಕಾವಿ ಬಟ್ಟೆ ಧರಿಸಿಕೊಂಡು ಸ್ವಾಮಿಗಳಿಂದ ಲಿಂಗಧಾರಣೆ ಮಾಡಿಕೊಂಡು ಕಿವಿಯಲ್ಲಿ ಪಂಚಾಕ್ಷರಿ ಮಂತ್ರದ ಉಪದೇಶ ನೀಡಿಸುತ್ತಾರೆ. ಈ ಸಮುದಾಯದಲ್ಲಿ ಅಯ್ಯಾಚಾರವಾದರೆ ಮಾತ್ರ ಮದುವೆಗೆ ಮತ್ತು ಪಾದಪೂಜೆಗೆ ಅರ್ಹರಾಗುತ್ತಾರೆ. ಮುಸ್ಲಿಂ ಸಮುದಾಯದಲ್ಲಿ ಸುಂತ ಒಂದು ಬಾಲ್ಯದ ಪ್ರಮುಖವಿಧಿ. ಈ ವಿಧಿಯು ಏಳುವರ್ಷದಿಂದ ಹನ್ನೆರಡು ವರ್ಷದವರಿಗೆ ನಡೆಯುತ್ತದೆ.

**ಉಡಿಯಕ್ಕಿ**

ಸಾಮಾನ್ಯವಾಗಿ ಎಲ್ಲ ವರ್ಗದ ಹೆಣ್ಣು ಮಕ್ಕಳಲ್ಲಿ ಕಂಡು ಬರುವ ವಿಶಿಷ್ಟ ಆಚರಣೆ ಇದಾಗಿದೆ. ಮದುವೆಯಾದವರು ಗಂಡನ ಮನೆಗೆ ಹೋಗುವಾಗ ತವರು ಮನೆಯಲ್ಲಿ ಉಡಿಯಕ್ಕಿ ಹಾಕುವುದುಂಟು. ಗಂಡನ ಮನೆಯಿಂದ ತವರು ಮನಗೆ ಬರುವಾಗ ಗಂಡನ ಮನೆಯವರು ಉಡಿಯಕ್ಕಿ ಹಾಕುವುದುಂಟು, ಮದುವೆಯ ದಿನ, ಬಾಣಂತಿಗೆ ನಾಮಕರಣದ ದಿನ, ಮುತ್ತೈದೆಯಾಗಿ ಸತ್ತವರಿಗೆ ಕೊನೆಯ ಉಡಿಯಕ್ಕಿಯಾಗಿ ಹಾಕುತ್ತಾರೆ. ಬ್ರಾಹ್ಮಣರು, ವೈಶ್ಯರು, ಎಲೆ, ಅಡಿಕೆ, ಗೋಧಿ, ಬೆಲ್ಲ, ಕೊಬ್ಬರಿ ಬಟ್ಟಲು, ಜೋಳ, ಅಕ್ಕಿ, ಇತ್ಯಾದಿಗಳನ್ನು ಉಡಿತುಂಬುತ್ತಾರೆ. ವರ್ಷಕ್ಕೊಮ್ಮೆ ಹಾಕುವ ಉಡಿಯಕ್ಕಿಯನ್ನು ದೇವರ ಮುಂದೆ ಸಡಿಲಿಸುತ್ತಾರೆ. ಈಗ ಐದು ಹನ್ನೊಂದು ಮನೆಗಳಿಗೆ ಹೋಗಿ ಉಡಿಯಕ್ಕಿ ಹಾಕಿಸಿಕೊಳ್ಳುವುದು ಕಡಿಮೆಯಾಗಿವೆ ಎಂದು ಹೇಳಬಹುದು.

**ತಲೆಮಂಡೆ ಕೊಡುವುದು**

ಮಂಡೆ ಕೊಡುವದು ಎಂದರೆ ಹರಕೆ ಹೊತ್ತ ದೇವರಿಗೆ ತಲೆಕೂದಲು ಕೊಡುವುದು, ತಮಗೆ ಕಷ್ಟ ಬಂದಾಗ ಅನಾರೋಗ್ಯವಿದ್ದಾಗ ಇತ್ಯಾದಿ ಕಾರಣಗಳಿಗೆ ಮಂಡೆಕೊಡುವ ಪದ್ಧತಿ ಇದೆ. ಮನುಷ್ಯನನ್ನು ಕಾಡುವ ದೈವಗಳು ಅವನ ತಲೆಕೂದಲಲ್ಲಿ ನೆಲೆಗೊಳ್ಳದಂತೆ ಅದರ ನಿವಾರಣೆಯ ಉಪಾಯವಾಗಿಯೇ ಮಂಡೆ ಕೊಡುವ ಪದ್ಧತಿ ಇದೆ. ಹಿಂದೂ ಧರ್ಮದಲ್ಲಿ ತಂದೆ ತಾಯಿ ತೀರಿಕೊಂಡರೆ ಮಂಡೆ ಕೊಡುವ ಪದ್ಧತಿ ಇದೆ. ಬ್ರಾಹ್ಮಣರಲ್ಲಿ ಗಂಡ ಸತ್ತವಳು, ವಿಧವೆಯಾಗುವ ಸಮಯದಲ್ಲಿ ಮಂಡೆ ಕೊಡುತ್ತಾರೆ.

ಕೆಲವರು ಹೆಂಡತಿ ಬಸುರಿಯಾದಾಗ ಗಡ್ಡ ತಲೆಕೂದಲು ಬೋಳಿಸದೆ ಹೆರಿಗೆಯಾದ ನಂತರ ಕೂದಲು ಕೊಡುತ್ತಾರೆ. ಈ ರೀತಿ ಮಾಡುವುದರಿಂದ ಆಕೆಗೆ ಕಂಟಕ ಬಾರದಂತೆ ದೇವರಿಗೆ ಸಲ್ಲಿಸುವ ಹರಕೆಯಾಗಿದೆ. ಹೀಗೆ ಕೂದಲು ತೆಗೆಸುವುದು ಬೇರೆ ಬೇರೆ ಸಂದರ್ಭಗಳಿದ್ದರೂ ಒಟ್ಟು ಆಶಯ ಮಾತ್ರ ಒಂದೇ ಎನಿಸುತ್ತದೆ.

**೪.೩. ವಾರ್ಷಿಕಾವರ್ತನದ ಆಚರಣೆಗಳು**

ವರ್ಷಕ್ಕೊಮ್ಮೆ ಬರುವ ಹಬ್ಬಗಳ ಆಚರಣೆಯನ್ನು ವಾರ್ಷಿಕಾವರ್ತನದ ಆಚರಣೆಗಳೆಂದು ಕರೆಯುವರು. ಹಿಂದೂಗಳು ವರ್ಷತುಂಬ ಹಬ್ಬಗಳನ್ನಾಚರಿಸುವ, ವ್ರತ, ಉಪವಾಸ ಕೈಗೊಳ್ಳುವ ಅನೇಕ ಪವಿತ್ರ ದಿನಗಳಿವೆ. ಎಲ್ಲಾ ಹಿಂದೂಗಳಿಗೆ ಸಾಮಾನ್ಯವಾಗಿರುವ ಹಬ್ಬಗಳಲ್ಲದೇ ಬೇರೆ ಬೇರೆ ಪಂಥಗಳಿಗೆ ಪ್ರತ್ಯೇಕ ಹಬ್ಬಗಳೂ ಇವೆ.

'ಹಬ್ಬ' ಎಂಬ ಪದವು ಸಂಸ್ಕೃತದ 'ಪರ್ವನ್' ಶಬ್ದದ ತದ್ಭವ ರೂಪ. ಪರ್ವ ಎಂದರೆ ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಸೂರ್ಯ ಚಂದ್ರರ ದಿಕ್ಕು ಬದಲಾಗುವುದೇ ಪರ್ವ. ಅದನ್ನೆ ನಮ್ಮ ಪೂರ್ವಜರು ಅಮವಾಸ್ಯೆ, ಹುಣ್ಣಿಮೆಗಳೆಂದು ಹೆಸರಿಸಿದಂತೆ ಕಾಣುತ್ತದೆ. ಮಾನವ ತನ್ನ ಬಯಕೆ ಇಲ್ಲವೇ ಸಂಕಲ್ಪವ್ರತ ಆ ಇಚ್ಛೆಯ ಈಡೇರಿಕೆಗಾಗಿ ಒಂದು ಸೀಮಿತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ ಸಂಪ್ರದಾಯ, ಆಚರಣೆ, ಉತ್ಸವಗಳೇ ಹಬ್ಬಗಳಾಗಿ ಬಂದಿವೆ. ಮಾನವನು ಐಹಿಕ ಸುಖ, ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ ಹಬ್ಬ ಆಚರಣೆಯಲ್ಲಿ ತೊಡಗಿದಂತೆ ತೋರುತ್ತದೆ. ಸೃಷ್ಟಿಕರ್ತನಾದ ಶಿವನು ಪ್ರಪಂಚದಲ್ಲಿ ನಾನಾ ರೂಪಗಳಿಂದ ಅವತರಿಸಿ ಜಗತ್ತನ್ನು ಕಾಪಾಡುವನೆಂದು ಹೇಳುತ್ತಾರೆ. ಈ ತೆರನಾದ ಸಮಾರಂಭದ ದಿನಗಳನ್ನು ಜನಪದರು ಹಬ್ಬ ಹರಿದಿನಗಳೆಂದು ಕರೆಯುತ್ತ ಬಂದಿರಬೇಕು. ಮಾನವ ತನ್ನ ನಿತ್ಯ ಲೌಕಿಕ ಜೀವನದಿಂದ ಅಲೌಕಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ ಆಚರಿಸುತ್ತ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಅದನ್ನು ಬಡವ-ಬಲ್ಲಿದರೆಲ್ಲರೂ ಹರುಷದಿಂದ ಆಚರಿಸುತ್ತ ಬಂದಿದ್ದಾರೆ.

ಸಾಮಾನ್ಯವಾಗಿ ಯಮನೂರಿನಲ್ಲಿ ಹಿಂದೂ ಮುಸ್ಲಿಂರು ಆಚರಿಸುವ ಹಬ್ಬವೆಂದರೆ ಚಾಂಗದೇವರ ಉರುಸು. ಆದರೆ ಯಮನೂರು ಗ್ರಾಮದಲ್ಲಿ ಆಚರಿಸುವ ಹಬ್ಬಗಳನ್ನು ಕುರಿತು ವಿವರಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಆದರೆ ಆಚರಣೆ ರೀತಿಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಕಂಡುಬರಬಹುದು. ಹಬ್ಬದ ಆಚರಣೆ ಅವರವರ ಆರ್ಥಿಕ ಸ್ಥಿತಿಯನ್ನು ಅನುಸರಿಸಿ ಇರುತ್ತದೆ. ಕಡ್ಡಾಯವಾಗಿ ತುಂಬಾ ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತ ಬಂದಿರುವ ಹಬ್ಬಗಳೆಂದರೆ ದೀಪಾವಳಿ, ಮಹಾನವಮಿ, ನಾಗರಪಂಚಮಿ, ಯುಗಾದಿ, ಕಾರಹುಣ್ಣಿಮೆ, ಎಳ್ಳ ಅಮವಾಸಿ, ಮೋಹರಂ, ಹೋಳಿಹಬ್ಬ, ಗಣೇಶಚತುರ್ಥಿ ಚಾಂಗದೇವರ ಉರುಸು ಇತ್ಯಾದಿ.

**೪.೩.೧. ಹಬ್ಬ ಹರಿದಿನಗಳು**

ಹಿಂದೂಗಳು ವರ್ಷತುಂಬ ಹಬ್ಬಗಳನ್ನಾಚರಿಸುವ, ವ್ರತ, ಉಪವಾಸ ಕೈಗೊಳ್ಳುವ ಅನೇಕ ಪವಿತ್ರ ದಿನಗಳಿವೆ. ಎಲ್ಲಾ ಹಿಂದೂಗಳಿಗೆ ಸಾಮಾನ್ಯವಾಗಿರುವ ಹಬ್ಬಗಳಲ್ಲದೇ ಬೇರೆ ಬೇರೆ ಪಂಥಗಳಿಗೆ ಪ್ರತ್ಯೇಕ ಹಬ್ಬಗಳಿವೆ. ಇಡೀ ವರ್ಷವನ್ನು ಉತ್ತರಾಯಣ, ದಕ್ಷಿಣಾಯಣ ಎಂಬ ಎರಡು ಸಮಭಾಗಗಳನ್ನಾಗಿ

ಮಾಡಿದ್ದಾರೆ. ಯಮನೂರಿನಲ್ಲಿ ವಿವಿಧ ಪಂಗಡದವರು ಪ್ರಮುಖವಾಗಿ ಆಚರಿಸುವ ಕೆಲವು ಹಬ್ಬಗಳು ಈ ರೀತಿಯಾಗಿ ಇವೆ. ಅವುಗಳನ್ನು ಸಂಕ್ಷಿಪ್ತವಾಗಿ ನೋಡೋಣ.

**ಯುಗಾದಿ**

ಯುಗಾದಿ ಶಾಲಿವಾಹನ ಶಕದ ಎಣಿಕೆ ಆರಂಭವಾಗುವ ಚೈತ್ರ ತಿಂಗಳಿನ ಪ್ರಥಮ ದಿನ. ಈ ಹಬ್ಬದ ಹಿಂದಿನ ದಿನ ನೀರು ತುಂಬುವ ಪಾತ್ರೆಗಳ ಮೇಲೆ ಸುಣ್ಣಬಣ್ಣಗಳಿಂದ ಸಿಂಗಾರ ಮಾಡಿ ನೀರು ತುಂಬಿ ಬೇವಿನ ಸೊಪ್ಪನ್ನು ಹಾಕುವರು, ಹಬ್ಬದ ದಿನ ಮನೆಯವರೆಲ್ಲರೂ ತೈಲಾಭ್ಯಂಜನ ಮಾಡುವರು. ಬೇವಿನ ತಪ್ಪಲಿನ ಸತ್ವದಿಂದ ಕೂಡಿದ ನೀರು ಚರ್ಮರೋಗವನ್ನು ದೂರ ಮಾಡುತ್ತದೆಂದು ಹೇಳುತ್ತಾರೆ. ಮನೆಯ ಬಾಗಿಲುಗಳಿಗೆ ತಳಿರು ತೋರಣಗಳನ್ನು ಕಟ್ಟಿ ಮುಂಭಾಗವನ್ನು ರಂಗವಲ್ಲಿಯಿಂದ ಅಲಂಕರಿಸುತ್ತಾರೆ. ಇಡೀ ವರ್ಷದ ಶುಭದಿನಗಳಲ್ಲಿ ಇದು ಅತ್ಯುತ್ತಮ ದಿನವೆಂದು ಭಾವಿಸಿ ಭಕ್ತಿಪೂರ್ವಕವಾಗಿ ಮನೆಯಲ್ಲಿ ದೇವರನ್ನು ಪೂಜಿಸುವುದಲ್ಲದೆ ಸಂಜೆ ದೇವಸ್ಥಾನಗಳಿಗೆ ಹೋಗಿ ಬರುವ ಸಂಪ್ರದಾಯವೂ ಇದೆ. ಯುಗಾದಿಯ ದಿವಸ ಮನೆಯಲ್ಲಿ ಬೇವು ಬೆಲ್ಲವನ್ನು ಸ್ವೀಕರಿಸಿ ವಿಶೇಷ ಭಕ್ಷ್ಯ ಭೋಜ್ಯಗಳಿಂದ ಕೂಡಿದ ಭೋಜನವನ್ನು ಮಾಡುತ್ತಾರೆ.

**ಬಸವ ಜಯಂತಿ**

ವೈಶಾಖ ಶುದ್ಧ ತೃತೀಯಾವನ್ನು ಅಕ್ಷಯ ತೃತೀಯಾ ಎಂದು ಕರೆಯುತ್ತಾರೆ. ಈ ದಿನವನ್ನು ಸಮಸ್ತ ಸಂವತ್ಸರದ ದಿನಗಳಲ್ಲಿ ಅತೀವ ಭಾಗ್ಯದಾಯಕ ದಿನವೆಂದು ಪರಿಗಣಿಸುತ್ತಾರೆ. ಈ ದಿನವೇ ಭಕ್ತಿ ಭಂಡಾರಿ ಬಸವಣ್ಣನವರ ಜನ್ಮದಿನ, ಇದನ್ನು ಭಕ್ತಿ ಪೂರ್ವಕವಾಗಿ ವೈಭವದಿಂದ ಬಸವ ಜಯಂತಿ ಎಂದು ಆಚರಿಸುತ್ತಾರೆ. ಇಲ್ಲಿರುವ ವೀರಶೈವ ಸಂಘಸಂಸ್ಥೆಗಳಲ್ಲಿ ಈ ಉತ್ಸವವನ್ನು ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ದೊಡ್ಡ ಪ್ರಮಾಣದಲ್ಲಿ ಆಚರಿಸಲಾಗುತ್ತದೆ. ಈ ದಿನ ರೈತರು ತಮ್ಮ ಎತ್ತುಗಳನ್ನು ಸಿಂಗರಿಸಿ ಸಕಲ ವಾದ್ಯಗಳ ಸಮೇತ ಮೆರವಣಿಗೆ ಮಾಡುತ್ತಾರೆ. ಅನೇಕರು ತಮ್ಮ ಹೊಸ ಕೆಲಸಗಳನ್ನು ಈ ದಿನ ಆರಂಭಿಸುವರು. ಈ ದಿನವೇ ಮರಾಠರು ಛತ್ರಪತಿ ಶಿವಾಜಿಯ ಜನ್ಮದಿನವನ್ನು ಆಚರಿಸುವರು. ಅಂದು ಎಲ್ಲರೂ ಸೇರಿ ಮೆರವಣಿಗೆಯನ್ನು ಮಾಡುತ್ತಾರೆ.

**ಕಾರಹುಣ್ಣಿಮೆ**

ಜೇಷ್ಠ ಮಾಸದ ಹುಣ್ಣಿಮೆಯನ್ನು ಕಾರಹುಣ್ಣಿಮೆ ಎಂದು ಕರೆಯುತ್ತಾರೆ. ಕೃಷಿಕರು ಇದನ್ನು ಮಳೆಗಾಲದ ಆರಂಭವೆಂದು ತಮ್ಮ ಊರುಗಳನ್ನು ಸಿಂಗರಿಸುತ್ತಾರೆ. ಎತ್ತುಗಳ ಕೋಡುಗಳಿಗೆ ಬಣ್ಣ ಹಚ್ಚಿ, ಕೋಡೆಣಸುಗಳನ್ನು ತೊಡಿಸಿ, ಕೋಡುಬಳೆಗಳನ್ನು ಹಾಕಿ, ಕೊರಳಿಗೆ ಗೆಜ್ಜೆ ಸರವನ್ನು ಕಟ್ಟಿ, ಮೈ ಮೇಲೆ ಅಲ್ಲಲ್ಲಿ ಉರಿಮಂಜಿನ ಬಣ್ಣ ಹಚ್ಚಿ ಅಲಂಕಾರಗೊಳಿಸಿ, ಎತ್ತುಗಳನ್ನು ಮೆರವಣಿಗೆ ಹೊರಡಿಸಿ, ಊರ ಅಗಸಿಯ ಕಡೆಗೆ ಅಲಂಕಾರದಿಂದ ಕಟ್ಟಿದ ಕರಿಯನ್ನು ಹರಿಯಲು ಓಡಿಸುತ್ತಾರೆ. ಕೆಂದೆತ್ತು ಕರಿಹರಿದರೆ, ಕೆಂಜೋಳ ಬೆಳೆಯುವುದೆಂದೂ, ಬಿಳಿ ಎತ್ತು ಕರಿ ಹರಿದರೆ ಬಿಳಿಜೋಳ ಬೆಳೆಯುವುದೆಂದು ಮತ್ತು ಎರಡೂ ಕೂಡಿ ಹರಿದರೆ ಸಮಕಾಲವೆಂದೂ ಬೆಳೆಗಳ 'ಬಲಕಾಲ'ವೆಂದೂ ತಿಳಿಯುವರು.

**ಮಣ್ಣೆತ್ತಿನ ಅಮವಾಸ್ಯೆ**

ಜೇಷ್ಠಮಾಸದ ಅಮವಾಸ್ಯೆಯ ದಿನ ಮಣ್ಣೆತ್ತಿನ ಅಮವಾಸ್ಯೆ ಎಂದು ಆಚರಿಸುತ್ತಾರೆ. ಈ ದಿನ ಒಕ್ಕಲಿಗರು, ಮಣ್ಣಿನ ಒಂದು ಜೊತೆ ಎತ್ತುಗಳನ್ನು ಮಾಡಿ ಪೂಜಿಸುವರು.

ಆಷಾಢ ಮಾಸದ ಪ್ರತಿ ಶುಕ್ರವಾರ ಹೆಣ್ಣು ಮಕ್ಕಳು ನದಿ ತೀರ, ಕೆರೆ ಸಮೀಪ ಅಥವಾ ಹಳ್ಳಿಗೆ ನೀರೊದಗಿಸುವ ಮೂಲದ ಸಮೀಪಕ್ಕೆ ಹೋಗಿ ಮಣ್ಣಿನಿಂದ ಗೋಪುರಾಕೃತಿಯನ್ನು ಮಾಡಿ, ಇದಕ್ಕೆ 'ಗುಳ್ಳವ್ವ' ಎಂದು ಕರೆಯುತ್ತಾರೆ.

ಭಾದ್ರಪದ ಮಾಸದ ಶುಕ್ಲಪಕ್ಷದಂದು ಗಣೇಶ ಚತುರ್ಥಿಯು ಜನಪ್ರಿಯ ಹಬ್ಬವಾಗಿದೆ. ಕೆಲವರ ಮನೆಯಲ್ಲಿ ಗಣೇಶನನ್ನು ಇಟ್ಟು ಅವನಿಗೆ ಪ್ರಿಯವಾದ ಭಕ್ಷ್ಯವನ್ನು ಮಾಡಿ ನೈವೇದ್ಯ ಮಾಡುತ್ತಾರೆ.

ಆಶ್ವಯುಜ ಶುದ್ಧ ಮೊದಲನೇ ದಿನ ನವರಾತ್ರಿ ಪಾಢ್ಯವಾಗಿದ್ದು, ಈ ಹಬ್ಬವನ್ನು ೧೦ ದಿನಗಳವರೆಗೂ ಆಚರಿಸುತ್ತಾರೆ. ಇದು ಹಿಂದೂಗಳಿಗೆ ದೊಡ್ಡ ಹಬ್ಬವಾಗಿದ್ದು ಇದನ್ನು ದಸರಾ ಎಂದು ಕರೆಯುತ್ತಾರೆ. ಈ ದಿನ ಸಂಜೆಯಲ್ಲಿ ಸ್ಥಾನಿಕ ದೇವರ ಪಲ್ಲಕ್ಕಿಯ ಮೆರವಣಿಗೆ ಹೊರಟು ಬನ್ನಿ ಮರದ ಹತ್ತಿರ ಒಯ್ಯುತ್ತಾರೆ. ಮೈಲಾರ ದೇವರ ಭಕ್ತರು ಹೊರಗಿನ ಶಿಬಾರದಲ್ಲಿ ಬನ್ನಿ ಮುಡಿಯುವರು. ಅಂದು ಊರಲ್ಲಿರುವ ಎಲ್ಲರೂ ಬನ್ನಿ ಮುಡಿಯುವ ವಾಡಿಕೆ ಇರುತ್ತದೆ.

ಅಶ್ವಯುಜ ಹುಣ್ಣಿಮೆಯನ್ನು ಸೀಗೇ ಹುಣ್ಣಿಮೆ ಎಂದು ಆಚರಿಸುವರು, ಈ ದಿನ ಕೃಷಿಕರು ತಮ್ಮ ಹೊಲ ಗದ್ದೆಗಳಿಗೆ ಹೋಗಿ ಅಲ್ಲಿ ಪಾಂಡವರ ಗುರುತಿಗಾಗಿ ಐದು ಕಲ್ಲುಗಳನ್ನು ಆರಿಸಿ ತಂದಿಟ್ಟು, ಪೂಜಿಸಿ ತಮ್ಮ ಹೊಲಗಳಲ್ಲಿ ಊಟ ಮಾಡಿ ಬರುತ್ತಾರೆ.

**ದೀಪಾವಳಿ**

ದೀಪಾವಳಿ ಎಂದರೆ ಮನೆಮನೆಯಲ್ಲಿ ಬೆಳಕನ್ನು ಚೆಲ್ಲುವ ಹಬ್ಬ. ಹಿಂದೂಗಳ ಪ್ರಕಾರ ಎಲ್ಲರೂ ಈ ಹಬ್ಬವನ್ನು ಆಚರಿಸುತ್ತಾರೆ. ಹಸುವಿನ ಸಗಣಿಯ ಉಂಡೆಗಳನ್ನು ಮಾಡಿ ಪಾಂಡವರೆಂದು ಪೂಜಿಸುವ ವಾಡಿಕೆಯಿದೆ.

ಎಳ್ಳ ಅಮವಾಸ್ಯೆಯ ದಿನ ಕೃಷಿಕರು ತಮ್ಮ ಎತ್ತುಗಳನ್ನು ಅಲಂಕರಿಸಿ ಪಾಂಡವರ ಪೂಜೆ ಮಾಡಿ ಊಟ ಮಾಡುವರು, ಇದು ಹಿಂಗಾರಿ ಬೆಳೆಯ ಸಡಗರ ಹಬ್ಬವೆನಿಸಿದೆ.

ಪಾಲ್ಗುಣ ಮಾಸದ ಹುಣ್ಣಿಮೆಯ ದಿನ ಹೋಳಿ ಅಥವಾ ಕಾಮನ ಹಬ್ಬವನ್ನು ಆಚರಿಸುತ್ತಾರೆ. ಅಂದು ರಂಗಪಂಚಮಿ ಆ ದಿನ ಎಲ್ಲರೂ ಬಣ್ಣದ ಓಕುಳಿ ಆಡುವರು.

**ಮುಸ್ಲಿಮರ ಹಬ್ಬಗಳು**

ಮುಸ್ಲಿಂರ ಹಬ್ಬಗಳೆಂದರೆ ರಂಜಾನ್ ಮತ್ತು ಬಕ್ರೀದ್. ಇಡೀ ರಂಜಾನ್ ತಿಂಗಳಲ್ಲಿ ಮುಸ್ಲಿಂರು ಮುಂಜಾವಿನೊಡನೆ ಉಪವಾಸ ಆರಂಬಿಸಿ, ಹೊತ್ತು ಮುಳುಗುವಾಗ ಊಟ ಮಾಡುತ್ತಾರೆ. ಈ ಹಬ್ಬದಲ್ಲಿ ಈದ್‌ಗ ಮೈದಾನಕ್ಕೆ ಹೋಗಿ ಎಲ್ಲ ಮುಸ್ಲಿಂ ಬಾಂಧವರು ಪ್ರಾರ್ಥನೆಯನ್ನು ಮಾಡುತ್ತಾರೆ. ಈದ್‌ಮಿಲಾದ್

ಮತ್ತು ಮೊಹರಂ ಮುಸಲ್ಮಾನರು ಆಚರಿಸುವ ಹಬ್ಬಗಳಾಗಿವೆ. ಮೊಹರಂನ್ನು ತಾಬೂತ್ ಎಂಬ ಪ್ರತೀಕವಿಟ್ಟು ಆಚರಿಸುವ ಪದ್ಧತಿಯಿದ್ದು ಹಿಂದೂಗಳು ಇದರಲ್ಲಿ ಪಾಲ್ಗೊಳ್ಳುತ್ತಾರೆ.

ಈ ರೀತಿಯಾಗಿ ಯಮನೂರಿನಲ್ಲಿ ಹಬ್ಬಗಳ, ಆಚರಣೆಗಳನ್ನು ಎಲ್ಲ ಧರ್ಮದವರು ತಮ್ಮ ತಮ್ಮ ಹಬ್ಬಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಆಚರಣೆ ಮಾಡುತ್ತಾರೆ. ಅದೇ ರೀತಿ ಯಮನೂರಿನಲ್ಲಿ ಪ್ರಸಿದ್ಧವಾದ ಹಾಗೂ ಎಲ್ಲ ಧರ್ಮ ಜಾತಿಯವರು ಆಚರಿಸುವ ಚಾಂಗದೇವರ ಉರುಸುಕೂಡಾ ಒಂದಾಗಿದೆ. ಇದು ಒಂದು ತಿಂಗಳ ಪರ್ಯಂತ ನಡೆಯುವ ಹಬ್ಬವಾಗಿದೆ ಎಂದು ಹೇಳಬಹುದು.

ಮುಸಲ್ಮಾನರ ಹನ್ನೆರಡು ತಿಂಗಳಲ್ಲಿಯ ಮೊದಲ ತಿಂಗಳ ಹೆಸರೇ ಮೋಹರಂ. ಈ ತಿಂಗಳಿನ ಮೊದಲ ಹತ್ತು ದಿನ ಆಚರಿಸುವ ಹಬ್ಬವೇ 'ಮೋಹರಂ ಹಬ್ಬ'ವೆಂದು ಹೆಸರಾಗಿದೆ. ಇದು ಮೇಲುನೋಟಕ್ಕೆ ಮುಸ್ಲಿಂರ ಹಬ್ಬವಾಗಿದ್ದರೂ ನಮ್ಮೂರಿನಲ್ಲಿ ಹಿಂದೂ ಮುಸಲ್ಮಾನರೆಲ್ಲರೂ ಒಟ್ಟಿಗೆ ಸೇರಿ ವಿಜೃಂಭಣೆಯಿಂದ ಆಚರಿಸುವ ಹಬ್ಬವಾಗಿದೆ.

**ಆಷಾಢ ಮಾಸ**

ಯಮನೂರಿನಲ್ಲಿ ಆಷಾಢಮಾಸ ಆರಂಭವಾಗುತ್ತಿದ್ದಂತೆ ಹಬ್ಬದ ವಾತಾವರಣವು ಕಂಡುಬರುತ್ತದೆ. ಏಕೆಂದರೆ ಮಣ್ಣೆತ್ತಿನ ಅಮವಾಸ್ಯೆ ನಂತರ ಬರುವ ಮೊದಲನೆ ಮಂಗಳವಾರದಿಂದ ಹಿಡಿದು ಆ ತಿಂಗಳ ಕೊನೆಯ ಮಂಗಳವಾರದವರೆಗೂ ಪ್ರತಿ ಮಂಗಳವಾರ ಬಸವಣ್ಣ ಮತ್ತು ಗುಳ್ಳವ್ವನ ಪ್ರತಿಮೆಗಳನ್ನು ಮಣ್ಣಿನಿಂದ ಮಾಡಿ ಆಯಾ ಓಣಿಯ ಮನೆಯೊಂದರಲ್ಲಿ ಕುಳ್ಳಿರಿಸುತ್ತಾರೆ. ಆಷಾಢ ಮಾಸದ ಕೊನೆಯ ಮಂಗಳವಾರ ಊರಿನಲ್ಲಿ ಮಕ್ಕಳು ಮನೆಮನೆಗೆ ಹೋಗಿ ಪಟ್ಟಿಯನ್ನು ಎತ್ತುತ್ತಾರೆ. ಅದರಿಂದ ಓಣಿಯ ಜನರೆಲ್ಲ ಬಸವಣ್ಣನ ಪೂಜೆಗಾಗಿ ಪಟ್ಟಿಕೇಳಲು ಬಂದ ಮಕ್ಕಳಿಗೆ ದವಸ ಧಾನ್ಯ, ಹಣವನ್ನು ಕೊಟ್ಟು ಕಳಿಸುತ್ತಾರೆ. ಜನರಿಂದ ಸಂಗ್ರಹಿಸಿದ ಎಲ್ಲ ಧಾನ್ಯಗಳನ್ನು ಮಾರಿ ಬಂದ ಹಣದಿಂದ ಸಾಯಂಕಾಲ ಪೂಜೆ ವಿಧಿ ವಿಧಾನಗಳನ್ನು ಮಹಿಳೆಯರು, ಮಕ್ಕಳು ಅತ್ಯಂತ ಸಂಭ್ರಮ ಸಡಗರದಿಂದ ಆಚರಿಸುತ್ತಾರೆ.

ಇದಲ್ಲದೆ ಊರಿನ ಎರಡು ಕಡೆ ದೊಡ್ಡ ಪ್ರಮಾಣದ ಒಂದು ಜೊತೆ ಬಸವಣ್ಣನ ಮಣ್ಣಿನ ಮೂರ್ತಿ ಮತ್ತು ಇನ್ನೊಂದು ಕಡೆ ಒಂದೇ ಬಸವಣ್ಣನನ್ನು ಮಾಡಿ ಪೂಜಿಸುವುದರ ಜೊತೆಗೆ ಕೊನೆಯ ಮಂಗಳವಾರದಂದು ಆ ಬಸವಣ್ಣನ ವಿಗ್ರಹಗಳನ್ನು ಊರ ತುಂಬ ಮೆರವಣಿಗೆ ಮಾಡಿ ಕೊನೆಗೆ ಸಾಯಂಕಾಲದ ಸಮಯದಲ್ಲಿ ಊರ ಹೊರಗಿರುವ ದೊಡ್ಡ ಕೆರೆಗೆ ಹೋಗಿ ವಿಸರ್ಜಿಸುತ್ತಾರೆ. ಈ ಮೆರವಣಿಗೆಯಲ್ಲಿ ಮಕ್ಕಳು, ಊರಿನ ಹಿರಿಯ ನಾಗರಿಕರು, ಮಹಿಳೆಯರು ಭಾಗವಹಿಸುತ್ತಾರೆ. ಈ ಉತ್ಸವದ ಇನ್ನೊಂದು ವಿಶೇಷತೆ ಏನೆಂದರೆ ಈ ಹಬ್ಬದಲ್ಲಿ ಯಾವುದೇ ಜಾತಿ ಮತ ಪಂಥ ಎನ್ನುವ ಬೇಧ ಭಾವವಿಲ್ಲದೆ ಪ್ರತಿಯೊಂದು ಸಮುದಾಯದವರು ಭಾಗವಹಿಸುವುದು. ಈ ಹಬ್ಬವು ಬಹಳ ಕಾಲದಿಂದಲೂ ನಡೆದುಕೊಂಡು ಬಂದಿದೆ ಎಂಬುದರಿಲ್ಲಿನ ನಾಗರೀಕರ ಹೇಳಿಕೆಯಾಗಿದೆ.

**ಆಷಾಡ ಏಕಾದಶಿ**

ಪ್ರತಿವರ್ಷ ಜೂನ್-ಜುಲೈ ತಿಂಗಳಲ್ಲಿ ಆಷಾಡ ಏಕಾದಶಿಯನ್ನು ಆಚರಿಸಲಾಗುತ್ತಿದೆ. ವಿಶೇಷವಾಗಿ

ಪುಂಡರಪುರದ ಪಾಂಡುರಂಗ ವಿಠಲ ಭಕ್ತ ಸಮೂಹ ಈ ಹಬ್ಬವನ್ನು ಆಚರಿಸುತ್ತದೆ. ಈ ಗ್ರಾಮದಲ್ಲಿ ವಿವಿಧ ಸಮುದಾಯದವರು ಹಾಗೂ ವಾರಕರಿ ಪಂಥದ ಸಂಥರಿದ್ದು, ಅವರೆಲ್ಲರೂ ಆಷಾಡ ಏಕಾದಶಿಯಂದು ಬೆಳಗಿನಿಂದ ಸಾಯಂಕಾಲದವರೆಗೆ ಉಪವಾಸವ್ರತ ಕೈಗೊಳ್ಳುತ್ತಾರೆ. ಅಲ್ಲದೆ ಸಂತರ ಮನೆತನದ ಸದಸ್ಯರು, ಪತಿ ಪತ್ನಿಯರು ಸೇರಿ ಈ ವ್ರತ ಕೈಕೊಂಡು ಅಂದಿನ ದಿವಸ ವಿಶೇಷವಾಗಿ ಪಾಂಡುರಂಗ ವಿಠಲನ ದೇವಸ್ಥಾನಕ್ಕೆ ಹೋಗಿ ಪೂಜೆ ವಿಧಿ ವಿಧಾನಗಳನ್ನು ಅನುಸರಿಸುತ್ತಾರೆ. ಇದೇ ರೀತಿ ಅವರವರ ಮನೆಗಳಲ್ಲಿ ಪಾಂಡುರಂಗ ವಿಠಲನ ಫೋಟೋವನ್ನು ಪೂಜಿಸಿ ಭಕ್ತಿಯಿಂದ ನಮಿಸುತ್ತಾರೆ. ಸಂತರು ಅಂದಿನ ದಿವಸ ಪಂಡರಪುರ ಪಾಂಡುರಂಗ ವಿಠಲನ ದೇವಸ್ಥಾನದ ದರ್ಶನಕ್ಕೆ ಹೋಗುವುದು ವಾಡಿಕೆ. ದೇವರ ದರ್ಶನ ಪಡೆದ ಸಂತರು ಹಾಗೂ ಭಕ್ತರು ವಿಠಲನ ಮೇಲೆ ತುಳಸಿ ಮಾಲೆಯನ್ನು ಹಾಕಿ ಗಂಧದ ಉಂಡಿಯನ್ನು ತಂದು ಪೂಜಿಸಿ, ತಾವು ಸಹ ಗಂಧವನ್ನು ಧರಿಸುತ್ತಾರೆ. ತುಳಸಿ ಮಾಲೆಯನ್ನು ಸಹ ಹಾಕಿಕೊಳ್ಳುತ್ತಾರೆ. “ತುಳಸಿ ಮಾಲೆ” ಧರಿಸಿದರು ಸುಳ್ಳು ಹೇಳಬಾರದು. ಮೋಸ, ವಂಚನೆ ಮಾಡಬಾರದು ಎಂಬ ನಿಯಮವಿದೆ. ಈ ಗ್ರಾಮದ ಲಿಂಗಾಯತ, ರೆಡ್ಡಿ, ಮರಾಠ ಹಾಗೂ ವಿವಿಧ ಸಮುದಾಯಕ್ಕೆ ಸೇರಿದವರು ಪಂಡರಪುರದ ಭಕ್ತರಾಗಿದ್ದಾರೆ. ಪ್ರತಿ ವರ್ಷ ಅವನ ದರ್ಶನ ಪಡೆದು ಬರುತ್ತಾರೆ. ಹೀಗೆ ಈ ಗ್ರಾಮ ಚಿಕ್ಕದಾಗಿದ್ದರೂ ವಿವಿಧ ಧರ್ಮ ದೇವತೆಗಳಿಗೆ ನಡೆದುಕೊಳ್ಳುವ ಸಂಪ್ರದಾಯಗಳು ಇಲ್ಲಿವೆ.

### ಎಳ್ಳಾಮಾಸಿ

ಒಕ್ಕಲಿಗ ತಾನು ಬೆಳೆಯುವ ಬೆಳೆ ಹಾಗೂ ಭೂಮಾತೆಯನ್ನು ಆರಾಧಿಸುವ ಹಬ್ಬಗಳಲ್ಲಿ ಎಳ್ಳಾಮಾಸಿ ಪ್ರಮುಖವಾದುದು. ಬಿಳಿಜೋಳ ಆಗ ತಾನೆ ಹೊಡೆಬಿಚ್ಚಿಕೊಂಡು ಸುಂಕಗಟ್ಟಿ ಹಾಲಗಾಳ ಹಿಡಿಯುತ್ತಿರುತ್ತದೆ. ಅಮವಾಸಿಯ ದಿನದಂದು ಎತ್ತುಗಳ ಮೈ ತೊಳೆದು, ಜೂಲಾ ಹಾಕಿ, ಕೋಡಿಗೆ ರಿಬ್ಬನ್‌ಗೊಂಡೆ, ಕೊರಳಿಗೆ ಗೆಜ್ಜೆಸರ ಕಟ್ಟಿ, ಅದ್ದೂರಿಯಿಂದ ಶೃಂಗಾರ ಮಾಡಿರುತ್ತಾರೆ. ಎಳ್ಳಾಮಾಸಿಗೆ ಎಳ್ಳಕಾಳಷ್ಟು ಬಿಸಿಲು ಪ್ರಾರಂಭವಾಗಿರುವುದರಿಂದ ಗಾಡಿಗೆ ಸವಾರಿ ಕಟ್ಟುತ್ತಾರೆ. ನಸುಕಿನಲ್ಲಿಯೇ ಎದ್ದ ಹೆಂಗಸರು ಎಳ್ಳು ಹಚ್ಚಿದ ರೊಟ್ಟಿ, ಎಣ್ಣೆಗಾಯಿ, ಚಟ್ನಿ, ಹುಲಿಬಾನ, ಹೋಳಿಗಿ, ಹುಗ್ಗಿ, ಕಡಬ, ಅನ್ನಸಾರ ಮೊದಲಾದ ತಿಂಡಿ ತಿನಿಸುಗಳನ್ನು ಮಾಡಿರುತ್ತಾರೆ. ಬಿಸಿಲಿಗೆ ಮೊದಲು ಗಾಡಿ ಹೂಡಿ ಬುತ್ತಿ, ನೀರು ಇಟ್ಟುಗೊಂಡು ಓಣಿಯವರನ್ನು ಸಂಬಂಧಿಕರನ್ನು ಕರೆದುಕೊಂಡು ಎಲ್ಲರೂ ಗಾಡಿಯನ್ನು ಹತ್ತಿ ತಮ್ಮ ಹೊಲಗಳಿಗೆ ಹೋಗುತ್ತಾರೆ.

ಹೊಲದ ಬಲಭಾಗದ ಮೂಲೆಯೊಂದರಲ್ಲಿ ಗಿಡದ ನೆರಳು ನೋಡಿ ಗಾಡಿ ಕೊಳ್ಳ ಹರಿಯುತ್ತಾರೆ. ಬಂಡಿಯಲ್ಲಿಯ ಬುತ್ತಿ, ನೀರನ್ನು ಇಳಿಸಿ ಬನ್ನಿ ಗಿಡದ ಕೆಳಗೆ ಅಥವಾ ಹೊಲದ ಮೂಲೆಯಲ್ಲಿ ಐದು ಚಪ್ಪಟೆಯಾಕಾರದ ಕಲ್ಲುಗಳನ್ನಿರಿಸಿ, ಅವಕ್ಕೆ ನೀರು ಸುರುವಿ ವಿಭೂತಿ, ಕುಂಕುಮ ಹಚ್ಚಿ, ಕಾಯಿ ಒಡೆದು ಎಡೆ ಹಿಡಿಯುತ್ತಾರೆ. ಮತ್ತೊಂದೆಡೆಯನ್ನು ಮೊಸರನ್ನ ಒಬ್ಬನ ಕೈಯಲ್ಲಿ ಕೊಟ್ಟು ಅವನೊಂದಿಗೆ ತಂಬಿಗೆ ನೀರು ಹಿಡಿದುಕೊಂಡು ಹೊಲದ ನಾಲ್ಕು ಮೂಲೆಗೂ ಮತ್ತು ಹೊಲದ ತುಂಬ ಒಬ್ಬ 'ಹುಲ್ಲುಲಿಗೊ' ಮತ್ತೊಬ್ಬ 'ಸುರಂಬಳಿಗೊ' ಎನ್ನುತ್ತಾ ಆಹಾರ ಹಾಗೂ ನೀರನ್ನು ಸಿಂಪಡಿಸುತ್ತ ಚರಗ ಚೆಲ್ಲುತ್ತಾರೆ. ಹೀಗೆ ಮಾಡುವುದರಿಂದ ಭೂದೇವಿ ಸಂತೃಪ್ತಳಾಗಿ ಹೆಚ್ಚು ಇಳುವರಿಯನ್ನು ಕೊಡುತ್ತಾಳೆಂಬ ನಂಬಿಕೆ

ಇವರಲ್ಲಿದೆ. 'ಹುಲ್ಲುಲಿಗೊ' ಎಂಬುದು ಹುಲುಸಾಗಲಿ ಎಂಬುದನ್ನು ಸೂಚಿಸುತ್ತದೆ. ಇಷ್ಟಾದ ಮೇಲೆ ಎಲ್ಲರೂ ಗುಂಪಾಗಿ ಕುಳಿತುಕೊಂಡು ಊಟಮಾಡುತ್ತಾರೆ. ನಂತರ ಗಿಡದ ನೆರಳಿಗೆ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಮನೆಗೆ ಬರುವಾಗ ಜೋಳದ ಒಂದು ಪೆಂಡಿ ಮೇವನ್ನು ಕಿತ್ತುಕೊಂಡು ಗಾಡಿಯಲ್ಲಿಟ್ಟುಕೊಂಡು ಹಾಡುತ್ತ ಕೇಕೆ ಹಾಕುತ್ತಾ ಎತ್ತುಗಳನ್ನು ಓಡಿಸುತ್ತಾ ಹುರುಪಿನಿಂದ ಮನೆಗೆ ಹಿಂದಿರುಗುತ್ತಾರೆ. ಈ ಸಂದರ್ಭದಲ್ಲಿ ಬಹುತೇಕವಾಗಿ ಎಲ್ಲರೂ ಹೊಸ ಬಟ್ಟೆಗಳನ್ನು ಉಟ್ಟಿರುತ್ತಾರೆ. ಅದರಲ್ಲೂ ಹೆಂಗಸರೂ ಆಭರಣಗಳನ್ನಿಟ್ಟು 'ಹಳ್ಳಿರಂಭೆ ಬೆಳ್ಳಿ ಬೊಂಬೆ' ಯಂತಾಗುತ್ತಾರೆ.

**ಗೌರಿಹುಣ್ಣಿಮೆ**

ಇದು ಹೆಂಗಸರ ಹಬ್ಬವಾಗಿದೆ. ೫ ದಿನಗಳವರೆಗೆ ಆರತಿ ಮಾಡುತ್ತಾರೆ. ಐದನೇ ದಿನ ಸಕ್ಕರೆ ಆರತಿ ತಂದು ಬೆಳಗುತ್ತಾರೆ. ಗೌರಿ ಪೂಜೆಯಲ್ಲಿ ಹಾಡುವ ಹಾಡುಗಳು ಅತ್ಯಂತ ಹೇರಳವಾಗಿ ಸಿಗುತ್ತವೆ. ಎಲ್ಲ ವರ್ಗದ ಮಹಿಳೆಯರು ಈ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ. ಕೊನೆಯ ದಿನ ಬರುವಾಗ ಒಂದು ಸಕ್ಕರೆ ಆರತಿಯನ್ನು ಮನೆಯಲ್ಲಿ ಇಟ್ಟು ಬರುತ್ತಾರೆ. ಮದುವೆ ಗೊತ್ತಾದವರು ಹುಡುಗಿಯ ಮನೆಗೆ ಬಂದು ಸಕ್ಕರೆ ಆರತಿ ಕೊಟ್ಟು ಆರತಿ ಮಾಡಿ ಹೋಗುವ ಸಂಪ್ರದಾಯವಿದೆ.

**ನಾಗರ ಪಂಚಮಿ**

ಶ್ರಾವಣ ಮಾಸದಲ್ಲಿ ಆಚರಿಸಲ್ಪಡುವ ಈ ಹಬ್ಬವು ಸಾಮಾನ್ಯವಾಗಿ ಎಲ್ಲಾ ವರ್ಗಗಳ ಜನರ ವಿಶಿಷ್ಟ ಆಚರಣೆಯಾಗಿ ಕಂಡುಬರುತ್ತದೆ. ನಾಗರ ಪಂಚಮಿಯು ಹೆಣ್ಣು ಮಕ್ಕಳ ಹಬ್ಬವೆಂದೇ ಕರೆಯಲಾಗುತ್ತದೆ. ಹೊಸದಾಗಿ ಮದುವೆಯಾಗಿ ಹೋದ ಹೆಣ್ಣು ಮಕ್ಕಳು ಮೊದಲ ಪಂಚಮಿಯನ್ನು ತವರಿನಲ್ಲೇ ಆಚರಿಸುತ್ತಾರೆ. ಎರಡು ದಿವಸ ಈ ಹಬ್ಬವನ್ನು ಆಚರಿಸಲಾಗುತ್ತದೆ. ಮೊದಲನೇ ದಿನ ಬೆಲ್ಲದ ನೀರು ಕಲಸಿ ಬೆಲ್ಲದ ಹಾಲು ಎಂದು ಭಾವಿಸುತ್ತ ಹುತ್ತಕ್ಕೆ ಅಥವಾ ಬಾವಿಕಟ್ಟೆಯ ಬಳಿ ಇರುವ ನಾಗಪ್ಪನಿಗೆ ಎರೆಯುತ್ತಾರೆ. ಎರಡನೇ ದಿನವಾದ ಪಂಚಮಿಯಂದು ಆಕಳ ಹಾಲಿನಿಂದ ನಾಗಪ್ಪನಿಗೆ ಎರೆಯುತ್ತಾರೆ. ನಾಗಪ್ಪನಿಗೆ ಭಕ್ಷ್ಯ ಬೋಜ್ಯಗಳನ್ನು ವಿಧವಿಧವಾದ ಉಂಡಿ, ಜೋಳದ ಅಳ್ಳು, ಇಟ್ಟು ನೈವೇದ್ಯ ಮಾಡುತ್ತಾರೆ. ಪೂಜೆಯ ನಂತರ ಉಂಡೆಗಳನ್ನು ಅಕ್ಕಪಕ್ಕದ ಜನರಿಗೆ ಕೊಡುವುದು ಅವರಿಂದ ತೆಗೆದುಕೊಳ್ಳುವುದು ಬೇರೆಯ ಊರುಗಳ ನೆಂಟರಿಗೆ ಕಳುಹಿಸುವುದು ವಿಶೇಷ. ಹಬ್ಬದ ದಿನ ಕೊಬ್ಬರಿ ಆಡಿಸುವುದು, ಜೋಕಾಲಿ ಆಡುವ ಪದ್ಧತಿ ಇದೆ. ಮದುವೆ ಗೊತ್ತಾದವರು ಶ್ರಾವಣಮಾಸದಲ್ಲಿ ಹುಡುಗಿಗೆ ಸೀರೆ, ಬೇರೆ ಬೇರೆ ರೀತಿಯ ಉಂಡಿಗಳನ್ನು ಕೊಡುತ್ತಾರೆ. ಶ್ರಾವಣ ಮಾಸಪೂರ್ತಿ ಮುಗಿಯುವವರೆಗೆ ಅನೇಕ ದೇವಾಲಯಗಳಲ್ಲಿ ವಿಶೇಷ ಪೂಜೆ ಪುನಸ್ಕಾರಗಳು ನಡೆಯುತ್ತವೆ. ಈ ಮಾಸದಲ್ಲಿ ಬೇರೆ ಬೇರೆ ಕ್ಷೇತ್ರಗಳಿಗೆ ದರ್ಶನಕ್ಕೆ ಹೋಗುವುದು ವಿಶೇಷ.

**ಮಕರ ಸಂಕ್ರಮಣ**

'ಮಕರ ಸಂಕ್ರಮಣ' ಹಬ್ಬವೇ ಹಿಂದಿನಿಂದಲೂ ಪ್ರಾಧಾನ್ಯತೆಯಿಂದ ನಡೆದುಬಂದಿದೆ. ಈ ಹಬ್ಬವು ಜನವರಿ ತಿಂಗಳಿನಲ್ಲಿ ಆರಂಭವಾಗುತ್ತದೆ. ಹಬ್ಬದ ದಿನದಂದು ಸೂರ್ಯನು ಮಕರರಾಶಿಗೆ ಪ್ರವೇಶಿಸಿ ದಕ್ಷಿಣದಿಂದ ಉತ್ತರಾಭಿಮುಖವಾಗಿ ಆರು ತಿಂಗಳಿನವರೆಗೆ ತಿರುಗುತ್ತಾನೆ. ಈ ಒಂದು ದಿನವನ್ನು 'ಮಕರ

ಸಂಕ್ರಾಂತಿ' ಎಂದು ಕರೆಯುವರು. ಈ ಹಬ್ಬದಂದು ಎಳ್ಳು-ಬೆಲ್ಲ ಹಂಚುವರು. 'ಭೋಗಿ', ಸಂಕ್ರಮಣ ಮತ್ತು ಕನುಹಬ್ಬ ಎಂದು ಮೂರು ದಿನಗಳವರೆಗೆ ಈ ಹಬ್ಬವನ್ನು, ಆಚರಣೆ ಮಾಡುತ್ತಾರೆ. ಈ ವೇಳೆಗೆ ಬೇರೆ ಬೇರೆ ತರಹದ ಬೆಳೆಗಳನ್ನು ಬೆಳೆಯುತ್ತಾರೆ. ಈ ದಿನದಂದು ಮನೆಯಲ್ಲಿನ ಮಕ್ಕಳಿಗೆ ದೋಸೆಯನ್ನು ಮಾಡಿ ಮುಖದ ಮೇಲೆ ಇಳಿದೆಗೆಯುತ್ತಾರೆ. ಅಂದಿನ ದಿನದಂದು ಎಲ್ಲರೂ ಹೊಸ ಬಟ್ಟೆಯನ್ನು ಧರಿಸಿಕೊಂಡು ರಾತ್ರಿಯ ವೇಳೆಯಲ್ಲಿ ಎಳ್ಳು ಬೆಲ್ಲವನ್ನು ಕೊಟ್ಟು 'ಎಳ್ಳು-ಬೆಲ್ಲ ತಿಂದು ಒಳ್ಳೆಯವರಾಗಿ ಇರೋಣ' ಎಂದು ಶುಭವನ್ನು ಆಶಿಸುವರು.

**ದವನದ ಹುಣ್ಣಿಮೆ**

ಇದು ಮಾರ್ಚ್-ಏಪ್ರಿಲ್, ಚೈತ್ರ ಮಾಸದಂದು ಆಚರಿಸುತ್ತಾರೆ. ಈ ತಿಂಗಳಿನಲ್ಲಿ ಚಂದ್ರನೂ ಪೂರ್ಣ ಮೂಡಿರುತ್ತಾನೆ. ಇದನ್ನು ಹಿಂದೂಗಳ ತಿಂಗಳು ಎಂತಲೂ ಕರೆಯುತ್ತಾರೆ. ದವನದ ಹುಣ್ಣಿಮೆಯ ಸಮಯದಲ್ಲಿ ಗಿಡಗಳು ಮೊಗ್ಗು ಹೂವುಗಳನ್ನು ಬಿಡುವ ಸಮಯ ದವನದ ಹುಣ್ಣಿಮೆಯ ಸಮಯದಲ್ಲಿ ಬಿತ್ತಿದ ಪರಿಮಳವಾದ ಹೂವುಗಳನ್ನು ಈ ಸಮಯದಲ್ಲಿ ಮುಖ್ಯವಾಗಿ ದೇವರಿಗೆ ಹೂವುಗಳನ್ನು ಅರ್ಪಿಸುತ್ತಾರೆ. ಆದ್ದರಿಂದ ಇದಕ್ಕೆ ಪೂರ್ಣ ಮೂಡಿದ ಚಂದ್ರನ ದಿನವೆಂದು ಕರೆಯುತ್ತಾರೆ. ಆದ ಕಾರಣ ಇದಕ್ಕೆ "ದವನ ಹುಣ್ಣಿಮೆ" ಎಂದು ಕರೆಯುವುದುಂಟು. ಯಮನೂರಿನ ಸಮುದಾಯದವರು ಹುಲಿಗೆಮ್ಮದೇವಿ, ಸೌದತ್ತಿ ಎಲ್ಲಮ್ಮ ಮುಂತಾದ ದೇವಸ್ಥಾನಗಳಿಗೆ ಹೋಗಿಬರುವ ರೂಢಿಯನ್ನು ಇಟ್ಟುಕೊಂಡಿದ್ದಾರೆ. ಈ ಸಮಯದಲ್ಲಿ ದೇವರಿಗೆ ತಮ್ಮ ಕೈಲಾದ ಕಾಣಿಕೆಯನ್ನು ನೀಡಿ, ತಮ್ಮ ಹರಕೆಗಳನ್ನು ತೀರಿಸಿ ಬರುವ ಪದ್ಧತಿ ಹಿಂದಿನಿಂದಲೂ ಇದೆ.

**ಭಾರತ ಹುಣ್ಣಿಮೆ**

ಈ ಹಬ್ಬವನ್ನು ಭಾರತದ ಎಲ್ಲೆಡೆಯೂ, ಎಲ್ಲರೂ ಆಚರಿಸುವರು. ಇದನ್ನು ಚಂದ್ರನು ಸಂಪೂರ್ಣವಾಗಿ ಮೂಡಿದ ದಿನದಂದು ಅಂದರೆ, ಮಾಘ-ಮಾಸದ (ಜನವರಿ-ಫೆಬ್ರವರಿ) ತಿಂಗಳಿನಲ್ಲಿ ಆಚರಿಸುವರು. ಈ ಹಬ್ಬವು ಪ್ರಾಚೀನ ಕಾಲದಿಂದ ಬಂದಿದ್ದಲ್ಲ. ಈ ಕಾಲದವರು ಇತ್ತಿತ್ತಲಾಗಿ ಬಂದಿರುವ ಹಬ್ಬವೆಂದು ನುಡಿಯುವರು. ಭಾರತ ಹುಣ್ಣಿಮೆಯ ಸಮಯದಲ್ಲಿ ಜನರು ತಮ್ಮ ಶುದ್ಧ ಮನಸ್ಸಿನಿಂದ ಮನೆಯಲ್ಲಿ ಸಿಹಿ ಪದಾರ್ಥವನ್ನು ಮಾಡಿ ದೇವರಿಗೆ ನೈವೇದ್ಯ ಹಿಡಿದು ಎಲ್ಲಮ್ಮದೇವಿ, ಬಸವಣ್ಣ ಮುಂತಾದ ತಮ್ಮ ಮನೆ ದೇವರ ದರ್ಶನವನ್ನು ಪಡೆಯಲು ಹೋಗುತ್ತಾರೆ. ಈ ಹುಣ್ಣಿಮೆಯೂ ಸಂಪೂರ್ಣವಾಗಿ ಬೆಳಕಿನಿಂದ ಕೂಡಿಬರುತ್ತದೆ. ಈ ಹುಣ್ಣಿಮೆಯಲ್ಲಿ ಯಮನೂರಿನ ಸಮುದಾಯದವರು ಎಲ್ಲಮ್ಮನ ಗುಡ್ಡಕ್ಕೆ ಹೋಗಿ ತಮ್ಮ ಹಡ್ಲಿಗೆಯನ್ನು(ದೇವರ ಪೆಟ್ಟಿಗೆ) ತೆಗೆದುಕೊಂಡು ಹೋಗಿ, ಅಂದು ವಿಶೇಷವಾದ ಅಡುಗೆಯನ್ನು ಮಾಡಿ ಹಡ್ಲಿಗೆ ತುಂಬಿಸುವ ಪದ್ಧತಿಯನ್ನು ಆಚರಿಸಿಕೊಂಡು ಬರುವರು. ಈ ಸಮಯದಲ್ಲಿ ಜನರು ಗುಂಪು ಗುಂಪಾಗಿ ಊದಿಸುತ್ತಾ, ಬಾರಿಸುತ್ತಾ ಹಡ್ಲಿಗೆ ತುಂಬಿಸುವಾಗ 'ಉಧೋ-ಉಧೋ' ಎಂದು ಹೇಳುತ್ತಾ ಈ ಪೂಜಾಕಾರ್ಯಕ್ರಮವನ್ನು ಮುಗಿಸುವರು.

**ಬೆನಕನ ಅಮವಾಸ್ಯೆ**

ಭಾರತದ ಉದ್ದಗಲಕ್ಕೂ ವಿಶೇಷವಾಗಿ ಆಚರಿಸಲ್ಪಡುವ ಹಬ್ಬದಲ್ಲಿ ಗಣಪತಿಯ ಆರಾಧನೆಯೂ ಒಂದು. ಭಾರತೀಯ ಸಾಂಸ್ಕೃತಿಕ ಪರಂಪರೆ ಮತ್ತು ಒಗ್ಗಟ್ಟನ್ನು ಪ್ರತಿಬಿಂಬಿಸುವ ಹಬ್ಬವಾಗಿ ಆಚರಿಸಲ್ಪಡುವ ಈ

ಹಬ್ಬಕ್ಕೆ ಜಾತಿ, ಮತ, ಪಂಥದ ವ್ಯತ್ಯಾಸವಿಲ್ಲ. ಈ ಹಬ್ಬವನ್ನು ಹಿಂದೂಗಳು ತುಂಬ ಶ್ರದ್ಧೆ, ಭಕ್ತಿಯಿಂದ ಆಚರಿಸುತ್ತಾರೆ. ತಮ್ಮ ಸ್ಥಿತಿ-ಗತಿಗಳಿಗೆ ತಕ್ಕಂತೆ ಗಣಪತಿಯನ್ನು ಐದು ದಿನ, ಒಂಭತ್ತು ದಿನ ಮತ್ತು ಒಂದು ತಿಂಗಳಿನವರೆಗೆ ಅಂದರೆ ಗಣಪತಿಯ ಪ್ರತಿಷ್ಠಾಪನೆಯ ದಿನದಿಂದ ಹಿಡಿದು ಮಹಾನವಮಿ ಅಮವಾಸ್ಯೆಯವರೆಗೆ ಇಟ್ಟು ಪೂಜಿಸಿ ನಂತರ ವಿಸರ್ಜನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವರು. ಈ ಹಬ್ಬದ ವಿಶೇಷವಾದ ಸಿಹಿ ಅಡುಗೆ ಪದಾರ್ಥವೆಂದರೆ ಕಡಬು, ಗೋದಿಯ ಹುಗ್ಗಿ ಮತ್ತು ಗಣಪತಿಯ ಪೂಜೆಗಾಗಿ ಮೋದಕವನ್ನು ಮಾಡುವ ಪದ್ಧತಿ ಇದೆ. ಈ ಹಬ್ಬದಲ್ಲಿ ಪಟಾಕಿ, ಸಿಡಿಮದ್ದುಗಳನ್ನು ಸಿಡಿಸುವುದರ ಮೂಲಕ ತಮ್ಮ ಆನಂದವನ್ನು ವ್ಯಕ್ತಪಡಿಸುತ್ತಾರೆ. ಗಣಪತಿಯನ್ನು ವಿಸರ್ಜನಾ ಕಾರ್ಯಕ್ರಮದಲ್ಲಿ ಮೆರವಣಿಗೆ ಮಾಡಿ, ಯುವಕರು ಕುಣಿಯುತ್ತಾ ಕೆರೆಯಲ್ಲಿ ಅಥವಾ ಬಾವಿಯಲ್ಲಿ ಚೆಲ್ಲುವರು.

**ಇತರೆ ಹಬ್ಬಹರಿದಿನಗಳು**

ಕಷ್ಟ ಸುಖಗಳ ಸಮನ್ವಯದ ಸಂಕೇತವಾದ ಯುಗಾದಿ ಹಬ್ಬ, ಅಣ್ಣ ತಂಗಿ, ಅಕ್ಕ ತಮ್ಮರ ಪ್ರೀತಿ ವಾತ್ಸಲ್ಯ ವ್ಯಕ್ತಪಡಿಸುವ ರಾಖಿ ಹಬ್ಬವು ವಿಶಿಷ್ಟವಾಗಿ ಆಚರಣೆಗೊಳ್ಳುತ್ತವೆ. ಉಡುಚಮ್ಮನ ದೇವಸ್ಥಾನದಲ್ಲಿ ನವರಾತ್ರಿಯ ದಿವಸ ಪುರಾಣ ಹೇಳುತ್ತಾರೆ. ಇಲ್ಲಿ ಎಲ್ಲ ಧರ್ಮದವರು ಭಾಗವಹಿಸುತ್ತಾರೆ. ಕೊನೆಯ ದಿವಸ ಅನ್ನ ಸಂತರ್ಪಣೆ ನಡೆಯುತ್ತದೆ.

**೪.೩.೨. ಜಾತ್ರೆಗಳು**

ಧರ್ಮ ಮತ್ತು ಹಬ್ಬಗಳಿಗೆ ಇರುವ ಗಾಢ ಸಂಬಂಧವೆ ಮುಂದುವರೆದು ಜಾತ್ರೆಗಳಲ್ಲಿ ವ್ಯಕ್ತಗೊಂಡಿದೆ. ಧರ್ಮ ಎಂದು ನಾವು ಇಂದು ಬಳಸುತ್ತಿರುವುದು ಒಂದು ವ್ಯವಸ್ಥಿತ ಸಮಾಜದ ಪರಿಕಲ್ಪನೆ, ಆದಿಮಾನವನ ಕಾಲದಿಂದ ಬಂದ ಜನಪದ ವೃಂದಗಳಿದ್ದು ಒಂದು ವ್ಯವಸ್ಥೆಗೆ ಒಳಪಡದ, ಅನಿಯಂತ್ರಿತವಾಗಿ ಚದುರಿದ ವಿಭಿನ್ನ ಸಂಸ್ಕೃತಿಗಳ ಬಹುಮುಖ ಸಮಾಜವಾಗಿರುವುದರಿಂದ, ವ್ಯವಸ್ಥಿತ ಸಮಾಜದ ಈ ಪರಿಕಲ್ಪನೆಯನ್ನು ನೇರವಾಗಿ ಜನಪದ ಸಮಾಜಕ್ಕೆ ಅನ್ವಯಿಸಲುಬಾರದು. ಆದರೆ ಅದೇ ಕಾಲಕ್ಕೆ ಶಿಷ್ಟಪದ ಸಮಾಜದ ಧರ್ಮ ಪರಿಕಲ್ಪನೆಗೆ ಆಧಾರವಾಗಿರುವ ಜನಪದ ನಡವಳಿಕೆಗಳಲ್ಲಿ ತೊಡಗಿ ಪರಿಚಲನೆಗೊಳ್ಳುತ್ತಾ ಬಂದ ನಂಬಿಕೆ, ಆಚರಣೆ, ಸಂಜ್ಞೆ, ಸಂಕೇತ, ದೇವತೆ, ಕುಲದೇವತೆಗಳು, ಪಂಥ, ಆರಾಧನೆ, ಉತ್ಸವ, ಹಬ್ಬ, ಜಾತ್ರೆ, ಧಾರ್ಮಿಕ, ಕಟ್ಟುಕಟ್ಟಳೆ, ವಿಧಿ ಕ್ರಿಯೆಗಳು, ಮಂತ್ರ, ಮಾಟ, ಕಾರ್ಣಿಕ, ಅರ್ಚಕ, ಗೊರವ, ಪುರವಂತ, ಗೊಂದಲಿಗ, ಬಯಲಾಟ, ಯಕ್ಷಗಾನ, ಇತ್ಯಾದಿ  ವಿವಿಧ ಮಾದರಿಗಳಲ್ಲಿ ಜನಪದ ಧರ್ಮ ಮತ್ತು ಅದರ ಒಡಲಲ್ಲಿ ಗರಿಗೆದರಿದ ಜನಪದ ಕಲೆಗಳ ರೂಪಾಂಶಗಳನ್ನು ಕಾಣಬಹುದು.

ಜಾತ್ರೆ ಪದದ ನಿಷ್ಪತ್ತಿ

'ಜಾತ್ರೆ' ಎನ್ನುವದು 'ಯಾತ್ರಾ' ಎಂಬ ಸಂಸ್ಕೃತ ಪದದಿಂದ ಮೂಡಿಬಂದಿದೆ. ಪ್ರಸಿದ್ಧ ಕ್ಷೇತ್ರದರ್ಶನ ಮಾಡಲು ಜನಯಾತ್ರೆ ಹೋಗುತ್ತಾರೆ. ಸಾಮಾನ್ಯವಾಗಿ ವರ್ಷದ ಯಾವುದೇ ಒಂದು ನಿಯಮಿತ ಸಂದರ್ಭದಲ್ಲಿ ಪುಣ್ಯಕ್ಷೇತ್ರಗಳಲ್ಲಿ ಜನರ ಜಾತ್ರೆ ಸೇರುತ್ತದೆ.

ಕನ್ನಡ ನಿಘಂಟು ಪ್ರಕಾರ

ಪುಣ್ಯಕ್ಷೇತ್ರದರ್ಶನವೇ ಮೊದಲಾದ ಧಾರ್ಮಿಕ ಉದ್ದೇಶಗಳಿಂದ ಮಾಡುವ ಪ್ರಯಾಣ ಯಾತ್ರೆ, ಯಾವುದಾದರೊಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮ, ದೇವರ ರಥೋತ್ಸವ ಮುಂತಾದ ಸಂದರ್ಭಗಳಲ್ಲಿ ಸೇರುವ ಜನರ ಗುಂಪು, ಸಮೂಹ, ಪರಿಷೆ.

ಬ್ರಹ್ಮಶಿವನ ಸಮಯ ಪರೀಕ್ಷೆಯಲ್ಲಿ

ಉಕ್ಕಲ ಹಿಂದಿನಿಂದ ದೇವಿಗೆ ಮಾಮೂಲಕ್ಕನಿಗಂ ಜಾತ್ರೆ ಮಾಳ್ಪಂ ಮೊಕ್ಕಳಿಗಂ ಜಾತ್ರೆ, ಪರಿಸ, ಎಂದರ್ಥವಿದೆ. ಯಾವುದೋ ಒಂದು ನಿಗದಿತ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದು. ಜಾತ್ರೆ ಎಂಬುದು ವರ್ಷಕ್ಕೆ ನಿಗದಿಯಾದ ಇನ್ನಿತರ ಅವಧಿ ಗೊತ್ತಾದ ಸ್ಥಳದಲ್ಲಿ ಒಂದು ದಿನವೋ, ಇನ್ನೂ ಹೆಚ್ಚಿನ ದಿನಗಳವರೆಗೂ ಜನರು ಸೇರಿ ನಡೆಸುವ ಉತ್ಸವ. ಜಾತ್ರೆಗಳು ಸಾಮಾನ್ಯವಾಗಿ ಪುಣ್ಯಕ್ಷೇತ್ರಗಳಲ್ಲಿ ಜರುಗುವುವು. ಅವುಗಳ ಸ್ಮಾರಕವಾಗಿ ರಥೋತ್ಸವ, ಪಲ್ಲಕ್ಕಿ ಉತ್ಸವ ನಡೆಯುವದು. ಜಾತ್ರೆಗಳ ಉದ್ದೇಶ, ಪ್ರಕಾರ, ಹಾಗೂ ಅವುಗಳಿಂದ ಅವಿರ್ಭವಿಸುವ ಧಾರ್ಮಿಕ ಪದ್ಧತಿಗಳಿಗೆ ಪೂರಕವಾಗಿ ಜಾತ್ರೆಗಳು ಹುಟ್ಟಿಕೊಂಡವು. ಶ್ರಾವಣಮಾಸ, ಅಮವಾಸ್ಯೆಗಳ, ಹಬ್ಬಹರಿದಿನಗಳ ರಥೋತ್ಸವಗಳಲ್ಲಿ ಭಕ್ತರ ಆಶಯಗಳಿಗನುಗುಣವಾಗಿ ಪೂಜಾಕಾರ್ಯಗಳು ನಡೆಯುವುದೇ ಇಂತಷ್ಟು ನಿಯಮಗಳಿಲ್ಲ. ಅವು ಬಹುಕೇಂದ್ರಿತ ನೆಲೆಯನ್ನು ಹೊಂದಿವೆ.

ಜಾತ್ರೆಯ ಮೂಲಪದವಾದ ಯಾತ್ರೆಗೆ ಚಲನೆ, ಪ್ರಯಾಣ, ಸೈನ್ಯಾಕ್ರಮಣ, ತೀರ್ಥಯಾತ್ರೆ, ಹಬ್ಬ,ಸಂತೆ, ಮೆರವಣಿಗೆ, ರಸ್ತೆ, ಮರಣ, ವಾಡಿಕೆ, ವಾಹನ, ನಾಟಕೀಯ, ಮನರಂಜನೆ ಎಂಬ ಅರ್ಥಗಳನ್ನು ಗುರುತಿಸಿದ್ದಾರೆ. ಜಾತ್ರೆಗಳ ಇತಿಹಾಸ ಸುಮಾರು ಒಂದು ಸಾವಿರ ವರ್ಷಗಳ ಹಿಂದಕ್ಕೆ ಬಿತ್ತರಿಸಲು ಸಾಧ್ಯವಿದೆ. ಜನಪದ ಸಂಸ್ಕೃತಿ ಮತ್ತು ನಾಗರೀಕ ಸಂಸ್ಕೃತಿಯಲ್ಲಿ ವ್ಯತ್ಯಾಸವಿಲ್ಲದಿದ್ದರೂ ಅವು ಸಮಾನಾಂತರವಾಗಿ ವಿಕಾಸಹೊಂದುತ್ತವೆ.

ಜಾತ್ರೆಗಳು ಸಾಮಾನ್ಯವಾಗಿ ಮಾಘಮಾಸದಿಂದ ಚೈತ್ರ ಮಾಸದ ಅವಧಿಯೊಳಗೆ ಜರುಗುವುದೇ ವಿಶೇಷ. ಮಿಕ್ಕ ಅವಧಿಯಲ್ಲಿ ಮಳೆ ಬರಬಹುದಾದ್ದರಿಂದ ಜಾತ್ರೆಗಳಿಗೆ ಅಡ್ಡಿ ಆತಂಕಗಳು ಉಂಟಾಗಬಹುದೆಂದು ಭಾವಿಸಲಾಗಿದೆ. ಅಲ್ಲದೇ ಮೇಲೆ ವಿವರಿಸಿದ ಅವಧಿಗಳಲ್ಲಿ ಜನರಿಗೆ ಸ್ವಲ್ಪ ವಿಶ್ರಾಂತಿ ಇರುವುದರಿಂದ ಮತ್ತು ಅವರ ಬಳಿ ಹಣ ಇರುವುದು ಸಹ ಒಂದು ಕಾರಣ. ಸಾಮಾನ್ಯವಾಗಿ, ಮಳೆ ಬೆಳೆ ಚೆನ್ನಾಗಿ ಆದಾಗ ಜನರ ಹುರುಪು ಹುಮ್ಮಸ್ಸಿನಿಂದ ಜಾತ್ರೆಗಳಲ್ಲಿ ಭಾಗವಹಿಸಿ ಅವುಗಳಿಗೆ ಹೆಚ್ಚಿನ ಕಳೆ ತರುತ್ತಾರೆ. 'ಜೀವರಥೋತ್ಸವವಿದ್ದು ಇದ ಅಣಕಿಸದಿರು ಎಲೆ ಸನ್ಯಾಸಿ' ಎಂಬ ಕುವೆಂಪು ಅವರ ಧ್ವನಿಯಲ್ಲಿ ಜಾತ್ರೆಯ, ರಥೋತ್ಸವದ ಮಹತ್ವವನ್ನು ಕಾಣಬಹುದು. ಜೀವನ ಚೈತ್ರದ ಮಾದರಿಯಲ್ಲಿ ಅದರ ಪ್ರಖರತೆಯನ್ನು ಜನಸಮೂಹ ಸಮುದಾಯಗಳ ಮೇಲೆ ಬೀರಿದೆ. ಜನಪದ ಅರ್ಥ ಕಳೆದುಕೊಳ್ಳುತ್ತಿದೆ. ನಾಶಗೊಳ್ಳುತ್ತಾ ಇದೆ ಎನ್ನುತ್ತಾರೆ. ಹಾಗೆ ಅದು ನಾಶವಾಗುತ್ತಿಲ್ಲ. ಜಾತ್ರೆ, ಹಬ್ಬ-ಹರಿದಿನಗಳು, ತೇರು, ಆಚರಣೆಗಳ ಮೂಲಕ ಬದುಕಿನೊಳಗೆ ಬೆರೆತುಕೊಂಡು ಬಿಡಿಸಲಾಗಿರದಷ್ಟು ರಕ್ತಗತವಾದ ಮೇಲೆ ಅದರ ಅಗಲಿಸುವಿಕೆ ಸಾಧ್ಯವೇ ಇಲ್ಲ. ಆದುದರಿಂದ ಜಾತ್ರೆಗಳು ಜನಪದರ ಕಡೆ ಕರುಳುಬಳ್ಳಿ ಸಂಬಂಧದ ಗುಣವನ್ನು ಪಡೆದಿವೆ ಎನ್ನಬಹುದು.

ಯಮನೂರಿನ ಚಾಂಗದೇವರ ಉರುಸು ಜಾತ್ರೆಯ ಸಂಪ್ರದಾಯ ಹಾಗೂ ಆಚರಣೆಗಳಲ್ಲಿ ಬಹಳ ವಿಶಿಷ್ಟತೆಯಿಂದ ಕೂಡಿದೆ.

**ಯಮನೂರಿನಲ್ಲಿ ಜಾತ್ರೆ, ಪೂಜೆ**

ಚಾಂಗದೇವರ ಗದ್ದುಗೆ ಪೂಜೆಯು ದಿನಾಲು ೨ ಸಲ ಆಗುತ್ತದೆ. ಪ್ರತಿದಿನ ಮುಂಜಾನೆ ಚಾಂಗದೇವರ ಪ್ರತಿಮೆಗೆ ಬೆಳಗಿನಿಂದ ವಿಭೂತಿ ಹಚ್ಚಿ, ನೀರಿನಿಂದ ತೊಳೆದು, ಗಂಧ ಪುಷ್ಪ ಅಕ್ಷತೆಗಳನ್ನರ್ಪಿಸಿ ಧೂಪ ದೀಪಗಳಿಂದ ಆರತಿ ಮಾಡುವರು. ಮಧ್ಯಾಹ್ನ ಹುಗ್ಗಿ, ಹೋಳಿಗೆ, ಮಾದುಲಿ, ಕಡಬು, ಅನ್ನದ ನೈವೇಧ್ಯ ಮಾಡುವರು. ಹೂ ಹಣ್ಣು ಅರ್ಪಿಸುವರು. ಆಗ ನಗಾರೆ, ಗಂಟೆ ಬಾರಿಸುವರು.

ಚಾಂಗದೇವರ ಗುಡಿಯ ಹೆಬ್ಬಾಗಿಲಿನ ಎಡಭಾಗದಲ್ಲಿ ಬ್ರಹ್ಮದೇವನ ಮೂರ್ತಿಯಿದ್ದು, ಜನರು ಅದಕ್ಕೆ ಕಾಯಿ ಒಡೆದು, ಹಣ್ಣು ಏರಿಸಿ, ಎಣ್ಣೆ ಹಾಕಿ, ಪುಟಾಣಿ ಸಕ್ಕರೆ ಹಂಚುವರು. ಹೀಗೆ ಮಾಡುವುದರಿಂದ ಅಳುವಕೂಸುಗಳು ಸುಮ್ಮನಾಗುವವು. ಸಣ್ಣ ಮಕ್ಕಳ ರೋಗಗಳು ವಾಸಿಯಾಗುವವು. ಇದು ಇಂದಿಗೂ ನಡೆದಿದೆ. ಹೆಬ್ಬಾಗಿಲು ದಾಟಿ ಒಳಗೆ ಬಂದರೆ ಕ್ಷತ್ರೋಜಿಯವರ ಸಮಾಧಿ ಮತ್ತು ಅದರ ಮುಂದೆ ತುಳಸೀ ಕಟ್ಟೆಯ ಗದ್ದುಗೆಯಿದ್ದು ಅದು ನರಸೂಬಾಯಿಯವರ ವೃಂದಾವನವಿದೆ. ಅಲ್ಲಿರುವ ಬೇವಿನ ಗಿಡದ ಕೆಳಗೆ ಭೂತಪೀಡೆಯಾದವರನ್ನು ತಂದರೆ ಪಿಶಾಚಿ ಬಾಧೆ ತೊಲಗುವುದು. ಅದರ ಮುಂದೆ ಗುಡಿಯ ಕಟ್ಟೆಯ ಪಟಾಂಗಣವಿದೆ. ಬಾಗಿಲನ್ನು ದಾಟಿ ಒಳ ಸೇರಿದರೆ ಚಾಂಗದೇವರ ಗದ್ದುಗೆಯಿದೆ. ಅದರ ಮೇಲೆ ಅವರ ಆಯುಧಗಳು, ಕುದುರೆ, ಹುಲಿ ಮೂರ್ತಿಗಳು, ಪಂಜಾಗಳು, ಭಕ್ತರು ಕೊಟ್ಟ ಬೆಳ್ಳಿ-ಬಂಗಾರದ ತೊಟ್ಟಿಲು ಸರಿಗೆಗಳಿವೆ. ಈ ಗದ್ದುಗೆಯ ಮುಂದೆ ನೆಲಮನೆಯ ಒಳಗಡೆ ನರಸಿಂಹಮೂರ್ತಿ ಇದೆ. ಕ್ಷತ್ರೋಜಿ ದಿನಾಲು ತಮ್ಮ ೫ ಹನಿ ರಕ್ತ ತರ್ಪಣ ಮಾಡುತ್ತಿದ್ದರು. ಮುಂದೆ ತಮ್ಮ ವಂಶಜರು ರಕ್ತದಾನ ಮಾಡಲಿಕ್ಕಿಲ್ಲವೆಂದು ಸಂಗಮಮರಿ ಕಲ್ಲಿನ ಬಾಗಿಲ ಮಾಡಿಸಿ ಮೂರ್ತಿ ಕಾಣದಂತೆ ಕೋಣೆಯ ಬಾಗಿಲು ಮುಚ್ಚಿದರಂತೆ ಈ ಕ್ಷೇತ್ರದಲ್ಲಿ ಹಿಂದೆ ನೂರಾರು ಕುರಿ-ಕೋಣ ಕಡಿಯುತ್ತಿದ್ದರು. ಈ ಹಿಂದೆ ಚಾಂಗದೇವರಿಗೆ ಶಿಷ್ಯರಾಗಿದ್ದ ಠಕ್ಕರು ಅವರ ಶಾಪದಂತೆ ಕುರಿಗಳಾಗಿ ಹುಟ್ಟಿಕೊಳ್ಳಲ್ಪಡುವರೆಂದು ಪ್ರತೀತಿ. ಸ್ವಾತಂತ್ರ್ಯನಂತರ ಸರಕಾರದವರು ರಕ್ತಪಾತ ನಿಲ್ಲಿಸಿದರು. ಪೂಜೆಯ ನೀರನ್ನು ತುಳಸೀಕಟ್ಟೆಯ ಮಣ್ಣಿನಲ್ಲಿ ಹಾಕಿ ಲೇಪಿಸಲು ಚರ್ಮರೋಗಗಳು ಅಳಿಯುವವು. ಪ್ರತಿವರ್ಷ ಫಾಲ್ಗುಣಮದ್ಯ ಪಂಚಮಿಗೆ ದೊಡ್ಡ ಜಾತ್ರೆಯಾಗುವುದು, ಅಂದು ದೇವರ ಝುಂಡಾ, ಹಸ್ತಗಳನ್ನು ಊರ ಪ್ರಮುಖರು, ಅರ್ಚಕರು ವಾದ್ಯದೊಂದಿಗೆ, ಛತ್ರ ಚಾಮರಗಳಲ್ಲಿ ಮೆರವಣಿಗೆ ತಂದು ಊರಿನಿಂದ ಅರ್ಧ ಮೈಲಿನಲ್ಲಿರುವ ಬೆಣ್ಣೆ ಹಳ್ಳದಲ್ಲಿ ಸ್ನಾನ ಮಾಡಿಸಿ, ನೀರನ್ನು ತಂದು ಅದೇ ದಿನ ರಾತ್ರಿ ಆ ನೀರನ್ನು ಹಣತೆಯಲ್ಲಿ ಹಾಕಿ ಬತ್ತಿಯನ್ನಿಟ್ಟರೆ ದೀಪದಂತೆ ಉರಿಯುವುದು, ಇದಕ್ಕೆ ಮುಸ್ಲಿಂರು ಉರುಸು (ಆರಾಧನೆ) ಎನ್ನುವರು. ಭಕ್ತರು ಬೆಣ್ಣೆಹಳ್ಳದಲ್ಲಿ ಮಿಂದು ದೇವರಿಗೆ ಸಕ್ಕರೆ ಊದು ಕೊಟ್ಟು, ದೇವರಿಗೆ ಕಾಣಿಕೆ ಕೊಡುವ ತೀರ್ಥ ಅಂಗಾರ ಪಡೆದು ನಿರೋಗಿಗಳಾಗಿರುವರು. ಪ್ರತಿ ಗುರುವಾರ ವಿಶೇಷ ಪೂಜೆಯಿರುವುದು. ಜಾತ್ರೆಯ ವ್ಯವಸ್ಥೆಯನ್ನು ಧಾರವಾಡ ಜಿಲ್ಲೆಯ ಲೋಕಲ್ ಬೋರ್ಡಿನವರೂ, ನಂತರ ನವಲಗುಂದ ಮುನಸಿಪಾಲ್ಟಿಯವರು ಮಾಡುತ್ತಿದ್ದು ಈಗ

ಸರಕಾರವೇ ಮಾಡುತ್ತದೆ. ಜಾತ್ರೆಗೆ ಭಾರತದ ಮೂಲೆ ಮೂಲೆಗಳಿಂದ ಹಿಂದು, ಮುಸ್ಲಿಂ, ಕ್ರೈಸ್ತ, ಬೌದ್ಧ, ಭಕ್ತರು ಬರುವರು. ಅದು ಹೋಳಿಹುಣ್ಣಿಮೆಯಾಗಿ ೩ನೆಯ ದಿನದಿಂದ ೫ ದಿವಸ ದೊಡ್ಡ ಪ್ರಮಾಣದಲ್ಲಿ, ನಂತರ ಯುಗಾದಿಯವರೆಗೆ ಸಣ್ಣ ಜಾತ್ರೆ ನಡೆಯುವುದು. ಈ ಪವಿತ್ರವಾದ ಜಾತ್ರೆಯಲ್ಲಿ ತೊನ್ನು ರೋಗಿಗಳು, ಸಂತಾನ ಹೀನರು, ಕುಷ್ಟರೋಗಿಗಳು ಬಂದು ಸೇವೆ ಮಾಡಿ ಇಷ್ಟಾರ್ಥ ಪೂರೈಸಿಕೊಳ್ಳುವರು.

**೪.೩.೩. ನಂಬಿಕೆ, ವಿಧಿ-ನಿಷೇಧಗಳು**

ಜನಪದ ನಂಬಿಕೆ ವಿಧಿ-ನಿಷೇಧಗಳು ಪರಂಪರಾನುಗತವಾಗಿ ಅಂಗೀಕೃತವಾದ ಪರಿಕಲ್ಪನೆಗಳು. ನಂಬಿಕೆ, ವಿಧಿ-ನಿಷೇಧಗಳು ಅಂಗೀಕೃತವಾದಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧವಿದೆ. ಅದು ಸೂಚನೆ, ನಿಯಮ, ವಿಧಿ-ನಿಷೇಧ-ನಿರ್ದೇಶನ, ಆಗ್ರಹ, ಆದೇಶ ಹಾಗೂ ಆಜ್ಞೆಗಳ ರೂಪದಲ್ಲಿ ನಿತ್ಯ ಆಲೋಚನೆ ರೂಢಿ ಜೀವನಾಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಕೂಡಿದ್ದು, ಆ ಮೂಲಕ ಕ್ರಿಯಾ ರೂಪವನ್ನು ತಾಳುತ್ತದೆ. ಈ ಮೂಲಕ ಹುಟ್ಟಬರಬಹುದಾದಂತಹ ನಂಬಿಕೆಗಳು ಯಮನೂರಿನ ಜನಪದರಲ್ಲಿ ಹೇರಳವಾಗಿ ಸಿಗುತ್ತವೆ. ಸಾಮಾಜಿಕ ನೆಲೆಗಟ್ಟಿನ ಮೇಲೆ ರೂಪುಗೊಂಡ ನಂಬಿಕೆಗಳಿಗೆ ತಾತ್ವಿಕ, ಸಾಮಾಜಿಕ ಹಿನ್ನೆಲೆಯು ಧಾರ್ಮಿಕ ತಳಹದಿಯೂ ಇರುತ್ತದೆ. ನಾವು ಜನಪದ ಸಂಸ್ಕೃತಿಯ ಅಂತರಾಳದ ಜೀವಂತ ಮಿಡಿತವನ್ನು ಈ ನಂಬಿಕೆಗಳಲ್ಲಿ ಗುರುತಿಸಬಹುದು.

ಈ ನಂಬಿಕೆಗಳನ್ನು ಐತಿಹಾಸಿಕವಾಗಿ ಗಮನಿಸಿದರೆ ಬಹುತೇಕ ನಂಬಿಕೆಗಳು ಪ್ರಕೃತಿ ಮೂಲವಾಗಿ ಹುಟ್ಟಿಕೊಂಡವುಗಳು. ಇಂತಹ ನಂಬಿಕೆಗಳನ್ನು ಹಲವು ಭಾಗಗಳಾಗಿ ವರ್ಗೀಕರಿಸಬಹುದು. ಒಂದು ಮಾನವ ಶರೀರ ಮತ್ತು ಜನಪದ ವೈದ್ಯಕ್ಕೆ ಸಂಬಂಧಿಸಿದ್ದು ನಂತರ ಜೀವನ ಚಕ್ರ, ಉದಾಹರಣೆಗೆ ಹುಟ್ಟು, ವಿವಾಹ ಮತ್ತು ಸಾವು. ಹಾಗೆಯೇ ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳು, ಇದರಲ್ಲಿ ಧಾರ್ಮಿಕ ಪ್ರವಾಸ, ವ್ಯವಹಾರ ಈ ಮೊದಲಾದವು ಒಳಗೊಂಡಿರುತ್ತವೆ. ಅನಂತರ ವ್ಯವಸಾಯಕ್ಕೆ ಸಂಬಂಧಿಸಿದ ನಂಬಿಕೆಗಳು, ಜೊತೆಗೆ ಹವಾಮಾನ, ಸಸ್ಯ ಬೆಳೆಸುವುದು ಮತ್ತು ಪ್ರಾಣಿಸಾಕಾಣಿಕೆ, ಬೇಟೆ ಮತ್ತು ಮೀನು ಹಿಡಿಯುವುದು ಬೇರೆ ಬೇರೆ ವರ್ಗಗಳಾಗಿ ನಿಲ್ಲುತ್ತವೆ.

ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ನಂಬಿಕೆಯೊಂದು ಅಂಗೀಕೃತವಾದಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಯು ಜನಪದರ ಜೀವನಾನುಭವದ ಉತ್ಪನ್ನ. ಹೀಗಾಗಿ ಮಾನವನ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ಅದು ಸೂಚನೆ, ನಿಯಮ, ವಿಧಿ-ನಿಷೇಧ, ನಿರ್ದೇಶನ ಆಗ್ರಹ ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾಗಿದ್ದು, ಆ ಮೂಲಕ ಕ್ರಿಯಾರೂಪವನ್ನು ತಾಳುತ್ತವೆ. ಈ ಮೂಲಕ ಹುಟ್ಟಬಹುದಾದಂತಹ ನಂಬಿಕೆಗಳು ಯಮನೂರಿನ ಜನಪದರಲ್ಲಿ ಹೇರಳವಾಗಿ ಸಿಗುತ್ತವೆ.

ಇಂತಹ ಹಲವಾರು ನಂಬಿಕೆಗಳು ಯಮನೂರು ಪರಿಸರದಲ್ಲಿ ಹೇರಳವಾಗಿ ಸಿಗುತ್ತವೆ. ಅಂತಹವುಗಳಲ್ಲಿ ಕೆಲವುಗಳನ್ನು ಕ್ಷೇತ್ರಕಾರ್ಯದ ಮೂಲಕ ಪಟ್ಟಿ ಮಾಡಲಾಗಿದೆ.

೧. ಮಗಳನ್ನು ಮಂಗಳವಾರ ಗಂಡನಮನೆಗೆ, ಸೊಸೆಯನ್ನು ಶುಕ್ರವಾರ ತವರುಮನೆಗೆ ಕಳಿಸಬಾರದು.

೨. ಶುಕ್ರವಾರ, ಮಂಗಳವಾರ, ಮತ್ತು ಅಮವಾಸ್ಯೆಯ ದಿವಸ ಹೊರಗಿನವರಿಗೆ ಹಣಕೊಡಬಾರದು, ಲಕ್ಷ್ಮಿ ಹೊರಗೆ ಹೋಗುತ್ತಾಳೆ ಎಂಬ ನಂಬಿಕೆ.

೩. ಬರೀ ತೊಟ್ಟಿಲನ್ನು ತೂಗಬಾರದು, ಮಕ್ಕಳಿಗೆ ಹೊಟ್ಟೆ ನೋವು ಬರುತ್ತದೆ.

೪. ಯಾರಾದರೂ ಮಲಗಿದಾಗ ದಾಟಬಾರದು, ಬಾಣಂತಿಯರು ಕಾಲು ಚಾಚಿಕೊಂಡು ಕುಳಿತಾಗ ದಾಟಬಾರದು. ದಾಟಿದರೆ ದಾಟಿದ ರೀತಿಯಲ್ಲಿ ವಾಪಸ್ ಬರಬೇಕು.

೫. ಮಗು ಮಲಗಿದಾಗ ಸುತ್ತಲೂ ಕುಳಿತುಕೊಳ್ಳಬಾರದು. ಶವದ ಮುಂದೆ ಕುಳಿತಂತಾಗುತ್ತದೆ.

೬. ದೀಪ ಆರಿಸು ಎನ್ನಬಾರಿಸು, ನಂದಿಸು, ಶಾಂತಮಾಡು ಎನ್ನಬೇಕು.

೭. ಹೋಗುತ್ತೇನೆ ಎನ್ನಬಾರದು, ಹೋಗಿ ಬರುತ್ತೇನೆ ಎನ್ನಬೇಕು.

೮. ಹುಟ್ಟಿದ ದಿನ, ಮಂಗಳವಾರ, ಅಮವಾಸ್ಯೆ, ಹಬ್ಬದಂದು ಮುಖಕ್ಷೌರ ಕಟಿಂಗ್ ಮಾಡಿಸಿಕೊಳ್ಳಬಾರದು.

೯. ಹೊಸ್ತಿಲಿನ ಮೇಲೆ ಸೀನುವುದು, ಕಾಲಿನಿಂದ ತುಳಿಯುವುದು ಮಾಡಬಾರದು.

೧೦. ಅಕ್ಕಿ ಆರಿಸುವಾಗ ಅಕ್ಕಿ ತಿನ್ನಬಾರದು. ತಿಂದರೆ ಅವರ ಮದುವೆಯಲ್ಲಿ ಮಳೆ ಬರುವದು.

೧೧. ಗರ್ಭಿಣಿಯರು ಶವಯಾತ್ರೆಯನ್ನು ನೋಡಬಾರದು.

೧೨. ಗರ್ಭಿಣಿಯರು ಗ್ರಹಣ ಕಾಲದಲ್ಲಿ ತರಕಾರಿ, ಹಣ್ಣು ಕೊಯ್ಯಬಾರದು. ಹಾಗೆ ಮಾಡಿದರೆ ಅಂಗವಿಕಲ ಮಕ್ಕಳು ಹುಟ್ಟುತ್ತವೆ.

೧೩. ಬೆಕ್ಕು ಕೆಟ್ಟ ಧ್ವನಿಯಲ್ಲಿ ಕೂಗಬಾರದು, ಹಾಗೆ ಮಾಡಿದರೆ ಅವುಗಳನ್ನು ಓಡಿಸಬೇಕು.

೧೪. ಬೆಕ್ಕು ಎಡಕ್ಕೆ ಹೋಗಬಾರದು.

೧೫. ಬೆಕ್ಕು ಮುಖ ತಿಕ್ಕಿಕೊಂಡರೆ, ಕಾಗೆ ಮನೆಯ ಮುಂದೆ ಕುಳಿತು ಕಾ ಕಾ ಎಂದು ಕೂಗಿದರೆ ಮನೆಗೆ ನೆಂಟರು ಬರುತ್ತಾರೆ.

೧೬. ರಾತ್ರಿ ಹಾಲಿಲ್ಲದೆ ಹೆಪ್ಪಿಗೆ ಹೋಗಬಾರದು.

೧೭. ಯಾರಾದರೂ ಗಿಣ್ಣದ ಹಾಲು ಕೊಟ್ಟರೆ ಕಾಲಿ ಪಾತ್ರೆ ವಾಪಸ್ ಕೊಡದೆ, ಅಕ್ಕಿ, ಜೋಳ, ತೌಡು, ಬೆಲ್ಲ ಹಾಕಿ ಕೊಡಬೇಕು.

೧೮. ಹೊಸ್ತಿಲ ಮೇಲೆ ಕುಳಿತುಕೊಳ್ಳಬಾರದು, ಸಾಲ ಹೆಚ್ಚಾಗುತ್ತದೆ.

೧೯. ಬಿಸಿಲಿನಲ್ಲಿ ಮಳೆ ಬಂದರೆ ನರಿ ಮದುವೆ ಆಗುತ್ತದೆ.

೨೦. ಶವಯಾತ್ರೆ ಎದುರು ಬಂದರೆ ಒಳ್ಳೆಯದು.

೨೧. ಶವಸಂಸ್ಕಾರ ಮುಗಿಸಿ ಬರುವವರ ಎದುರು ಬರಬಾರದು. ಹಾಗೆ ಬರುವುದನ್ನು ಕಂಡಲ್ಲಿ ಪಕ್ಕ ಸರಿದುಕೊಂಡು ನಿಂತುಕೊಳ್ಳಬೇಕು.

೨೨. ಉತ್ತರ ದಿಕ್ಕಿಗೆ ತಲೆ ಇಟ್ಟು ಮಲಗಬಾರದು

೨೩. ಬೆಳಿಗ್ಗೆ ಎದ್ದ ತಕ್ಷಣ ಎರಡು ಅಂಗೈಗಳನ್ನು ಉಜ್ಜಿಕೊಂಡು ನೋಡಬೇಕು. ದೇವರ ಫೋಟೋ, ತಂದೆ ತಾಯಿಯರನ್ನು ಮೊದಲು ನೋಡಬೇಕು.

೨೪. ಮದುವೆಯಾದ ವರ್ಷ ಆಷಾಡ ಮಾಸದಲ್ಲಿ ಅತ್ತೆ ಸೊಸೆ ಒಂದೇ ಮನೆಯಲ್ಲಿ ಇರಬಾರದು.

೨೫. ಶ್ರಾವಣಮಾಸದಲ್ಲಿ ತಲೆ ಕೂದಲು ಕ್ಷೌರ ಮಾಡಿಸಬಾರದು.

೨೬. ಚಿಕ್ಕ ಮಕ್ಕಳು ಮಲಗಿರುವಾಗ ಮುತ್ತು ಕೊಡಬಾರದು.

೨೭. ತಂದೆ ತಾಯಿ ಇರುವವರು, ಬಸುರಿ ಹೆಂಗಸಿನ ಗಂಡ ಶವ ಸಂಸ್ಕಾರಕ್ಕೆ ಹೋಗಬಾರದು

೨೮. ಊಟ ಮಾಡುವಾಗ ಮೈ ಮುರಿಯಬಾರದು, ಊಟದ ತಟ್ಟೆಯನ್ನು ದಾಟಬಾರದು. ಊಟದ ಮೇಲೆ ಸಿಟ್ಟು ಮಾಡಿ ಎದ್ದು ಹೋಗಬಾರದು.

೨೯. ಗರ್ಭಿಣಿಯರು ಹಳ್ಳ ದಾಟಬಾರದು ಅನಿವಾರ್ಯವಾದಲ್ಲಿ ನದಿಗೆ ಬಾಗಿನ ಕೊಟ್ಟು ದಾಟಬೇಕು.

೩೦. ಬಂಗಾರ ಸಿಕ್ಕರೆ ಬಂಗು ಬಿಡಿಸುತ್ತದೆ. ಆದಕಾರಣ ಅದನ್ನು ಐನೋರಿಗೆ ದಾನ ಮಾಡಬೇಕು.

೩೧. ಉಪ್ಪು ಕರಿಯಬಾರದು ಉಪ್ಪನ್ನು ಬಿಸಾಕಬಾರದು

೩೨. ಯಾರಿಗಾದರು ನೀರು ಚಿಮುಕಿಸಬಾರದು ಹಾಗೆ ಮಾಡಿದಲ್ಲಿ ಒಳಿತು ಎನ್ನಬೇಕು. ಇಲ್ಲದಿದ್ದರೆ ಉಗುರು ಸುತ್ತು ಆಗುತ್ತದೆ.

೩೩. ಬಿಕ್ಕಳಿಕೆ ಬಂದರೆ ಯಾರೋ ನೆನಪಿಸಿಕೊಳ್ಳುತ್ತಿದ್ದಾರೆ ಎಂದರ್ಥ

೩೪. ಗರ್ಭಿಣಿ ನೆರಳು ನಾಗರ ಹಾವಿಗೆ ಬೀಳಬಾರದು ನೆರಳು ಬಿದ್ದರೆ ಅವಳ ಹೆರಿಗೆ ಆಗುವತನಕ ಹಾವಿಗೆ ಕಣ್ಣು ಕಾಣಿಸುವುದಿಲ್ಲ.

೩೫. ದೊಡ್ಡ ಕಿವಿ ಇದ್ದರೆ, ಅಂಗಾಲು ಟೊಳ್ಳು ಇದ್ದರೆ, ಕೈ ಬೆರಳುಗಳನ್ನು ಜೋಡಿಸಿದಾಗ ಸಂದು ಕಾಣಿಸದಿದ್ದರೆ ಶ್ರೇಷ್ಠ ಅವರು ಧನಿಕರಾಗುತ್ತಾರೆ.

೩೬. ದೇವಸ್ಥಾನದಲ್ಲಿ ದರ್ಶನದ ನಂತರ ಸ್ವಲ್ಪ ವೇಳೆ ಕುಳಿತು ಬರಬೇಕು.

೩೭. ಶುಭ ಕಾರ್ಯಕ್ಕೆ ಮೂವರು ಹೋಗಬಾರದು, ಹೋಗುವುದು ಅನಿವಾರ್ಯವಾದಲ್ಲಿ ಜೇಬಿನಲ್ಲಿ ಅಡಿಕೆ ಬೆಟ್ಟೆ ಇಟ್ಟುಕೊಳ್ಳಬೇಕು. ಜೊತೆಗೆ ಗಣಪತಿ ಬಂದಹಾಗೆ.

೩೮. ಸಂಜೆ ದೀಪ ಹಚ್ಚಿದ ಮೇಲೆ ಕಸ ಬಳಿಯುವುದು, ತಲೆ ಬಾಚಿಕೊಳ್ಳುವುದು ಊಟ ಮಾಡುವುದು ನಿಷೇಧ.

೩೯. ಶುಭ ಕಾರ್ಯಕ್ಕೆ ಹೋಗುವಾಗ ಬೆಕ್ಕು, ವಿಧವೆ, ಹಾರಿ, ಗುದ್ಲಿ, ಖಾಲಿಕೊಡ, ಕ್ಷೌರಿಕ, ಹಾವು ಒಂಟಿ ಬ್ರಾಹ್ಮಣ, ಎದಿರು ಅಥವಾ ಅಡ್ಡಬರಬಾರದು.

೪೦. ಎಲ್ಲಿಗಾದರು ಹೋಗುವಾಗ ತುಂಬಿದ ಕೊಡ ಎದುರು ಬಂದರೆ ಒಳ್ಳೆಯ ಶಕುನ.

೪೧. ಎಲ್ಲಿಗಾದರು ಹೋಗುವಾಗ ಮುಂಗುಸಿ ಅಡ್ಡ ಬಂದರೆ, ರತ್ನಪಕ್ಷಿ ಕಂಡರೆ, ಆಕಳು ಎದುರು ಬಂದರೆ ಶುಭ ಶಕುನ.

೪೨. ದೇವರಿಗೆ ಬೆನ್ನು ತೋರಿಸುತ್ತಾ ಹೊರ ಬರಬಾರದು ಹಿಂಬದಿಯಲ್ಲಿ ನಾಲ್ಕು ಹೆಜ್ಜೆ ಹಿಂದೆ ಹೋಗಬೇಕು.

೪೩. ಶವ ಸಂಸ್ಕಾರ ಮುಗಿಸಿ ಬರುವಾಗ ಹಿಂದೆ ತಿರುಗಿ ನೋಡಬಾರದು.

೪೪. ಬಾಣಂತಿ, ಮದುಮಕ್ಕಳು ಬರಿ ಗಾಲಿನಿಂದ ಓಡಾಡಬಾರದು

೪೫. ಹೊರಗೆ ಹೋಗುವಾಗ ಎಲ್ಲಿಗೆ ಎಂದು ಕೇಳಬಾರದು

೪೬. ಕಟ್ಟಿಗೆ ಉರುವಲು ಒಲೆ ಒದರಿದರೆ ಯಾರಾದರೂ ಬರುತ್ತಾರೆ ಎಂಬ ಸೂಚನೆ.

೪೭. ತುಂಬಿದ ಕೊಡ ಕೈ ಜಾರಿ ಬಿದ್ದರೆ ಮಳೆ ಬರುವ ಸೂಚನೆ.

೪೮. ನಾಯಿ ಮುಗಿಲಿಗೆ ಮುಖ ಮಾಡಿ ಕೂಗಿದರೆ ಮಳೆ ಬರುವ ಸೂಚನೆ.

೪೯. ಚಂದ್ರನ ಸುತ್ತ ಕಣ ಕಟ್ಟಿದರೆ ಮಳೆ ಬರುವ ಸೂಚನೆ.

೫೦. ಮೈಮೇಲಿನ ಬಟ್ಟೆಯನ್ನು ಹೊಲಿಯಬಾರದು

೫೧. ಉಪ್ಪು ಕೈಯಿಂದ ಕೈಗೆ ಕೊಟ್ಟರೆ ಜಗಳವಾಗುತ್ತದೆ.

೫೨. ಬಾಳೆ ಎಲೆಯಲ್ಲಿ ಊಟ ಮಾಡುವವರು ಎಲೆ ತುದಿ ಬಾಗ ಎಡಕ್ಕೆ ಮಾಡಬೇಕು

೫೩. ಮುಸ್ಸಂಜೆ ಹೊತ್ತಲ್ಲಿ ಮಲಗಬಾರದು.

೫೪. ಗಂಡನ ತಟ್ಟೆಯಲ್ಲಿ ಹೆಂಡತಿ ಊಟ ಮಾಡಿದರೆ ಗಂಡನ ಪ್ರೀತಿ ಆಯಸ್ಸು ಹೆಚ್ಚಾಗುತ್ತದೆ.

೫೫. ಗಂಡನ ಊಟವಾದ ನಂತರ ಹೆಂಡತಿ ಊಟ ಮಾಡಬೇಕು

೫೬. ಹೊಸ ಮನೆಗೆ ಹೋಗುವಾಗ ಹಾಲು ಉಕ್ಕಿಸಿ, ಶಾಂತಿ ಮಾಡಿಸಿ ಹೋಗಬೇಕು.

೫೭. ಮೊದಲ ಬಾರಿಗೆ ಮಗುವನ್ನು ನೋಡಿದರೆ, ಮಗುವಿಗೆ ಏನಾದರೂ ಕೊಡಬೇಕು.

೫೮. ಒಂಟಿ ಕಾಲಿನಲ್ಲಿ ನಿಲ್ಲುವವರು ಕಾಲು ಅಲುಗಾಡಿಸುವುದು, ಕಾಲನ್ನು ಬೇರೆಯವರಿಗೆ ತಾಕಿಸುವುದು ಮಾಡಬಾರದು.

೫೯. ಮನುಷ್ಯರನ್ನು, ಆಕಳನ್ನು ಕಸಬರಿಗೆಯಿಂದ ಹೊಡೆಯಬಾರದು.

೬೦. ಮರದಿಂದ ಕೇರುವಾಗ ಅದರ ಗಾಳಿ ಗಂಡಸರಿಗೆ ತಾಗಬಾರದು.

೬೧. ಮದುವೆಯಾದ ವರ್ಷ ದಂಪತಿಗಳ ಸಮೇತ ಜಾತ್ರೆ ನೋಡಬೇಕು.

೬೨. ಬೆಳಗಿನ ಕನಸು ನನಸಾಗುತ್ತದೆ.

೬೩. ಊಟ ಮಾಡುವಾಗ ಮಾತನಾಡುವುದು, ಅಳುವುದು ಮಾಡಬಾರದು.

೬೪. ವೀಳ್ಯದೆಲೆ ಬೋರಲಾಗಿ ಬಿದ್ದರೆ ತಿನ್ನಬಾರದು.

೬೫. ಅಡಿಕೆ ಕೈಯಿಂದ ಜಾರಿ ಬಿದ್ದರೆ ಅದು ಸಿಗುವತನಕ ಹುಡುಕಬೇಕು ಇಲ್ಲವಾದರೆ ಹುಡುಕುವುದನ್ನು ಬಿಟ್ಟುಬಿಡಬೇಕು

೬೬. ಆರು ಬೆರಳು ಇದ್ದವರು ಅದೃಷ್ಟವಂತರು

೬೭. ಮುತ್ತೈದೆಯಾದವರು ಗಾಜಿನ ಬಳೆ, ಮಾಂಗಲ್ಯ ಇಲ್ಲದೆ ಬಹಳ ಹೊತ್ತು ಇರಬಾರದು

೬೮. ರಾತ್ರಿ ಹೊತ್ತು ಸುಣ್ಣ, ಉಪ್ಪು ಹೊರಗಡೆ ಕೊಡಬಾರದು

೬೯. ಬೆಕ್ಕನ್ನು ಹೊಡೆಯುವುದು, ಸಾಯಿಸುವುದು ಮಾಡಬಾರದು

೭೦. ಹಲ್ಲಿ ಸಾಯಿಸಬಾರದು

೭೧. ಹಲ್ಲಿ ಮೈಮೇಲೆ ಬಿದ್ದರೆ ಕೈ ಕಾಲು ಮುಖ ತೊಳೆದುಕೊಂಡು ತುಳಸಿ ಕಟ್ಟೆಗೆ ಊದಿನಕಡ್ಡಿ ಹಚ್ಚಿ ಬೆಳಗಿದರೆ ದೋಷವಿಲ್ಲ.

೭೨. ಹಾವುರಾಣಿಯನ್ನು ಮುಟ್ಟಿದರೆ ಹಣ ಸಿಗುತ್ತದೆ.

೭೩. ಮತ್ತೊಬ್ಬರೊಂದಿಗೆ ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ ಆಗ ಆಡಿದ ಮಾತು ನಿಜ ಎಂದರ್ಥ ಕೆಲವರು ಶಿವಶಿವ ಎಂದು ಹೇಳುತ್ತಾರೆ.

೭೪. ಗೂಬೆ ಮನೆಯ ಮುಂದೆ ಕುಳಿತು ಕೂಗಿದರೆ ಸಾವಿನ ಸೂಚನೆ

೭೫. ನಕ್ಷತ್ರ ಬಿದ್ದರೆ ಗಣ್ಯರು ಸಾಯುವ ಸೂಚನೆ ಇದನ್ನು ನೋಡಿದವರು ನೆಲಕ್ಕೆ ಉಗುಳಬೇಕು.

೭೬. ಶಿವಗಣಾರಾಧನೆ ನಿಧನ ವಾರ್ತೆ ಇರುವ ಪತ್ರವನ್ನು ಓದಿದ ಮೇಲೆ ಹರಿದು ಹಾಕಬೇಕು.

೭೭. ನಿಧನದ ವಿಷಯ ತಿಳಿಸುವ ಪತ್ರ ಬರೆದರೆ ಪತ್ರದ ನಾಲ್ಕು ಮೂಲೆಗೆ ಮಸಿ ಹಚ್ಚಬೇಕು

೭೮. ಗಂಡಿಗೆ ತಲೆಯಲ್ಲಿ ಎರಡು ಸುಳಿ ಇದ್ದರೆ ಅವನಿಗೆ ಎರಡು ಮದುವೆ ಯೋಗ ಇದೆ ಎಂಬ ನಂಬಿಕೆ

೭೯. ನಾಲಿಗೆಯ ಮೇಲೆ ಮಚ್ಚೆ ಇದ್ದರೆ ಅವರು ಆಡಿದ ಮಾತು ನಿಜವಾಗುತ್ತದೆ.

೮೦. ಮೇಲಿಂದ ಮೇಲೆ ಹೆಣ್ಣು ಮಕ್ಕಳು ಹುಟ್ಟುತ್ತಿದ್ದರೆ ಸಾಕು ಸಾವಿತ್ರಿ ಬೇಕು ಬೆನಕಪ್ಪ ಎಂದು ಹೆಸರಿಟ್ಟರೆ ಮುಂದಿನ ಮಗು ಗಂಡಾಗುತ್ತದೆ.

೮೧. ಮನೆಯ ಮುಂದೆ ತುಳಸಿ ಗಿಡವಿದ್ದರೆ ಕಾಯಿಲೆಗಳು ಬರುವುದಿಲ್ಲ.

೮೨. ಹೆಣ್ಣಿಗೆ ಎಡಗಣ್ಣು, ಗಂಡಿಗೆ ಬಲಗಣ್ಣು ಹಾರಿದರೆ ಒಳ್ಳೆಯದು

೮೩. ಹೆಂಗಸರು ಅವಳಿ ಬಾಳೆಹಣ್ಣು ತಿನ್ನಬಾರದು.

೮೪. ರಾತ್ರಿ ಹೊತ್ತಲ್ಲಿ ಗುಡಿಸಿದ ಕಸ ಹೊರಗೆ ಚೆಲ್ಲಬಾರದು ಲಕ್ಷ್ಮಿ ಹೊರಗೆ ಹೋಗುತ್ತಾಳೆ.

೮೫. ಯಾವುದೇ ಶುಭ ಅಶುಭ ಕಾರ್ಯಗಳಿಗೆ ಪುರೋಹಿತರಿಂದ, ಸ್ವಾಮಿಗಳಿಂದ ಪಂಚಾಂಗ ಕೇಳಿಸಿ ಆ ಪ್ರಕಾರ ಮಾಡಬೇಕೆಂಬ ನಂಬಿಕೆ ಇದೆ.

೮೬. ಬೆಳಿಗ್ಗೆ ಏಳುವಾಗ ಬಲ ಮಗ್ಗುಲಲ್ಲಿ ಏಳಬೇಕು

೮೭. ದೇವರು ಬಲಭಾಗದಿಂದ ಹೂವು ಕೊಟ್ಟರೆ ಕೆಲಸ ಆಗುತ್ತದೆ. ಎಡಭಾಗದಿಂದ ಕೊಟ್ಟರೆ ಕೆಲಸ ಆಗುವುದಿಲ್ಲಾ ಎಂಬ ನಂಬಿಕೆ

೮೮. ಮನೆಯಲ್ಲಿ ಯಾರಾದರೂ ಸತ್ತರೆ ಸತ್ತವರ್ಷವೇ ಮದುವೆ ನಡೆಯಬೇಕು ಇಲ್ಲದಿದ್ದರೆ ಮೂರು ವರ್ಷದವರೆಗೆ ಮದುವೆ ಮಾಡಲು ಬರುವುದಿಲ್ಲಾ

೮೯. ಕೈಯಲ್ಲಿ ಗರುಡ ರೇಖೆ ಇರುವವರನ್ನು ಕಂಡರೆ ಹಾವು ಹೆದರುತ್ತದೆ.

೯೦. ಮಗುವಿಗೆ ಮೇಲಿನ ಹಲ್ಲು ಮೊದಲು ಬಂದರೆ ಸೋದರಮಾವನಿಗೆ ಕೇಡು. ಪರಿಹಾರವಾಗಿ ಬೆಳ್ಳಿ ಬಟ್ಟಲಲ್ಲಿ ಎಣ್ಣೆ ಹಾಕಿ ಆ ಮಗುವಿನ ಮುಖ ನೋಡಬೇಕು.

೯೧. ನಾಗರಹಾವನ್ನು ಸಾಯಿಸಿದರೆ ಹಾಗೆ ಬಿಸಾಕಬಾರದು ಬಾಯಲ್ಲಿ ನಾಣ್ಯ ಇಟ್ಟು ಹಾಲು ಹಾಕಿ ಸುಡಬೇಕು

೯೨. ಮನೆಯೊಳಗೆ ಕಾಗೆ ಬರಬಾರದು

೯೩. ಬಸುರಿಯ ಬಯಕೆ ತೀರಸದಿದ್ದರೆ ಹುಟ್ಟುವ ಮಕ್ಕಳ ಕಿವಿ ಸೋರುತ್ತದೆ.

೯೪. ಯಾವುದೇ ಕೃಷಿ ಚಟುವಟಿಕೆಯು ಆರಂಭವಾಗುವ ಮೊದಲು ಹೊಲ್ಕಕ್ಕೆ ಹೋಗಿ ಕಾಯಿ ಒಡೆದು ಪೂಜೆ ಮಾಡಬೇಕು.

೯೫. ಪ್ರತಿ ಅಮವಾಸ್ಯೆಗೆ ಎತ್ತು, ಗೂದಿಲಿಗೆ ಕಾಯಿ ಒಡೆದು ಪೂಜೆ ಮಾಡಬೇಕು

೯೬. ನಾವು ಯಾರನ್ನಾದರೂ ಕುರಿತು ಮಾತನಾಡುವಾಗ ಅಲ್ಲಿಗೆ ಆ ವ್ಯಕ್ತಿ ಬಂದರೆ ಅವರಿಗೆ ನೂರು ವರ್ಷ ಆಯಸ್ಸು ಎಂದು ಹೇಳುತ್ತಾರೆ.

೯೭. ಉಪ್ಪಿನ ಕಾಯಿಯನ್ನು ಅಮವಾಸ್ಯೆಯ ದಿನ ರಾತ್ರಿ ಹೊತ್ತು, ಮಂಗಳವಾರ, ಶುಕ್ರವಾರ ತೆಗೆಯಬಾರದು.

೯೮. ತಂದೆಯಂತೆ ಮಗಳು, ತಾಯಿಯಂತೆ ಮಗ ಇದ್ದರೆ ಅದೃಷ್ಟಶಾಲಿಗಳು ಎಂಬ ನಂಬಿಕೆ ಇದೆ.

೯೯. ತುಂಬಿದ ಗಡಿಗೆ ಎದುರಾದರೆ ಶುಭ.

೧೦೦. ಬಲಿ ನೀಡುವ ಮೊದಲು ಬಲಿಯಾಗುವ ಪ್ರಾಣಿಯ ತಲೆಯ ಮೇಲೆ ನೀರು ಹಾಕಬೇಕು.

೧೦೧. ದೇವರ ಕೊಳದ ನೀರನ್ನು ಅಸಹ್ಯ ಪಡದೇ ಸ್ನಾನಮಾಡಬೇಕು

೧೦೨. ನೀರಿನಲ್ಲಿ ಮುಳಗಿದವರನ್ನು ಗಂಗಮ್ಮ ಮೂರು ಬಾರಿ ತೇಲಿಸಿ, ಮೂರು ಬಾರಿ ಮುಳಗಿಸಿ ಮಡಲಿಗೆ ಹಾಕಿಕೊಳ್ಳುತ್ತಾಳೆ.

೧೦೩. ಕೆರೆ ತುಂಬಿದಾಗ ಬಲಿ ಕೊಡಬೇಕು.

೧೦೪. ಸತ್ತ ಸ್ಥಳದಲ್ಲಿ ನೀರು ತುಂಬಿದ ಚಂಬು ಇಡಬೇಕು.

**ವಿಧಿ-ನಿಷೇಧಗಳು (TABOO)**

ಭಯ ಮತ್ತು ಭಾವನಾ ಮೂಲವಾದ ಒಂದು ನಂಬಿಕೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವಂತಹದ್ದು ಅಥವಾ ಬಲಗೊಳಿಸುವಂತಹದ್ದು ನಿಷೇಧ. ಇದನ್ನು ಮಾಡಬಾರದು. ಇದು ಕೆಡುಕು ಎನ್ನುವ ಸಾಮಾಜಿಕ ಧಾರ್ಮಿಕ ಪ್ರತಿಬಂಧಕವೇ ನಿಷಿದ್ಧ (ಟಾಬೂ). ಹೀಗಾಗಿ ಲಿಖಿತ ಕಾನೂನನ್ನೂ ಮೀರಿಸುವಂತಹ ಸಶಕ್ತಿ ನಿಬಂಧನೆಯಾಗಿ ನಿಷೇಧ ಕಾರ್ಯನಿರ್ವಹಿಸುತ್ತದೆ. ಪ್ರೇಸರ್ ಮತ್ತು ದೇ ಜವರೇಗೌಡ ಅವರು "ನಿಷೇಧದ ಮೂಲ ಮಾತಿನಲ್ಲಿದೆ" ಎಂದು ಗುರುತಿಸಿದ್ದಾರೆ. ಮಾತಿನಲ್ಲಿ ಸಕಾರಾತ್ಮಕ ಆಚರಣೆಗಳಿರುವಂತೆ ನಕಾರಾತ್ಮಕವೂ ಉಂಟು. ಸಕಾರಾತ್ಮಕವಾದುದನ್ನು ವಿಧಿಗಳೆಂದೂ, ನಕಾರಾತ್ಮಕವಾದುದನ್ನು ನಿಷೇಧಗಳೆಂದೂ ಕರೆಯಬಹುದು. ಇಲ್ಲಿನ ಕೆಲವು ನಿಷೇಧಗಳನ್ನು ಸಮುದಾಯಗಳಲ್ಲಿ ಪಾಲಿಸದೇ ಹೋದ ವ್ಯಕ್ತಿಯನ್ನು "ಅಪವಿತ್ರ" ಎಂದು ಕರೆಯುತ್ತಾರೆ. ಮತ್ತು ಆತನಿಗೆ ಶಿಕ್ಷೆ ವಿಧಿಸಲಾಗುತ್ತದೆ. ಹೀಗೆ ಶಿಕ್ಷೆಗೊಳಗಾದ ವ್ಯಕ್ತಿ ಮತ್ತೆ ಪರಿಶುದ್ಧ ಎನಿಸುತ್ತಾನೆ. ನಿಷೇಧವನ್ನು ಉಲ್ಲಂಘಿಸಿದವ ಸಮಾಜದಲ್ಲಿ ವಿರುದ್ಧ ವ್ಯಕ್ತಿ ಆಗಿ ಬಿಡುವ ಸಾಧ್ಯತೆಯೂ ಇದೆ. ನಿಷೇಧ ಹಲವು ಉದ್ದೇಶ ಗುರಿಗಳನ್ನು ಇಟ್ಟುಕೊಂಡು ಬಳಕೆಗೆ ಬಂದಿದೆ.

**ನಿಷೇಧಗಳ ಸಕಾರಾತ್ಮಕ ಕ್ರಮಗಳು**

೧. ಊಟದ ತಟ್ಟೆಯನ್ನು ದಾಟಬಾರದು

೨. ರಾತ್ರಿ ವೇಳೆ ಊಟ ಮಾಡದೆ ಮಲಗಬಾರದು

೩. ಗರ್ಭಿಣಿ ರಾತ್ರಿ ಹೊತ್ತು ಹೊರಗೆ ಮಲಗಬಾರದು.

೪. ಊಟ ಮಾಡುವಾಗ ಅಳಬಾರದು.

೫. ಮುಸ್ಸಂಜೆ ಹೊತ್ತಲ್ಲಿ ಮಲಗುವುದಾಗಲಿ ಊಟ ಮಾಡುವುದಾಗಲಿ ಮಾಡಬಾರದು.

೬. ಮೈಮೇಲೆ ಬಟ್ಟೆ ಧರಿಸಿಕೊಂಡು ಅದೇ ಬಟ್ಟೆಯನ್ನು ಹೊಲಿಯಬಾರದು.

೭. ಉತ್ತರ ದಿಕ್ಕಿಗೆ ತಲೆ ಇಟ್ಟು ಮಲಗಬಾರದು.

೮. ರಾತ್ರಿ ದೀಪ ಶಾಂತವಾದಾಗ ಊಟ ಮಾಡಬಾರದು.

೯. ಬೇವಿನಕಟ್ಟಿಗೆಯಿಂದ ಅಡುಗೆ ಮಾಡಬಾರದು

೧೦. ಮನೆಯ ಎದುರಿಗೆ ಕಟಿಂಗ್ ಶಾಪ್ ಇರಬಾರದು

೧೧. ಕುಕ್ಕುರುಗಾಲಲ್ಲಿ ಕೂತು ಊಟ ಮಾಡಬಾರದು

ಕತ್ತಲಲ್ಲಿ ತೆಂಗಿನಮರ ಹತ್ತಬಾರದು. ಏಕೆ ಹೀಗೆ ಹೇಳುತ್ತಾರೆಂದರೆ- ಕತ್ತಲಲ್ಲಿ ಹುಳು ಹುಪ್ಪಟಗಳ ಕಾಟ ಇರುವುದರಿಂದ ಇದನ್ನು ನಿಷೇಧಿಸಿರಬೇಕು. ಊಟದ ತಟ್ಟೆಯನ್ನು ದಾಟಬಾರದು. ಊಟದ ತಟ್ಟೆಯನ್ನು ದಾಟಿದರೆ ಕಾಲಿನಲ್ಲಿರುವ ಮಣ್ಣು, ಧೂಳು ತಟ್ಟೆಯಲ್ಲಿ ಬಿದ್ದು ಅದನ್ನು ತಿಂದಂತಾಗುತ್ತದೆ ಎಂಬುದು ಒಂದು ಕಾರಣವಾದರೆ ಅದನ್ನು ದಾಟಿದರೆ ದೇವರು ಶಾಪ ಕೊಡುತ್ತಾನೆ ಎಂಬ ನಂಬಿಕೆ ನಿಷೇಧಕ್ಕೆ ಕಾರಣವಾಗಿದೆ.

**ಧರ್ಮಕ್ಕೆ ಪೂರಕವಾದ ನಿಷೇಧಗಳು**

೧. ದೇವರು ಇರುವ ದಿಕ್ಕಿಗೆ ಕಾಲು ಮಾಡಿ ಮಲಗಬಾರದು.

೨. ಮುಟ್ಟಾದಾಗ, ಸೂತಕ ಇದ್ದಾಗ ದೇವರನ್ನು ಮುಟ್ಟಬಾರದು.

೩. ದೇವರಿಗೆ ಮುಡಿಸುವ ಹೂವನ್ನು, ದೇವರಿಗೆ ಬೆಳಗುವ ಊದುಬತ್ತಿಯನ್ನು ಮೂಸಿ ನೋಡಬಾರದು.

೪. ತೆಂಗಿನಕಾಯಿಯನ್ನು ಕಾಲಿನಿಂದ ಒದೆಯಬಾರದು.

೫. ಒಲೆ, ಒರಳು, ಬೀಸುವ ಕಲ್ಲು, ಹೊಸ್ತಿಲು, ಗುಂಡುಕಲ್ಲು ಇವುಗಳನ್ನು ಕಾಲಿನಿಂದ ಒದೆಯಬಾರದು.

೬. ದೇವರಿಗೆ ಏರಿಸಿದ ಹೂವನ್ನು, ದೇವರ ಅಭಿಷೇಕದ ನೀರನ್ನು ತುಳಿಯಬಾರದು.

೭. ದೇವರ ಗುಡಿಯ ಎದುರಿಗೆ ಮನೆ ಕಟ್ಟಬಾರದು.

೮. ಗುಡಿಯಿಂದ ಮನೆಗೆ ಬಂದಾಗ ಕಾಲು ತೊಳೆಯಬಾರದು.

೯. ಗುಡಿಯಿಂದ ಬರುವಾಗ ಯಾರ ಮನೆಗೂ ಹೋಗದೇ ನೇರವಾಗಿ ಮನೆಗೇ ಬರಬೇಕು.

೧೦. ನಾಗರ ಪಂಚಮಿಯಂದು ಕರಿಗಡಬು ಮಾಡಬಾರದು.

೧೧. ಗ್ರಾಮದೇವತೆ ಜಾತ್ರೆ ಉತ್ಸವಗಳಲ್ಲಿ ಊರಾಚೆ ಹೋಗುವಂತಿಲ್ಲ.

೧೨. ಅಮವಾಸ್ಯೆ ದಿನದಂದು ಶುಭಕಾರ್ಯ ಮಾಡುವಂತಿಲ್ಲ.

**ಸ್ತ್ರೀ ಸಂಬಂಧಿ ನಿಷೇಧಗಳು**

೧. ಋತುಮತಿಯಾದ ಹೆಣ್ಣು ಮಕ್ಕಳು ೧೧ ದಿನಗಳವರೆಗೆ ಹೊರಗೆ ಹೋಗಬಾರದು.

೨. ಮುಟ್ಟಾದ ಸ್ತ್ರೀಯನ್ನು ೪-೫ ದಿವಸಗಳವರೆಗೆ ಯಾರೂ ಮುಟ್ಟುವಂತಿಲ್ಲ.

೩. ವಿಧವೆ ಯಾವುದೇ ಶುಭ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ.

೪. ದೇಹದ ಯಾವುದೇ ಅಂಗ ಊನವಾದ ಸ್ತ್ರೀಯು ಶುಭಕಾರ್ಯ ಮಾಡುವಂತಿಲ್ಲ.

೫. ಶುಕ್ರವಾರ ಸೊಸೆಯನ್ನು ತವರಿಗೆ, ಮಂಗಳವಾರ ಮಗಳನ್ನು ಗಂಡನ ಮನೆಗೆ ಕಳಿಸಬಾರದು.

೬. ಗಂಡ ಊಟ ಮಾಡುವವರೆಗೆ ಹೆಂಡತಿ ಊಟ ಮಾಡಬಾರದು.

ರಾತ್ರಿ ಹೊತ್ತಿನಲ್ಲಿ ಕಸ ಹೊರ ಹಾಕಬಾರದು ಲಕ್ಷ್ಮಿ ಹೋಗುತ್ತಾಳೆ ಎಂಬ ನಂಬಿಕೆ ಬಹು ಹಿಂದಿನಿಂದ ಬಂದ ನಂಬಿಕೆಯಾಗಿದೆ. ವಿದ್ಯುತ್ ಬೆಳಕಿನ ವ್ಯವಸ್ಥೆ ಇಲ್ಲದ ಆ ಕಾಲದಲ್ಲಿ ಸೂಕ್ಷ್ಮ ವಸ್ತುಗಳು ರಾತ್ರಿ ಕಣ್ಣಿಗೆ ಕಾಣುವುದಿಲ್ಲ. ಹಗಲಾದರೆ, ಸೂಕ್ಷ್ಮವಸ್ತು ಕಣ್ಣಿಗೆ ಕಾಣುತ್ತದೆ ಎಂಬ ಭಾವನೆಯಿಂದ ಈ ನಂಬಿಕೆ ಹುಟ್ಟಿ ಅದು ಧಾರ್ಮಿಕ ಸ್ವರೂಪ ಪಡೆದಿರಬೇಕು. ನಂಬಿಕೆಗಳು ಧಾರ್ಮಿಕ ಸ್ವರೂಪ ಪಡೆದಲ್ಲಿ ಶ್ರದ್ಧಾಪೂರ್ವಕವಾಗಿ ಪಾಲಿಸಲ್ಪಡುತ್ತವೆ ಎಂಬುದು ಇದರ ಉದ್ದೇಶ ಇರಬಹುದು. ಹೀಗೆ ಯಾವುದಾದರೊಂದು ಪ್ರಯೋಜನದ ದೃಷ್ಟಿಯಿಂದ, ವೈಜ್ಞಾನಿಕ ಹಿನ್ನಲೆಯಿಂದ ಹುಟ್ಟಿಕೊಂಡ ನಂಬಿಕೆಗಳು ಯಮನೂರಿನಲ್ಲಿ ನೂರಾರು ಇವೆ. ಇದಲ್ಲದೆ ಮಂತ್ರ, ಯಂತ್ರ, ತಂತ್ರ, ಪವಾಡ, ದೆವ್ವ, ಜೋತಿಷ್ಯ, ನಾಡಿಗ್ರಂಥ, ಗಣಿತಶಾಸ್ತ್ರ, ಪ್ರೇತಾತ್ಮ, ಗ್ರಹಗಳ ಪ್ರಭಾವ, ಪರಕಾಯ ಪ್ರವೇಶ, ಮೈಮೇಲೆ ದೇವರು ಬರುವುದು ಹೀಗೆ ಅನೇಕ ವಿಚಾರಗಳಲ್ಲಿ ಇವರದೇ ಆದ ನಂಬಿಕೆಗಳಿವೆ ಎಂಬುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ.

೧. ಮನೆಯೊಳಗೆ ಕಾಗೆ ಬರಬಾರದು

೨. ಯಾವುದೇ ಕೃಷಿ ಚಟುವಟಿಕೆಯು ಆರಂಭವಾಗುವ ಮೊದಲು ಹೊಲಕ್ಕೆ ಹೋಗಿ ಕಾಯಿ ಒಡೆದು ಪೂಜೆ ಮಾಡಬೇಕು.

೩. ನಾವು ಯಾರನ್ನಾದರೂ ಕುರಿತು ಮಾತನಾಡುವಾಗ ಅಲ್ಲಿಗೆ ಆ ವ್ಯಕ್ತಿ ಬಂದರೆ ಅವರಿಗೆ ನೂರು ವರ್ಷ ಆಯಸ್ಸು ಎಂದು ಹೇಳುತ್ತಾರೆ.

೪. ಮುಖಕ್ಕೆ ಮಸಿ ಹತ್ತಿದರೆ ಜಗಳವಾಡುತ್ತಾರೆ.

೫. ಮುತ್ತೈದೆಯರು ಬಿತ್ತನೆಯ ಕೆಲಸದಲ್ಲಿ ಭಾಗಿಯಾಗಬೇಕು.

೬. ತಳಿಕೆ ಹಾವುಗಳನ್ನು ನೋಡಬಾರದು.

೭. ಮನೆ ದೇವರಲ್ಲಿ ಮಗುವಿಗೆ ಜವಳ ತೆಗೆಸುವ ತನಕ ಕ್ಷೌರ ಮಾಡಿಸುವ ಹಾಗಿಲ್ಲ.

೮. ಋತುಮತಿಯಾದ ಹುಡುಗಿ, ಬಾಣಂತಿ ಮಲಗುವಾಗ ತಲೆದಿಂಬಿನ ಕೆಳಗೆ ಕುಡುಗೋಲು ನಿಂಬೆಹಣ್ಣು, ಕಸಬರಿಗೆ ಇಟ್ಟುಕೊಂಡು ಮಲಗಬೇಕು.

೯. ದೇವರಲ್ಲಿ ಹೂ ಕೇಳಿದಾಗ ಬಲಗಡೆಯಿಂದ ಕೊಟ್ಟರೆ ಕೆಲಸವಾಗುತ್ತದೆ.

೧೦. ಶುಕ್ರವಾರ ಮನೆಯ ಸೊಸೆ, ತವರು ಮನೆಗೆ ಹೋಗುವಂತಿಲ್ಲ, ಮಂಗಳವಾರ ಮಗಳು ಗಂಡನ ಮನೆಗೆ ಹೋಗುವಂತಿಲ್ಲ.

೧೧. ಮಾತನಾಡುವಾಗ ಹಲ್ಲಿ ಲೊಚಗುಟ್ಟಿದರೆ ಕೆಲಸವಾಗುತ್ತದೆ.

೧೨. ಕಸಬರಿಗೆ ಹಾಗೂ ಗುಂಡುಕಲ್ಲು ಕಾಲಿನಿಂದ ಒದೆಯಬಾರದು.

೧೩. ಬಂಜೆಯರು ಮಕ್ಕಳನ್ನು ಮುಟ್ಟಬಾರದು.

೧೪. ನೊಗಮುರಿದ ಎತ್ತುಗಳನ್ನು ಮತ್ತೊಮ್ಮೆ ಹೂಡಬಾರದು.

೧೫. ಮಲಗಿರುವ ಮಕ್ಕಳಿಗೆ ಅಲಂಕಾರ ಮಾಡಬಾರದು.

೧೬. ಮೊದಲು ಬಿದ್ದ ಹಲ್ಲನ್ನು ಸೆಗಣಿಯಲ್ಲಿಟ್ಟು ಗರ್ಭಿಣಿಯರ ಮನೆಯ ಮಾಳಿಗೆ ಮೇಲೆ ಎಸೆಯುವುದು.

೧೭. ಎಲ್ಲಿಗಾದರೂ ಹೊರಟಾಗ ಕತ್ತೆ ಅರಚಿದರೆ ಶುಭ.

೧೮. ಸ್ತ್ರೀಯರು ಹಣೆಯ ಮೇಲೆ ದುಂಡಾಗಿ ಕುಂಕುಮ ಹಚ್ಚಬೇಕು.

೧೯. ಗರ್ಭಿಣಿ ಸ್ತ್ರೀ ಕಾಲು ಚಾಚಿ ಕುಳಿತಿರಬೇಕು, ಮಡಚಿ ಕುಳಿತುಕೊಳ್ಳುವಂತಿಲ್ಲ.

೨೦. ಮನೆಯಲ್ಲಿ ಮಹಿಳೆ ಕಾಲು ಸವರಿಕೊಂಡು ಓಡಾಡಬಾರದು.

೨೧. ದೇವಿಯನ್ನು ನೆನೆಸಿಕೊಂಡರೆ ದುಷ್ಟಶಕ್ತಿಗಳು ನಮ್ಮ ಬಳಿ ಸುಳಿಯುವುದಿಲ್ಲ.

೨೨. ಮುಟ್ಟಾದವರು ಐದು ದಿವಸಗಳವರೆಗೆ ದೇವರ ಪೂಜೆ ಮಾಡುವ ಹಾಗಿಲ್ಲ, ದೇವಸ್ಥಾನಗಳಿಗೆ ಹೋಗುವ ಹಾಗಿಲ್ಲ.

೨೩. ಸೋಮವಾರ ದಿವಸ ಎತ್ತುಗಳನ್ನು ಕೃಷಿ ಕಾರ್ಯಕ್ಕೆ ಬಳಸಬಾರದು.

೨೪. ಮನೆಯ ಶುಭ ಕಾರ್ಯಗಳಲ್ಲಿ ಕರಿಕಂಬಳಿಯನ್ನು ಕರಿ ಮುಂದೆಮಾಡಿ ಹಾಸಬೇಕು.

೨೫. ಸ್ಥಿರ ಮುತ್ತೈದೆಯರು ಸತ್ತರೆ ಶವವನ್ನು ಸುಡಬೇಕು.

೨೬. ಸತ್ತಿರುವ ವ್ಯಕ್ತಿಯ ಉಡುದಾರ ತೆಗೆಯುವುದು.

೨೭. ಮೃತ ದೇಹವನ್ನು ಬಹಳ ಹೊತ್ತಿನ ತನಕ ಇಡುವಂತಿಲ್ಲ.

೨೮. ಸಾವು ಸಂಭವಿಸಿದ ಮನೆಗೆ ಸೂತಕ ಆವರಿಸುತ್ತದೆ.

೨೯. ಹೂವಿನ ಬುಟ್ಟಿ ಎದುರಾದರೆ ಕೆಲಸ ಸುಲಭವಾಗುತ್ತದೆ.

ಇಂತಹ ನಂಬಿಕೆ, ವಿಧಿ-ನಿಷೇಧಗಳು ಯಮನೂರು ಗ್ರಾಮದ ಪರಿಸರದಲ್ಲಿ ಕಂಡುಬರುತ್ತವೆ. ಇವುಗಳನ್ನು ಗಮನಿಸಿದಾಗ ಇವುಗಳು ಹಲವು ಉದ್ದೇಶ ಗುರಿಗಳನ್ನು ಇಟ್ಟುಕೊಂಡು ಹುಟ್ಟಿಕೊಂಡಿವೆ. ಸಾಮಾನ್ಯವಾಗಿ ಮುಖಂಡರು ಪೂಜಾರಿಗಳು ಮೊದಲಾದ ಪ್ರಮುಖರ ರಕ್ಷಣೆ ಮತ್ತು ಹಾನಿಗೆ ವಿರುದ್ಧವಾಗಿ ಅಂಶಗಳು, ನಿಗೂಢಶಕ್ತಿಗಳ ಪ್ರಭಾವದಿಂದ ಸಾಮಾನ್ಯ ಮಾನವರ ರಕ್ಷಣೆ, ಕೆಲವೊಂದು ಆಹಾರ ಸೇವನೆಯ ಮೂಲಕ ಉಂಟಾಗಬಹುದಾದ ಅಪಾಯಗಳನ್ನು ನಿವಾರಿಸುವುದು. ಒಟ್ಟಿನಲ್ಲಿ ಪರಂಪರಾನುಗತವಾಗಿ ಬಂದಿದೆ. ಭಾವುಕತೆಯಿಂದ ಇವುಗಳನ್ನು ಅಪ್ಪಿಕೊಳ್ಳುವ ಕುರುಡುತನ ಸಲ್ಲದು. ಅವುಗಳ ಪ್ರಸ್ತುತ ಅಗತ್ಯ ಅರ್ಥವನ್ನು ಶೋಧಿಸಿಯೇ ಅವುಗಳ ಆಯ್ಕೆ ಹಾಗೂ ಅಳವಡಿಕೆ ಆಗಬೇಕಾಗಿದೆ.

**೪.೩.೪. ಹರಕೆಗಳು**

ಹರಕೆ ಎಂಬ ಪದದ ಅರ್ಥವನ್ನು ಗಮನಿಸಿದಾಗ ಒಳ್ಳೆಯದಾಗಲಿ ಎಂಬ ಮಾತು, ಬೇಡಿಕೊಳ್ಳುವುದು

ಎಂಬ ಅರ್ಥವನ್ನು ಸೂಚಿಸುತ್ತದೆ. ಅಂದರೆ ಮಾನವನಿಗೆ ಒಂದಿಲ್ಲ ಒಂದು ರೀತಿಯಲ್ಲಿ ಚಿಂತನೆಗಳು, ತೊಂದರೆಗಳು, ಪದೇ ಪದೇ ಕಾಡುವ ರೋಗಗಳು, ಮಕ್ಕಳು ಮದುವೆಯಾಗದೆ ಇದ್ದರೆ, ಮಕ್ಕಳಾಗದೇ ಹೋದರೆ, ನೌಕರಿಸಿಗದೇ ಹೋದರೆ ಅಂತಹ ಸಂದರ್ಭದಲ್ಲಿ ಮಾನವ ದೇವರ ಮೊರೆ ಹೋಗುತ್ತಾನೆ. ಇವೆಲ್ಲಾ ಬಯಕೆಗಳನ್ನು ಈಡೇರಿಸಿದರೆ ನಾನು ನಿನ್ನಲ್ಲಿಗೆ ಬಂದು ಹರಕೆ ತೀರಿಸುತ್ತೇನೆ ಎಂದು ಬೇಡಿಕೊಳ್ಳುತ್ತಾನೆ. ಆ ಹರಕೆ ವಸ್ತುಗಳ ರೂಪದಲ್ಲಿರಬಹುದು, ಒಡವೆಗಳ ರೂಪದಲ್ಲಿರಬಹುದು, ವಿವಿಧ ತೆರನಾದ ಉಪವಾಸವ್ರತ ಆಚರಣೆ ಮಾಡುವುದರ ಮೂಲಕ ಹರಕೆ ತೀರಿಸುವ ಸಂಪ್ರದಾಯವಿದೆ.

ಭಾರತೀಯ ಜೀವನದಲ್ಲಿ ದೈವಭಕ್ತಿ ಪ್ರಧಾನವಾದದ್ದು. ಜನತೆಯಲ್ಲಿ ದೈವಭಕ್ತಿ, ಹಬ್ಬ ಹರಿದಿನ, ವ್ರತ, ಕತೆ, ಪುರಾಣಯಾತ್ರೆ, ಜಾತ್ರೆಗಳೆಲ್ಲ ಪೋಷಕವಾದವುಗಳೇ. ಹಬ್ಬದಾಚರಣೆಯನ್ನು ಒಬ್ಬರು ಮಾಡಿದಂತೆಯೇ ಇನ್ನೊಬ್ಬರು ಮಾಡುವುದಿಲ್ಲ. ಅವರು ಇನ್ನೊಬ್ಬರಿಗಿಂತ ಉತ್ತಮವಾಗಿ ಹಬ್ಬಗಳ ಆಚರಣೆ, ಉತ್ಸವ, ದೈವಾರಾಧನೆಯನ್ನು ಮಾಡಬೇಕೆಂಬ ಉತ್ಕಟ ಅಭಿಲಾಷೆಯನ್ನು ಎಲ್ಲಾ ಭಕ್ತಾದಿಗಳು ಹೊಂದಿರುತ್ತಾರೆ. ಗ್ರಾಮದ ಜನರು ತಮ್ಮ ತಮ್ಮ ಮನೆ ದೇವರು, ಕುಲದೇವರು, ಮೊರೆಹೊಕ್ಕ ದೇವರು ಕಾಡಿದ ಬೇಡಿದ ದೇವರು, ಗ್ರಾಮದಲ್ಲಿ ಪ್ರಸಿದ್ಧಿಯನ್ನು ಪಡೆದ ದೇವರು ಇವರೆಲ್ಲರಿಗೂ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಗ್ರಾಮದ ಜನಪದರಿಗೆ ಪ್ರಾಕೃತಿಕವಾದ ನೆಲ, ಮಳೆ, ಒಲೆ, ಬೀಸುವಕಲ್ಲು, ಮರ, ಕಸಬರಿಗೆ ಇವು ಕೂಡಾ ಇವರಿಗೆ ದೈವವೇ. ಕುರುಬ ಸಮುದಾಯ ನಾಯಿಯನ್ನು ಮೈಲಾರಲಿಂಗ ಎಂದು ತಿಳಿದುಕೊಂಡಿರುತ್ತಾರೆ. ಮರ ಕಸಬರಿಗೆ ಲಕ್ಷ್ಮಿ ಎಂದು ನಂಬಿಕೆ ಇಟ್ಟಿರುತ್ತಾರೆ. ಮುಸ್ಲಿಂರು ತಮ್ಮ ರಂಜಾನ ಹಬ್ಬದಲ್ಲಿ, ಮೊಹರಂ ಹಬ್ಬದಲ್ಲಿ ಹರಕೆಯನ್ನು ಕಟ್ಟಿಕೊಳ್ಳುತ್ತಾರೆ. ತಮ್ಮ ಬಂಧು ಬಳಗದವರಷ್ಟೇ ಸೇರಿಕೊಂಡು ಮಾಡುವ ಹಬ್ಬ ಹರಿದಿನಗಳು, ಆಚರಣೆಗಳು ಅಂದರೆ ಅವರ ಮನೆದೇವರು ಚಾಂಗದೇವರು ಇದ್ದರೆ ಹರಕೆ ಹೊತ್ತುಕೊಂಡು ಪೂಜೆ ಸಲ್ಲಿಸಲಾಗುತ್ತದೆ.

ಈ ಗ್ರಾಮದ ಪ್ರತಿಯೊಂದು ಸಮುದಾಯದವರು ಪ್ರಮುಖವಾಗಿ ಊರಿನ ದೇವರನ್ನು ಬಿಟ್ಟು ಶಕ್ತಿದೇವತೆಗಳನ್ನು ಆರಾಧಿಸುತ್ತಾರೆ. ಯಲ್ಲಮ್ಮ, ಹುಲಿಗೆಮ್ಮ, ದುರ್ಗಾದೇವಿ, ಕಾಳಿಕಾದೇವಿ ಮುಂತಾದ ಶಕ್ತಿದೇವತೆಗಳ ಆರಾಧಕರು. ಈ ಎಲ್ಲ ದೇವತೆಗಳನ್ನು ಮಂಗಳವಾರ, ಶುಕ್ರವಾರ ಪೂಜಿಸುವುದು ಸಂಪ್ರದಾಯವಾಗಿದೆ. ಮಕ್ಕಳಿಗೆ ಗಣಜಲಿ, ಗೊಬ್ಬರಗಳು ಮೈಮೇಲೆ ಕಾಣಿಸಿಕೊಂಡರೆ ಐದು ದಿವಸ ಹೊರಗೆ ಕಳುಹಿಸಲಾರದೇ ಐದನೇ ದಿವಸ ಮಂಗಳವಾರ ಅಥವಾ ಶುಕ್ರವಾರ ಹೆಣ್ಣುಶಕ್ತಿದೇವತೆಗಳ ಗುಡಿಗೆ ಕಳಿಸುತ್ತಾರೆ. ಇದನ್ನು ದೀಪಕೊಡುವುದು ಎನ್ನುತ್ತಾರೆ. ಹೀಗೆ ದೇವಸ್ಥಾನಕ್ಕೆ ಹೋಗುವಾಗ ತಂಬಿಗೆಯಲ್ಲಿ ನೀರನ್ನು ತುಂಬಿಕೊಂಡು ಅದರಲ್ಲಿ ಬೇವಿನ ತಪ್ಪಲ ಇಟ್ಟುಕೊಂಡು ಎರಡು ವೀಳ್ಯದೆಲೆ, ಅಕ್ಕಿ, ಅಡಿಕೆಬೆಟ್ಟ, ಉತ್ತತ್ತಿ, ಲಿಂಬೆಹಣ್ಣು, ಒಂದು ಬಟ್ಟೆಯಲ್ಲಿ ಇಟ್ಟುಕೊಂಡು ಊರಲ್ಲಿರುವ ದ್ಯಾಮವ್ವನಿಗೆ ಉಡಿ ತುಂಬುವ ಸಂಪ್ರದಾಯ ಇಂದಿಗೂ ಅಚ್ಚಳಿಯದೆ ಉಳಿದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಹೀಗೆ ಹರಕೆ ತೀರಿಸುವುದು ಉಂಟು.

ಹಬ್ಬ ಹರಿದಿನಗಳು ಭಕ್ತಿ, ಧರ್ಮ ಮತ್ತು ವ್ರತಾಚರಣೆಗೆ ಸಂಬಂಧಿಸಿದ ಶುಭ ದಿನಗಳು. ಸಾಂಸ್ಕೃತಿಕ ಪರಂಪರೆಯನ್ನು ನೆನಪಿಸುವ ಸಾಧನಗಳಾಗಿವೆ. ಇವುಗಳ ಆಚರಣೆಯು ಪವಿತ್ರವಾಗಿದೆ. ಹಿಂದುಗಳಾದ

ನಮಗೆ ಧರ್ಮವೇ ಬಾಳಿನ ಉಸಿರು ಆಗಿದೆ. ಅತ್ಯಂತ ಪ್ರಾಚೀನ ಕಾಲದಿಂದಲೂ ಹಬ್ಬ ಹರಿದಿನಗಳನ್ನು ವಿವಿಧ ಸಮುದಾಯದವರು ಆಚರಿಸಿಕೊಂಡು ಬರುತ್ತಿದ್ದಾರೆ. ಕಾಲಕಾಲಕ್ಕೆ ತಕ್ಕಂತೆ ಅನೇಕ ಬದಲಾವಣೆಗಳು ಸಾಗಿಬಂದಿವೆ. ನಂಬಿಕೆಗಳು ಜೀವನ ಮಾರ್ಗದ ಸಾಧನೆಗಳು. ಜೀವನದ ದಾರಿ ಸಾಗಲು ಇರುವ ದಾರಿಯ ಮಗ್ಗಲುಗಳು ಎಂದು ಹೇಳಬಹುದು.

ಜೀವನದಲ್ಲಿ ಅನೇಕ ಕಷ್ಟ ಕಾರ್ಪಣ್ಯಗಳು ಸಂಭವಿಸುತ್ತವೆ. ಆ ಕಷ್ಟಕಾರ್ಪಣ್ಯಗಳಿಂದ ದೂರಾಗಬೇಕಾದರೆ ಹರಕೆಗಳನ್ನು ಕಟ್ಟಿಕೊಂಡು ಭಯಭಕ್ತಿಯಿಂದ ಪೂರೈಸುವ ಸಂಪ್ರದಾಯ ರೂಢಿಗತವಾಗಿದೆ. 'ಹರಕೆ ಹನ್ನೆರಡು ವರುಷ' ತಾವು ಅಂದುಕೊಂಡಾಗ ತೀರಿಸಲಾಗದೇ ಹೋದರೆ ಅನುಕೂಲವಾದಾಗ ಹರಕೆ ತೀರಿಸುವುದುಂಟು.

**ಹರಕೆಗಳು**

೧. ಗ್ರಾಮದ ದ್ಯಾಮವ್ವನಿಗೆ ಉಡಿ ತುಂಬುವ ಹರಕೆ ಹೊರುತ್ತಾರೆ.

೨. ಹುರುಕು ಕಜ್ಜಿ ಆದಾಗ ಯಮನೂರಿನ ಬೆಣ್ಣಿಹಳ್ಳದಲ್ಲಿ ಮಿಂದು ಚಾಂಗದೇವರಿಗೆ ಮುಡುಪು ಕಟ್ಟುವುದು.

೩. ಮಕ್ಕಳಾಗದವರು ಸವದತ್ತಿ ಎಲ್ಲಮ್ಮನ ದೇವಸ್ಥಾನದಲ್ಲಿ ತೊಟ್ಟಿಲಕಟ್ಟುವುದು.

೪. ನವಲಗುಂದ ಕಾಮಣ್ಣನಿಗೆ ಮದುವೆಯಾಗದವರು ಬಾಸಿಂಗ ತಂದು ಮನೆಯಲ್ಲಿ ಪೂಜಿಸಿ ಮದುವೆಯಾದ ನಂತರ ತಂದ ಬಾಸಿಂಗ ಹಾಗೂ ಅದರ ಜೊತೆ ಹೊಸ ಬಾಸಿಂಗ ತಂದು ಕೊಡುವುದು.

೫. ಮಕ್ಕಳ ಜಡೆ ಅರ್ಪಿಸುವ ಹರಕೆ.

೬. ಒದ್ದೆ ಬಟ್ಟೆಯಲ್ಲಿ ಚಾಂಗದೇವರಿಗೆ ದೀಡ ನಮಸ್ಕಾರ ಹಾಕುವುದು.

೭. ಬೆಳ್ಳಿಯ ಕಣ್ಕಟ್ಟು ಕೊಡಿಸುವುದು

೮. ಬೆಳ್ಳಿಯ ಕುದುರೆ ಕೊಡಿಸುವುದು.

೯. ದೇವಿಯ ಹೆಸರಲ್ಲಿ ಮಂಗಳವಾರ ಶುಕ್ರವಾರ ಉಪವಾಸ ವ್ರತ ಮಾಡುವುದು.

೧೦. ಅನ್ನ ಉಣ್ಣದೇ ಇರುವುದು, ಸಕ್ಕರೆ ತಿನ್ನದೇ ಇರುವುದು, ಅಂದುಕೊಂಡದ್ದು ಆದ ಮೇಲೆ ಹರಕೆ ತೀರಿಸುವುದು.

೧೧. ಗಂಡುಮಗು ಹುಟ್ಟಿದರೆ ಅವನ ತೂಕ ಸಕ್ಕರೆ ಕೊಡಿಸುವುದು. ಆ ಮಗುವಿನ ತೂಕ ಅಕ್ಕಿ ಕೊಡಿಸುವುದು.

೧೨. ಮಕ್ಕಳು ಪದೇ ಪದೇ ಸಾಯುತ್ತಿದ್ದರೆ ಬನಶಂಕರಿ ಹೊಂಡದಲ್ಲಿ ಮಗುವನ್ನು ತೆಪ್ಪದಲ್ಲಿ ಬಿಡುವ ಹರಕೆ ಹೊರುತ್ತಾರೆ.

೧೩. ಪರೀಕ್ಷೆಯಲ್ಲಿ ಪಾಸಾದರೆ ಕುಂಕುಮ ಪೂಜೆ ಕಟ್ಟಿಸುವುದು, ಬಾಳೆಕಾಯಿ ಪೂಜೆ ಕಟ್ಟಿಸುವ ಹರಕೆ ಹೊರುತ್ತಾರೆ.

೧೪. ಕುರುಬರು, ಮುಸಲ್ಮಾನರು ತಮ್ಮ ತಮ್ಮ ಕುಲದೇವರಿಗೆ ಆಡು, ಕುರಿ, ಕೋಳಿ ಬಲಿಕೊಡುವ ಹರಕೆ ಹೊರುತ್ತಾರೆ.

೧೫. ನವರಾತ್ರಿ ಸಂದರ್ಭದಲ್ಲಿ ಒಂಬತ್ತು ದಿವಸ ಸೂರ್ಯ ಹುಟ್ಟುವುದಕ್ಕಿಂತ ಮೊದಲು ಎದ್ದು ಬನ್ನಿ ಮರಕ್ಕೆ ಪೂಜೆ ಮಾಡುವ ಹರಕೆ ಹೊರುತ್ತಾರೆ. ಇದನ್ನು ಮನೆಯಲ್ಲಿ ಮಕ್ಕಳಿಗೆ ಮದುವೆಯಾಗದೇ ಇದ್ದ ಸಂದರ್ಭದಲ್ಲಿ ಮತ್ತು ಏನಾದರೂ ಪೀಡನೆ ಕಾಡಾಟ ಇದ್ದರೆ ಈ ಹರಕೆ ಹೊರುತ್ತಾರೆ.

೧೬. ವೀರಭದ್ರ ದೇವರ ಆರಾಧಕರು ಮಕ್ಕಳ ಮದುವೆ ಸುಸೂತ್ರವಾಗಿ ನಡೆದರೆ ಅಸ್ತ್ರ ಹಾಕಿಕೊಳ್ಳುತ್ತೇವೆ ಎಂದು ತಾಯಂದಿರು ಹರಕೆ ಹೊರುತ್ತಾರೆ.

೧೭. ಯಮನೂರಿನ ಚಾಂಗದೇವರ ಹೆಸರಿನಲ್ಲಿ ಪ್ರತಿ ಗುರುವಾರ ರವಿವಾರ ಇಷ್ಟಾರ್ಥಗಳನ್ನು ಈಡೇರಿಸುವ ಸಲುವಾಗಿ ಉಪವಾಸ ವ್ರತ ಆಚರಿಸುತ್ತಾರೆ.

೧೮. ತುಪ್ಪವನ್ನು ಮೀಸಲಿಡುವ ಹರಕೆ ಹೊರುತ್ತಾರೆ.

೧೯. ದೇವಸ್ಥಾನದ ಕಸಗುಡಿಸುವ ಹರಕೆ ಮತ್ತು ಮಹಿಳೆಯರು ಸೀರೆಯ ಸೆರಗಿನಿಂದ ಕಸಗುಡಿಸುವ ಹರಕೆ ಹೊರುತ್ತಾರೆ.

೨೦. ಮೊಹರಂ ಹಬ್ಬದಲ್ಲಿ ಕೆಂಡಹಾಯುವ ಹರಕೆ.

೨೧. ಇಟಗಿ ಭೀಮಾಂಬಿಕೆಗೆ ಕಾಯಿ ಕಟ್ಟುವ ಹರಕೆ

೨೨. ಯಮನೂರು ಗ್ರಾಮದ ದೊಡ್ಡ ಮಸೀದೆಯೊಳಗಿನ ಕಟಾಂಜನೆಗೆ ಲಾಡಿ ಕಟ್ಟುವ ಹರಕೆ

೨೩. ಮೊಹರಂ ಹಬ್ಬದಂದು ಅಲೆದೇವರಿಗೆ ಮಕ್ಕಳಾಗದವರು ಮುಡಿಪು ಕಟ್ಟುವ ಸಂಪ್ರದಾಯವಿದೆ. ಇದನ್ನು ಎಲ್ಲ ಧರ್ಮದವರೂ ಮಾಡುತ್ತಾರೆ.

೨೪. ದೇವರಿಗೆ ನೈವೇದ್ಯ ತಂದು ಪೂಜಾರಿಗಳಿಗೆ ಊಟಮಾಡಿಸುವುದು.

೨೫. ಸುಬ್ರಹ್ಮಣ್ಯನಿಗೆ ಹರಕೆ ಹೊರುವುದರಿಂದ ಚರ್ಮರೋಗ ನಿವಾರಣೆಯಾಗುವುದು.

ಹೀಗೆ ಮಾನವ ಬದುಕಿನ ಎಲ್ಲ ಮಗ್ಗಲುಗಳನ್ನು ಆವರಿಸಿಕೊಂಡಿರುವ ಹರಕೆಗಳು ಜನಪದ ಪ್ರಕಾರಗಳೊಂದಿಗೆ ನಿಕಟ ಸಂಬಂಧವನ್ನು ಪಡೆದುಕೊಂಡಿದೆ. ಹರಕೆಗಳು ಜನಪದರು ಪ್ರಕೃತಿ ಬದುಕು ಮತ್ತು ಬದುಕಿನಾಚೆಗಿನ ಬಗೆಗೆ ಪ್ರತಿಕ್ರಿಯಿಸಿದ ಬಗೆ ಹಾಗೂ ಅವುಗಳೊಳಗಿನ ಸಂಬಂಧವನ್ನು ಪ್ರಕಟಿಸುತ್ತವೆ. ಯಾವುದೇ ಧರ್ಮ, ಜಾತಿ, ಕೋಮುಗಳ ನೆಲೆಯಲ್ಲಿ ಒಡೆಯುತ್ತಿರುವ ಪ್ರಸ್ತುತ ಸಾಮಾಜಿಕ, ಧಾರ್ಮಿಕ ಸಂದರ್ಭದಲ್ಲಿ ಮನುಷ್ಯ ಸಂಬಂಧವನ್ನು ನೆಲೆಗೊಳಿಸುವಲ್ಲಿ ಹರಕೆಗಳು ಬಳಕೆಯಾಗುತ್ತವೆ. ಇಲ್ಲಿ ಹರಕೆಗಳ ಸಫಲತೆ ವಿಫಲತೆಗಳು ನಮಗೆ ಮುಖ್ಯವಾಗುವುದಿಲ್ಲ. ಹರಕೆಗಳಿಂದ ಸಾಧ್ಯವಾಗುವ ಭಾವೈಕ್ಯತೆ ಮತ್ತು ಮಾನವ ಸಂಬಂಧಗಳ ಕಟ್ಟುವಿಕೆ ಬಹಳ ಮಹತ್ವದ್ದಾಗಿರುತ್ತದೆ.

**ಅಡಿ ಟಿಪ್ಪಣಿಗಳು**

೧. ಜಾನಪದ ಕೈಪಿಡಿ, ಪ್ರ.ಸಂ.ಡಾ.ಎಚ್.ಜೆ.ಲಕ್ಕಪ್ಪಗೌಡ, ಕನ್ನಡ ಪುಸ್ತಕ ಪ್ರಾಧಿಕಾರ ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.೫೬೦೦೧೮

೨. ಕೊಟ್ಟಲಗಿ ಗ್ರಾಮ: ಸಾಂಸ್ಕೃತಿಕ ಸಂಕಥನ ರಾಮಣ್ಣ ಸಿದ್ದರಾಯಪ್ಪ ದೊಡ್ಡನಿಂಗಪ್ಪಗೋಳ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಗ್ರಾಮಪಂಚಾಯತಿ, ಯಮನೂರು.

## ಅಧ್ಯಾಯ ೫

# ಭಾಷೆ ಮತ್ತು ಸಾಹಿತ್ಯ

### ೫.೧. ಭಾಷೆ

ಭಾಷೆ ಒಂದು ಸಂವಹನ ಸಂಪರ್ಕ ಮಾಧ್ಯಮ. ಭಾಷೆಯ ಮಹತ್ವವನ್ನು ಕುರಿತು 'ದಂಡಿ' ಎಂಬ ಲಾಕ್ಷಣಿಕ ಈ ರೀತಿ ಹೇಳುತ್ತಾನೆ. "ಭಾಷೆ ಎಂಬ ಜ್ಯೋತಿ ಬೆಳಗದಿದ್ದರೆ ಮೂರು ಲೋಕಗಳು ಕತ್ತಲೆಯಿಂದ ತುಂಬಿ ಹೋಗುತ್ತಿದ್ದವು" ಮಾನವ ತನ್ನ ಮನಸ್ಸಿನಲ್ಲಿರುವ ಭಾವನೆಗಳನ್ನು, ವಿಚಾರಗಳನ್ನು ಭಾಷೆಯ ಮೂಲಕ ಇನ್ನೊಬ್ಬರಿಗೆ ತಿಳಿಸುತ್ತಾನೆ. ಭಾಷೆಯ ಮಹತ್ವವನ್ನು ಅರಿಯದೇ ಹೋದ ಮಾನವ ಬರೀ ಕೇವಲ ಜಂತುವಾಗಿಯೇ ಉಳಿಯುತ್ತಿದ್ದನು. ಭಾಷೆ ಮಾನವ ತನ್ನ ದೈನಂದಿನ ಬದುಕಿಗೆ ಸೃಷ್ಟಿಸಿಕೊಂಡಿರುವ ಸಂಪರ್ಕ ಸಾಧನ. ಜೊತೆಗೆ ಮಾನವನ ಪರಂಪರೆಯ ಲಾಂಛನವಾಗಿದೆ. ಭಾಷೆ ಸಂಸ್ಕೃತಿಯ ಪ್ರಮುಖ ಅಂಗವಾಗಿದೆ. ಅದೊಂದು ಸಾಮಾಜಿಕ ಕ್ರಿಯೆಯಾಗಿದೆ. ಅದಕ್ಕೆ ತನ್ನದೇ ಆದ ಪ್ರತ್ಯೇಕ ಸ್ಥಾನವಿಲ್ಲ. ಅದು ಬಳಸುವ ಅಭಿವ್ಯಕ್ತಿಯನ್ನು ಅವಲಂಬಿಸಿದೆ. ಹೀಗಾಗಿ ಭಾಷೆಗೂ ಅದನ್ನು ಬಳಸುವ ವ್ಯಕ್ತಿಗೂ ನಿಕಟವಾದ ಸಂಬಂಧವಿದೆ. ಭಾಷೆಯಲ್ಲಿ ಆಡುಭಾಷೆ, ಗ್ರಾಂಥಿಕಭಾಷೆ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಆಡುಭಾಷೆ ಎಂದರೆ ಇದರಲ್ಲಿ ಜನರು ಮಾತನಾಡುತ್ತಾರೆ, ವ್ಯವಹರಿಸುತ್ತಾರೆ. ಇದನ್ನು ಜನಪದರ ಭಾಷೆ, ದೇಸಿ ಭಾಷೆ ಎಂತಲೂ ಕರೆಯುತ್ತಾರೆ. ಗ್ರಾಂಥಿಕಭಾಷೆ ಎಂದರೆ ಗ್ರಂಥದಲ್ಲಿ ರಚಿತವಾದ ಭಾಷೆ ಅಂದರೆ ಲಿಪಿಬದ್ಧಗೊಳಿಸಿದುದು ಆಗಿರುತ್ತದೆ. ಭಾಷೆ ಕಾಲ, ದೇಶ ಪರಿಸರ ಪ್ರದೇಶಕ್ಕನುಗುಣವಾಗಿ ವ್ಯತ್ಯಾಸವಾಗುತ್ತ ಪುನರ್ ಸೃಷ್ಟಿಗೊಳ್ಳುತ್ತಾ ಹೋಗುವುದು ಸಹಜ ಪ್ರಕ್ರಿಯೆಯಾಗಿದೆ.

ಮನಸ್ಸಿನ ಅನಿಸಿಕೆ, ವಿಚಾರಗಳ ಮಾಧ್ಯಮ ಪದಗಳು ಭಾಷೆಯಾಯಿತು. ಆದಿಮಾನವ ತನ್ನ ಅನಿಸಿಕೆಯನ್ನು ಕೂಗಿ, ಚೀರಿ, ಚಪ್ಪಾಳೆ ತಟ್ಟುವುದರ ಮೂಲಕ ಕಣ್ಸನ್ನೆ, ಕೈಸನ್ನೆಯ ಮೂಲಕ ಅಭಿವ್ಯಕ್ತಿಸಿದ. ಬರಬರುತ್ತ ಸಾಮೂಹಿಕವಾಗಿ ತಮಗೆ ತಿಳಿದ ಚರಿತ್ರೆ, ಪರಾಕ್ರಮ, ಶೌರ್ಯ, ಬಲಿದಾನ, ತಾವು ನೋಡಿದ ಸಾಮಾಜಿಕ, ಧಾರ್ಮಿಕ, ತ್ಯಾಗ, ಬಲಿದಾನ, ಕೌಟುಂಬಿಕ ಸುಖ-ದುಃಖ, ಸಂದರ್ಭಗಳಿಗೆ ಸಹಜವಾಗಿಯೇ ಸ್ಪಂದಿಸಿ, ಅಂತಹ ಘಟನೆಗಳನ್ನು ವಿವರವಾಗಿ ಸೆರೆಹಿಡಿದು, ಕಾವ್ಯ, ಗೀತೆ, ನಾಟಕ, ಕಥೆಗಳ ಮುಖಾಂತರ ಮನಮೋಹಕವಾಗಿ ಹೃದಯ ಸ್ಪರ್ಶಿಯಾಗಿ ಮುಂದಿನ ತಲೆಮಾರಿಗೆ ಬಳುವಳಿಯಾಗಿ ಕೊಡುತ್ತಾ ಬಂದಿದ್ದಾರೆ.

ಯಮನೂರಿನಲ್ಲಿ ಕನ್ನಡವೇ ಪ್ರಮುಖ ಭಾಷೆಯಾದರೂ, ವಿವಿಧ ಭಾಷೆಯ ಸಮುದಾಯಗಳು ವ್ಯವಹಾರಕ್ಕಾಗಿ ಬಹು ಭಾಷೆಗಳನ್ನಾಡುವವರಾಗಿದ್ದಾರೆ. ವಿದ್ಯಾವಂತ ಸಮುದಾಯ ಇಂಗ್ಲೀಷ್ ಪ್ರಭಾವಕ್ಕೆ

ಒಳಗಾಗಿ ಕನ್ನಡದಲ್ಲಿ ಇಂಗ್ಲೀಷ್ ಪದಗಳನ್ನು ತಮಗೆ ಗೊತ್ತಿಲ್ಲದೆಯೇ ಹೆಚ್ಚಾಗಿ ಬೆರೆಸಿ ಮಾತನಾಡುತ್ತಾರೆ. ಎಷ್ಟರ ಮಟ್ಟಿಗೆ ಇಂಗ್ಲೀಷ ಭಾಷೆಯ ಪ್ರಭಾವವಾಗಿದೆ ಎಂದರೆ ಇಂಗ್ಲೀಷ್ ಪದಗಳನ್ನು ಬೆರೆಸದೆ ಕನ್ನಡ ಮಾತನಾಡುವುದು ಅಸಾಧ್ಯ ಎನ್ನುವ ಸ್ಥಿತಿಗೆ ಜನರು ಬಂದು ಬಿಟ್ಟಿದ್ದಾರೆ. ಕನ್ನಡಭಾಷೆ ಮಾತನಾಡಲು ಬಂದರೂ ಸಹ ಆಡುಭಾಷೆಯಾಗಿ ಮರಾಠಿ ಭಾಷೆಯನ್ನಾಡುವ ಮರಾಠಿಗರಿದ್ದಾರೆ. ಹಿಂದಿ ಮಾತನಾಡುವವರಿದ್ದಾರೆ. ಕನ್ನಡ ಬಲ್ಲವರಾಗಿದ್ದರೂ ಸಂದರ್ಭಕ್ಕನುಸಾರವಾಗಿ ಬೇರೆ ಬೇರೆ ಭಾಷೆಯನ್ನಾಡುವ ಜನರಿದ್ದಾರೆ. ಕೊರವರು, ಜೋಗೇರ, ಸಮುದಾಯದವರು ತಮ್ಮದೇ ಆದ ವಿಶಿಷ್ಟ ಭಾಷೆಯನ್ನು ಆಡುತ್ತಾರೆ. ಇವುಗಳಿಗೆ ಲಿಪಿ ಇರುವುದಿಲ್ಲ. ಹೀಗೆ ಬೇರೆ ಬೇರೆ ಸಮುದಾಯದವರು ಬೇರೆ ಬೇರೆ ಭಾಷೆಯನ್ನಾಡುತ್ತಾರೆ.

ಕನ್ನಡ ಭಾಷೆಯನ್ನಾಡುವ ಜನಪದರು ಪ್ರತಿದಿನ-ಮಾತನಾಡುವ ಮಹಾಪ್ರಾಣಾಕ್ಷರಗಳನ್ನು ತೇಲಿಸಿ ಅಲ್ಪಪ್ರಾಣಾಕ್ಷರವಾಗಿ ಅಥವಾ ವ್ಯಂಜನಾಕ್ಷರವನ್ನು ಸ್ವರಾಕ್ಷರವಾಗಿ ಬಳಸಿಕೊಂಡು ಮಾತನಾಡುತ್ತಾರೆ. ಖಡ್ಗ-ಕಡ್ಗ, ಭಾಷೆ-ಬಾಸೆ, ಝುರಿ-ಜರಿ, ಮೊಸರು-ಮಸರ ಇತ್ಯಾದಿ ಪದ ಬಳಕೆ ಅಧಿಕವಾಗಿದೆ. ಇದನ್ನು ಗಮನಿಸಿದರೆ ಕನ್ನಡದಲ್ಲಿ ಮಹಾಪ್ರಾಣಗಳಿಲ್ಲ ಎಂಬ ವಾದಕ್ಕೆ ಈ ಉಪಭಾಷೆ ಪುಷ್ಟಿ ಕೊಡುತ್ತದೆ. ಜೊತೆಗೆ ಆಕಿ, ಈಕಿ, ಅವ, ಇವ ಎಂಬ ಬಂಧು ಸೂಚಕ ರೂಪಗಳು ಹೆಚ್ಚಾಗಿ ಬಳಕೆಯಲ್ಲಿವೆ.

ಆಡುಭಾಷೆ ಶಿಷ್ಟಭಾಷೆಗಳಲ್ಲಿನ ವ್ಯತ್ಯಾಸ, ಹಾಗೂ ಆಡುಭಾಷೆಯ ಸೌಂದರ್ಯ, ಸೊಬಗು ಇಲ್ಲಿ ಹೇಗೆ ಎಂಬುದನ್ನು ಈ ರೀತಿಯಾಗಿ ನೋಡಬಹುದಾಗಿದೆ.

| ಶಿಷ್ಟ ಕನ್ನಡ | ಯಮನೂರಿನ ಆಡು ಮಾತಿನ ಕನ್ನಡ |
|---|---|
| ಇಷ್ಟು | ಈಸ ಈಸು |
| ಇದ್ದಾನೆ | ಅದಾನ |
| ಗೆಲ್ಲು | ಗೆದಿ |
| ಜೋಪಾನ | ಜ್ವಾಕಿ |
| ಕೊಲ್ಲು | ಸಾಯಿಸು |
| ತೋಟ | ತ್ವಾಟ |
| ತಡೆ | ತಡಿ |
| ಸಾಕಷ್ಟು ಇಲ್ಲ | ಬಾಳ ಇಲ್ಲ, ಜಗ್ಗ ಇಲ್ಲ. |
| ಅಷ್ಟು | ಆಸ |
| ಎಷ್ಟು | ಏಸ |
| ಗಳಿಸುವುದು | ಗಳಿಕೆ |
| ಸೌಲಭ್ಯ | ಸೌಕರ್ಯ |
| ದೋಸೆ | ದಾಸಿ |
| ವ್ಯವಹಾರ | ಯಾವಾರ |

| | |
|---|---|
| ಸಂತೆ | ಸಂತಿ |
| ಶಾಲೆ | ಸಾಲಿಗುಡಿ |
| ಏಣಿ | ಮಿಚುಣಕಿ |
| ಅಮ್ಮ | ಯಮ್ಮ |
| ಅಕ್ಕ | ಯಕ್ಕ |
| ಅಪ್ಪ | ಯಪ್ಪ |
| ತಲೆ | ತೆಲಿ |
| ಯುಗಾದಿ | ಉಗಾದಿ |
| ತೆಂಗಿನಕಾಯಿ | ಟೆಂಗಿನಕಾಯಿ |
| ಬರುತ್ತಾನೆ | ಇರ್‍ತಿನಿ |
| ಕಬ್ಬಿಣ | ಕಬ್ಣ |
| ಕೊಬ್ಬರಿ | ಕೊಬರಿ |
| ಮೆಟ್ಟಿಲು | ಪಾಟುಣಗಿ |
| ನೇಗಿಲು | ಗಳೇವು |
| ಇಟ್ಟಿಗೆ | ಇಟಗಿ |
| ಮನೆ | ಮನಿ |
| ಗೂಡು | ಗೂಣು |
| ಯುವವಯಸ್ಸಿನವರು | ಹರೇದಾರು |
| ಉಡುಗೊರೆ | ಆಯಾರ, ಮುಯ್ಯಿ |
| ಗುರುತು | ಗುರ್ತ |
| ಮುಡಿದೊಕೋ | ಹಾಕ್ಕೊ |
| ನಿಲ್ಲುವುದಿಲ್ಲ | ನಿಲ್ಲಂಗಿಲ್ಲ |
| ಹೋಗುತ್ತಾನೆ | ಹೊಂಟಾನ |
| ಮಲಗುವುದಿಲ್ಲ | ಮಕ್ಕೊಳಂಗಿಲ್ಲ |
| ಮೋಡ | ಮಾಡ |
| ವೇಳೆ | ಯಾಳೆ |
| ನೇತುಹಾಕು | ಸಿಗಾಕು |
| ಬೆಳಗಿನ ವೇಳೆ | ಮುಂಜಾನೆ |
| ಬನ್ನಿರಿ | ಬರ್‍ರಿ |
| ಬೇಗನೆ | ದೌಡು, ಜಲ್ದಿ, ಗಡಾನ |

| | |
|---|---|
| ಬೇಸಿಗೆ | ಬ್ಯಾಸ್ಗಿ |
| ತಲೆದಿಂಡು | ತಲಗುಂಬು |
| ಚಡ್ಡಿ | ಚೊಣ್ಣ |
| ಮುಖ | ಮಕ |
| ಚೆನ್ನಾಗಿದೆ | ಚಲೋಐತಿ ಬೇಸೈತಿ |
| ಬಸವಣ್ಣ | ಬಸಣ್ಣ |
| ವಯ್ಯಾರ | ದಿಮಾಕ |
| ನಾಚಿಕೆ | ನಾಚಿಗೆ |
| ಅವಳು | ಆಕಿ ಅಕಿ |
| ಅವನು | ಅವ |
| ವೇಗವಾಗಿ | ಜೋರಾಗಿ |
| ಪೈಖಾನೆ | ಪೈಖ್ಯಾನಿ |
| ಇದೆ | ಐತಿ |
| ಈಕಡೆ | ಇತ್ಲಾಗ |
| ಆಕಡೆ | ಅತ್ಲಾಗ |
| ನಡೆದಾಡು | ಅಡ್ಯಾಡು |
| ಸ್ವಲ್ಪ | ತಟಗ |

ಹೀಗೆ, ಇನ್ನೂ ಅನೇಕ ಪದಗಳು ನಮಗೆ ಸಿಗುತ್ತವೆ. ಇಲ್ಲಿ ಕೆಲವನ್ನು ಮಾತ್ರ ಪಟ್ಟಿ ಮಾಡಿದ್ದೇನೆ.

ಯಮನೂರಿನ ಸಾಹಿತ್ಯವನ್ನು ಅವಲೋಕಿಸಿದಾಗ ಅದೊಂದು ಸಣ್ಣ ಗ್ರಾಮವಾಗಿರುವದರಿಂದ ಜನಪದ ಸಾಹಿತ್ಯಸಿಗುವಷ್ಟು ಶಿಷ್ಟ ಸಾಹಿತ್ಯ ಅಷ್ಟಾಗಿ ದೊರೆಯುವುದಿಲ್ಲ. ಆದರೂ ಶಿಷ್ಟಸಾಹಿತ್ಯ ಜನಪದ ಸಾಹಿತ್ಯಗಳೆರಡನ್ನು ಬೇರೆ ಬೇರೆ ಭಾಗಗಳಲ್ಲಿ ನೋಡಲು ಪ್ರಯತ್ನಿಸಲಾಗಿದೆ.

### ೫.೨. ಶಿಷ್ಟಸಾಹಿತ್ಯ

ಯಮನೂರಿನ ಚಾಂಗದೇವರ ಬಗೆಗೆ ದೊರೆಯುವ ಸಾಹಿತ್ಯವನ್ನು ಅವಲೋಕಿಸುವಾಗ ನಾವು ಎರಡು ದೃಷ್ಟಿಯಿಂದ ಇಲ್ಲಿನ ಸಾಹಿತ್ಯವನ್ನು ಅವಲೋಕಿಸಬೇಕಾಗುತ್ತದೆ. ಯಮನೂರಿನಲ್ಲೇ ಬದುಕಿ ಬಾಳಿದವರು ರಚಿಸಿದ ಸಾಹಿತ್ಯ ಒಂದಾದರೆ, ಅಲ್ಲಿಗೆ ಭೇಟಿ ನೀಡಿ ಆಗ ರಚಿಸಿದ ಸಾಹಿತ್ಯ ಇನ್ನೊಂದು. ಇಲ್ಲಿ ದೊರೆಯುವ ಸಾಹಿತ್ಯದಲ್ಲಿ ಯಮನೂರಿನ ದೈವವನ್ನು ಕೊಂಡಾಡುವ ರಾಜಾಬಾಗಸವಾರ ಯೋಗಿ ಚಕ್ರವರ್ತಿ ಚಾಂಗದೇವ ಮುನಿಯ ತಪಶ್ಶಕ್ತಿಯನ್ನು ಕೊಂಡಾಡುವ ಅವರ ಭಕ್ತಿ ಬದುಕು ಇತಿಹಾಸವನ್ನು ನೆನಪಿಸುವ ಅಂಶಗಳು ಅಧಿಕ ಪ್ರಮಾಣದಲ್ಲಿ ಕಂಡು ಬರುತ್ತವೆ. ಅಲ್ಲದೆ ಇಲ್ಲಿಯ ಜನಜೀವನ, ಕಲೆ, ಸಂಸ್ಕೃತಿ, ಆಚಾರ ವಿಚಾರ ಸಂಪ್ರದಾಯನ್ನೊಳಗೊಂಡಂತೆ ಇನ್ನೂ ಅನೇಕ ವಿಚಾರಗಳನ್ನು ಅನಾವರಣಗೊಳಿಸಿಕೊಂಡು ಶಿಷ್ಟಸಾಹಿತ್ಯ ಜನಜನಿತವಾಗಿದೆ.

ಚಾಂಗದೇವರ ಭೇಟಿಯ ಕಾರಣದಿಂದಲೇ ಜ್ಞಾನೇಶ್ವರರು ಮರಾಠಿಯಲ್ಲಿ ವೇದಾಂತದ ಮೈಲುಗಲ್ಲೆಂದು ಖ್ಯಾತವಾದ "ಚಾಂಗದೇವ ಪಾಸಷ್ಟಿ"ಯನ್ನು ಬರೆದರು, - ಇವರಿಬ್ಬರ ಬೇಟಿ ಪ್ರಸಂಗವನ್ನು ಮರಾಠಿಯ ನೂರಾರು ಜನ ಕವಿಗಳು ತಮ್ಮ ಕಾವ್ಯಗಳಲ್ಲಿ ಭಾವಾವೇಶದಿಂದ ವರ್ಣಸಿದ್ದಾರೆ. ಚಾಂಗದೇವರು ಯೋಗಿ ಚಕ್ರವರ್ತಿಗಳಾಗಿರುವಂತೆ ಶ್ರೇಷ್ಠ ಕವಿಗಳೂ ಆಗಿದ್ದರು. ಅವರು ಬರೆದ ಪದ್ಯಗಳು ದೊರೆತಿವೆ. ಗ್ವಾಲಿಯರ ರಾಜ್ಯದಲ್ಲಿ ಅವರು ಬರೆದ ಗ್ರಂಥ ಸಿಕ್ಕಿದ್ದು ಅದರಲ್ಲಿ ೪೦೦ ಪದ್ಯಗಳಿವೆ. ಆದರೆ ಆ ಗ್ರಂಥದ ಕೊನೆಯ ಪುಟವನ್ನು ನೋಡಿದರೆ ಪದ್ಯಗಳ ಸಂಖ್ಯೆ ೧೦೩೬ ಇದ್ದಂತೆ ತೋರುತ್ತದೆ. ಅವರು ಈ ಗ್ರಂಥವನ್ನು ಮಹಾರಾಷ್ಟ್ರದ ನಗರ ಜಿಲ್ಲೆಯಲ್ಲಿರುವ ಆಕೋಲೆ ತಾಲೂಕಿನ ಹರಿಶ್ಚಂದ್ರಗಡದಲ್ಲಿ ಕ್ರಿ.ಶ.೧೩೨೫ರಲ್ಲಿ ರಚಿಸಿದರು. ಪ್ರೊ.ಹ.ರಾ.ದಿವೇಕರರು ೪೦೦ ಪದ್ಯಗಳಿಗೆ ಟೀಕೆ ಬರೆದು "ಚಾಂಗದೇವ ತತ್ವಸಾರ" ಎಂಬ ಹೆಸರಿನಲ್ಲಿ ಮರಾಠಿಯಲ್ಲಿ ಪ್ರಕಟಿಸಿದ್ದಾರೆ. ಚಾಂಗದೇವರು ತಮ್ಮ ಅವತಾರವನ್ನು ಮುಗಿಸುವ ೧೩ ವರ್ಷ ಮೊದಲು ಇದನ್ನು ಬರೆದು ಮುಗಿಸಿದರು. ಯೋಗದ ಬಗ್ಗೆ ಅತ್ಯಮೂಲ್ಯ ಗ್ರಂಥವಿದು. ಅದರ ಒಂದು ಪದ್ಯವನ್ನು ಇಲ್ಲಿ ಉದಾಹರಿಸುತ್ತೇನೆ.

ಜೈಸಿ ಕರಾ ಜ್ಯೋತಿ ಘೇವುನಿ| ಗೃಹ ವಸ್ತು ಅವಲೋಕುನಿ
ಸ್ವಯಂ ಠೇವಿಲೆ ದೇಖೌನಿ| ತ್ಯಾಗ ಕೀಜೈ
ನಾತರಿ ಐಲಿತಡಿಯೆ ನಾಂವೇ ಚಾ| ಕೀಜೈ ಪ್ರಯತ್ನ ಸ್ವೀಕಾರ
ತಿಯೆಚಾ ಪೈಲುಪಾರು ಪಾವಲೆಯಾಂ| ತಿಚಾಪಾಂಗುಫಿಟೆ
ತೈಸೆ ದೇಹಾಸ್ಥೆ ದೇಹಾತೀತ ದೇಖಲೆ| ಗುರು ಪ್ರಸಾದೆ ಜಾನಿತಲೆ
ಮ್ಹಣೌನಿ ತ್ಯಜೀಂಪುತ್ರಾ ಮ್ಹಣಿತಲೆ| ಅಶೇಷಹೀ||

**ಅರ್ಥ:** ಯಾವ ಪ್ರಕಾರ ಮನೆಯಲ್ಲಿಯ ವಸ್ತುವನ್ನು ಹುಡುಕಿದ ಮೇಲೆ ದೀಪವನ್ನು ಅದರ ಮೊದಲಿನ ಸ್ಥಾನದಲ್ಲಿ ಇಡಲಾಗುವುದೋ ಮತ್ತು ಹೇಗೆ ನದಿಯ ಮತ್ತೊಂದು ದಂಡೆಯನ್ನು ಮುಟ್ಟಿದ ಮೇಲೆ ನಾವೆಯನ್ನು ಅದರ ಮೊದಲಿನ ಸ್ಥಾನಕ್ಕೆ ಹಿಂದಿರುಗಿಸಲಾಗುವುದೋ ಅದೇ ಪ್ರಕಾರ ಗುರುವಿನ ಕೃಪೆಯಿಂದ ಶರೀರವೆಂಬ ಮನೆಯಲ್ಲಿ ಪರಮಾತ್ಮನೆಂಬ ವಸ್ತುವನ್ನು ಹುಡುಕಿದ ಮೇಲೆ ಸಂಸಾರದ ತ್ಯಾಗವು ತಾನೇ ಆಗುವುದು. ಇದೇ ನಿಜವಾದ ತ್ಯಾಗವು. ಚಾಂಗದೇವರು ತ್ಯಾಗದ ಬಗ್ಗೆ ಇಲ್ಲಿ ಸುಂದರವಾಗಿ ಹೇಳಿದ್ದಾರೆ. ಈ ಪದ್ಯದ ತಾತ್ಪರ್ಯವೇನೆಂದರೆ "ಯೋಗಸಿದ್ಧಿ ಅಥವಾ ಈಶ್ವರ ಪ್ರಾಪ್ತಿಯ ಸಾಧನೆಗಾಗಿ ಮನೆ-ಮಠ ಕುಟುಂಬಗಳನ್ನು ತ್ಯಜಿಸುವ ಅವಶ್ಯಕತೆಯಿಲ್ಲ. ಯಾವಾಗ್ಗೆ ಯೋಗ ಸಾಧನೆ ಅಥವಾ ಭಕ್ತಿಯಿಂದ ಪರಮಾತ್ಮನ ಸಾಕ್ಷಾತ್ಕಾರವಾಗುವದೋ ಆಗ್ಗೆ ಜೀವನದಲ್ಲಿ ವಿರಕ್ತಿಯು ತಾನೇ ಹುಟ್ಟುವುದು". ಇಂಥ ಉದಾಹರಣೆಗಳಿಂದ ಅವರ ಕಾವ್ಯಶಕ್ತಿಯ ಅರಿವಾಗುವುದು. ಸಂತಸಾಹಿತ್ಯದಲ್ಲಿ ಚಾಂಗದೇವರ ಹೆಸರು ಶಾಶ್ವತವಾಗಿ ಉಳಿದಿದೆ.

ಗೋಡೆಯನ್ನೇ ನಡೆಸಿದ ದೈವಾಂಶ ಸಂಭೂತ ದೈವಿ ಪುರುಷನಾದ ಜ್ಞಾನೇಶ್ವರರು, ಅತ್ಯಂತ ಕ್ರೂರ ಪ್ರಾಣಿಯಾದ ಹುಲಿಯನ್ನೇ ವಾಹನವನ್ನಾಗಿ ಮಾಡಿಕೊಂಡು ಚಾಂಗದೇವರು ಬರುತ್ತಿದ್ದರು. ಇದನ್ನು ನೋಡಿದರೆ

ಒಬ್ಬರು ಸಜೀವ ಪ್ರಾಣಿಯ ಮೇಲೆ ಸವಾರಿ ಮಾಡಿದರೆ ಇನ್ನೊಬ್ಬರು ನಿರ್ಜೀವ ವಸ್ತುವನ್ನೇರಿ ಸವಾರಿ ಮಾಡುವವರು. ಇವರು ಸಾಕ್ಷಾತ್ ವಿಷ್ಣುವಿನ ಅವತಾರವಾಗಿರುವರು. ಅಂತಹ ಜ್ಞಾನೇಶ್ವರರು "ಚಾಂಗದೇವ ಪಾಸಸ್ಟಿ" ಎಂಬ ಗ್ರಂಥವನ್ನು ರಚಿಸಿದರು. ಅದರಲ್ಲಿ ಜ್ಞಾನನಾಥನು ಚಾಂಗದೇವರಿಗೆ, ಪರಬ್ರಹ್ಮನ ಬಗ್ಗೆ ಉಪದೇಶಿಸಿದ ಪದ್ಯಗಳಿವೆ. ಉದಾಹರಣೆಗಾಗಿ ಒಂದು ಪದ್ಯವನ್ನು ಇಲ್ಲಿ ಕೊಡುವೆನು.

ನಾಹೀತೇಂ ಚಿ ಕಾರ್ಯನೇಣೋ ಅಸ್| ದಿಸೇ ತೇಂಚಿ ಕೈಸೇನೇಬೋದಿಸೆ

ಆಸೆ ತೇಂಚಿ ನೇಣೋ ಅಪೈಸೆ| ತೇ ಕೀಂ ಹೋಯಿಜೆ||೬೪||

ಅರ್ಥ-ಅದು ಅಂದರೆ ಪರಬ್ರಹ್ಮವಸ್ತು ಇಲ್ಲ ಎಂದರೆ ಹೇಗೆ ಸರಿಯಾದೀತು? ಅರ್ಥಾತ್ ಅದು ಸಗುಣ(ಸದ್ರೂಪ)ವಿರುತ್ತದೆ. ಅದರ ಇಲ್ಲದಿರುವಿಕೆಯು ಹೇಗೆ ಆದೀತು? ಹಾಗೆಯೇ ಯಾವುದು ಪ್ರತ್ಯಕ್ಷ ಕಾಣುವ ಸ್ವರೂಪವಿರುವದೋ, ಅದು ಇಲ್ಲದಂತೆ ಹೇಗೆ ತೋರಿತೋ? (ತೋರುವುದಿಲ್ಲ) ಅದು ಹೇಗೆ ಅಪ್ರತ್ಯಕ್ಷವಾದೀತು? (ಅಂದರೆ ನಿರಾಕಾರ ಆಗಲಾರದು) ಅದು ಆನಂದ ಸ್ವರೂಪವು, ದುಃಖಕರವು ಹೇಗೆ ಆಗುತ್ತದೆ (ಆಗಲಾರದು) ಹೀಗೆ ಸಹಜಾವಸ್ಥೆಯಲ್ಲಿರುವ ಸಚ್ಚಿದಾನಂದ ಆತ್ಮ ಸ್ವರೂಪವನ್ನು ಮನುಷ್ಯನು ಹೊಂದಬೇಕು. ಆಗ ಮಾತ್ರ ಮೋಕ್ಷ ದೊರಕುವದು.

ಜ್ಞಾನೇಶ್ವರರ ಧರ್ಮಪತ್ನಿ ಸಾಧ್ವಿ ಯೋಗಿಮಣಿ-ಮುಕ್ತಾಬಾಯಿ. ಚಾಂಗದೇವರಿಗೆ ವಿವಿಧ ರೀತಿಯಲ್ಲಿ ಬೋಧಿಸಿದರು. ಕೆಲವು ರಹಸ್ಯಗಳನ್ನು ಮುಕ್ತಾಬಾಯಿಯಿಂದ ಚಾಂಗದೇವರು ತಿಳಿದುಕೊಂಡರು. ಅಂದರೆ ಸದ್ಗುರುವಿನ ಉಪದೇಶದಿಂದ ಶುದ್ಧ ಹೃದಯಿಗಳಾದವರಿಗೆ- ಜೀವ ಬೇರೆ, ಪರಮಾತ್ಮ ಬೇರೆ ಎಂಬದ್ವೈತ ಭಾವನೆ ಹುಟ್ಟುವುದಿಲ್ಲ ಎಂದು ಅದ್ವೈತವನ್ನು ಉಪದೇಶಿಸಿದಳು, ಚಾಂಗದೇವರು ಅವರಿಗೆ ವಂದಿಸಿ ತಮ್ಮ ತಾಯಿಯೆಂದು ಸಂಬೋಧಿಸಿದರು. ಚಾಂಗದೇವರು ಮುಕ್ತಾಬಾಯಿಯನ್ನು ತಾಯಿಯೆಂದು ಕರೆದುದನ್ನೂ ಮುಕ್ತಾಬಾಯಿಯು ಅವರನ್ನು ತಮ್ಮ ಮಗನೆಂದು ಕರೆದುದನ್ನೂ ಅವರಿಬ್ಬರ ಆರಂಭಗಳಲ್ಲಿ ನೋಡಬಹುದು. ಮುಕ್ತಾಬಾಯಿಯು ಚಾಂಗದೇವರನ್ನು ಹಠಯೋಗದಿಂದ ದೂರಮಾಡಿ ರಾಜಯೋಗಿಗಳನ್ನಾಗಿ ಮಾಡಿದ ಗುರುವು. ಮರಾಠಿ ಸಾಹಿತ್ಯದಲ್ಲಿ ಇದೊಂದು ಅಪೂರ್ವ ಪ್ರಸಂಗವಾಗಿ ಗೋಚರಿಸುತ್ತದೆ.

ಜ್ಞಾನೇಶ್ವರರು ವಾರಕರಿ ಸಂತ ಸಂಪ್ರದಾಯದ ಪ್ರವರ್ತಕರು. ಅವರು ಎಲ್ಲ ಸಂತರೊಂದಿಗೆ ಆಳಂದಿಗೆ ಬಂದರು. ಅಷ್ಟರಲ್ಲಿ ಅವರು ಮರಾಠಿಯಲ್ಲಿ ಭಗವದ್ಗೀತೆಯ ಮೇಲೆ ಟೀಕೆ, ಜ್ಞಾನೇಶ್ವರಿ 'ಚಾಂಗದೇವ ಪಾಸಸ್ಟಿ' ಮತ್ತು ನಿವೃತ್ತಿನಾಥರ ಅಜ್ಞಾನುಸಾರ ಅನುಭವಾಮೃತ ಗ್ರಂಥಗಳನ್ನು ಬರೆದು ಲೋಕವಿಖ್ಯಾತರಾದರು.

ಚಾಂಗದೇವರು ಅನ್ನ ನೀರುಗಳಿಲ್ಲದೆ ಕೇವಲ ಹವೆಯ ಮೇಲೆ ಇದ್ದು ಪರಮನನ್ನು ಧ್ಯಾನಿಸುತ್ತ ಕಠಿಣ ತಪಸ್ಸಿನಲ್ಲಿ ಮಗ್ನರಾದರು. ಈ ತರುಣ ಯೋಗಿಯ ತಪಸ್ಸನ್ನು ನೋಡಿ ಋಷಿ-ಮುನಿಗಳಿಗೆ ಆಶ್ಚರ್ಯವಾಯಿತು. ಈ ಹಠಯೋಗಿಯು ಒಂದೇ ಕಾಲಿನ ಮೇಲೆ ನಿಂತು ತಪಸ್ಸು ಮಾಡುತ್ತಿದ್ದರು. ಇವರ ತಪೋಭಂಗ ಮಾಡಲು ಅನೇಕ ತೊಂದರೆಗಳು ಉದ್ಭವಿಸಿದವು. ಚಾಂಗದೇವರು ಯೋಗದಲ್ಲಿ ತಲ್ಲೀನರಾಗಿ ಪರಬ್ರಹ್ಮನಾದ ಪಂಚಾನನ್ನು ಅನನ್ಯವಾಗಿ ಸ್ತುತಿಸಿ ತಮಗೆ ದರ್ಶನವೀಯಬೇಕೆಂದು ಪ್ರಾರ್ಥಿಸಿದರು. ಇವರ ಭಕ್ತಿ ಮತ್ತು ತಪಸ್ಸಿಗೆ ಮೆಚ್ಚಿ ವಿಶ್ವತರ್ಕನಾದ ವಿರಾಟ್ ವಿಶ್ವಕರ್ಮನು ಪಂಚಮುಖ,

ದಶಭುಜಗಳಿಂದ ದಶ ಆಯುಧಗಳನ್ನು ಧರಿಸಿ, ದಿವ್ಯಸ್ವರೂಪವಾಗಿ ಪ್ರಕಟಗೊಂಡನು. ಚಾಂಗದೇವರು ಆ ವಿಶ್ವಜ್ಞನನ್ನು ನೋಡಿ ಸಂತುಷ್ಟನಾಗಿ, ಆತನ ಪಾದಗಳಿಗೆ ಬಿದ್ದು ಹೀಗೆ ಸ್ತುತಿಸಿದನು.

ಜಯದೇವ ಜಯದೇವ ಜಯ ವಿಶ್ವಕರ್ಮ| ಆರತಿ ಓಂವಾಳು
ಭಾವರ್ತಿ ಓಂವಾಳು ತುಜ ಪುರುಷೋತ್ತಮಾ||ಜಯ||
ಅಧಿಕ ಮಾಘ ಮಾಸ ಶುಕ್ಲತ್ರಯೋದಶಿ ಪ್ರಾತಃ ಕಾಳಿ ಭೀಮಾತೀರಿ
ತುಂ ಪ್ರಕಟಲಾಸಿ ಪಂಚಮುಖೆದಶಮುಖ ಆಯುಧ ಶೋಭತಿ||
ಪೀತಾಂಬರಧಾರಿ ಪಂಚಮುಕುಟ ಝುಳಕ ತಿ||ಜಯ||

ಸರಳದೇವಾ ಮಾಝಿ ಅಗಾಧ ತಝಿ ಕರಣಿ ಸೃಷ್ಟಿಉತ್ಪನ್ನಕರಿಸಿ ತುಂ
ಪರಮ ಖಾಣಿ|| ತುಝೆ ನಾಮಸ್ಮರಿತಾ ಸಂಕಟ ನಿವಾರಿ
ಸರಳ ಮೋಷದೇಹಿ ತು ಪರಮ ತಾರಿ||ಜಯ||

ಪುಂಡಲಿಕಾಸನ್ನಿಧ ವಿಶ್ವಜ್ಞೋಬ ತೀರ್ಥ ತೇಥ ಪ್ರಗಟಲಾಸಿ
ಸಕಳಹೀ ತೀರ್ಥೆ| ಚಾಂಗದೇವ ಮ್ಹಣೇ ಕೃಪಾಸಾಗರಾ ಆರತಿ
ಓಂ ವಾಳು ತುಧ ವಿಶ್ವಂಭರಾ||ಜಯ||

ಈ ರೀತಿ ಚಾಂಗದೇವನು ಸ್ತುತಿಸಿದ ನಂತರ ಪ್ರಸನ್ನನಾದ ವಿಶ್ವಕರ್ಮ "ಎಲೈ ಚಾಂಗದೇವನೆ ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೇನು ಬೇಕೋ ಅದನ್ನು ಕೇಳಿಕೋ" ಎಂದನು. ಚಾಂಗದೇವರು "ದೇವ ದೇವನೆ ನಿನ್ನ ಕೃಪೆಯಿಂದ ನನಗೆಲ್ಲ ಸಂಪತ್ತೂ ಇದೆ. ನನಗೆ ಅಪಾರವಾದ ಯೋಗೈಶ್ವರ್ಯವನ್ನು ದಯಪಾಲಿಸು" ಎಂದು ಪ್ರಾರ್ಥಿಸಲು, ದೇವಾಧಿದೇವನು "ತಥಾಸ್ತು" ಎಂದು ಅನುಗ್ರಹಿಸಿದನು. ತನ್ನ ಲೋಹದಂಡ (ತ್ರಿಶೂಲ)ವನ್ನು ಕೆಳಗಿಟ್ಟು ನುಡಿದನು- ಲೋಹದಂಡವನ್ನಿಟ್ಟ ಈ ಸ್ಥಳದಲ್ಲಿ ಸರ್ವತೀರ್ಥಗಳು ಸ್ಥಾಪಿತವಾಗಿವೆ. ಈ ತೀರ್ಥವು ಸಕಲ ತೀರ್ಥಗಳಿಗೆ ಆಗರ, ವಿಶ್ವಜ್ಞ ಲೋಹ ತೀರ್ಥವೆಂದು ಪ್ರಖ್ಯಾತವಾಗುವುದು. ನೀನು ನಿನ್ನ ಜನ್ಮಸ್ಥಳಕ್ಕೆ ಹಿಂದಿರುಗು. ಪ್ರತಿದಿನ ಈ ಪಂಢರಪುರಕ್ಕೆ ಆಕಾಶ ಮಾರ್ಗವಾಗಿ ಬಂದು ಈ ತೀರ್ಥ ವನ್ನು ಮತ್ತು ನನ್ನ ಮಯ ಸ್ವರೂಪನಾದ ವಿಠ್ಠಲನನ್ನು ಸೇವಿಸು. ಕೆಲವು ವರ್ಷಗಳಾದ ಮೇಲೆ ನನ್ನ ವೈಷ್ಣವಾಂಶದಿಂದ ಅವತರಿಸುವ ಮಹಾಜ್ಞಾನಿಯು ಈ ಕ್ಷೇತ್ರಕ್ಕೆ ವಿಶೇಷ ಮಹತ್ವವನ್ನುಂಟು ಮಾಡುವನು. ಅವನಿಂದ ನೀನು ಉಪದೇಶವನ್ನು ಹೊಂದು" ಎಂದು ಆಶೀರ್ವದಿಸಿ ಅಂತರ್ಧಾನನಾದನು. ಪಂಢರಪುರದಲ್ಲಿ ಇಂದಿಗೂ ಪರಮಪಾವನವಾದ ತೀರ್ಥವಿದ್ದು ಅದಕ್ಕೆ ವಿಶ್ವಜ್ಞಲೋಹ ತೀರ್ಥವೆನ್ನುವರು. ಚಾಂಗದೇವರ ತಪಃ ಪ್ರಭಾವದಿಂದ ವಿರಾಡ್ವಿಶ್ವಕರ್ಮನು ಪ್ರಕಟನಾಗಿ ಉದ್ಭವಿಸಿದ ಲೋಹ ತೀರ್ಥದಿಂದ ಪಂಢರಪುರದ ಮಹಾತ್ಮೆಯು ಹೆಚ್ಚಿ ಭೂವೈಕುಂಠವೆನ್ನಿಸಿತು. ಲೋಹ ತೀರ್ಥದ ಹತ್ತಿರವೇ ವಿಶ್ವಕರ್ಮನ ದೇವಾಲಯವೂ ಇದ್ದಿತು. ಆದರೆ ಮುಸಲ್ಮಾನರ ದಾಳಿಯ ಕಾಲಕ್ಕೆ ಮೂರ್ತಿಯ ರಕ್ಷಣೆಗಾಗಿ ಅದನ್ನು ಒಯ್ದು ಬೇರೊಂದು ಕಡೆಗೆ ಇಟ್ಟಿರುವರು- ಎಂಬ ವಿಷಯ ಪುಣೆಯ ಪ್ರಸಿದ್ಧ ಮಾಹಾಪಂಡಿತರಾದ ಬ್ರಹ್ಮಶ್ರೀ ಬಾಳಾಶಾಸ್ತ್ರಿ ಕ್ಷೀರಸಾಗರರವರು ತಮ್ಮ "ಕನ್ನಡ ಸಾರ್ಥ ಶ್ರೀ ವಿಶ್ವಕರ್ಮ ವ್ರತ ಪೂಜಾ ಕಥಾ" ಗ್ರಂಥದ ೩ನೆಯ ಪುಟದಲ್ಲಿ ಈ ವಿಷಯವನ್ನು ವರ್ಣಿಸಿದ್ದಾರೆ.

ನವಲಗುಂದದವರಾದ ಡಾ.ಎ.ಸಿ.ಹಿರೇಮಠ ಇವರು ಸಹ ಸಾಹಿತ್ಯದ ದಿಗ್ಗಜರಲ್ಲೊಬ್ಬರು. ಇವರು "ಹಿಂದೂ ಮುಸ್ಲಿಂ ರಿಲೀಜಿಯಸ್ ಸಿಂಥೇಸಿಸ್ ಇನ್ ರಾಜಭಾಗ ಸವಾರ ಟೆಂಪಲ್ ಆಪ್ ಯಮನೂರು" ಎಂಬ ಪಿ.ಎಚ್‌ಡಿ ಮಹಾಪ್ರಬಂಧವನ್ನು ಬರೆದು ಕರ್ನಾಟಕ ವಿಶ್ವವಿದ್ಯಾಲಕ್ಕೆ ಸಾದರಪಡಿಸಿದ್ದಾರೆ.

ಸನ್ ೧೯೬೮ ರಲ್ಲಿ ಅತ್ತಿಕೊಳ್ಳ ಯಲ್ಲನಗೌಡರು ಯಮನೂರಿನ ಚಾಂಗದೇವರ ಬಗೆಗೆ ೨೦ ಪುಟಗಳಷ್ಟು ಬರೆದು ಪ್ರಕಟಿಸಿದರು. ಅದರ ನಂತರ ಮತ್ತೊಬ್ಬ ಸಾಹಿತಿಗಳಾದ ವ್ಹಿ.ಜಿ.ದೀಕ್ಷಿತ ಎಂಬವರು ನಾನಾಸಾಹೇಬ ಬರ್ಗೆಯವರ ಸಹಾಯದಿಂದ ಚಾಂಗದೇವರ ಚರಿತ್ರೆಯನ್ನು ಅತ್ಯಂತ ವ್ಯವಸ್ಥಿತ ರೀತಿಯಲ್ಲಿ ಶಾಸ್ತ್ರೀಯವಾಗಿ ಬರೆಯಲ್ಪಟ್ಟ ಕೃತಿಯೇ "ರಾಜಾಭಾಗಸವಾರ ಯೋಗಿ ಚಕ್ರವರ್ತಿ ಚಾಂಗದೇವ". ಈ ಕೃತಿಯನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟು ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಉರುಸಿನ ಸಂದರ್ಭದಲ್ಲಿ ಯಮನೂರು ಕ್ಷೇತ್ರದ ಮಹಿಮೆ ಕುರಿತು ಅನೇಕ ಬಿಡಿ ಲೇಖನಗಳು ಕೂಡಾ ಪ್ರಕಟವಾಗಿರುತ್ತವೆ. ಊರಿನಲ್ಲಿ ಅನೇಕ ಭಜನಾ ಮೇಳದವರು ಹಾಡುಗಳನ್ನು ರಂಜನೀಯವಾಗಿ ಹಾಡುತ್ತಾರೆ.

ಹೀಗೆ, ಇನ್ನೂ ಅನೇಕ ಬಿಡಿ ಲೇಖನಗಳು, ಕವಿತೆಗಳು, ಮಹಾಪ್ರಬಂಧಗಳಿವೆ. ಸ್ವತಃ ಚಾಂಗದೇವರೇ ಉತ್ತಮ ಸಾಹಿತಿಗಳಾಗಿದ್ದರು. ಅವರು ಕೂಡಾ ಕೃತಿಗಳನ್ನು ಬರೆದಿದ್ದಾರೆ. ಹೀಗೆ ಯಮನೂರು ತನ್ನದೇ ಆದ ವಿಶಿಷ್ಟ ಚಿರಸ್ಮರಣೀಯ ಕೊಡುಗೆಯನ್ನು ಕನ್ನಡ ಸಾಹಿತ್ಯಕ್ಕೆ ಕೊಟ್ಟಿದೆ.

ವಿನಾಯಕ ಲಕ್ಷ್ಮಣ ಭಾವೆಯವರು ಗ್ರಂಥ ಮಹಾರಾಷ್ಟ್ರ ಸಾರಸ್ವತ ಎಂಬ ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ಕವಿ ಚಕ್ರವರ್ತಿ ತ್ರಿವಿಕ್ರಮ

ಕವಿಚಕ್ರವರ್ತಿ ತ್ರಿವಿಕ್ರಮ

ವಿದ್ಯಾಪತಿ ಭಾಸ್ಕರ ಭಟ್ಟ

ಗೋವಿಂದ ಸರ್ವಜ್ಞ

ಪ್ರಭಾಕರ

ಮನೋರಥ

ಕವೀಶ್ವರ ಮಹೇಶ್ವರಾಚಾರ್ಯ

ಭಾಸ್ಕರಾಚಾರ್ಯ (ಲೀಲಾವತಿ ಗ್ರಂಥ ಬರೆದವ)

ಜ್ಯೋತಿಷಿ ಲಕ್ಷ್ಮೀಧರ

ಚಾಂಗದೇವ.

ಹೀಗೆ ವಂಶಾವಳಿಯು ಇದೆ.

ಮರಾಠಿ ಸಾಹಿತ್ಯದ ಪ್ರಖ್ಯಾತ ಸಾಹಿತಿ ಶ್ರೀ ಲಕ್ಷ್ಮಣರಾವ್ ಪಾಂಗಾರಕರರು ತಮ್ಮ "ಮರಾಠೀ ವಾಜ್ಮಯಾಚಾ ಇತಿಹಾಸ" (ಪ್ರಥಮ ಖಂಡ)ದಲ್ಲಿ- ಕಳೆದ ೨೦೦ ವರ್ಷಗಳಲ್ಲಿ ಚಾಂಗದೇವ ಎಂಬ ಹೆಸರಿನ ೪-೫ ಜನ ಪುರುಷರು ಆಗಿ ಹೋಗಿದ್ದಾರೆ. ಅವರಲ್ಲಿ ಚಾಂಗಾವಟೇಶ್ವರ ಮತ್ತು ಚಾಂಗಾಕೇಶವದಾಸರೆಂಬವರು ಜ್ಞಾನೇಶ್ವರರ ಸಮಕಾಲೀನರಾಗಿರುತ್ತಾರೆ ಎಂಬ ವಿಷಯ ತಿಳಿಸಿದ್ದಾರೆ.

ಚಾಂಗಾಮುಧೇಶ (ಶಕೆ ೧೪೨೭) ಮತ್ತು ಚಾಂಗಾ ಮರುದ್ ಗಣ ಮೊದಲಾದವರು ನಂತರದಲ್ಲಿ ಆಗಿ ಹೋಗಿದ್ದಾರೆ. ಚಾಂಗಾವಕೇಶ್ವರನೇ ಯೋಗಿ ಚಕ್ರವರ್ತಿ ಚಾಂಗದೇವರು. ಈ ಮಹಾಯೋಗಿಯು ಪ್ರಸಿದ್ಧನಾಗಿ ಹೋದ ಮೇಲೆ ಆತನ ಹೆಸರನ್ನು ಅವನ ವಂಶದವರು ಅಥವಾ ಸಂಪ್ರದಾಯದವರು ತೆಗೆದುಕೊಂಡು ತಮ್ಮ ಮಕ್ಕಳಿಗೆ ಇಡುತ್ತ ಹೋದರು. ಹೀಗೆ ಅವರ ಸಂಬಂಧವು ಚಾಂಗಾವಟೇಶ್ವರನೊಂದಿಗೆ ಇರುತ್ತದೆ ಎಂಬ ವಿಷಯ ಇವರ ಗ್ರಂಥದಲ್ಲಿ ಉಲ್ಲೇಖವಾಗಿದೆ.

ಶ್ರೀಪಾಂಗಾರಕರು ತಮ್ಮ ಗ್ರಂಥರತ್ನವಾದ-"ಮರಾಠಿ ವಾಙ್ಮಯಾಚಾ ಇತಿಹಾಸ ಭಾಗ ೧", ಪುಟ ೪೬೯ ರಲ್ಲಿ ವಿವಿಧ ಸಂತರ ಮಹಾಂತರ ಗುಣ ವಿಶೇಷಗಳನ್ನು ಹೇಳುವಾಗ- 'ಜ್ಞಾನೇಶ್ವರ ಭಕ್ತಿಯೋಗ', 'ಚಾಂಗದೇವರ ಯೋಗೈಶ್ವರ್ಯ'ವನ್ನು ಕುರಿತು ಬಹಳ ಸುಂದರವಾಗಿ ರಮ್ಯವಾಗಿ ಚಿತ್ರಿಸಿದ್ದಾರೆ.

ಈ ರೀತಿಯಾಗಿ ಯಮನೂರಿನ ಪೀರಾ ಚಾಂಗಾದೇವರನ್ನು ಕುರಿತು ಅನೇಕ ಮಹನೀಯರು ಹಾಡಿ ಹರಿಸಿದ್ದಾರೆ. ಜೊತೆಗೆ ಚಾಂಗಾದೇವರು ಕೂಡಾ ಆಧ್ಯಾತ್ಮ ಸಾಹಿತಿಗಳು ಆಗಿದ್ದರೆಂಬುದು ಈ ಮೇಲೆ ಉಲ್ಲೇಖಿಸಿದ ಸಾಹಿತ್ಯದಿಂದ ತಿಳಿದು ಬರುತ್ತದೆ.

**೫.೩. ಜನಪದ ಸಾಹಿತ್ಯ**

ಮಾನವ ಈ ಭೂಮಿಗೆ ಬಂದಾಗಿನಿಂದ ಮಣ್ಣಾಗಿ ಹೋಗುವವರೆಗೂ ಹಲವಾರು ಮಜಲುಗಳ ಮಧ್ಯೆ ಬದುಕುವ ಮಾನವನಿಗೆ ಹೊಸ ಹೊಸ ಅನುಭವಗಳ ಸವಿ ಅಂದರೆ ಪ್ರೀತಿ, ಪ್ರೇಮ, ಕಾಮ, ಮತ್ಸರ, ಮೋಹ ಹೀಗೆ ಹಲವಾರು ಅನುಭವಗಳನ್ನು ಪಡೆಯುತ್ತಾ ಬದುಕು ಸವೆಸುತ್ತಾನೆ. ಈ ಅನುಭವಗಳ ರಾಶಿ ಫಲವೇ ಜನಪದ ಸಾಹಿತ್ಯ. ಜನ ಸಮುದಾಯದಲ್ಲಿ ಮೌಖಿಕ ಪರಂಪರೆಯಲ್ಲಿ ನಿರಂತರವಾಗಿ ಉಳಿದು ಬಂದಿರುವ ಹಾಡುಗಳೇ ಜನಪದಗೀತೆಗಳು ಎನಿಸಿಕೊಳ್ಳುತ್ತವೆ. ಜನಪದ ಗೀತೆಗಳನ್ನು ರಚಿಸುವ, ಹಾಡುವ ನಿಶ್ಚಿತ ಕ್ರಮಗಳಾವವೂ ಇಲ್ಲ. ಕೇಳಿ ನೆನಪಿಟ್ಟುಕೊಳ್ಳುವುದರಿಂದ ಹಾಡುವುದರ ಜೊತೆಗೆ ಧ್ವನಿಗೂಡಿಸುವುದರಿಂದ ಅವುಗಳನ್ನು ಕಲಿಯುತ್ತಾರೆ. ಪ್ರತಿಯೊಬ್ಬ ಜನರ ಜೀವನಾನುಭವದ ಈ ಹಾಡನ್ನು ನಾವು ಈ ಸಾಹಿತ್ಯದಲ್ಲಿ ಕಾಣುತ್ತೇವೆ. ಯಮನೂರಿನ ಪರಿಸರದಲ್ಲಿ ಜನಪದಗೀತೆ, ತ್ರಿಪದಿ, ಸೋಬಾನೆ ಪದಗಳು, ಕತೆ, ಗಾದೆ, ಒಗಟು, ಒಡಪು, ಶಿಶುಗೀತೆಗಳು ಹೇರಳವಾಗಿ ಸಿಗುತ್ತವೆ.

**ಜನಪದ ಗೀತೆಗಳು**

ಯಮನೂರಿನಲ್ಲಿ ಜನಪದ ಗೀತೆಗಳಾದ ಹೂ ಮುಡಿಸುವ ಹಾಡು, ಬೀಸುವ ಹಾಡು, ಮಳೆರಾಯನ ಹಾಡು, ಕುಟ್ಟುವ ಹಾಡು, ಜೋಕುಮಾರನ ಹಾಡು, ಗುಳ್ಳವ್ವನ ಹಾಡು, ಗೌರಿ ಹಾಡು, ಜೋಗುಳ ಹಾಡು, ಸೀಮಂತದ ಹಾಡು, ಆರತಿ ಪದ್ಯ, ಯಮನೂರಪ್ಪನ ಮೇಲಿದ್ದ ಹಾಡುಗಳು ಹೀಗೆ ಒಂದೇ ಎರಡೇ ಜನಪದ ಹಾಡುಗಳ ಖಣಿಯೇ ಇಲ್ಲಿದೆ. ಜನಪದ ಹಾಡುಗಳು ವಯೋವೃದ್ಧರ ಬಾಯಿಂದ ಬಾಯಿಗೆ ಗುನುಗುತ್ತಿವೆ. ಉಸಿರು ತೆಗೆದುಕೊಳ್ಳಲು ಆಗದೇ ಇದ್ದರೂ ಹಲ್ಲು ಹೋದ ತಮ್ಮ ಬಾಯಿಂದ ಅತ್ಯಂತ ಸುಂದರವಾಗಿ ಉದ್ದುದ್ದ ಹಾಡುಗಳನ್ನು ಕೇಳಿದರೆ ಈಗಿನ ಪೀಳಿಗೆಯವರು ಆಶ್ಚರ್ಯಪಡಬೇಕಾಗುತ್ತದೆ. ಅವರೇ ಹೇಳುವ ಹಾಗೆ "ನಮ್ಮಹಾಡನ್ನು ಈಗಿನೋರು ಯಾರು ಕೇಳ್ತಾರೆ,

ಯಾರು ಕಲಿತಾರೆ'' ಎಂಬ ಅವರ ಮಾತಿನಲ್ಲಿಯ ನೋವು ಕಾಣುತ್ತದೆ. ಅಷ್ಟೇ ಅಲ್ಲ ಈಗಿನವರ ಬಾಯಿಂದ ಮಾತ್ರ ಜನಪದ ಗೀತೆಗಳನ್ನು ಕೇಳಬಹುದು. ಏಕೆಂದರೆ ಇದೆಲ್ಲವನ್ನು ನೋಡಿದರೆ ಜನಪದ ಹಾಡುಗಳ ಅವನತಿಯ ಲಕ್ಷಣ ಕಂಡುಬರುತ್ತದೆ. ಆಧುನಿಕತೆಯ ಭರಾಟೆ ಈ ಎಲ್ಲ ಅವಘಡಗಳಿಗೆ ಮೂಲ ಕಾರಣ ಎನ್ನಬಹುದು.

**೫.೩.೧. ಜನಪದ ಗೀತೆಗಳು**

**ಯಮನೂರಪ್ಪನ ಮಹಿಮೆಯನ್ನು ಕುರಿತಾಗಿದ್ದು**

ಎಂಟೆಂಟು ದಿನಕೊಮ್ಮೆ ಬರುವುದು ಬೇಸ್ತ್ಯಾರ
ಕೊರಳಲ್ಲಿ ಹಾಕ್ಯಾರ ಹೂವಿನ ಹಾರ|
ದೀನ ದೀನ ಅನ್ನುವರ ನಮ್ಮ ಸತ್ಯುಳ್ಳಪೀರ
ಮತ್ತೆ ಯಮನೂರ.

ಬಾಳೆ ಹಣ್ಣಿನಾಗ ಸೀಳಿ ಸಕ್ಕರೆ ತುಂಬಿ
ಬಾಳಾಕ ಮಂದಿ ಬರುತಾರ ಪೀರ
ದೀನ ದೀನ ಅನ್ನುವರ ನಮ್ಮ ಸತ್ಯುಳ್ಳಪೀರ
ಮತ್ತೆ ಯಮನೂರ

ನಿಂಬಿ ಹಣ್ಣಿನಾಗ ಸೀಳಿ ಸಕ್ಕರೆ ತುಂಬಿ
ಲೆಕ್ಕಿಲ್ಲ ಮಂದಿ ಬರುತಾರ ಪೀರ
ದೀನ ದೀನ ಅನ್ನುವರ ನಮ್ಮ ಸತ್ಯುಳ್ಳಪೀರ
ಮತ್ತೆ ಯಮನೂರ

ಹಾರೂರಗೆ ಹರ ನಾದೆ ಮೂಸುಲ್ರಗೆ ಪೀರನಾದೆ
ಶೀಲವಂತರಿಗೆ ಶಿವನಾದೆ ಪೀರ
ದೀನ ದೀನ ಅನ್ನುವರ ನಮ್ಮ ಸತ್ಯುಳ್ಳಪೀರ
ಮತ್ತೆ ಯಮನೂರ

ಬೆಣ್ಣಿಹಳ್ಳದ ಮ್ಯಾಲೆ ಬೆಳ್ಳಗ ಕಾಣುದೇನ
ಬೆಳ್ಳಿ ನಿಶ್ಯಾನಿ ಬಿಳಿಗುದರಿ ಪೀರ
ದೀನ ದೀನ ಅನ್ನುವರ ನಮ್ಮ ಸತ್ಯುಳ್ಳ ಪೀರ
ಮತ್ತೆ ಯಮನೂರ

ಬೆಳ್ಳನ ನಿಶ್ಯಾನಿ ಬಿಳಿ ಗುದರಿ
ಯಮನೂರೊಡೆಯ ಹಳ್ಳಿ ಊರಾಗಿ

ನೆರೆದಾನ ಪೀರ

ದೀನ ದೀನ ಅನ್ನುವರ ನಮ್ಮ ಸತ್ಕುಳ್ಳೆ ಪೀರ

ಮತ್ತೆ ಯಮನೂರ

ಯಮನೂರಿನ ಚಾಂಗದೇವರು ಭಾವೈಕ್ಯತೆ ಮೂಡಿಸುವ ದೇವರೆಂದು ಎಲ್ಲರೂ ಕೊಂಡಾಡುತ್ತಾರೆ. ಹಿಂದೂ ಮುಸ್ಲಿಂರಾದಿಯಾಗಿ ಎಲ್ಲ ಮತ ಪಂಥದವರಿಂದ ಪೂಜಿಸಲ್ಪಡುವ ದೈವವಾಗಿದ್ದಾನೆ. ಅಲ್ಲದೆ ಹೋಳಿ ಹುಣ್ಣಿಮೆಯಾಗಿ ೩ನೆಯ ದಿನದಿಂದ ೫ ದಿವಸ ದೊಡ್ಡ ಪ್ರಮಾಣದಲ್ಲಿ ಜಾತ್ರೆ ಮತ್ತು ಉರುಸು ನಡೆಯುತ್ತದೆ. ಆಗ ಭಾರತದ ಮೂಲೆ ಮೂಲೆಗಳಿಂದ ಬರುವ ಜನರ ಮನಸ್ಸನ್ನು ಸೂರೆಗೊಂಡಿದೆ. ಹೀಗಾಗಿ ದೈವಗಳ ಜಾತ್ರೆಯಲ್ಲಿ ಜನರ ಸಡಗರ, ಸಂಭ್ರಮ ಆಚರಣೆಗಳು ಕಣ್ಣಿಗೆ ಕಟ್ಟುವಂತೆ ನಡೆಯುತ್ತವೆ.

**ಮೈನೆರೆದಾಗ ಹೇಳುವ ಹಾಡು**

ಹುಡುಗಿ ಮೈನೆರೆದಾಗ ಐದು ಅಥವಾ ಹನ್ನೊಂದು ಅಥವಾ ಹದಿನಾರುದಿನಗಳವರೆಗೆ ಕೂಡಿಸಿ ಆರತಿ ಮಾಡಿ ಹೂ ಮುಡಿಸುತ್ತಾರೆ. ಇಂತಹ ಸಂದರ್ಭಗಳಲ್ಲಿ ಹಾಡುವ ಸೋಬಾನ ಹಾಡುಗಳು ಇಲ್ಲಿ ಸಮೃದ್ಧವಾಗಿ ಸಿಗುತ್ತವೆ. ಮದುವೆ ಸಂದರ್ಭದಲ್ಲಿ ಹಾಡುವ ಸೋಬಾನೆ ಹಾಡುಗಳಿಗೂ ಇಲ್ಲಿ ಕೊರತೆಯಿಲ್ಲ.

ಸೋ ಬನ್ನಿರೆ ಸೋಬಾನೆ ಬನ್ನಿರೆ|

ಹಟ್ಟಿಯಲಿ ನಿಂತು ನಿಸ್ತ್ರೆ ಮೈನೆರೆದಾಳೊ ಹಟ್ಟಿಯ ಗೌಳಿ ನುಡಿದಾವೋ

ಹಟ್ಟಿಯ ಗೌಳಿ ಏನಂತ| ನುಡಿದಾವೋ

ಎಲ್ಲಾ ಭಾಗ್ಯ ಬರಲಿ ತವರಿಗೆ ||

ಬಾಗಿಲಲಿ ನಿಂತು ಬಾಲೆ ಮೈನೆದಾಳೋ ಬಾಗಿಲಗೌಳಿ ನುಡಿದಾವೋ

ಇಲ್ಲದ ಭಾಗ್ಯ ಬರಲಿ ತವರಿಗೆ

ಕೊಟಗೆಲಿ ನಿಸ್ತ್ರೆ ಮೈನೆರೆದಾಳೋ ಕೊಟಗೆಯ ಗೌಳಿ ನುಡಿದಾವೋ

ಕೊಟಗೆಯ ಗೌಳಿ ಏನಂತ| ನುಡಿದಾವೋ

ಎಲ್ಲಾ ಭಾಗ್ಯ ಬರಲಿ ತವರಿಗೆ

ಸರಸತಿ ಸಣ್ಣೊಳೆ ನಗು ಮುಖದ ಕಡು ಚೆಲುವೆ

ಕಲುಕಂಟಕದ ಅರಸೆ ಗಿರಿಜಮ್ಮ| ಪಾರ್ವತಿದೇವಿ

ಕಲಿಸೆ ಕಲ್ಯಾಣದ ಪದಗಳ

ಸರಸತಿ ಸಣ್ಣೊಳೆ ನಗು ಮುಖದ ಕಡು ಚೆಲುವೆ

ಕಲುಕಂಟಕದ ಅರಸೆ ಗಿರಿಜಮ್ಮ| ಪಾರ್ವತಿದೇವಿ

ಕಲಿಸೆ ತಲ್ಲಣದ ಮತಿಗಳೆ.

ಸೋಬಾನೇಳುವ ನಾವೇನು ಬಲ್ಲೇವು?

ದೇವಲೋಕದಲ್ಲಿ ಬಸವಣ್ಣ| ಮದುವೆ ಮಾಡಿ
ಭೂಲೋಕಕೆಲ್ಲ ಕಳಿಸಿದ.

ಹತ್ತಾಳುದ್ದದ ನೀರು ಎತ್ತಬಾರದು ಪದುಮ
ಎತ್ತೇವು ಅದರ ಮೊದಲಿಂದ| ಸರಸತಿ
ಕಿತ್ತಾಲಿಹಣ್ಣು ಒಳಲಂಚ| ಕೊಟ್ಟರೆ
ತಪ್ಪಿದ ಪದವ ಬರಕೊಡೆ.

ಆರುಳುದ್ದಾ ನೀರು ಏಳುಬಾರದ ಪದುಮ
ಹೇಳೆವ್ಯೆ ಅದರ ಮೊದಲ| ಸರಸತಿ
ಬಾಳೆಯ ಹಣ್ಣು ಒಳಲಂಚ| ಕೊಟ್ಟಾರೆ
ಮತ್ತೆರಡು ಪದವ ಬರಕೊಡೆ.

ಹೀಗೆ ಸಮೃದ್ಧವಾಗಿ ಕಂಡುಬರುವ ಮದುವೆಯ ಸಂದರ್ಭದ ಸೋಬಾನ ಹಾಡುಗಳನ್ನು ಹರಿಜನರು, ಕುರುಬರು, ಬಾರಿಕೇರು ಇತರೆ ಶ್ರಮಿಕ ವರ್ಗದವರು, ವೀರಶೈವರು ಇನ್ನು ಇತರ ಸಮುದಾಯದವರ ಮದುವೆಗಳಲ್ಲಿ ಹೆಚ್ಚಾಗಿ ಹಾಡುತ್ತಾರೆ. ಸೋಬಾನ ಪದಗಳು ಮದುವೆಯ ರೀತಿ-ನೀತಿಗಳನ್ನು ನಿಯಂತ್ರಿಸುವ ವಿಧಿಗಳೂ ಹೌದು. ಇವು ಮನಃಪೂರ್ವಕ ನುಡಿಗಳಂತೆ, ಇಂಪಾದ ಸಂಗೀತವನ್ನು ಒದಗಿಸುವುದರ ಜೊತೆಗೆ ಮದುವೆ ಆಚರಣೆಗಳ ಕ್ರಮ ತಪ್ಪದಂತೆ ಈ ಹಾಡುಗಳಲ್ಲಿ ವರ್ಣನೆಗಳು ಬರುತ್ತವೆ.

ಸಾಂಪ್ರದಾಯಿಕ ಪದಗಳನ್ನು ಸಹ ಇಲ್ಲಿ ವೈವಿಧ್ಯಮಯವಾಗಿ ಹಾಡುವವರಿದ್ದಾರೆ. ಗಿರಿಜವ್ವ ಸುರೇಬಾನ, ಎಲ್ಲಮ್ಮ ಚುರುಮರಿ, ರೇಣವ್ವ ಬಾಗಲಪ್ಪನವರ, ಕಾಶವ್ವ ಚುಳಕಿ, ಪಕ್ಕೀರವ್ವ ಮೊದಲಾದ ಇವರು ಯಮನೂರಿನ ಜನಪದ ಹಾಡುಗಾರರು. ಇವರಿಂದ ಸಾಕಷ್ಟು ಜನ ಮಹಿಳೆಯರು ಹಾಡುಗಳನ್ನು ಕಲಿತುಕೊಂಡಿದ್ದಾರೆ. ಇವರು ಹಾಡುವ ಹಾಡುಗಳಲ್ಲಿ ರಾಮಾಯಣ, ಮಹಾಭಾರತದ ಪಾತ್ರಗಳು, ಪತಿವ್ರತಾ ಸ್ತ್ರೀಯರ ಪಾತ್ರಗಳು ಇಣುಕಿ ಹೋಗುತ್ತವೆ.

ಜನಕರಾಯನ ಮಗಳು ಬನಕ ತೊಟ್ಟಿಲಕಟ್ಟಿ
ಲವ-ಕುಶರನ್ನು ತೂಗ್ಯಾಳೊ | ಸೀತಾದೇವಿ |
ನಗುತ ವನವಾಸ ಕಳೆದಾಳೊ

ಸೀತಾನ ಒಯ್ಯಾಗ ಶ್ರೀರಾಮ ಸಣ್ಣವ
ಆಗ ಹನುಮಂತ ಹಸುಗೂಸು | ಇದ್ದರು
ಸೀತಾನ ಸೆರೆಯ ಬಿಡಿಸ್ಯಾನ

ಅಡವಿ ಅರಣ್ಯದಾಗ ಹಡೆದಾಳ ಸೀತಮ್ಮ
ತೊಡಿಯ ತೊಳಿಯಾಕ ನೀರಿಲ್ಲ | ಹನುಮಂತ

ಸೇತುಗಟ್ಟ್ಯಾನ ಸಮದರಕ ||

ಹಣೆಯ ಬರಹದಗೆಯು ಕರೆದರು ತಪ್ಪದು
ಹರಿಚಂದರಾಯ ಸುಡುಗಾಡ | ಸೇರಿದರ
ಇದಿಯವನ ಚೆನ್ನ ಬಿಡಲಿಲ್ಲ ||

ರಾವಣನ ರಥದಾಗ ಅಡ್ಡ ಹಾರುವನ್ಯಾರ
ಅಂಜನಾದೇವಿ ಮಗ ಹನುಮ | ಬಿಟಬಾಣ |
ದಂಡ ಸುತ್ಯಾಕಿ ಬಡದಾವ

ಆರು ಕಾಲಿನ ರಥವ ಏರಿ ಹೊಂಟವನ್ಯಾರ
ಸೂರ್ಯನಂಥವ ಅರ್ಜುನ | ಕೈಯಾನ
ಸಾರತ್ಯಾಗ್ಯಾನ ಶ್ರೀಕೃಷ್ಣ

ಸೀತಾದೇವಿಯಷ್ಟು ಸಿರಿಯನುಂಡವರಿಲ್ಲ |
ದ್ರೌಪದಿಯಷ್ಟು ಹರಲಿಯ | ಹೊತ್ತವರು
ಈ ಲೋಕದಾಗ ಯಾರಿಲ್ಲ ||

ಎಲ್ಲಮ್ಮ ನಿನ್ನ ಮಗ ಎಳೆಯ ಪರಶುರಾಮು |
ಯಾರು ತೂಗಿದರ ಮಲಗೊಲ್ಲ | ಕೈಲಾಸ
ಪಾರ್ವತಿ ತೂಗಿದರ ಸುಖನಿದ್ದೆ

ಬಸವಣ್ಣನಂತಹ ಭಕ್ತಿವಂತರಿಲ್ಲ |
ನೀಲಮ್ಮನಂಥ ಶರಣೆಯರಿಲ್ಲ | ಹೇಮರೆಡ್ಡಿ
ಮಲ್ಲಮ್ಮನಂಥ ಸೊಸಿಯಿಲ್ಲ
ಅಣ್ಣ ಬಾರರ್ಜುನ ತಮ್ಮ ಬಾಸಹದೇವ |
ಹೊನ್ನ ಬಿಲ್ತಡೆದ ಕಲಿಭೀಮ | ಬಾರೆಂದು
ಬಣ್ಣಿಸಿ ಕುಂತಿ ಕರೆದಳು ||

### ಜೋಗುಳ ಹಾಡು

ಜೋಗುಳ ಹಾಡುಗಳಲ್ಲಿಯೂ ವೈವಿಧ್ಯತೆಯನ್ನು ಕಾಣಬಹುದು. ಈ ಜೋಗುಳ ಹಾಡಿನಲ್ಲಿ ದೇವರನ್ನು ನೆನೆಯುವರ ಜೊತೆಗೆ ಕಂದನ ವರ್ಣನೆಯನ್ನು ವಿವಿಧ ರೀತಿಯಲ್ಲಿ ಮಾಡಿ ಕಂದನ ಸ್ವರೂಪವನ್ನು ಕೂಡ ವರ್ಣಿಸುತ್ತಾರೆ.

ಕರಿಯಂಗಿ ಕಸೂತಿ ತಲೆತುಂಬ ಜಾವುಳ
ಅಂಗಳದಾಗ ನವಿಲಾಟ | ಅದಕಿಂತ

ರಂಗಯ್ಯನಾಟ ವಿಪರೀತ ತೂಗಿರೆ

ಜೋಗುಳ ಹಾಡಿದರ ಆಗಳೇ ಕೇಳ್ಯಾನ
ಹಾಲ ಹಂಚಿಲ ಮರೆತಾನ | ಕಂದ್ಯೆಗ
ಜೋಗುಳದಾಗ ಅತಿ ಮುದ್ದ

ಯಾತಕಳುತಾನೆಂದು ಎಲ್ಲಾರು ಕೇಳ್ಯಾರ
ಕಾಯದ ಹಾಲ ಕೆನಿಬೇಡಿ | ಕಂದಯ್ಯ
ಕಾಡಿ ಕೈ ಬಿಟ್ಟು ಇಳಿಯಾನ

ಅತ್ತೇನ ಕಾಡ್ಯಾನ ಮತ್ತೇನ ಬೇಡ್ಯಾನ
ಮತ್ತೆ ಮತ್ತೆನ ಧಿಮುಕವ | ಕೊಟ್ಟರೆ
ಗಪ್‌ಚಿಪ್ಪಾಗಿ ಮಲಗ್ಯಾನ

ಅಳುವ ಕಂದನ ತುಟಿಯು ಹವಳದ ಕುಡಿಹಾಂಗ
ಕುಡಿಹುಬ್ಬು ಬೇವಿನೆಸಳಂಗ | ಕಣ್ಣೋಟ
ಶಿವನ ಕೈಯಲಗು ಹೊಳೆದಂಗ

ಕಾಡಿಗ್ಹಚ್ಚಿದ ಕಣ್ಣು ತೀಡಿ ಮಾಡಿದ ಹುಬ್ಬು
ಮಾವಿನ ಹೋಳು ನಿನ ಕಣ್ಣು | ಕಂದಯ್ಯ
ಮಾವ ಬಣ್ಣೇಸಿ ಕರೆದಾನ

ಸಾಂಪ್ರದಾಯಿಕ ಪದಗಳನ್ನು ನಾವು ಹೆಂಗಸರ ಪದಗಳೆಂದೇ ಕರೆಯಬಹುದು. ಏಕೆಂದರೆ ಸಾಮಾನ್ಯವಾಗಿ ಇವು ಮಹಿಳೆಗೆ ಮೀಸಲಾದ ಗೀತೆಗಳಾಗಿವೆ. ಅಂದರೆ ಮನೆಯಲ್ಲಿ ಮಗು ಹುಟ್ಟುವ ಪೂರ್ವದಿಂದ ಹಿಡಿದು ಅಂದರೆ ಹೆಣ್ಣು ಚೊಚ್ಚಲ ಗರ್ಭಿಣಿಯಾದಾಗ ಆಕೆಯ ಜೀವನದಲ್ಲಿ ಹೊಸ ಹೊಸ ಅನುಭವಗಳು ಮೈದಳೆಯುತ್ತವೆ. ಏನೇನೋ ತಿನ್ನಬೇಕೆನಿಸುತ್ತದೆ. ಆಗ ಆಕೆಗೆ ಮೂರು ತಿಂಗಳಲ್ಲಿ ಕಳ್ಳ ಕುಬುಸ ಮಾಡುವುದರ ಮೂಲಕ ಆಕೆಯ ಬಯಕೆ ತೀರಿಸಲು ವಿವಿಧ ಬಗೆಯ ಭಕ್ಷ್ಯ ಬೋಜ್ಯಗಳನ್ನು ಮಾಡಿ ಕೊಡುತ್ತಾರೆ. ೮-೯ನೇ ತಿಂಗಳಿಗೆ ದೊಡ್ಡ ಕುಬುಸ ಮಾಡಿ ಬಯಕೆ ಬುತ್ತಿ ಕೊಟ್ಟು ಉಡಿಗೆ-ತೊಡಿಗೆಗಳನ್ನು ಇಟ್ಟು ಹೂ ಮುಡಿಸಿ ಆರತಿ ಮಾಡುತ್ತಾರೆ. ಆಗ ಈ ರೀತಿ ಹಾಡುತ್ತಾರೆ.

ಹಸಿರು ಕಡ್ಡಿ ಸೀರಿ ಟೋಪಮುಸಕ ಮ್ಯಾಲ ಮಾಡಿ
ಬಿಸಿಲಿಗೆ ಬೆನ್ನು ಕೊಟ್ಟು ನಡೆವಂಗಾಗ್ಯೆತಿ
ಬಾಲನ ಬಯಕೆ ಕೇಳಿ ಬಯಸಂಗಾಗ್ಯೆತಿ

ಹಸಿರು ಕುಬಸದ ಮ್ಯಾಲ
ಹಸನಾದೆರಡುವಂಕಿ ಧರಿಸಿ

ಬಿಸಿಲಿಗೆ ತೋಳ ತಿರುವಿ ನಡೆವಂಗಾಗೈತಿ

ಕಾಲ ಬೆಳ್ಳಿ ಗೆಜ್ಜಿ ಪೊಟ್ಟ ಹಾರ ಬೈತಲೆ ಬೊಟ್ಟು
ಮಾಲೆ ಜಡೆ ತುಂಬ ನಿಟಗೊಂಡ ನಡೆವಂಗಾಗೈತಿ
ಬಾಲನ ಬಯಕೆ ಕೇಳಿ ಬಯಸಂಗಾಗೈತಿ

ಬಿಳಿಯ ಜೋಳದ ರೊಟ್ಟಿ ಎಳ್ಳ ಚವಳಿಕಾಯಿ ಪಲ್ಯ
ಹೊಳೆಯ ದಂಡೀಲಿ ಕುತಗೊಂಡು ಉಣುವಂಗಾಗೈತಿ
ಬಾಲನ ಬಯಕೆ ಕೇಳಿ ಬಯಸಂಗಾಗೇತಿ

ಕರದ ಮರದ ಕರ್ಚಿಕಾಯಿ ಹಪ್ಪಳ, ಸಂಡಿಗೆ, ಉಪ್ಪಿನಕಾಯಿ
ಹೀಂಗ ನೆರಳಾಗ ಕುತಗೊಂಡು ಉಣುವಂಗಾಗೈತಿ
ಬಾಲನ ಬಯಕೆ ಕೇಳಿ ಬಯಸಂಗಾಗೈತಿ

ಹೂಗಾರ ಮನೀಗೆ ಹೋಗಿ ಹೂವಿನ ದಂಡಿ ಕಟ್ಟಿಸಿಕೊಂಡು
ರಾಯರ ಎಡಬದಿಗೆ ಕೂತಗೊಂಡು ಮುಡಿವಂಗಾಗೈತಿ
ಬಾಲನ ಬಯಕೆ ಕೇಳಿ ಬಯಂಗಾಗೈತಿ
ಇಂತಹ ಅನೇಕ ಹಾಡುಗಳು ಸಮೃದ್ಧವಾಗಿ ಸಿಗುತ್ತವೆ.

**ಶಿಶುಗೀತೆ**

ಈ ಹಾಡು ಪ್ರಾಯಶಃ ಕರ್ನಾಟಕದ ತುಂಬೆಲ್ಲಾ ಪ್ರಚಲಿತವಿರುವುದು. ಏಕೆಂದರೆ ಈ ಹಾಡನ್ನು ಮಕ್ಕಳನ್ನು ತೊಡೆಯ ಮೇಲೆ ಕೂಡಿಸಿಕೊಂಡು ಹೇಳಲು ಆರಂಭಿಸಿದರೆ ಇನ್ನು ೭-೮ ತಿಂಗಳ ಕೂಸು ಕೂಡಾ ತನ್ನ ಶರೀರವನ್ನೆಲ್ಲಾ ಅಲ್ಲಾಡಿಸುತ್ತದೆ. ಅದು ಈ ರೀತಿಯಾಗಿದೆ.

ಆನಿ ಬಂತ್ ಆನಿ
ಇದ್ಯಾಊರ ಆನಿ
ಬಿಜಾಪೂರ ಆನಿ
ಇಲ್ಲಿಗ್ಯಾಕ ಬಂತು
ಹಾದಿ ತಪ್ಪಿ ಬಂತು
ಹಾದಿಗೊಂದುಡ್ನು
ಬೀದಿಗೊಂದುಡ್ನು
ಸೇರಕೊಬ್ರಿ ತಂದು
ಲಟ ಲಟ ಮುರಿದು
ಹುಡುಗರ ಕೈಯಾಗ ಕೊಟ್ಟು

ಮಕ್ಕಳನ್ನು ಆಡಿಸುವಾಗ ಹಾಡುವ ಈ ಹಾಡಿನಲ್ಲಿ ಇತಿಹಾಸದ ಚಿತ್ರವಿದೆ. ಹಿಂದೆ ಬಿಜಾಪುರದ ಆದಿಲ್‌ಶಾಹಿಗಳು ಹಂಪೆಯನ್ನು ಕೊಳ್ಳೆ ಹೊಡೆದು ಸಂಪತ್ತನ್ನು ಆನೆಯ ಮೇಲೆ ಹೇರಿಕೊಂಡು ಹೋದರಂತೆ ಅದಕ್ಕಾಗಿ ಈ ಹಾಡು ಹುಟ್ಟಿತು ಎಂಬುದು ಹಿರಿಯರ ಅಭಿಪ್ರಾಯವಾಗಿದೆ.

ಹುಯ್ಯೋ ಹುಯ್ಯೋ ಮಳೆರಾಯ

ಹೂವಿನ ತ್ಯಾಟಕ ನೀರಿಲ್ಲ

ಬಾರೋ ಬಾರೋ ಮಳೆರಾಯ

ಬಾಳೆ ತ್ಯಾಟಕ ನೀರಿಲ್ಲ

ಚಚ್ಚೊ ಚಚ್ಚೋ ಮಳೆರಾಯ

ಪಚ್ಚೆ ಪೈರಿಗೆ ನೀರಿಲ್ಲ

ಕೊಟ್ಟೊ ಕೊಟ್ಟೊ ಮಳೆರಾಯ

ಕುಡಿಯೋ ಬಾವಿಗೆ ನೀರಿಲ್ಲ

ಮಳೆ ಬಾರದೆ ಬರಗಾಲ ಬಿದ್ದಂತ ಸಂದರ್ಭದಲ್ಲಿ ಹುಟ್ಟಿಕೊಂಡ ಈ ಹಾಡುಗಳನ್ನು ಮಕ್ಕಳ ಕೈ ಕೈ ಹಿಡಿದುಕೊಂಡು ಎದುರು-ಬದರು

ರತ್ತೊ ರತ್ತೊ

ರಾಯನ ಮಗಳೆ

ಬಿತ್ತೊ ಬಿತ್ತೊ

ಭೀಮನ ಮಗಳೆ

ಹದಿನಾರೆಂಟೆ

ಕಾಸಲಾಲೆ

ಕಡಿಯಲಾರೆ

ಬೈಟ್ಕಂಬ

ಬಾಳೆಕಂಬ

ಕುಕ್ಕನೆ ಕುತ್ಕೊ

ಕೂರೇ ಬಸವಿ

ಎಂದು ಹೆಣ್ಣುಮಕ್ಕಳು ಹಾಡುತ್ತಾರೆ. ಇದನ್ನೂ ಸಹ ಆಟದ ಜೊತೆ ಜೊತೆಗೆ ಹಾಡುತ್ತಾರೆ.

**ಬೀಸುವ ಹಾಡು**

ಯಂತ್ರ ಜಗತ್ತಿನ ದಾಳಿಯಿಂದಾಗಿ ಬೀಸುವ, ಕುಟ್ಟುವ ಕೆಲಸ ಕಡಿಮೆಯಾಗತೊಡಗಿದೆ. ಅದರ ಜೊತೆಗೆ ಬೀಸುವ, ಕುಟ್ಟುವ ಹಾಡುಗಳೂ ಸಹ ಮರೆಯಾಗತೊಡಗಿವೆ. ಇಂತಹ ಪರಿಸ್ಥಿತಿಯ ಮಧ್ಯದಲ್ಲೂ ಬೀಸುವುದು ನಿಂತರೂ ಬೀಸುವ ಹಾಡುಗಳು ನಿಂತಿಲ್ಲ ಎಂಬುದಕ್ಕೆ ಇಲ್ಲಿನ ಎಲ್ಲಮ್ಮ ಚುರುಮರಿ,

ಹನಮಮ್ಮ ಚುರುಮರಿಯವರ ಹಾಡುಗಳೇ ಸಾಕ್ಷಿ. ಇವರ ಹಾಡುಗಳು ಎಷ್ಟಿವೆ ಎಂದರೆ ಬೀಸುವ ಕಾಳು ಮುಗಿದರೂ ಹಾಡು ಇನ್ನೂ ಉಳಿಯುತ್ತವೆ ಎಂಬ ಮಾತನ್ನು ಹೇಳುತ್ತಾರೆ.

ಕುಟ್ಟು ಬೀಸುವ ಹಾಡು ಯಾವಾಕಿ ಕಲಿಸ್ಯಾಳ
ಕೃಷ್ಣನ ತಂಗಿ ಸುಭದ್ರಿ | ಕಲಿಸ್ಯಾಳ |
ಕೃಷ್ಣನ ಮ್ಯಾಲ ಪದಗೋಳ

ಸುಮ್ಮನ ಬೀಸಿದರ ಬೀಳುದು ಈ ಕಲ್ಲು
ನಾಗಸೊರದಂತೆ ದನಿಯೆತ್ತಿ | ಹಾಡಿದರ
ಗಮ್ಮನೆ ಬೀಳುವುದು ಈ ಕಲ್ಲು

ಪದ ಬಂದರ್ಹೇಳು ಬಾರದಿದ್ದರ ಶರಣಾಗು
ಪದವುಂಟು ನನ್ನ ಎದೆಯಲ್ಲಿ ತಾಮ್ರದ
ತಾಯ್ತುಂಟು ನನ್ನ ತೋಳಲ್ಲಿ

ರಾಗಿಯ ಕಲ್ಲಿಗಿ ರಾಜ್ಯವ ತಿರುಗ್ಯಾರೆ
ರಾಯ ಸಂಪನ್ನರ ಮಗಳಿಗೆ | ನೀಲಮಗೆ
ರಾಜ್ಯ ತಿರುಗ್ಯಾರೆ ಬಸವಯ್ಯ

ಬೀಸುವ ಕಲ್ಲೀಗಿ ದೇಶವ ತಿರುಗ್ಯಾರೆ
ಸಕಲ ಸಂಪನ್ನ ಮಗಳೀಗೆ | ನೀಲಮಗೆ
ರಾಜ್ಯ ತಿರುಗ್ಯಾರೆ ಬಸವಯ್ಯ

ಅಕ್ಕಿ ಬೀಸುವ ಕಲ್ಲೆ ಸಕ್ಕರೆ ಒಡೆಗಲ್ಲೆ
ಶೆಟ್ಟಿ ತಮ್ಮಯ್ಯ ಅರಮನೆ | ರಾಗಿ ಕಲ್ಲೆ
ಹಚ್ಚಿ ಬಾಗಿಲಿಗೆ ದನಿದೋರೆ

ರಾಗಿ ಬೀಸುವ ಕಲ್ಲೆ ರಾಜಾನ ಒಡಗಲ್ಲೆ
ರಾಯ ಅಣ್ಣಯ್ಯ ಅರಮನೆ | ರಾಗಿ ಕಲ್ಲೆ
ರಾಜಬೀದಿಗೆ ದನಿದೋರೆ

ಕಲ್ಲಮ್ಮ ಮಾತಾಯಿ ಮೆಲ್ಲಮ್ಮ ರಾಗಿಯ
ಜಲ್ಲ ಜಲ್ಲೇನೆ ಉದರಮ್ಮ | ನಾ ನಿನಗೆ
ನೆಲ್ಲಕ್ಕಿ ಪಡಿಯ ನಡೆಸೇನು

ಕಲ್ಲವ್ವ ಮಾತಾಯಿ ಮೆಲ್ಲವ್ವ ರಾಜನವ
ಜಲ್ಲಜಲ್ಲೇನೆ ಉದುರವ್ವ | ನಾ ನಿನಗೆ
ಜಿಲ್ಲದಾರತಿಯ ಒಳಗೇನು ||

ಆರತಿ ಬೆಳಗುವಾಗ

ಬೆಳಗಿರಿ ಆರತಿ ಬೆಳಗಿರಿ ಆರತಿಯ

ಚಿನ್ನ ರೂಪಿಗೆ ಚಿನ್ನಾದಾರತಿ ಎತ್ತಿ|

ಆಲದ ಎಲೆ ಮೇಲೆ ಲೋಲನ್ನಾಡುತ್ತ ಬಂತು

ಬೆಳಗಿದಳಾರತಿಯ ಬೆಳಗಿದಲಾರತಿಯ|

ಬೆಳಗಿರಿ ಆರತಿ ಬೆಳಗಿರಿ ಆರತಿಯ

ಬೆಳ್ಳಿ ರೂಪಿಗೆ ಬೆಳ್ಳಿದಾರತಿ ಎತ್ತಿ|

ಆಲದ ಎಲೆ ಮೇಲೆ ಲೋಲನ್ನಾಡುತ ಬಂತು

ಬೆಳಗಿದಳಾರತಿಯ ಬೆಳಗಿದಲಾರತಿಯ|

ಬೆಳಗಿರಿ ಆರತಿ ಬೆಳಗಿರಿ ಆರತಿಯ

ಹಳಸ ಎಲೆ ಸರಸನ್ನಾಡುತ ಬಂತು|

ಆಲದ ಎಲೆ ಲೋಲನ್ನಾಡುತ ಬಂತು

ಎತ್ತಿದಳಾರತಿಯ ಎತ್ತಿದಳಾರತಿಯ|

ಆರತಿ ಎತ್ತರ ವರಜನಮುಖಿ

ಶ್ರೀರಾಮಚಂದ್ರನಿಗೆ ಬಲರಾಮ ಕೃಷ್ಣರು|

ಮನೆಗೆ ಬಂದರು ಬಾಗಿಲ ತೆರೆಯಿರಿ

ಎತ್ತಿದಳಾರತಿಯ ಎತ್ತಿದಳಾರತಿಯ|

ವೀಳೆಯಶಾಸ್ತ್ರ ಮಾಡುವಾಗ

ಸೋಬನ್ನಿರೆ ಸೋಬಾನೆ ಬನ್ನಿರೆ||

ಹವಳ ಹಸೆಮಣೆ ನಿನಗಾಗಿ ನಾನು ತರುಸುವೆ

ನಿನ್ನ ಹರವಿಯರ ಒಳಿಗೊಂಡು| ಬೇಗ ಬನ್ನಿ

ಮುದ್ದು ಮುಖ ಎನಗೆ ತೋರಿ

ಕರೆಯುವೆನು ಬಾರೆ ಹಸೆಗೆ ನಮ್ಮ ಕಾಂತಾಮಣಿಯೆ

ಸೋ ಬನ್ನಿರೆ ಸೋಬಾನೆ ಬನ್ನಿರೆ||

ಚಿನ್ನದ ಹಸೆಮಣೆಯ ನಿನಗಾಗಿ ನಾನು ತಂದೆ

ರುದ್ರರೇ ಇಬ್ಬರು ಕೂಡಿ| ಬೇಗ ಬನ್ನಿ

ಮುದ್ದು ಮುಖ ಎನಗೆ ತೋರಿ

ಕರೆಯುವೆನು ಬಾರೆ ಹಸೆಗೆ ನಮ್ಮ ಕಾಂತಾಮಣಿಯೆ

ಸೋ ಬನ್ನಿರೆ ಸೋಬಾನೆ ಬನ್ನಿರೆ||

ಬೆಳ್ಳಿಯ ಹಸ ಮಣೆಯ ನಿನಗಾಗಿ ನಾನು ತಂದೆ
ರುದ್ರರೇ ಇಬ್ಬರು ಕೂಡಿ| ಬೇಗ ಬನ್ನಿ
ಮುದ್ದು ಮುಖ ಎನಗೆ ತೋರಿ

ಕರೆಯುವೆನು ಬಾರೆ ಹಸೆಗೆ ಕಾಂತಾ ಮಣಿಯೇ
ಸೋ ಬನ್ನಿರೆ ಸೋಬಾನೆ ಬನ್ನಿರೆ||

ಕತ್ತಿನಲಿ ಹರಳಿನ ಚೈನು ಕೈಯಲ್ಲಿ ಹರಳಿನ ಬಳೆ
ರುದ್ರರೇ ಇಬ್ಬರು ಕೂಡಿ| ಬೇಗ ಬನ್ನಿ
ಮುದ್ದು ಮುಖ ಎನಗೆ ತೋರಿ

**ಕಂಕಣ ಕಟ್ಟುವಾಗ**

ಒಂದೇಳೆ ಕರಿಯ ಎಳೆ ಒಂದೇಳೆ ಬಿಳಿಯ ಎಳೆ
ಒಂದೇಳೆ ತೆಗೆದೆ ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ಎರಡೇಳು ಕರಿಯ ಎಳೆ ಎರಡೇಳೆ ಬಿಳಿಯ ಎಳೆ
ಎರಡೇಳೆ ತೆಗೆದು ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ಮೂರೇಳೆ ಕರಿಯ ಎಳೆ ಮೂರೇಳೆ ಬಿಳಿಯ ಎಳೆ
ಮೂರೇಳು ತೆಗೆದು ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ನಾಕೇಳೆ ಕರಿಯ ಎಳೆ ನಾಕುದೇಳೆ ಬಿಳಿಯ ಎಳೆ
ನಾಕೇಳೆ ತೆಗೆದು ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ಐದೇಳೆ ಕರಿಯ ಎಳೆ ಐದೇಳೆ ಬಿಳಿಯ ಎಳೆ
ಐದೇಳೆ ತೆಗೆದು ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ಆರೇಳೆ ಕರಿಯ ಎಳೆ ಆರೇಳೆ ಬಿಳಿಯ ಎಳೆ
ಆರೇಳೆ ತೆಗೆದು ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ಏಳೇಳೆ ಕರಿಯ ಎಳೆ ಏಳೇಳೆ ಬಿಳಿಯ ಎಳೆ
ಏಳೇಳೆ ತೆಗೆದು ರತನಾಡಿ| ಗುರುಗಳು
ಹರಸಿ ಕಂಕಣ ಧರಿಸಿದರು

ಎಂಟೇಳೆ ಕರಿಯ ಎಳೆ ಎಂಟೇಳೆ ಬಿಳಿಯ ಎಳೆ

ಎಂಟೇಳೆ ತೆಗೆದು ರತನಾಡಿ| ಗುರುಗಳು

ಹರಸಿ ಕಂಕಣ ಧರಿಸಿದರು

ಒಂಭತ್ರೇಳು ಕರಿಯ ಎಳೆ ಒಂಭತ್ರೇಳು ಬಿಳಿಯ ಎಳೆ

ಒಂಭತ್ರೇಳೆ ತೆಗೆದು ರತನಾಡಿ| ಗುರುಗಳು

ಹರಸಿ ಕಂಕಣ ಧರಿಸಿದರು

**ಕೋಲಾಟದ ಹಾಡು**

ಕೋಲು ರನ್ನದ ಕೋಲನ್ನ

ಏ ಕೋಲು ಕೋಲು ಕೋಲನ್ನಾ ||ಪ||

ಬೇಲೂರು ಎಂಬುದು ಏಳು ಸುತ್ತಿನ ಕೋಟೆ

ಮೇಲೆ ಡೆಂಕಣಿ ಹುಲಿಮುಖ ||ಕೋಲು||

ಮೇಲೆ ಡೆಂಕಣಿ ಹುಲಿಮುಖ ಚನ್ನಯ್ಯ

ಹೆಂಡರಿರುವೆಂದರಮನೆ ಕೋಲು||

ಭಸುಮವ ಹುಯಿಕೊಂಡು ಬಸವನ ಏರಿಕೊಂಡು

ಅರಸೀಬ್ಬರೂ ಸ್ವಾಮ್ಯೋಡಗೊಂದು| ಚನ್ನಯ್ಯ

ಧಸರೇದೊಳಿಗೆಂದ್ ಹೊರಟಾನೆ

ಗಂಧವ ಹುಯಿಕೊಂಡು ನಂದಿನ ಏರಿಕೊಂಡು

ಹೆಂಡಿರೀಬ್ಬರ ಸ್ವಾಮ್ಯಡಗೊಂದು ಚನ್ನಯ್ಯ|

ಗಂಧದೊಕುಳಿಗೆಂದ್ ಹೊರಟಾನೆ||

ಬೇಲೂರು ಚನ್ನಯ್ಯ ತೇರೆಂಟು ದಿನದಾಗೆ|

ಬೀರೂರಿಗ್ ಮಾಲೆ ಬರದಾರೆ ಕೋಲ

ಬೀರೂರಿಗ್ವಾಲೆ ಏನಂತ ಬರದರು

ದೂರಲ ಪರುಸ ಬರುತಿಂದು ಕೋಲು ||ಪ||

**ನಾಗರ ಪಂಚಮಿಯ ಹಾಡು**

ನಾಗಪಗ ಹಾಲ ಹುಯ್ಯೋಣ

ನಾಗರ ಹೆಡಿಯ್ಯಾಂಗ ಆಡೋಣ ||ಪ||

ನಾಗರ ಪಂಚಮಿ ನಾಡ ಹೆಣ್ಣಿಗೆ ಹಬ್ಬ

ನಾಗಪ್ಪಗ ಹಾಲ ಎರಿಯೋಣ| ನನಗೆಣತಿ

ನಾಗರ ಹೆಡಿಯ್ಯಾಂಗ ಆಡೋಣ ||೧||

ಗುರುದೇವ ನಿಮ್ಮಪಾಲ, ಹರಹರಿಸಿ ನಿಮ್ಮಪಾಲ

ಶರಣರಿಗೆ ಹಾಲು ಹಿರಿಯರಿಗೆ| ಎರಿಯೋಣ
ಕಿರಿಯರಿಗೆ ಹಾಡಿ ಹರಸೋಣ ||೨||

ಅಳ್ಳಿಟ್ಟು ತಂಬಿಟ್ಟು ಮಾಡಿಟ್ಟು ಎಳ್ಳುಂಡಿ
ದಳ್ಳೂರಿ ಕಣ್ಣ ಹೆಣೆಯವನ ಕೊರಳಾನ
ನಾಗ ನಿನಗೇಡಿಯೋ ಕೈಮುಗಿದು ||೩||

ವಾರೀ ಗೆಳೆತ್ಯಾರ ಕೇಳರಿಯ ಕಳೆದೇರ
ಸೇರಿ ಒಂದೆಡೆ ಕೂಡೋಣ| ಜೋಕಾಲಿ
ತೂರಿ ಜೀಕವ ಆಡೋಣ ||೪||

ಚಂದ್ರಕಾಳಿಯ ಸೀರೆ ಸೀರಿ ಚಂದ್ರ ಕುಪ್ಪಸ ತೊಟ್ಟು
ಬಂದ ಹಬ್ಬದಾಗ ನಲಿಯೋಣ| ನಕ್ಕಾಡಿ
ಒಂದಾಗಿ ಇದ್ದು ಅಗಲೋಣ ||೫||

ಸಾಕಾಗುತನಕ ಕೂಡಿ ಜೋಕಾಲಿ ಜೀಕೂನ
ನಾಗರ ಮಿಡಿಯಾಗಿ ಸುಳಿಯೋಣ| ವರುವರುಷ
ನಾಗರ ಪಂಚಮಿಗೆ ಕೂಡೋಣ

ಗಂಡನ ಮನಿಯಾಗ ಕಂಡ ಬಾಳುವೆ ಹಾಡಿ
ಉಂಡು ಓಡ್ಯಾಡಿ ಆಡೋಣ ಮನೆಮಾತ
ಹಿಂಡಿನಾಗಾಡಿ ಮರೆಯೋಣ ||೬||

**ಗೌರಿಹಬ್ಬದ ಹಾಡು**

ಗೌರಿ ಹಬ್ಬಕ್ಕೆ ಅವರೆಲ್ಲ ಬಂದವರೆ
ಮಾಶಿವನೆ ನನ್ನ ಕಳುಹೆಂದು| ಗೌರಮ್ಮ
ಶಿವನಿಗೆ ಶೋಕ ಹಿಡಿದಾಳೆ

ಹಾಲನು ಕಾಸೊಳು ಗಂಗೆ, ಬಾಲಾನ ತೊಳೆಯಾಳು ಗಂಗೆ
ನೂರೊಂದು ಜಡಿಯ ಜಪಿಸ್ಯಾರು| ಮಂಗಳಾರ್ತಿಯ
ನಾರಿ ಗಂಗ್ಯವಳೆ ಬೆಳಗೋಕೆ||

ಗೌರಮ್ಮ ಬರುತಾಳೆಂದು ಗರಡಿ ಸಾಲಾಗಿದ್ದು
ಗಂಧ ಚಂದಿರವ ಹಿಡಿದಿದ್ದು| ತಂಗ್ಯವ್ವ
ಮುತ್ತೈದೆ ಬಳೆಯ ತೊಡತಿದ್ದು||

ಮುತ್ತೈದೆ ನಿನಕೈಲಿ ಮೂರು ಚಂದದ ಬಳೆ
ಅಚ್ಚ ಮುತ್ತೈದೆ ತಂಗೆವ್ವ| ನಿನ ಕೈಲಿ

ನಿಚ್ಚ ಗೌರಮ್ಮ ಹೊಸ ಬಳೆ

ಅಚ್ಚ ನೀಲಿಯ ಬಳೆಯ ಹೆಚ್ಚಾಗಿ ತೊಟ್ಟು
ನಿಮ್ಮ ಹೆತ್ತವ್ವಗ ಹೋಗಿ ಶರಣೆನ್ನ| ತಂಗ್ಯೆವ್ವ
ನಿನ ಮುತ್ತೈದೆ ಸ್ಥಾನ ಘನವಾಗ್ಲಿ||

**ಲಾವಣಿ ಪದ**

ಗುರು ಅಲಕ್ ನಿರಂಜನ್ ನಿರವಲಯ ಇರ್ಗುಣ
ನಿಷ್ಕಲನೆನುತೆಲ್ಲಾ|
ಪರಿಪರಿ ಯೋಗಾಭ್ಯಾಸ ಕರಿಸಿದ ಹರಿಹರಿಗೆ
ಗುರು ದೊರೆಯಲಿಲ್ಲಾ|
ಗುರು ದಿಗಂಬರ ಸ್ವರೂಪನು, ಅಂತೂ ಭವಸಾಗರ
ದಾಂಟಿಪುದ ಬಲ್ಲಾ|
ಗುರು ಪರಬ್ರಹ್ಮ ಪರಾತ್ಪರು ಪರಮಾತ್ಮ ಪರಂಜ್ಯೋತಿ
ಯಾಗಿ ಮೆರೆಯುವನನಲ್ಲಾ
ನೋಡು ನೋಡು ಗುರು ಸತ್ಯವೇ ಸಾಗರ|
ಆ ಗುರು ನಿತ್ಯ ನಿರಾಕರ|
ನೋಡು ಗುರು ನಿಹಂಕಾರ ಗುರು
ಮೃತ್ಯಂಜಯ ಧೀರಾ|
ಗುರು ಅಗಮ್ಯ ಅಗೋಚರ ಅಗಣಿತ ಅದ್ವಯ
ಲೀಲಾ ಚಾಲನೆ ಮಾಯವಾಗಿದೆಯೆಲ್ಲಾ||

**ಜೋಕುಮಾರನ ಹಾಡು**

ಉತ್ತರ ಕರ್ನಾಟಕದಲ್ಲಿ ಅತ್ಯಂತ ರೂಢಿಯಲ್ಲಿರುವ ಆಚರಣೆ ಇದು. ಭಾದ್ರಪದ ಮಾಸದಲ್ಲಿ ಮಳೆ ಇಲ್ಲದೆ ಪೈರು ಒಣಹತ್ತಿದಾಗ ಜೋಕುಮಾರನ ಹಬ್ಬವನ್ನು ಆಚರಿಸುವದು ರೂಢಿ. ಈ ಹಬ್ಬವನ್ನಾಚರಿಸಿದರೆ ಮಳೆಯಾಗುತ್ತದೆ ಎಂಬುದು ಇಲ್ಲಿನ ಜನರ ನಂಬಿಕೆಯಾಗಿದೆ. ಊರ ಹೆಣ್ಣು ಮಕ್ಕಳು ಜೋಕುಮಾರನನ್ನು ಹೊತ್ತುಕೊಂಡು ಮನೆ ಮನೆಗೂ ಹೋಗಿ ಪೂಜೆ ಸಲ್ಲಿಸಿ ಅವನ ಕಥೆಯನ್ನೇ ಹಾಡುತ್ತಾರೆ. ಆ ಹಾಡು ಈ ರೀತಿಯಾಗಿದೆ.

ಅಡ್ಡಡ್ಡ ಮಳೆ ಬಡಿದು ದೊಡ್ಡೊಡ್ಡ ಕೆರಿ ತುಂಬಿ
ಗೊಡ್ಡುಗಳೆಲ್ಲಾ ಹೈನಾಗಿ ಜೋಕುಮಾರ | ಗೌಡರ
ಸೆಡ್ಡಿಯ ಮ್ಯಾಲೆ ಸಿರಿಬಂದು | ಜೋಕುಮಾರ

ಹಾಸ್ಹಾಸಿ ಮಳೆ ಬಡಿದು ಬೀಸ್ಬೀಸಿ ಕೆರೆ ತುಂಬಿ

ಬಾಸಿಂಗದಂತಾ ತೆನಿ ಬಾಗಿ | ಜೋಕುಮಾರ | ಗೌಡರ

ರಾಸಿಯ ಮಾಲೆ ಸಿರಿಬಂದು | ಜೋಕುಮಾರ

**ಮಳೆರಾಯನ ಹಾಡು**

ಊರಿಗೆ ಮಳೆ ಬಾರದೆ ಬರಗಾಲ ಬಂದು ಜನ, ದನ, ಪ್ರಾಣಿ-ಪಕ್ಷಿಗಳು ಸಂಕಷ್ಟಕ್ಕೀಡಾದಾಗ ಜನಪದರು ತುಂಬಾ ದೈನ್ಯಾವಸ್ಥೆಯಿಂದ ಮಳೆರಾಯನನ್ನು ಆಹ್ವಾನಿಸುತ್ತಾರೆ. ಬಾಡಿ ಹೋದ ಬೆಳೆಗಳನ್ನು ಬತ್ತಿ ಹೋದ ಕೆರೆ, ಬಾವಿ, ನದಿಗಳನ್ನು ರಕ್ಷಿಸು, ಅವುಗಳನ್ನೇ ನಂಬಿದ ನಮ್ಮನ್ನು ಉಳಿಸಿ ಕಾಪಾಡು ಎಂದು ಮಳೆರಾಯನಲ್ಲಿ ಮೊರೆ ಹೋಗುತ್ತಾರೆ. ಇಂತಹ ಸಂದರ್ಭಗಳಲ್ಲಿ ಹುಟ್ಟಿಕೊಂಡ ಅನೇಕ ಹಾಡುಗಳು ಈಗಲೂ ಇಲ್ಲಿ ಜೀವಂತವಾಗಿ ಉಳಿದಿವೆ.

ಬಿತ್ತಿದ ಫಲಗಳ ಬತ್ತಿ ಹೋಗಲಿ ತಾವೊ

ಅಪ್ಪಯ್ಯ ಮಳೆಯ ಕರುಣಿಸೊ

ಕೋಲೆನ್ನಿರೊ ಕೋಲು ಕೋಲು

ಅಪ್ಪಯ್ಯ ಮಳೆಯ ಕರುಣಿಸೊ

ಬತ್ತಕ ಬಾಯಿ ಬಿಡುತದ

ಕೋಲೆನ್ನಿರೋ ಕೋಲು ಕೋಲ

ಮಾಡಿದ ಫಲಗಳ ಬಾಡಿ ಹೋಗಲಿತಾವೊ

ಅನ್ನಕ್ಕ ಬಾಯಿ ಬಿಡತದ

ಕೋಲೆನ್ನಿರೋ ಕೋಲು ಕೋಲ

ಮಾದೇವ ಮಳೆಯ ಕರುಣಿಸೋ ಈ ಲೋಕ

ಅನ್ನಕ್ಕ ಬಾಯಿ ಬಿಡತದ

ಕೋಲೆನ್ನಿರೊ ಕೋಲು ಕೋಲ

ಮುದಿ ಎತ್ತು, ಮುದಿ ಆಕಳ ಮುಗಿಲ ನೋಡಲಿತ್ಯಾವ

ಗ್ಯಾನಣ್ಣ ಮಳೆಯ ಕರುಣಿಸೋ

ಕೋಲೆನ್ನಿರೋ ಕೋಲು ಕೋಲ

**ಮಳೆರಾಯನ ಹಾಡು**

ಮಳೆ ಹೋಯ್ತು ಅಂತ ಮಳೆರಾಯ್ನ ಬೈಬ್ಯಾಡ

ಒಕ್ಕಾಳ ಹೊನ್ನ ಸೆರಗಲ್ಲಿ| ಕಟ್ಕೊಂಡು

ಸಾಲಕ್ಕ ಹೋಗೆನ್ನ ಮಳೆರಾಯ||

ಸ್ವಾತಿಯ ಮಳೆ ಹೋಯ್ದು ಸೀತೆಯ ಕೆರೆ ತುಂಬಿ

ಜೋತ್ಯಾಡುತ್ತೈತೆ ಕುಣಿಗೋಲು| ಕುಚ್ಚಿನ ಮೀನು

ಮುಂಗೈ ನೋಡಿ ನಗುತ್ಯೆತೆ

ಹುಡೋದು ಹೊಸಬಂಡಿ ಹೊಡೆಯೇನು ಹಸುಮಗ
ಆಲೀಸಿ ಕೇಳೋ ಬಸವಣ್ಣ| ನಿನಬಂಡಿ
ಭೂಮಿ ತಲ್ಲಣಿಸಿ ಹರಿದಾವೋ

ಕಸವ ಹೊಡೆಯುವ ಕೈ ಕಸ್ತೂರಿನಾತವೋ
ಬಸವಣ್ಣ ನಿನ್ನ ಸಗಣಿಯೆ ಬಳಿವ ಕೈ
ಎಳೆಯ ಏಲಕ್ಕಿ ಗೊನೆಯ ನಾತ||

ಕಬ್ಬು ಕಾರುಳ್ಳವನೆ ಹುಬ್ಬ ನೇರುಳುವನೆ|
ಗೊಬ್ಬರ ಗಾಡಿ ಹೊಡೆದೇನೆ| ಅಣ್ಣಯ್ಯ
ಹುಬ್ಬಿಗಿನ್ನೊಂದು ಸರಿಯುಂಟೇ?

ಹೇರು ಕಟ್ಟಾಗ ಬಾರ್‍ಕೋಲ ನಾ ಮರೆತೆ
ಕಂಡು ಕೊಡು ಎಣ್ಣೆ ಕಡುಗಾತಿ| ನಮ್ಮೆತ್ತು
ಮುಂದೆ ಮೂರ್‍ಹೆಜ್ಜೆ ತೊಯೆಲ್ಲೊ

ಬಂಡೀಲಿ ಹೊಯಈನಿ ಗಿಂಡಿ ತಂಬಿಗೆ ತಾರೆ
ನಂಬಿಕೆ ತಾರೆ ಬಲಗೈಯ್ಯ| ಮಾಮನ್ಮಗಳೇ
ಭಾಷೆಯೆ ತಾರೆ ಬಲಗಯ್ಯ

ಹೀಗೆ ಹಾಡು ಸಾಗುತ್ತಾ ಹೋಗುತ್ತದೆ. ಜನಪದರ ಕಷ್ಟವನ್ನು ನೋಡಿ ಮೊರೆಯನ್ನು ಆಲಿಸಿ ಕೊನೆಗೆ ಮಳೆರಾಯ ಬಂದು ಸಮುದ್ರದಂತೆ ನದಿಗಳು ಉಕ್ಕೇರುವಂತೆ ಮಾಡಿದ ಘಟನೆಯನ್ನು ಈ ಹಾಡಿನ ಕೊನೆಯಲ್ಲಿ ಕಾಣಬಹುದು.

**ಕೋಲಾಟದ ಪದಗಳು**

ಗೌರಿ ಹುಣ್ಣಿಮೆಯ ಸಂದರ್ಭದಲ್ಲಿ ಹಾಗೂ ಸೀಗೆ ಹುಣ್ಣಿಮೆಯ ಸಂದರ್ಭದಲ್ಲಿ ಯಮನೂರಿನ ಕೆಲವರ ಮನೆಯಲ್ಲಿ ಗೌರಮ್ಮನನ್ನು, ಸೀಗವ್ವನನ್ನು ಕೂಡಿಸುವ ಪದ್ಧತಿ ಇದೆ. ಇಲ್ಲಿಗೆ ಆರತಿ ಮಾಡಲು ಬರುವ ಹೆಂಗಳೆಯರು ದೊಡ್ಡ ಕೋಲಾಟದ ಹಾಡುಗಳನ್ನು ಸಾಮೂಹಿಕವಾಗಿ ಹಾಡುತ್ತಾರೆ. ಅಷ್ಟೇ ಅಲ್ಲದೆ ಗೌರಿ ಆರತಿ ಮಾಡಿದ ೫ನೇ ದಿವಸ ಸಾಯಂಕಾಲ ಊರಿನ ಪ್ರಮುಖರೆಲ್ಲ ಸೇರಿಕೊಂಡು ಭಜನೆಯವರು, ಕೋಲಾಟ ಹಾಕುತ್ತಾ ಗೌರಿಯನ್ನು ಕೆರೆಯಲ್ಲಿ ಹೋಗಿ ಬಿಟ್ಟು ಬರುತ್ತಾರೆ, ಆಗ ಹಾಡುವ ಹಾಡು ಈ ರಿತಿ ಇದೆ.

ಅರಿಷಿಣ ಹಚ್ಚೀರೆ ಅರಸಿನ ಗೌರವ್ವಗ
ಅರಸ ಮಹಾಲಿಂಗನ ಮಡದಿಗೆ ಕೋಲು ಕೋಲೆನ್ನಿರ

ಅರಸ ಮಹಾಲಿಂಗನ ಮಡದಿ ಗೌರವ್ವಗೆ

ಅರಿಷಿಣ ಹಚ್ಚ ಜನತೆಗೆ ಕೋಲು ಕೋಲೆನ್ನ ಕೋಲೆ

ಕುಂಕುಮ ಹಚ್ಚಿರೆ ಕಾಂತೆ ಗೌರಮ್ಮಗ

ಕಾಂತ ಮಹಾಲಿಂಗನ ಮಡದಿಗೆ ಕೋಲು ಕೋಲೆನ್ನ ಕೋಲೆ

ಕಾಂತ ಮಹಾಲಿಂಗನ ಮಡದಿ ಗೌರವ್ವಗೆ

ಕುಂಕುಮ ಹಚ್ಚ ಜನತೇಗೆ ಕೋಲು ಕೋಲೆನ್ನ ಕೋಲೆ

ದಂಡೀ ಮುಡಸೀರೆ ರಂಬೆ ಗೌರವ್ವಗೆ

ಶಂಬು ಶಂಕರನ ಮಡದಿಗೆ ಕೋಲು ಕೋಲೆನ್ನ ಕೋಲೆ

ಶಂಬುಶಂಕರನ ಮಡದಿ ಗೌರವ್ವಗೆ

ದಂಡೀಯ ಮುಡಸ ಜನತೆಗೆ ಕೋಲು ಕೋಲೆನ್ನ ಕೋಲೆ

ಬುಕ್ಕಿಟ್ಟು ಹಾಕೀರೆ ಅಕ್ಕ ಗೌರವ್ವಗೆ

ಸೃಷ್ಟಿಗೀಶನ ಮಡದಿಗೆ ಕೋಲು ಕೋಲೆನ್ನ ಕೋಲೆ

ಸೃಷ್ಟಿಗೀಶ್ವರಗ ಮಡದಿಗೆ ಗೌರವ್ವಗ

ಬುಕ್ಕಿಟ್ಟು ಹಾಕ ಜನತೇಗೆ ಕೋಲು ಕೋಲೆನ್ನ ಕೋಲೆ

ಸೀರಿ ಉಡಿಸಿರೆ ನಾರಿ ಗೌರವ್ವಗೆ

ರಾಯ ಮಹಾಲಿಂಗನ ಮಡದಿಗೆ ಕೋಲು ಕೋಲೆನ್ನ ಕೋಲೆ

ರಾಯ ಮಹಾಲಿಂಗನ ಮಡದಿ ಗೌರವ್ವಗೆ

ಸೀರಿಯ ಉಡಸೀರೆ ಒನತೇಗಿ ಕೋಲು ಕೋಲೆನ್ನ ಕೋಲೆ

ಕುಪ್ಪಸ ತೊಡಿಸಿರೆ ಮೈಲಿ ಗೌರವ್ವಗೆ

ಮೃತ್ಯುಂಜನಯ ಮಡದಿಗೆ ಕೋಲು ಕೋಲೆನ್ನ ಕೋಲೆ

ಮೃತ್ಯುಂಜಯನ ಮಡದಿ ಗೌರವ್ವಗೆ

ಕುಪ್ಪಸ ತೊಡಸ ಒನತೇಗೆ ಕೋಲು ಕೋಲೆನ್ನ ಕೋಲೆ

ಇಂತಹ ಇನ್ನೂ ಅನೇಕ ಹಾಡುಗಳು ಇಲ್ಲಿ ಸಿಗುತ್ತವೆ.

**ಹಂತಿಹಾಡು**

ಜೋಳ, ಗೋದಿ, ತೊಗರಿ ಈ ಭಾಗದಲ್ಲಿ ಹೆಚ್ಚಾಗಿ ಬೆಳೆಯುವುದರಿಂದಾಗಿ ರಾಶಿ ಮಾಡಲು ಹಂತಿ ಹೊಡೆಯಲೇ ಬೇಕು. ಇಂತಹ ಸಂದರ್ಭಗಳಲ್ಲಿ ಹಾಡನ್ನು ಹಾಡುತ್ತಿದ್ದರು. ಆದರೆ ಈ ಆಧುನಿಕತೆಯ ಪ್ರಭಾವದಿಂದಾಗಿ ಯಂತ್ರಗಳ ಸಹಾಯದಿಂದ ಕಾಳನ್ನು ಕಡೆಗೆ ತೆಗೆಯುತ್ತಾರೆ. ಆದರೂ ಹಾಡುಗಳು ಮಾತ್ರ ಹಾಗೆಯೇ ಉಳಿದಿವೆ. ಅದನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಒಕ್ಕಲಿಗರೆಡೆತ್ತು ಒಕ್ಕಲ ಮೇಯ್ದಾವ

ಹಳ್ಳದ ನೀರ ಕುಡದಾವ | ನಮ್ಮ ಬಸವ

ಬೆಳ್ಳಕ್ಕಿ ಹಿಂದು ಬೆದರ್ಯಾವೊ

ಹೆಬ್ಬಳ್ಳಿ ಹುಬ್ಬಳ್ಳಿ ಹಟ್ಟೆತೊರಸಬಳ್ಳಿ

ತೆಗ್ಗಿನಾಗೈತೋ ಯಮನೂರು | ಚಾಂಗದೇವ

ಹುಟ್ಟಿನಾಗೈತೋ ಎಳಿನಾಮ

ಮುರುನಾಮ ಮುತ್ತಿನ ಗೋಪಾಳ

ಹೊತ್ತೇರಿ ಬರುವ ಅವರ್ಯಾರೊ | ಯಮನೂರ

ಗಟ್ಟಿನ ಗುಡಿಯ ಚಾಂಗದೇವ

ಇಂತಹ ಅನೇಕ ಹಂತಿಯ ಹಾಡುಗಳು ಇಲ್ಲಿ ಲಭ್ಯವಾಗುತ್ತವೆ. ಜನಪದರು ಹಾಡುವ ಬಹುತೇಕ ಹಾಡುಗಳಲ್ಲಿ ಯಮನೂರಿನ ಆದಿದೈವ ಕಾಣಿಸಿಕೊಂಡಿರುವುದನ್ನು ನೋಡಿದರೆ ಚಾಂಗದೇವರ ಮೇಲೆ ಇರುವ ಜನರ ಭಕ್ತಿ, ಗೌರವ, ಅಭಿಮಾನ ಹೇಗಿತ್ತು ಎಂಬುದನ್ನು ಅರಿತುಕೊಳ್ಳಬಹುದಾಗಿದೆ. ಅದೇ ರೀತಿ ಹಿಂದೂಗಳ ಮನೆಯಲ್ಲಿ ಹೆಣ್ಣುಮಕ್ಕಳ | ಗಂಡುಮಕ್ಕಳ ಮೊದಲನೆಯ ಮಗುವಿಗೆ 'ಯಮನೂರಪ್ಪ' ಎಂದು ನಾಮಕರಣ ಮಾಡುವ ಸಂಪ್ರದಾಯವನ್ನು ನೋಡುತ್ತೇವೆ.

**೫.೩.೨. ಕತೆಗಳು**

ಯಮನೂರಿನ ಪರಿಸರದಲ್ಲಿ ವೈವಿಧ್ಯಮಯ ಜನಪದ ಕತೆಗಳು ಪ್ರಚಲಿತದಲ್ಲಿವೆ. ಮನರಂಜನೆಯ ಅಧಿಕಾರಿ ಎನಿಸಿಕೊಂಡಿರುವ ಟಿ.ವಿ, ಸಿನಿಮಾಗಳ ಪ್ರಭಾವದ ಮಧ್ಯದಲ್ಲೂ ಕತೆಗಳು ಇಂದಿಗೂ ತಮ್ಮ ಆಕರ್ಷಣೆಯನ್ನು ಉಳಿಸಿಕೊಂಡು ಜೀವಂತವಾಗಿರುವುದು ಆಶ್ಚರ್ಯವೇ ಸರಿ. ಇಲ್ಲಿ ದೊರೆಯುವ ಕತೆಗಳಲ್ಲಿ ಹೆಚ್ಚಾಗಿ ನೀತಿ ಕತೆಗಳು, ಬುದ್ಧಿವಂತಿಕೆಯ ಕತೆಗಳು, ರಮ್ಯಕತೆಗಳು, ಐತಿಹಾಸಿಕ ಕತೆಗಳು, ಪ್ರಾಮಾಣಿಕ ಕತೆಗಳು, ಯಮನೂರಿನ ಚಾಂಗ ದೇವರ ಮಹಿಮೆಯನ್ನ ಸಾರುವ, ಅಲ್ಲಿಯ ಜನರ ಭಕ್ತಿ-ಭಾವ ಅವರ ಪವಾಡಗಳನ್ನು ಬಿಂಬಿಸುವ ಕತೆಗಳು ಹೆಚ್ಚಾಗಿ ಕಂಡುಬರುತ್ತವೆ.

ಜನರು ಹೊಲಕ್ಕೆ ಹೋಗಿ ಕೆಲಸ ಮಾಡಿ ಮನೆಗೆ ಬಂದ ನಂತರ ಹಾಗೂ ಬಿಡುವಿನ ವೇಳೆಯಲ್ಲಿ ಮಕ್ಕಳು ಗಲಾಟೆ ಮಾಡುತ್ತಿದ್ದಾಗ ಮತ್ತು ಮಲಗುವಾಗ ಕೆಲವು ಮಕ್ಕಳಂತೂ ಕತೆ ಹೇಳಿದರೇನೆ ಮಲಗುತ್ತಿರುತ್ತವೆ. ಊಟ ಮಾಡುವಾಗಲೂ ಕತೆ ಹೇಳಬೇಕು, ಜಗಳ ಬಂದಾಗಲೂ ಸುಮ್ಮನಿರಿಸಬೇಕಾದರೆ ಕೆಲವೊಂದು ಹಾಸ್ಯ ಕತೆಗಳನ್ನು ಹೇಳಿ ಮಕ್ಕಳಿಗೆ ಖುಷಿ ಪಡಿಸುತ್ತಾರೆ. ಕೆಲವೊಮ್ಮೆ ಬುದ್ಧಿವಂತಿಕೆಯ ಕತೆಯನ್ನು ಹೇಳಿ ಮಕ್ಕಳು ಆಪತ್ತಿನಲ್ಲಿ ಸಿಕ್ಕಾಗ ಚಾಣಾಕ್ಷತನದಿಂದ ತಪ್ಪಿಸಿಕೊಳ್ಳುವಂತಹ ಕತೆಗಳನ್ನು ಹೇಳುತ್ತಾರೆ. ಆಪತ್ತಿನಲ್ಲಿ ಎದುರಾಗುವ ಅಪಾಯಗಳನ್ನು ಜಾಣ್ಮೆಯಿಂದ ಹೇಗೆ ಎದುರಿಸಬೇಕೆಂಬುದನ್ನು ಕತೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಕೆಲವರು ಕತೆ ಹೇಳ ಹೊರಟರೆ ಎರಡು, ಮೂರು ದಿನಗಳವರೆಗೆ ಹೇಳುತ್ತಲೇ ಹೋಗುತ್ತಾರೆ. ಎಷ್ಟೇ ಹೇಳಿದರೂ, ಕೇಳುಗರಿಗೆ ಆಸಕ್ತಿ ಕಡಿಮೆಯಾಗುವುದಿಲ್ಲ. ಮೈ ಬಿಗಿಯಾಗಿ ಹಿಡಿದುಕೊಂಡು ಕುತೂಹಲದಿಂದ ಮೈಮರೆತು ಕತೆಯನ್ನು ಕೇಳುವಂತಹ ಕತೆಗಳು ಇರುತ್ತವೆ. ರಾಮಲಕ್ಷ್ಮಣರ

ಕತೆಗಳು, ರಾಮ-ರಾವಣರ ಯುದ್ಧದ ಕತೆಗಳು, ವೀರಪುರುಷರ ಕತೆಗಳು, ಪತಿವ್ರತೆಯರಾದ ಸೀತೆ, ಸಾವಿತ್ರಿಯರ ಕತೆಗಳು, ಮಾಟ-ಮಂತ್ರದ ಕತೆಗಳು, ಸಿಂಹ-ಮೊಲ, ಕಾಗೆ-ನವಿಲಿನ, ಪ್ರಾಣಿ-ಪಕ್ಷಿಗಳ ಕತೆಗಳು ಮಕ್ಕಳ ಕುತೂಹಲವನ್ನು ಕೆರಳಿಸುವಷ್ಟರ ಮಟ್ಟಿಗೆ ಆಕರ್ಷಕವಾಗಿದೆ. ಇಲ್ಲಿನ ಕತೆಗಳಲ್ಲಿ ಬರುವ ಪ್ರಾಣಿ-ಪಕ್ಷಿಗಳ ಸ್ವಭಾವ ಸಹೋದರತ್ವದ ಸ್ವಭಾವವನ್ನು ಮಕ್ಕಳು ತಮ್ಮ ಜೀವನದಲ್ಲಿ ರೂಢಿಸಿಕೊಳ್ಳಬಹುದು.

ಒಟ್ಟಾರೆ, ಎಲ್ಲ ಕತೆಗಳನ್ನು ಗಮನಿಸಿದಾಗ ಇಲ್ಲಿ ಸಿಗುವ ಕತೆಗಳು, ಮಕ್ಕಳಲ್ಲಿ ಉತ್ತಮ ಅಭಿರುಚಿಯನ್ನು ಧೈರ್ಯ, ಸ್ಥೈರ್ಯವನ್ನು ಬೆಳೆಸಲು ಸಹಕಾರಿಯಾಗಿವೆ ಎಂದು ಹೇಳಬಹುದು. ವಯೋವೃದ್ಧರಲ್ಲಿ ಇಂತಹ ಕತೆಗಳು ಹೆಚ್ಚಾಗಿ ಕಂಡುಬರುವುದರಿಂದ ಬಹುಶಃ ಅವರೊಂದಿಗೆ ಈ ಕತೆಗಳು ಎಲ್ಲಿ ಕೊನೆಗೊಳ್ಳುತ್ತವೋ ಏನೋ ಎಂಬ ಅನುಮಾನ ಅನೇಕರಲ್ಲಿದೆ. ಟಿ.ವಿ ಬಂದು ಆ ಮುದುಕರೂ ಕೂಡಾ ಟಿ.ವಿ. ನೋಡುವ ಅತಿಯಾದ ಹವ್ಯಾಸ ಬೆಳೆಸಿಕೊಂಡಿರುವುದರಿಂದ ಅವರಿಗೂ ಕತೆ ನೆನಪಾಗುವುದಿಲ್ಲ ಎಂದು ಹೇಳುವುದನ್ನು ಕಾಣುತ್ತೇವೆ. ಈ ಕತೆಗಳನ್ನು ಕೇಳಬೇಕು, ಮುಂದಿನ ಪೀಳಿಗೆಗೆ ಹೇಳಬೇಕು ಎಂಬ ಪ್ರಜ್ಞೆಯಾಗಲಿ, ಆಸಕ್ತಿಯಾಗಲಿ ಈಗಿನವರಿಗಿಲ್ಲ ಎಂಬ ಕೊರಗು ಕತೆ ಹೇಳುವ ಅಜ್ಜಿಯರದು. ಹಿಂದೆ ಅಜ್ಜಿಯರು, ತಾಯಿಯರು ರಾತ್ರಿ ಹೊತ್ತಿನಲ್ಲಿ ಮಕ್ಕಳಿಗೆ ಕತೆ ಹೇಳುತ್ತಾ ಮಕ್ಕಳನ್ನು ಮಲಗಿಸುವ ಪ್ರಯತ್ನ ಮಾಡುತ್ತಿದ್ದರು. ಈಗ ಆ ಕೆಲಸವನ್ನು ಮನೆಯ ಟಿ.ವಿ. ಮಾಡತೊಡಗಿದೆ. ಇಂತಹ ಕೆಟ್ಟ ಪರಿವರ್ತನೆಯನ್ನು ತಡೆದು ನಮ್ಮ ಸಂಸ್ಕೃತಿಯನ್ನು ರಕ್ಷಿಸುತ್ತ ಪ್ರತಿಯೊಬ್ಬರು ಹೆಜ್ಜೆ ಇಡಬೇಕಿದೆ.

**೫.೩.೩. ಗಾದೆಗಳು**

ಗಾದೆ ಅತ್ಯಂತ ಪ್ರಾಚೀನವೂ, ವಿಶಿಷ್ಟವೂ ಆದ ಮಹತ್ವಪೂರ್ಣವೂ ಆದ ಪ್ರಕಾರವೆನ್ನಬಹುದು. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಮಾತು ವೇದಕ್ಕೂ ಮಿಗಿಲಾದದ್ದೂ ಎನಿಸುತ್ತದೆ. ಗಾದೆಗೂ, ಜೀವನಕ್ಕೂ ಅವಿನಾಭಾವ ಸಂಬಂಧ ಉಂಟು. ಅಪ್ರಜ್ಞಾಪೂರ್ವಕವಾಗಿಯೋ, ಪ್ರಜ್ಞಾಪೂರ್ವಕವಾಗಿಯೋ ಜನರಲ್ಲಿವೆ. ಗಾದೆಮಾತುಗಳನ್ನು ಉಪಯೋಗಿಸದೆ ಬದುಕಲು ಇರಲಾರರು. ಜನಪದದ ಎಲ್ಲ ಪ್ರಕಾರಗಳಿಗಿಂತಲೂ ಹೆಚ್ಚು ಪ್ರಚಲಿತದಲ್ಲಿರುವ ಪ್ರಕಾರವೆಂದರೆ ಗಾದೆಮಾತು. ಗಾದೆ ಜನಭಾಷೆಯ ಕೆನೆ, ಜನವಾಣಿ ಬಿಟ್ಟ ಹಣ್ಣು. ಒಗಟು ಬುದ್ಧಿ ಪ್ರಧಾನವಾದರೆ, ಗಾದೆ ಬುದ್ಧಿ ಭಾವಗಳ ಸಮತೋಲನ. ಈ ಗಾದೆಗಳು ಪಿತ್ರಾರ್ಜಿತ ಆಸ್ತಿಯಾಗಿದ್ದು, ಪೀಳಿಗೆಯಿಂದ ಪೀಳಿಗೆಗೆ ಬಳುವಳಿಯೋಪಾದಿಯಲ್ಲಿ ಬರುವುದರಿಂದ ಜನಪದರ ಸಾಮಾಜಿಕ ಸಂಬಂಧಗಳಿಂದ ಜಗತ್ತಿನಾದ್ಯಂತ ಹರಡಿವೆ. ಜೀವನಾನುಭವದ ಸೂತ್ರಗಳಾಗಿ ಹೊರಹೊಮ್ಮಿದ ಈ ಗಾದೆಗಳು ಮನುಷ್ಯ ವಾಸ ಮಾಡುವ ನೆಲೆಯಲ್ಲೆಲ್ಲ ಕಾಣಸಿಕೊಳ್ಳುತ್ತವೆ. ಹಾಗೆಯೇ ನಮ್ಮೆಲ್ಲರ ಸುತ್ತಮುತ್ತ ಬದುಕಿನ ಅನ್ವಯದ ಭಾಗವಾಗಿ ಜನಜೀವನದಲ್ಲಿ ಆವರಿಸಿಕೊಂಡಿವೆ. ಇವು ಜನಸಾಮಾನ್ಯರ ಬಾಳನ್ನು ರೂಪಿಸುವ, ನಿಯಂತ್ರಿಸುವ, ಶಿಕ್ಷಿಸುವ, ರಕ್ಷಿಸುವ, ದಾರಿ ತೋರಿಸುವ, ಕೈ ಹಿಡಿದು ನಡೆಸುವ, ವಿಶಿಷ್ಟ ಗುಣವನ್ನು ಒಳಗೊಂಡಿರುವ ಕಾರಣ ಜನಜೀವನದ ಸಂಸ್ಕೃತಿಯ ಪ್ರತಿಬಿಂಬವಾಗಿವೆ. ಮನುಷ್ಯರಿಂದಲೇ ನಿರ್ಮಾಣಗೊಂಡಿರುವ ಇವು ಮನುಷ್ಯನ ಬದುಕನ್ನು ತಿದ್ದುವ, ತೀಡುವ, ರೂಪಿಸುವ ಸಾಂಸ್ಕೃತಿಕ ಮೌಲ್ಯಗಳಾಗಿವೆ. ಗಾದೆ ಜನಸಾಮಾನ್ಯರ ವಿಶ್ವಕೋಶ. ತಾವೇ

ನಿರ್ಮಿಸಿಕೊಂಡು, ಪಾಲಿಸಿಕೊಂಡು ಬಂದ ಸಂವಿಧಾನ. ತಾವೇ ರಚಿಸಿದ ವೇದ. ಅದರಲ್ಲಿ ಸದ್ವಿವೇಚನೆ, ವಿಧಿ-ನಿಷೇಧ, ಜೀವನ ದರ್ಶನ, ಸೌಂದರ್ಯಾಭಿರುಚಿ ವ್ಯವಹಾರ ರೀತಿ-ನೀತಿ ಮೊದಲಾದವುಗಳೆಲ್ಲ ಭಾಷೆಯಲ್ಲಿ ಭಟ್ಟಿ ಇಳಿದಿವೆ. ಸ್ವಾನುಭವದಿಂದ ಸಹಜವಾಗಿ ಮೂಡಿಬಂದಿರುವ ಇವುಗಳು ಸರಳವಾಗಿವೆ. ಗಾದೆ ಎಂದೂ ಸುಳ್ಳು ಹೇಳುವುದಿಲ್ಲ- ಜರ್ಮನ್ ಹುಸಿ ಇದ್ದರೆ ಹಾಲಿನಲ್ಲಿ ಹುಳಿ ಇರುತ್ತದೆ- ಮಲೆಯಾಳಂ, ಗಾದೆಗಳ ಬಗ್ಗೆ ಗಮನವಿಲ್ಲದವನು ತಪ್ಪುಗಳನ್ನು ತಪ್ಪಿಸಲಾರ- ತುರ್ಕಿಗಾದೆ, ಗಾದೆ ತಿಳಿದ ವಿವೇಕಿ ಜಗಳ ಬಿಡಿಸುತ್ತಾನೆ- ಆಫ್ರಿಕನ್. ಹೀಗೆ ವಿವಿಧ ಭಾಷೆಗಳಲ್ಲಿಯೂ 'ಗಾದೆ'ಯ ಬಗ್ಗೆ ಅಭಿಪ್ರಾಯಗಳಿವೆ. ಹೀಗಾಗಿ ಕನ್ನಡ ಜನಪದರು ಗಾದೆಯ ಬಗೆಗೆ ಸಂಬಂಧಿಸಿದಂತೆ ಗಾದೆಗಳನ್ನು ನಿರ್ಮಾಣ ಮಾಡಿರುವುದು ಕಂಡುಬರುತ್ತದೆ.

'ಗಾದೆ' ಇಷ್ಟು ಜನಪ್ರಿಯವಾಗಲು ಪ್ರಮುಖವಾಗಿ ಅವರ ಅನುಭವವೇ ಸಾಕು. ಇವುಗಳ ಸಂಕ್ಷಿಪ್ತತೆ, ಅರ್ಥಪೂರ್ಣತೆ ಕಲಾತ್ಮಕತೆ, ಲೋಕಾನುಭವ ಮೊದಲಾದ ಕಾರಣಕ್ಕೆ ಜನರಿಗೆ ಸರಳ ಭಾಷೆಯಲ್ಲಿರುವ ಗಾದೆಯನ್ನು ತಮ್ಮ ಮಾತಿಗೊಮ್ಮೆ ಸಮಯಕ್ಕೆ ತಕ್ಕಂತೆ ತಮಗರಿವಿಲ್ಲದಂತೆ ಉಪಯೋಗಿಸುತ್ತಾರೆ. ಯಮನೂರು ಸಣ್ಣ ಗ್ರಾಮವಾಗಿರುವುದರಿಂದ ಹಳ್ಳಿಯ ವಾತಾವರಣವಿರುವುದರಿಂದ ಮಾತಿಗೊಮ್ಮೆ ಹೆಚ್ಚಾಗಿ ಗಾದೆಗಳನ್ನು ಬಳಸುತ್ತಾರೆ. ಇಂತಹವರೇ ಹೆಚ್ಚಾಗಿ ಗಾದೆಗಳನ್ನು ಹೇಳುತ್ತಾರೆ ಎನ್ನುವ ಹಾಗಿಲ್ಲ, ಎಲ್ಲರಲ್ಲೂ ಈ ಗಾದೆಗಳು ಬಳಕೆಯಲ್ಲಿವೆ. ಜಾತಿ, ಮತ, ಧರ್ಮಗಳೆನ್ನದೆ ಎಲ್ಲಾ ಸಮುದಾಯದವರು ಬಳಸುತ್ತಾರೆ. ಆಡು ಮುಟ್ಟದ ಸೊಪ್ಪಿಲ್ಲ ಗಾದೆಯಿಲ್ಲದ ಭಾಷೆಯಿಲ್ಲ ಎಂದು ಹೇಳುತ್ತಾರೆ. ಎಲ್ಲಾ ಭಾಷೆಗಳಲ್ಲಿರುವ ಗಾದೆಗಳು ಒಂದೇ ಅರ್ಥವನ್ನು ಹೇಳುತ್ತವೆ. ಉದಾಹರಣೆಗೆ: "Where there is a will there is a way" ಎಂದಾದರೆ ಕನ್ನಡದಲ್ಲಿ ಮನಸ್ಸಿದ್ದರೆ ಮಾರ್ಗ. "Work is worship" ಕಾಯಕವೇ ಕೈಲಾಸ ಎನ್ನುತ್ತಾರೆ. ಹೀಗೆ ಆಯಾ ಭಾಷೆಗೆ ತಕ್ಕಂತೆ ಗಾದೆಗಳಿವೆ. ಗಾದೆಗಳು ಒಂದೇ ವಿಷಯಕ್ಕೆ ಸಂಬಂಧಿಸಿಲ್ಲ ಎಂದು ಹೇಳುತ್ತಾರೆ.

**ದೇವುಡು ನರಸಿಂಹ ಶಾಸ್ತ್ರಿಗಳು**

"ತಲೆತಲಾಂತರದಿಂದ ಶೇಖರವಾಗಿರುವ ಅನುಭವವು ಬಾಯಲ್ಲಿ ಮಾತಾಗಿ ಹೊರಬೀಳುವುದು. ಜನತೆಯು ಆ ಮಾತಿನ ಸೊಬಗಿಗೂ ಅದರ ಹಿಂದಿರುವ ಅನುಭವಕ್ಕೂ ಮೆಚ್ಚಿ, ಅದನ್ನು ನಾಣ್ಯವಾಗಿ ಸಂಗ್ರಹಿಸುವುದು, ಜ್ಞಾತ-ಅಜ್ಞಾತವಾಗಿ ಅದನ್ನು ಸಾಧ್ಯವಾದಂತಲ್ಲ ಅವರಿವ್ವರೆನ್ನದೆ ತಿದ್ದುವರು. ಉಜ್ಜಿ ಹೊಳಪಿಕ್ಕುವರು. ಹೀಗೆ ಸಿದ್ಧವಾದ ಮೊಹರೆ ವಾಕ್ಯವೇ ಗಾದೆ" ಎಂದಿರುವರು.

ಮಾನವನ ಪ್ರತಿದಿನದ ರೀತಿ-ನೀತಿಗಳನ್ನು ಅವು ಒಳಗೊಂಡಿವೆ. ಇವುಗಳಲ್ಲಿ ಎಚ್ಚರಿಕೆಯ ಕರೆಗಂಟೆ ಇದೆ. ಉದಾಹರಣೆ "ಮೀಸೆ ಬಂದಾಗ ದೇಶ ಕಾಣಲ್ಲ", "ತಾಯಿಯಂತೆ ಮಗಳು ನೂಲಿನಂತೆ ಸೀರೆ", "ಹಿರೇ ಅಕ್ಕನ ಚಾಳಿ ಮನೆಮಂದಿಗೆಲ್ಲ" ಎಂಬ ಗಾದೆಗಳು ಉಪಯುಕ್ತ ಮಾರ್ಗದರ್ಶಕ ಸೂತ್ರಗಳಾಗಿವೆ.

"ಹೆಣ್ ಮಕ್ಕಳ ಬುದ್ಧಿ ಮೊಳಕಾಲ ಕೆಳಗ", "ಮೀನಿನ ಹೆಜ್ಜೆ, ಹೆಣ್ಣು ಮಕ್ಕಳ ಮನಸ್ಸು ಅರ್ಥ ಮಾಡಿಕೊಳ್ಳೋಕೆ ಆಗಲ್ಲ" ಹೆಣ್ಣಿನ ಮನಸ್ಸಿಗೆ, ಬುದ್ಧಿಗೆ ಸಂಬಂಧಿಸಿದ ಗಾದೆಗಳು ಇಲ್ಲಿ ಹೇರಳವಾಗಿವೆ. ಅದೇ ರೀತಿ ಗಂಡಸಿನ ಗುಣ ಸ್ವಭಾವಗಳನ್ನು ಬಿಂಬಿಸುವ "ನೆಲಕ್ಕೆ ಬಿದ್ರು ಮೀಸೆ ಮಣ್ಣಾಗಲಿಲ್ಲ" ಸಾವಿರ ಕುದುರೆಯ ಸರದಾರ, ಮನೆ ಹೆಂಡತಿಗೆ ಪಿಂಚಾರ ಎಂಬ ಅನೇಕ ಗಾದೆಗಳು ಪ್ರಚಲಿತದಲ್ಲಿವೆ. "ಹರಕಲು

ಮರದಲ್ಲೇ ಜೇನಿಕ್ಕೋದು" ಈ ಗಾದೆ ರೂಪಕಾಲಂಕಾರದಿಂದ ಕೂಡಿದ್ದು, ಆರಕ್ಕೇರದೆ ಮೂರಕ್ಕಿಳಿಯದೆ, ಬಡವನಂತೆ ಕಾಲ ಹಾಕುವ ವ್ಯಕ್ತಿಯ ಹತ್ತಿರ ದುಡ್ಡಿರುವುದು ಎಂಬ ಭಾವವನ್ನು ತಿಳಿಸುತ್ತದೆ.

ಯಾವುದೇ ರೀತಿಯ ಅಲಂಕಾರವು ಇಲ್ಲದೆ ಸಹಜೋಕ್ತಿ ಗಾದೆಗಳು ಸಾಕಷ್ಟಿವೆ. ಉದಾಹರಣೆ ಆಳು ನೋಡಿ ಅನ್ನ ಇಕ್ಕು, ಪಾತ್ರೆ ನೋಡಿ ಭಿಕ್ಷೆ ಹಾಕು, ಬಸುರಿ ಕೈಲಿ ತಲೆ ನೋಡಿಸ್ಕೋ ಬೇಕು, ಬಾಣಂತಿ ಜೊತೆ ನೀರು ತರೋಕೆ ಹೋಗ್ಬೇಕು ಈ ಗಾದೆಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಅರಿಯಬಹುದು.

೧. ರಾಮರಾಜ್ಯ ಬಂದ್ರು ರಾಗಿ ಬೀಸೋದು ತಪ್ಪೀತೆ? ಇದು ಪೌರಾಣಿಕ ಗಾದೆ.

೨. ಕುಂತ ಕುಣಿಗಲ್ ಗೆದ್ದ, ನಿಂತ್ ಮಾಗಡಿ ಗೆದ್ದ- ಇದು ಐತಿಹಾಸಿಕ ಗಾದೆ.

೩. ಆಚೆ ಮನೆಯೋಳು ವಾಲೆ ಇಕ್ಕೊಂಡ್ರೆ ಈಚೆ ಮನೆಯೊಳು ಆಲೆ ಕಿತ್ಕೊಂಡ್ಲು- ಎಂಬ ಈ ಗಾದೆ ಹೆಣ್ಣಿನಲ್ಲಿ ಸಹಜವಾಗಿ ಮನೆ ಮಾಡಿರುವ ಅಸೂಯೆ, ಹೊಟ್ಟೆಕಿಚ್ಚು ಎಷ್ಟೆಂಬುದನ್ನು ತಿಳಿಸುವದು.

ಪ್ರತಿಯೊಂದು ವರ್ಗದ ಗುಣ, ಸ್ವಭಾವವನ್ನು ವಿಡಂಬಿಸುವ ಹಿನ್ನೆಲೆಯಲ್ಲಿ ಗಾದೆಗಳು ಸೃಷ್ಟಿಯಾಗಿವೆ. ಅಂತಹ ಗಾದೆಗಳೆಂದರೆ

* ಮಾತಿಗೆ ತಪ್ಪೋನೆ ಮಾದಿಗ
  ಹೊಲಸು ತಿನ್ನೋನೆ ಹೊಲೆಯ
* ಒಕ್ಕಲಗಿತ್ತಿಗೆ ಮಡಿಯಿಲ್ಲ
  ಹುಳ್ಳಿ ಹೊಲಕ ಗೊಬ್ಬರ ಇಲ್ಲ
* ಕುರುಬ ಕೂಡಿ ಕೆಟ್ಟ
  ದೊಂಬ ಅಗಲಿ ಕೆಟ್ಟ

ಸಮಾಜದ ನೈತಿಕತೆಗೆ ಬದ್ಧವಾಗಿ ನಡೆಯಬೇಕೆಂದು ತಿಳಿಸುವ ಗಾದೆಗಳು.

ಜ್ಯೋತಿ ಇಲ್ಲದ ಮನೇಲಿ ನೀತಿ ಇಲ್ಲ, ಕೈ-ಬಾಯಿ ಕಚ್ಚೆ ಮೂರು ಭದ್ರವಾಗಿದ್ದರೆ ಮೂಲೋಕದಲ್ಲೂ ಸೈ ಎನಿಸಿಕೊಬಹುದು. ತಾಯಿ ಇರೋ ತನಕ ತವರು ಪ್ರಾಯ ಇರೋತನಕ ಪೊಗರು, ಉಪ್ಪು ತಿಂದೋನು ನೀರು ಕುಡಿಯಬೇಕು. ಇಂತಹ ವೈವಿಧ್ಯಮಯ ಗಾದೆ ಮಾತುಗಳು ಇಲ್ಲಿ ಸಿಗುತ್ತವೆ.

**ಗಾದೆಗಳು**

೧. ಅಂಕೆಯಿಲ್ಲದ ಕಪಿ ಲಂಕೆ ಸುಟ್ಟಿತು.

೨. ಅಂಗೈ ಹುಣ್ಣಿಗೆ ಕನ್ನಡಿ ಏಕೆ

೩. ಅಟ್ಟ ಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿ ಬಂತು.

೪. ಅಡಿಗೆ ಬಲ್ಲವನ ಹೆಂಡತಿಯಾಗಬಾರದು, ಕೆಲಸಬಲ್ಲವನ ಆಳಾಗಬಾರದು.

೫. ಅಡಿಗೆ ಮಾಡಿ ಕಲಿ, ಉಡುಗೆ ನೋಡಿ ಕಲಿ

೬. ಅತಿ ಆಸೆ ಗತಿಗೆಡಿಸಿತು

೭. ಅಧರಕ್ಕೆ ಕಹಿ, ಉದರಕ್ಕೆ ಸಿಹಿ

೮. ಅನ್ನ ದೇವರ ಮುಂದೆ ಇನ್ನು ದೇವರುಂಟೆ

೯. ಅರಮನೆಯಿದ್ದರೂ ಸೆರೆಮನೆ ಲೇಸು

೧೦. ಅಲ್ಪರ ಸಂಗ, ಅಭಿಮಾನ ಭಂಗ

೧೧. ಅಹಂಕಾರಕ್ಕೆ ಉದಾಸೀನವೇ ಮದ್ದು

೧೨. ಅಳಿಯ ಮನೆ ತೊಳಿಯ

೧೩. ಆಕಳು ಕಪ್ಪಾದರೆ ಹಾಲು ಕಪ್ಪೇ

೧೪. ಆಕಾಶಕ್ಕೆ ಏಣಿ ಹಚ್ಚಿದ ಹಾಗೆ

೧೫. ಆತುರಗಾರನಿಗೆ ಬುದ್ಧಿಮಟ್ಟ

೧೬. ಆಪತ್ಕಾಲಕ್ಕೆ ಆದವನೇ ಬಂಧು

೧೭. ಆರಿದ್ರಾ ಗದ್ದರಿಸಬಾರದು(ಗುಡುಗಬಾರದು) ಮೃಗ ಮಿಂಚಬಾರದು

೧೮. ಆರಿ ಹೋಗುವ ದೀಪಕ್ಕೆ ಕಾಂತಿಹೆಚ್ಚು(ಹಾಳಾಗುವಾಗ ಆರ್ಭಟ ಹೆಚ್ಚು)

೧೯. ಆಲಕ್ಕೆ ಹೂವಿಲ್ಲ, ಸುಖಕ್ಕೆ ಕೊನೆಯಿಲ್ಲ(ಅನುಭವದ ಮಾತು)

೨೦. ಆಳ ನೋಡಿ ಹಾರು (ಮುಂಧೋರಣೆಯಿಂದ ಕೆಲಸ ಪ್ರಾರಂಭಿಸಿ)

೨೧. ಆಳುದ್ದದ ಬಾವಿ ಮುಚ್ಚಬಹುದು, ಗೇಣುದ್ದದ ಹೊಟ್ಟೆ ಮುಚ್ಚಲಾಗದು

೨೨. ಆಳೋರಿಲ್ಲದೆ ನಾಡು ಕೆಟ್ಟಿತ್ತು

೨೩. ಇಂಗು ತೆಂಗು ಇದ್ದರೆ ಮಂಗಮೂಳೆಯೂ ಅಡಿಗೆ ಮಾಡುವಳು

೨೪. ಇಟ್ಟರೆ ತೊಟ್ಟರೆ ಪುಟ್ಟಕ್ಕ ಚೆಂದ

೨೫. ಇತ್ತದರಿ, ಅತ್ತ ಪುಲಿ

೨೬. ಇದ್ದಲಿ, ಮಸಿಗೆ ಬುದ್ದಿ ಹೇಳಿತಂತೆ

೨೭. ಇಪ್ಪತ್ತಕ್ಕೆ ಯಜಮಾನಿಕೆ, ಎಪ್ಪತ್ತಕ್ಕೆ ಕೆಮ್ಮು ಹಿಡಿಯಬಾರದು(ಎರಡು ಕೆಡಕು)

೨೮. ಇಲಿಯಾಗಿ ನೂರು ವರ್ಷ ಬಾಳುವುದಕ್ಕಿಂತ ಹುಲಿಯಾಗಿ ಮೂರು ವರ್ಷ ಬಾಳುವುದೇ ಲೇಸು (ಕೆಚ್ಚೆದೆಯ ಬಾಳಿನ ಹಿರಿಮೆ)

೨೯. ಇರುಳ ಕಂಡ ಬಾವಿಯಲ್ಲಿ ಹಗಲು ಬಿದ್ದಂತೆ (ಅರಿತೂ ಅಡ್ಡದಾರಿ ಹಿಡಿಯುವುದು)

೩೦. ಉಂಡದ್ದು ಉಳಿಯದೇ ಹೋದರೂ, ಆಡಿದ್ದು ಉಳಿದು ಬಿಡುತ್ತದೆ.

೩೧. ಉಕ್ಕಿದ ಮೇಲೆ ಸಾರಲ್ಲ, ಸೊಕ್ಕಿದ ಮೇಲೆ ಹೆಣ್ಣಲ್ಲ.

೩೨. ಉದ್ದರಿ ಕೊಟ್ಟು ಸೆಟ್ಟಿಕೆಟ್ಟ, ಕಡ ಸಿಕ್ಕು ಬಡವಕೆಟ್ಟ

೩೩. ಈಜು ಮರಿಬೇಡ, ಜೂಜು ಕಲೀಬೇಡ (ನೀತಿ ಪಾಠ)

೩೪. ಉಪಾಯ ಬಲ್ಲವನಿಗೆ ಅಪಾಯವಿಲ್ಲ.

೩೫. ಉಪ್ಪಿಟ್ಟವನನ್ನು ಮುಪ್ಪಿನ ತನಕ ನೆನೆ

೩೬. ಉಪ್ಪು ತಿಂದವನು ನೀರು ಕುಡಿಯಲೇಬೇಕು

೩೭. ಉರಿಯುವ ಗಾಯದ ಮೇಲೆ ಉಪ್ಪು ಹಾಕಿದ ಹಾಗೆ

೩೮. ಊದುವುದನ್ನು ಕೊಟ್ಟು, ಬಾರಿಸುವುದನ್ನು ತೆಗೆದುಕೊಂಡಂತೆ (ಒಂದು ತೊಂದರೆಯನ್ನು ನೀಗಿಸಲು ಇನ್ನೊಂದನ್ನು ಗಂಟು ಹಾಕಿಕೊಂಡಂತೆ)

೩೯. ಊರ ಬಾಗಿಲು ಮುಚ್ಚಬಹುದು, ದೂರುವ ಬಾಯಿ ಮುಚ್ಚಲಾಗದು (ನಿಂದಕರ ಬಾಯಿ ಮುಚ್ಚಲಾಗುವುದಿಲ್ಲ)

೪೦. ಊರಿಗೆ ಬಂದವಳು ನೀರಿಗೆ ಬರಲೇಬೇಕು(ಊರಲ್ಲಿ ನಡೆದ ಘಟನೆ ಊರಿಗೆ ತಿಳಿಯದೆ ಹೋಗದು)

೪೧. ಊರಿಗೆ ಹಂದಿ ಬೇಕು, ನೆರೆಗೆ ನಿಂದಕಬೇಕು

೪೨. ಎಟ್ಟಿ ಗಂಡನಿಗೆ ಖೊಟ್ಟಿ ಹೆಂಡತಿ

೪೩. ಎಣ್ಣೆ ಬರುವಾಗ ಗಾಣ ಮುರಿಯಿತು(ವಿಧಿ ಆಟ)

೪೪. ಎತ್ತಿಗೆ ಜ್ವರ ಎಮ್ಮೆಗೆ ಬರೆ ಹಾಕಿದರು

೪೫. ಎತ್ತು ಎರೆಗೆ ಎಳೆದರೆ ಕೋಣ ಕೆರೆಗೆ ಎಳೆಯಿತು

೪೬. ಎದ್ದವನು ಗೆದ್ದಾನು(ಜಾಗರೂಕನಾಗಿರುವವನು ಯಶಸ್ವಿಯಾಗುವನು)

೪೭. ಎದೆ ಸೀಳಿದರೂ ಎರಡಕ್ಷರವಿಲ್ಲ

೪೮. ಎರಡು ದೋಣಿಯ ಮೇಲೆ ಕಾಲಿಟ್ಟ ಹಾಗೆ

೪೯. ಎಲ್ಲಮ್ಮನ ಗುಡ್ಡದಾಗ ಮುಲ್ಲಾಂದೇನು

೫೦. ಎಲ್ಲರ ಮನೆ ದೋಸೆನೂ ತೂತು

೫೧. ಎಲ್ಲರೂ ಪಲ್ಲಕ್ಕಿಯಲ್ಲಿ ಕುಳಿತರೆ ಹೊರುವವರಾರು.

೫೨. ಒಂದು ಕಣ್ಣಿಗೆ ಸುಣ್ಣ, ಮತ್ತೊಂದು ಕಣ್ಣಿಗೆ ಬೆಣ್ಣೆ

೫೩. ಒಂದು ಕುರಿ ಹಳ್ಳಕ್ಕೆ ಬಿದ್ದರೆ ಎಲ್ಲವೂ ಬೀಳುವವು(ಅಂಧಾನುಕರಣೆ)

೫೪. ಒಂದು ಸುಳ್ಳು ಮುಚ್ಚಲು ಒಂಬತ್ತು ಸುಳ್ಳು

೫೫. ಒಡ್ಡರ ಹತ್ತಿರ ಕುಪ್ಪಸ ಕೇಳಿದಂತೆ

೫೬. ಒಡೆದ ಹಾಲು ಹೆಪ್ಪಿಗೆ ಬಂದೀತೇ?(ಕೆಟ್ಟ ಮನುಷ್ಯನು ಎಲ್ಲದಕ್ಕೂ ಅಪ್ರಯೋಜಕ)

೫೭. ಒಲಿದರೆ ನಾರಿ ಮುನಿದರೆ ಮಾರಿ

೫೮. ಓತಿಕಾಟಕ್ಕೆ ಬೇಲಿಯ ಸಾಕ್ಷಿ(ಕಳ್ಳನಿಗೆ ಸುಳ್ಳನ ಬೆಂಬಲ)

೫೯. ಕಂಕುಳಲ್ಲಿ ಕೂಸು ಎತ್ತಿಕೊಂಡು ಊರೆಲ್ಲ ಹುಡುಕಿದಂತೆ(ಮರೆಗುಳಿತವ)

೬೦. ಕಂಡದ್ದನ್ನಾಡಿದರೆ ಕೆಂಡದಂಥ ಕೋಪ

೬೧. ಕಡ್ಡಿ ಇದ್ದುದನ್ನು ಗುಡ್ಡ ಮಾಡದಿರು

೬೨. ಕಡುಕೋಪ ಬಂದಾಗ ತಡೆಕೊಂಡವನೇ ಜಾಣ

೬೩. ಕತ್ತೆ ಬಲ್ಲುದೆ ಕಸ್ತೂರಿಯ ಪರಿಮಳ

೬೪. ಕಾಲುಬಿದ್ದು ಕಾಲುಂಗರ ಬಿಟ್ಟಿಕೊಂಡಂರಂತೆ

೬೫. ಕಸ ತಿನ್ನುವುದಕ್ಕಿಂತ ತುಸು ತಿನ್ನುವುದು ಲೇಸು

೬೬. ಕುಂಬಳಕಾಯಿ ಕಳ್ಳನೆಂದರೆ ಹೆಗಲು ಮುಟ್ಟಿಕೊಂಡನಂತೆ

೬೭. ಕಿವುಡ ಕಿಚ್ಚಡಿ ಬೇಡಿದರೆ, ಗೌಡ ಹಚ್ಚಡ ಬೇಡಿದ(ಅಸಂಬದ್ಧತೆ)

೬೮. ಕುಣಿಯಲಿಕ್ಕೆ ಬಾರದವಳು ನೆಲಡೊಂಕು ಎಂದಳಂತೆ

೬೯. ಕೆಲಸಕ್ಕೆ ಕರೆಯಬೇಡ, ಊಟಕ್ಕೆ ಮರೆಯಬೇಡ

೭೦. ತಾಮ್ರದ ದುಡ್ಡು ತಾಯಿ ಮಕ್ಕಳ ಕೆಡಿಸಿತಂತೆ

೭೧. ಪಾಪಿ ಸಮುದ್ರ ಹೊಕ್ಕರೂ, ಮೊಣಕಾಲುದ್ದ ನೀರು

೭೨. ಬಂದ ದಾರಿಗೆ ಸುಂಕವಿಲ್ಲ (ಉದ್ದೇಶ ನೆರವೇರದಿರುವುದು)

೭೩. ಬರಬರುತ್ತ ರಾಯರ ಕುದುರೆ ಕತ್ತೆಯಾಯಿತು

೭೪. ಬಿದ್ದ ಪೆಟ್ಟಿಗಿಂತ ನಕ್ಕಪೆಟ್ಟು ಹೆಚ್ಚು

೭೫. ಬೀದಿಯ ಕೂಸು ಬೆಳೆಯಿತು, ಕೋಣೆಯ ಕೂಸು ಕೊಳೆಯಿತು

೭೬. ಬೆಟ್ಟಕ್ಕೆ ಕಲ್ಲು ಹೊತ್ತ ಹಾಗೆ

೭೭. ಸೌಟು ಬಲ್ಲುದೆ ಸಾರಿನ ರುಚಿಯ

೭೮. ಹಣ್ಣು ಹಂಚಿ ತಿನ್ನು ಹೂವು ಕೊಟ್ಟು ಮುಡಿ

೭೯. ಸರಿಮನಿಯಾಕೆ ಸರಿಗೆ ಹಾಕಿಕೊಂಡರೆ, ನೆರೆಮನೆಯಾಕೆ ಉರುಲು ಹಾಕಿಕೊಂಡಳು(ನೆರೆ ಮನೆಯವರ ಸುಖಕ್ಕೆ ಅಸೂಯೆ ಪಡುವುದು)

೮೦. ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡಲಿಲ್ಲ

೮೧. ಮಾತು ಮನೆಕೆಡಿಸಿತು ತೂತು ಒಲೆ ಕೆಡಿಸಿತು

೮೨. ಮನೆಮುರಿದರೆ ಕಟ್ಟಬಹುದು, ಮನ ಮುರಿದರೆ ಕಟ್ಟಲಾಗದು

೮೩. ಮನೆ ಕಟ್ಟಿ ನೋಡು ಮದುವೆ ಮಾಡಿ ನೋಡು

೮೪. ಮಣ್ಣಿನಿಂದ ಕೌರವಕೆಟ್ಟ, ಹೆಣ್ಣಿನಿಂದ ರಾವಣಕೆಟ್ಟ

೮೫. ಮಣ ಮಾತಿಗಿಂತ ಕಣಕೃತಿ ಲೇಸು

೮೬. ಮಂತ್ರಕ್ಕಿಂತ ಉಗುಳು ಜಾಸ್ತಿ

೮೭. ಭಂಡ ಮಾವನಿಗೆ ಮಂಡ ಅಳಿಯ

೮೮. ವಾದಿಯ ಕೂಡ ವಾದ ಸಲ್ಲ, ಕುಂಟನ ಕೂಡ ದಾರಿ ಸಲ್ಲ

೮೯. ಶಂಕದಲ್ಲಿ ಬಂದರೆ ಮಾತ್ರ ತೀರ್ಥ

೯೦. ಶರಣರ ಸಾವು ಮರಣದಲ್ಲಿ ಕಾಣು

೯೧. ನಾಲಿಗೆ ತಪ್ಪಿದವ ನಾಯಿಗಿಂತ ಕಡೆ

೯೨. ತೀರ್ಥ ಕುಡಿದರೆ ಥಂಡಿ, ಪ್ರಸಾದ ತಿಂದರೆ ಅಜೀರ್ಣ, ಮಂಗಳಾರತಿ ತೆಗೆದುಕೊಂಡರೆ ಉಷ್ಣ

೯೩. ಚರ್ಮ ತೊಳೆದರೆ ಕರ್ಮ ಹೋದೀತೆ?

೯೪. ಗುಡ್ಡಕ್ಕೆ ಕಲ್ಲು ಹೊತ್ತಂತೆ

೯೫. ಗುರುವಿಲ್ಲದ್ದು ಮಠವಲ್ಲ ಹಿರಿಯರಿಲ್ಲದ್ದು ಮನೆಯಲ್ಲ

೯೬. ಗಾಳಿಗುದ್ದಿ ಮೈ ನೋಯಿಸಿಕೊಂಡ ಹಾಗೆ

೯೭. ಗಾಡಿ ಹೋದಮೇಲೆ ಟಿಕೇಟ ಕೇಳಿದರಂತೆ

೯೮. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ

೯೯. ಕೋಣನ ಮುಂದೆ ಕಿನ್ನೂರಿ ಬಾರಿಸಿದಂತೆ

೧೦೦. ಕೋಳಿ ಕಾಲಿಗೆ ಗೆಜ್ಜೆ ಕಟ್ಟಿದರೆ, ತಿಪ್ಪಿ ಕೆದರೋದು ಬಿಟ್ಟೀತೆ(ಹುಟ್ಟು ಗುಣ ತಿದ್ದಲೂ ಬಾರದು)

**೫.೩.೪. ಒಡಪುಗಳು**

ಒಡುಬು ಅಥವಾ ಒಡಪು ಇದೊಂದು ಸಾಹಿತ್ಯ ಪ್ರಕಾರವಾಗಿದೆ. ಒಡಪುಗಳನ್ನು ಮದುವೆಯ ಸಂದರ್ಭದಲ್ಲಿ ಮತ್ತು ಮನೆಯಲ್ಲಿ ಏನಾದರೂ ಕಾರ್ಯಕ್ರಮ ಜರುಗಿದಾಗ ಆರತಿ ಮಾಡಿ ಹೆಣ್ಣು ಮಕ್ಕಳು ಇದ್ದರೆ ಗಂಡನ ಹೆಸರನ್ನು, ಗಂಡನು- ಹೆಂಡತಿಯ ಹೆಸರನ್ನು ಹೇಳುತ್ತಾರೆ. ಆಗ ಒಡಪು ಹೇಳುತ್ತಾರೆ. ಉತ್ತರ ಕರ್ನಾಟಕದಾದ್ಯಂತ ಪ್ರಚಲಿತದಲ್ಲಿರುವುದಾಗಿದೆ.

ಈಗಿರುವಂತೆ ಒಡಪುಗಳು ಮದುವೆ ಸಂದರ್ಭದಲ್ಲಿ ಮಾತ್ರ ಬಳಕೆಯಾಗುತ್ತವೆ. ಅಕ್ಷತೆಯ ಮುನ್ನಾದಿನ ವಧುವರರಿಗೆ ಅಭ್ಯಂಜನ ಮಾಡಿಸಿ, ಅರಿಷಿಣ ಹಚ್ಚಿ, ಆರತಿ ಎತ್ತುವುದರೊಂದಿಗೆ ಒಡಪು ಹೇಳುವ ಕಾರ್ಯಕ್ರಮ ಆರಂಭವಾಗುತ್ತದೆ. ಮದುವೆಗಾಗಿ ಕುಂಬಾರರ ಮನೆಯಿಂದ ಐರಾಣಿ ತರುವಾಗ, ಅಕ್ಕಸಾಲಿಗರ ಮನೆಯಿಂದ ಮಂಗಲಸೂತ್ರ ತರುವಾಗ, ಹೂಮಾಲೆ ತರುವಾಗ ಒಡಪುಗಳನ್ನು ಹೇಳುತ್ತಾರೆ. ಹುಡುಗಿ ಮೈನೆರೆದಾಗ ನಡೆಯುವ ಆರತಿ ಕಾರ್ಯಕ್ರಮಗಳ ಸಂದರ್ಭಗಳಲ್ಲಿಯೂ ಒಡುಪು ಹೇಳಿ ಗಂಡನ ಹೆಸರು ಹೇಳುವ ಪದ್ಧತಿ ಇದೆ. ಗಂಡನ-ಹೆಂಡತಿಯ ಹೆಸರನ್ನು ಸಾರ್ವಜನಿಕವಾಗಿ ಹೇಳುವುದರಿಂದಾಗಿ ದಂಪತಿಗಳ ನಡುವಣ ಸಂಕೋಚ ಸ್ವಭಾವ ಕಡಿಮೆಯಾಗುತ್ತದೆಂದು ಜನಪದರ ನಂಬಿಕೆಯಾಗಿದೆ. ಒಡುಪುಗಳಿಗೆ ಕೆಲವು ಉದಾಹರಣೆಗಳು ಈ ರೀತಿಯಾಗಿವೆ.

೧. ಆಕಾಶದಲ್ಲಿ ಮಿನುಗುವುದು ತಾರೆ, ನನಗಾಯಿತು... ರೊಡನೆ ಧಾರೆ.

೨. ಅಟ್ಟದ ಮೇಲಿನ ಮೊಸರು ಕೆಳಗೆ ಬಿದ್ದರೆ ಕೆಸರು, ಅತ್ತೆ-ಮಾವ ಇಟ್ಟ ಹೆಸರು...

೩. ಅಂಗೈಯಾಗ ಆರ ಪುಸ್ತಕ, ಮುಂಗೈಯಾಗ ಮೂರು ಪುಸ್ತಕ.

೪. ಹೇ ಹುಡುಗಿ ಅಂತಾರ, ಬಾ ಎಂದು ಕರೀತಾರ, ಕೈ ಹಿಡಿದು ಎಳಿತಾರ, ಹುಡುಗಾಟಕಿ ಮಾಡತಾರ, ಕದ್ದು ಮುದ್ದು ಕೊಡತಾರ, ಎದ್ದು ಹೊರಗೆ ಹೋಗತಾರ...

೫. ಲಕ್ಷ್ಮೀ ಇರುವಳು ಕಮಲದಲ್ಲಿ, ಕಮಲ ಇರುವುದು ಸರೋವರದಲ್ಲಿ ನಮ್ಮ ಕುಂಕುಮ ಸೌಭಾಗ್ಯ ಇರುವುದು...

೬. ಮೂರು ಸಂಜೆ ಹೊತ್ತು ಮುತ್ತೈದೆ ಮೂಗಿನಲ್ಲಿರುವುದು ನತ್ತು... ಇವರ ಮನಸ್ಸು ಹೋಳಿಗೆ ತುಪ್ಪದ ಮೇಲೆ ಬಿತ್ತು.

೭. ಚಕ್ಕಡಿ ಮಾವಿನಕಾಯಿ ಚಟಾಕ ಉಪ್ಪು ಕಟಕಟ ತಿಂದು ವಟವಟ ಅಂತಾರ...

೮. ಸಂತಿ ಮಾಡ ಅಂದ್ರ ಚಿಂತಿ ಮಾಡತಾರ...

೯. ಮನಿ ತುಂಬ ಲೈಟ... ಇವರ ಹೆಸರ ಹೇಳತೀನ್ರಿ ಗುಡ್‌ನೈಟ್.

ಒಟ್ಟಿನಲ್ಲಿ ಒಡಪುಗಳನ್ನು ಯಮನೂರಿನ ಪರಿಸರದ ವಿವಿಧ ಅನುಭವಗಳ ಸುಂದರವಾದ ಮತ್ತು ಪ್ರಾಮಾಣಿಕವಾದ ಅಭಿವ್ಯಕ್ತಿ ಎಂದು ಹೇಳಬಹುದು. ಕೆಲವೊಂದು ಒಡಪುಗಳಲ್ಲಿ ಹಾಸ್ಯವೂ ಇರುತ್ತದೆ. ಗಾಂಭೀರ್ಯವೂ ಇರುತ್ತದೆ ಎಂದು ಹೇಳಬಹುದು.

ಇನ್ನೊಂದು ಸಂದರ್ಭದಲ್ಲಿ ಒಡಪುಗಳನ್ನು ಬಳಸುತ್ತಾರೆ, ಅಂದರೆ ಧಾರ್ಮಿಕ ಸಮಾರಂಭಗಳಲ್ಲಿ ಅದರಲ್ಲೂ ವಿಶೇಷವಾಗಿ ವೀರಶೈವರ ಧಾರ್ಮಿಕ ಸಮಾರಂಭಗಳಲ್ಲಿ ವೀರಭದ್ರೇಶ್ವರ ಉತ್ಸವದ ಸಂದರ್ಭಗಳಲ್ಲಿ ಇವುಗಳನ್ನು ಹೆಚ್ಚಾಗಿ ಹೇಳುವುದುಂಟು. ಒಡಪುಗಳು ಶರಣರ ಬೆಡಗಿನ ವಚನಗಳೇ ಆಗಿದ್ದರೂ ಜನಸಂಪರ್ಕದಲ್ಲಿ ಜಾನಪದೀಯವಾದುದು ಗಮನಾರ್ಹವಾದುದಾಗಿದೆ. ಒಡಪು ಹೇಳುವವನ ಮೈಯಲ್ಲಿ ವೀರಭದ್ರ ದೇವನೇ ಬಂದು ಅವನಿಂದ ಮಾತಾಡಿಸುತ್ತಾನೆಂಬ ತಿಳುವಳಿಕೆಯೂ ಜನರಲ್ಲಿದ್ದು ಹೇಳುವವನೂ ಹಾಗೆಯೇ ನಟಿಸುತ್ತಾನೆ. ಈ ಸಂದರ್ಭದಲ್ಲಿ ಶಸ್ತ್ರ ಹಾಕಿಕೊಳ್ಳುವುದಂತೂ ಅಚ್ಚರಿ ಮೂಡಿಸುತ್ತದೆ. ಹಾಕಿಕೊಂಡವರಿಗೆ ಎಳ್ಳಷ್ಟೂ ಗೊತ್ತಿರುವುದಿಲ್ಲ. ಯಮನೂರಿನಲ್ಲಿ ಶಸ್ತ್ರ ಹಾಕುವ ಒಡಬು ಹೇಳುವುದನ್ನು ಕಾಯಕವನ್ನಾಗಿ ಮಾಡಿಕೊಂಡವರೂ ಇದ್ದಾರೆ. ಪ್ರತಿ ವಾಕ್ಯಕ್ಕೂ ನಿಂತು ನಿಂತು ಹೇಳುವಲ್ಲಿ ಭಕ್ತವೃಂದ ಖಡೇ ಖಡೇ ಎಂಬ ನುಡಿಯನ್ನು ಕೂಡಿಸಬೇಕು. ಅಂದಾಗ್ಯ ಹೇಳುವವನ ಉತ್ಸಾಹ ಇಮ್ಮಡಿಗೊಳ್ಳುತ್ತದೆ. ಸಾಮಾನ್ಯ ಬೆಡಗಿನ ವಚನಗಳನ್ನು ಹೇಳುವುದುಂಟು.

ಅಹಾಹಾ ರುದ್ರ ಅಹಾಹಾ ಸರ್ಪ ‖ ಖಡೇ ಖಡೇ ‖
ಶ್ರೀ ವೀರಭದ್ರನು ದಕ್ಷನ ಯಜ್ಞಕ್ಕೆ ಬಂದಾಗ
ಸೂರ್ಯನಂತೆ ಹೊಳೆಯುತ್ತಿದ್ದನು.
ಸಾವಿರ ಶಿರಸ್ಸುಳ್ಳವನಾಗಿದ್ದನು
ಅವನ ಕೆಂಡದಂತಹ ಕಣ್ಣುಗಳು
ಕೆಂಡವನ್ನು ಕಾರುತ್ತಿದ್ದವು.
ಅರವತ್ತಾರುಕೋಟಿ ರಾಕ್ಷಸರನ್ನು
ಕೆಂಗಣ್ಣುಗಳಿಂದ ಸುಟ್ಟು ಬೂದಿ ಮಾಡಿದನು.
ಆ ಬೂದಿಯನ್ನು ದಿಗಂತಕ್ಕೆ ಹುಸೆ ಎಂದು ಉಸಿರು ಬಿಟ್ಟು
ಹಾರಿಸಿದನು|

ದಿಗಂತದಲ್ಲಿ ಸುತ್ತಿ
ಸೂರ್ಯ ದೇವರು ಮರೆಯಾದವನು
ಜನವೆಲ್ಲ ಕತ್ತಲಲ್ಲಿ ಮುಳುಗಿತು
ಅಹಾಹಾ ವೀರ | ಅಹಾಹಾ ರುದ್ರ ‖ ಖಡೇ ಖಡೇ ‖
ಅಂಬಿಗರ ಚೌಡಯ್ಯನ ವಚನವನ್ನು ಹೇಳುವುದುಂಟು
ಆಹಾ ವೀರಾ ಆಹಾ ಸರ್ಪ ‖ ಖಡೇ ಖಡೇ ‖
ಕೋಣನ ಕೊಂಬಿನ ಮೇಲೆ
ಕಠೋರ ಎಂಬ ಪಟ್ಟಣ ಹುಟ್ಟಿತ್ತು
ಆ ಪಟ್ಟಣದಲ್ಲಿ ಹಾಯ್ ಹಾಯ್ ಎಂಬ ಗೌಡ ಹೂಯ್ ಹೂಯ್ ಎಂಬ ಕುಲಕರ್ಣಿ
ಮ್ಯಾಯ್ ಮ್ಯಾಯ್ ಎಂಬ ತಳವಾರ

ತಳವಾರನ ಹೆಂಡತಿಯು

ತಳವಿಲ್ಲದ ಕೊಡವನ್ನು ತೆಗೆದುಕೊಂಡು

ಜಲವಿಲ್ಲದ ಬಾವಿಗೆ ಹೋದಳು || ಖಡೇ ಖಡೇ ||

ಆ ಜಲವಿಲ್ಲದ ಬಾವಿಯ ಮೇಲೆ

ಬೇರಿಲ್ಲದ ಮರ ಹುಟ್ಟಿತ್ತು ಖಡೇ

ಬೇರಿಲ್ಲದ ಬೇವಿನ ಮರದ ಮೇಲೆ

ರೆಕ್ಕೆಯಿಲ್ಲದ ಹಕ್ಕಿ ಕುಂತಿತ್ತು || ಖಡೇ ಖಡೇ ||

ಆ ರೆಕ್ಕೆಯಿಲ್ಲದ ಹಕ್ಕಿಯನ್ನು ಕಂಡು

ಕಣ್ಣಿಲ್ಲದ್ದವನು ತುದಿ ಇಲ್ಲದ ಬಾಣವನ್ನು

ತೆಗೆದುಕೊಂಡು ಹೊಡೆಯಲಾಗಿ

ಅದು ಹಕ್ಕಿಗೆ ಬಿತ್ತೋ ಬೀಳಲಿಲ್ಲವೋ ಎಂದಾತ

ನಮ್ಮ ಅಂಬಿಗರ ಚೌಡಯ್ಯ || ಖಡೇ ಖಡೇ ||

ಇಂತಹ ಅನೇಕ ಒಡಬುಗಳು ಇಲ್ಲಿ ಸಿಗುತ್ತವೆ. ಒಟ್ಟಿನಲ್ಲಿ ಒಡಬು ಶಬ್ದೋತ್ಪತ್ತಿಯಲ್ಲಿ ಒಡಪುಗಳಿಗೂ ಸ್ವರೂಪದಲ್ಲಿ ಒಗಟಿಗೂ ಸಂಬಂಧ ಸಾಧಿಸಿದ ವಿಶಿಷ್ಟ್ಯ ಪ್ರಕಾರವಾಗಿದೆ. ಆದರೆ ಒಗಟು ಮತ್ತು ಒಡುಪುಗಳಲ್ಲಿರುವಂತೆ ಒಡಬುಗಳಲ್ಲಿ ಉತ್ತರ ರೂಪವಿಲ್ಲ. ಉತ್ತರ ಕರ್ನಾಟಕದಲ್ಲಿ ನಡೆಯುವ ಅನೇಕ ಜಾತ್ರೆಗಳಲ್ಲಿ ವಿಶೇಷವಾಗಿ ಮೈಲಾರಲಿಂಗೇಶ್ವರ ಜಾತ್ರೆಯಲ್ಲಿ ಕೊನೆಯ ದಿವಸ ಕಾರಣಿಕ ನಡೆಯುತ್ತದೆ. ಆ ದಿವಸ ಗೊರವನೊಬ್ಬನು ಒಡಪಿನಂಥ ಮಾತೊಂದನ್ನು ಹೇಳುತ್ತಾನೆ. ಉದಾಹರಣೆ ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್ ಇವಕ್ಕೂ ಕೂಡಾ ಖಚಿತವಾದ ಅರ್ಥವಿಲ್ಲ, ಭಕ್ತರು ತಮಗೆ ಬೇಕಾದಂತೆ ಅವುಗಳನ್ನು ವ್ಯಾಖ್ಯಾನಿಸಿಕೊಳ್ಳುತ್ತಾರೆ. ಈ ಅರ್ಥದಲ್ಲಿ ಒಡಬುಗಳನ್ನು ದೈವಿಕ ನುಡಿಗಳು ಎಂದು ಕರೆಯಬಹುದು.

**೫.೩.೫. ಒಗಟುಗಳು**

ಜನಪದ ಸಾಹಿತ್ಯದ ಸ್ವತಂತ್ರ ಪ್ರಕಾರಗಳಲ್ಲಿ ಒಗಟುಗಳು ಸೇರ್ಪಡೆಯಾಗುತ್ತವೆ. ಇವು ಎಲ್ಲ ಸಮುದಾಯಗಳಲ್ಲಿಯೂ ಕಾಣ ಸಿಗುವ ಪ್ರಮುಖ ಪ್ರಕಾರವಾಗಿವೆ. ಎಲ್ಲ ವಯಸ್ಸಿನ ಜನರೂ ಒಗಟುಗಳನ್ನು ಹೇಳುತ್ತಾರೆ. ಒಗಟು ಕಟ್ಟುವವನು ಒಂದೇ ವಸ್ತುವನ್ನು ಆಧಾರವಾಗಿಟ್ಟುಕೊಂಡು ಒಗಟುಗಳನ್ನು ಹೇಳುವುದಿಲ್ಲ. ಬಗೆ ಬಗೆಯ ಸುಂದರವಾದ ಶಬ್ದಗಳನ್ನು ಬಳಸಿಕೊಂಡು ವಾಕ್ಚಾತುರ್ಯದಿಂದ ಹಲವು ಒಗಟುಗಳನ್ನೇ ಕಟ್ಟಬಹುದು.

ಸಾಮಾನ್ಯವಾಗಿ ಒಗಟುಗಳನ್ನು ಹೇಳಲು ಕಾಲದ ನಿರ್ಬಂಧವಿಲ್ಲ. ಅವನ್ನು ಜನರು ಎಲ್ಲ ಕಾಲದಲ್ಲಿಯೂ ಹೇಳಬಹುದು. ಇಷ್ಟಿದ್ದರೂ ಮಳೆಗಾಲದ ಬಿಡುವಿನಲ್ಲಿ ಜನರು ಹೆಚ್ಚಾಗಿ ಒಗಟುಗಳನ್ನು ಹೇಳುತ್ತಾರೆ. ಅದರಲ್ಲೂ ಸಂಜೆ ಅಥವಾ ರಾತ್ರಿ ವೇಳೆಯಲ್ಲಿ ಜಗಲಿಯಲ್ಲಿ ಕುಳಿತು ಒಗಟು ಹೇಳುತ್ತಾರೆ. ಮದುವೆ ಮನೆಯಲ್ಲಿ ಮಕ್ಕಳು ಎರಡು ಗುಂಪಾಗಿ ಕುಳಿತು ಸ್ವಾರ್ಥ ರೂಪದಲ್ಲಿ ಒಗಟು ಹೇಳುತ್ತಾರೆ.

ಒಗಟು ಹೇಳುವುದು ಮನರಂಜನೆಯ ಜೊತೆಗೆ ಜನರ ಬೌದ್ಧಿಕ ಕುಶಲತೆಯನ್ನು ಹೆಚ್ಚಿಸುತ್ತದೆ. ಜಾಣತನವನ್ನು ಹೆಚ್ಚು ಮಾಡುತ್ತವೆ. ಸ್ಮರಣ ಶಕ್ತಿಯನ್ನು ಜಾಗ್ರತಗೊಳಿಸುತ್ತದೆ.

ಜನಪದ ಸಾಹಿತ್ಯ ಪ್ರಕಾರಗಳ ಪರಂಪರೆಯೆಂದರೆ ಪುರಾತನ ಮನಸ್ಸಿನ ಪಳೆಯುಳಿಕೆಗಳೇ ಸರಿ. ಆದ್ದರಿಂದ ಅವುಗಳ ಅಧ್ಯಯನವೆಂದರೆ ಮತ್ತು ನಿಜಕ್ಕೂ ಒಂದರ್ಥದಲ್ಲಿ ಜನಾಂಗದ ಬದುಕಿನ ಇತಿಹಾಸವೇ ಆಗಿದೆ. ಗೀತೆ, ಕತೆ, ಗಾದೆಗಳ ನಂತರ ಬರುವ ಮತ್ತೊಂದು ಪ್ರಮುಖ ಪ್ರಕಾರವೆಂದರೆ ಒಗಟು ಎಂದು ಹೇಳಬಹುದು. ಯಾವುದೇ ಸಮುದಾಯವೊಂದರ ಪ್ರಾಚೀನತೆ ಮತ್ತು ಸಾಂಸ್ಕೃತಿಕ ಬದುಕಿನ ತರತಮ ಘಟ್ಟಗಳ ಅಧ್ಯಯನಕ್ಕೆ ಪೂರಕವಾಗಿ ನಿಲ್ಲಬಹುದಾದ ಪ್ರಕಾರ ಇದಾಗಿದೆ. ಒಗಟುಗಳ ಕಲ್ಪನೆ ಅತ್ಯಂತ ರಂಜನೀಯ, ಇಲ್ಲಿ ಕಲ್ಪನೆಯೆಂದರೆ ಕೇವಲ ಕಲ್ಪನೆಯಲ್ಲ, ಬದುಕಿನ ನಾನಾ ಅನುಭವಗಳ ಅವ್ಯಕ್ತ ಅನಿಸಿಕೆಗಳಿಗೆ ವ್ಯಕ್ತರೂಪ. ಅವುಗಳಲ್ಲಿ ಅವರವರ ಆಚಾರ-ವಿಚಾರ, ನಡೆ-ನುಡಿ, ನಂಬಿಕೆಗಳು ಮುಂತಾಗಿ ಸಾಂಸ್ಕೃತಿಕ ಸಂಗತಿಗಳನ್ನು ತಿಳಿ ಹೇಳುವ ಎಳೆಗಳೂ ಉಂಟು. ಯಮನೂರಿನ ಪರಿಸರದಲ್ಲಿ ಇಂತಹ ಮಹತ್ವಪೂರ್ಣ ಒಗಟುಗಳು ಎಲ್ಲ ವಯೋಮಾನದವರಲ್ಲಿ ಲಿಂಗಬೇಧವಿಲ್ಲದೆ, ಆವರಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಅಟ್ಟದ ಮೇಲೆ ಪುಟ್ಟ ಲಕ್ಷ್ಮಿ ಕೂತಿದ್ದಾಳೆ(ಕುಂಕುಮ), ಏರಿ ಮೇಲೆ ಎಳ್ಳು ಚೆಲ್ಲಿದೆ(ಇರಿವೆ), ಬೆಳ್ಳಿ ಚಡಿ ನೆಲಕ್ಕೆ ಹೊಡಿ(ಸಿಂಬಳ), ಅಪ್ಪನ ರೊಕ್ಕ ಎಣಿಸಲಾರೆ ಅಮ್ಮನ ಸೀರೆ ಮಡಚಲಾರೆ(ನಕ್ಷತ್ರ, ಆಕಾಶ), ಅಕ್ಕ ತಂಗಿ ಮನಿಗೆ ಹೋಗಂಗಿಲ್ಲ, ತಂಗಿ ಅಕ್ಕನ ಮನಿಗೆ ಹೋಗ್ತಾಳೆ(ಸೇರು, ಪಾವು), ಅಂಕುಡೊಂಕದ ಶಂಖ ಚಕ್ರದ ಬಾವಿ ಹಣಕಿ ನೋಡಿದರ ಹನಿ ನೀರಿಲ್ಲ(ಕಿವಿ), ನಿನ್ನ ಪರೀನ ಹರಿಲಿ ನಿನ್ನ ದುಬ್ಬ ಕೆರಿಲಿ ನಿನ್ನ ಮೂಗ ಮುರಿಲಿ(ಉಳ್ಳಾಗಡ್ಡಿ, ಹಿರೇಕಾಯಿ, ಚವಳೆಕಾಯಿ), ಅಲ್ಲಿ ಗುಳು ಗುಳು ಇಲ್ಲಿ ಗುಳು ಗುಳು ಕಲ್ಯಾಣದ ತುಂಬ ಬುಳು ಬುಳು(ಆಡಿನ ಹಿಕ್ಕಿ), ಕಂಚು ಕಣ ಕಣ ಹೂವು ಬಳ ಬಳ ಬಳ್ಳಿ ತಳಕ ಬಳಕ(ಗಂಗಾಳ, ಅನ್ನ, ಶಾವಿಗೆ), ಅಕ್ಕಕ್ಕ ಗಿಡ ನೋಡ ಗಿಡ ತುಂಬ ಕಾಯಿ ನೋಡ ತಿಂದವರ ಬಾಯಿ ನೋಡ(ಯಾಲಕ್ಕಿ), ಬಗ್ಗಿ ನೋಡ ಬಗ್ಗಿ ನೋಡ ಬಂದೈತಿಲ್ಲ ಬಟ್ಬಟ್ಟ ನೋಡ(ಬೆಣ್ಣೆ), ಮನೆ ಮಂದಿಗೆಲ್ಲ ಒಂದೇ ಕುಂಡಿ(ಬಚ್ಚಲ), ಹಿರೇ ಅಣ್ಣ ಹಿರೇತನ ಮಾಡತಾನ, ನಡುವಿನವ ತಂದಾಕತಾನ ಸಣ್ಣಾವ ಹಾಳ ಹರಟೆ ಮಾಡತಾನ(ಹಂಡೇವು, ಕೊಡ, ಚರಿಗೆ).

ಹೀಗೆ ಮಾನವನ ವಿವಿಧ ಭಾವನೆಗಳು, ಅಭಿರುಚಿಗಳು, ವಿವಿಧ ಆಲೋಚನೆಗಳು, ಕಲ್ಪನಾ ವೈಖರಿಯ ವೈಭವಗಳು ಇಲ್ಲಿನ ಒಗಟುಗಳಲ್ಲಿ ಕಂಡುಬರುತ್ತವೆ.

ಹಸಿರು ದವಾಖಾನೆ ಕರಿ ಗುಳಿಗಿ ಕೆಂಪ ಎಣ್ಣೆ(ಕಲ್ಲಂಗಡಿ), ಹೊಳಿ, ಹೊಳಿಮ್ಯಾಲ ಪಳಿ, ಪಳಿಮ್ಯಾಲ ಗಿಳಿ, ಗಿಳಿಮ್ಯಾಲ ಅಡ್ಡರಸ್ತೆ, ಅಡ್ಡರಸ್ತೆದ ಮ್ಯಾಲ ದೊಡ್ಡ ಹೊಲ, ದೊಡ್ಡ ಹೊಲದಲಿ ದನಗಳು ಮೇಯಿತಾವ(ಬಾಯಿ, ತುಟಿ, ಮೂಗು, ಹಣೆ, ತಲೆ ಹೇನು), ಕಲ್ಲರಳಿ ಹೂವಾಗಿ ಎಲ್ಲರಿಗೂ ಬೇಕಾಗಿ ಮಲ್ಲಿಕಾರ್ಜುನ ಸರ್ವರಿಗೂ ಬೆಳಕಾಗಿ(ಸುಣ್ಣಾ), ಅಟ್ಟಂಬರಣ್ಯದಾಗ ಚಿಟಗುಬ್ಬಿತಲಿ ಒಡೆದೈತಿ(ಹತ್ತಿ), ಸಂತ್ಯಾಗ ತರ್ತಾಕಿ ಮುಂದಿಟ್ಟಗೊಂಡ ಅಳತಾರ(ಉಳ್ಳೇಗಡ್ಡಿ).

ಇಂತಹ ಸಾವಿರಾರು ಒಗಟುಗಳು, ಇಲ್ಲಿನ ಜನರ ನಾಲಿಗೆಯ ಮೇಲೆ ನಲಿದಾಡುವುದನ್ನು ಕಾಣಬಹುದಾಗಿದೆ. ವಿಶ್ರಾಂತ ಸಮಯದಲ್ಲಿ ಅಥವಾ ಕಾಲ ಕಳೆಯಲೆಂದು ಇಂತಹ ಒಗಟುಗಳನ್ನು ಹೇಳುವುದು ಸಹಜವಾಗಿ ಕಾಣುತ್ತೇವೆ. ಟಿ.ವಿ. ಜಗತ್ತಿನ ಹಾವಳಿಗೆ ಒಗಟೂ ಸಹ ಮಾಯವಾಗತೊಡಗಿರುವುದನ್ನು ಕಾಣುತ್ತೇವೆ. ಹೀಗೆ ಯಮನೂರು ಪರಿಸರದಲ್ಲಿ ಜನಪದ ಸಾಹಿತ್ಯ ತುಂಬ ಹುಲುಸಾಗಿದೆ. ಅದು ಆ ಪ್ರದೇಶದ ಆಡುಭಾಷೆಯಲ್ಲಿ ಅರ್ಥಪೂರ್ಣವಾಗಿ ಅಭಿವ್ಯಕ್ತವಾಗಿದೆ.

**ಒಗಟುಗಳು**

೧. ಅಜ್ಜಿ ಮೈಯೆಲ್ಲ ಕಜ್ಜಿ
ರಜ್ಜಿ ನೋಡಿದರ ಕಹಿ
ಎಣ್ಣ್ಯಾಗ ಕರದರ ಸಿಹಿ — **ಹಾಗಲಕಾಯಿ**

೨. ಕರ್‍ರಗಿದೆ ಇದ್ದಲಿಯಲ್ಲ
ನೀರಿದೆ ಸಮುದ್ರವಲ್ಲ
ರೆಕ್ಕೆಗಳಿವೆ ಪಕ್ಷಿಯಲ್ಲ — **ಕಣ್ಣು**

೩. ಎಲ್ಲರಲುಂಟು ನಾವು ಅವಳಿ ಜವಳಿ
ಅಪ್ಪಾ ಎಂದಾಗ ಕೂಡುವೆವು
ಅವ್ವಾ ಎಂದಾಗ ಕೂಡಲಾರೆವು — **ತುಟಿಗಳು**

೪. ಉದ್ದಾಗಿರುವೆ ಹಾವಲ್ಲ, ಸವಿಯಾಗಿವೆ
ಕಬ್ಬಲ್ಲ, ಭೂಮಿಗೆ ಲಂಬವಾಗಿ ಬೆಳೆವೆ
ಹಾಗಾದರೆ ನಾನಾರು? — **ಪಡುವಲಕಾಯಿ**

೫. ಅಟ್ಟಟ್ಟ ಅಡಿವ್ಯಾಗ
ಲಕ್ಕವ್ವ ಸೀರಿ ಒಣಕ್ಯಾಳ
ಆರು ತಿಂಗಳಾದರೂ ಒಣಗಿಲ್ಲ — **ನಾಲಿಗೆ**

೬. ಸಂತ್ಯಾಗ ದೊರಿತೈತಿ
ಸಿಂಬಳಾ ಸುರಿತೈತಿ
ಉಂಡವರಿಗಿ ಶಕ್ತಿಕೊಡತೈತಿ — **ಬೆಂಡಿಕಾಯಿ**

೭. ಅಬ್ಬಾ ಅವೆಂತಾವಂ
ಹುಡಗಿ ಗಗ್ಗರ್‍ಯಾಗ
ಹುಡುಗ ಕೈ ಸೇರಸ್ತಾನ — **ಕೊಡೆ**

೮. ನಾವಿಬ್ಬರು ಪ್ರಸಿದ್ಧ ಪ್ರೇಮಿಗಳು
ನಾ ಬಿದ್ದರ ಬಿಳತಾನ ಎದ್ದರ
ಏಳತಾನ, ಸತ್ತರ ಸಾಯತಾನ — ನೆರಳು

೯. ಆಸರಬಳ್ಳಿ ಸಾಸಿರ ಬಳ್ಳಿ
ನೀರಾಗಿಟ್ಟರ ನೆನೆಯಬಳ್ಳಿ
ಹಚ್ಯಾಕ ಹೋದ್ರ ಚಿಗುರದ ಬಳ್ಳಿ — ಕೂದಲು

೧೦. ನಡೆಯುವ ಕಾಲೆಂಟು ನಡೆಯದ ಕಾಲೆರಡು
ನುಡಿಯುವ ಬಾಯಿ ನಾಲ್ಕು, ನುಡಿಯದ ಬಾಯಿ
ಒಂದು, ಒಟ್ಟು ತಲೆ ಐದು — ಸಿದಿಗೆಯ ಮೇಲಿನ ಹೆಣ

೧೧. ನೋಡಬೇಕು ಅಂದ್ರ ಕಾಣ್ಸಲ್
ಹಿಡಿಬೇಕು ಅಂದ್ರ ಸಿಗಾಂಗಿಲ್ಲ
ಅದಿಲ್ಲದೆ ಜೀವ ಇಲ್ಲ — ಗಾಳಿ

೧೨. ಅಕ್ಕ ತಂಗೆರು ಒಂದು ಕುಲದವರು
ಅವರು ಮಕ್ಕಳ ಬೇರೆಯವರಿಗೆ ಕೊಟ್ಟು
ಬರಿ ತೊಟ್ಟಿಲು ತೂಗತಾರ — ತೆಂಗಿನ ಮರ, ಅಡಿಕೆ ಮರ

೧೩. ಹೋದವರು ಬಂದವರೆಲ್ಲಾ
ಕುತ್ತಿಗೆಗೆ ಕೈ ಹಾಕಿ ಹಗ್ಗ
ಕಟ್ಟಿ ಪಾತಾಳಕ್ಕ ಇಳಿ ಬಿಡತಾರ — ಬಿಂದಿಗೆ

೧೪. ಅಗಸ ಮಾಡದ ಮಡಿ
ಸೂರ್ಯ ಕಾಣದ ನೀರು
ಕುಂಬಾರ ಮಾಡದ ಗಡಿಗೆ — ತೆಂಗಿನಕಾಯಿ

೧೫. ಹಸರ ದವಖಾನಿ
ಕೆಂಪ ಡಾಕ್ಟರ್
ಕರಿ ಗುಳಗಿ — ಪಪ್ಪಾಯಿ ಹಣ್ಣು

೧೬. ದಿಗ್ ದಿಗ್ ಬರತದ ಬಲು ಶಕ್ತಿ ಕೊಡತದ
ದಿನ್ನಿ ಏರತಾದ
ನೀರ ಕಂಡರ ಹೆದರಿ ಸರಿತದ — ಉಕ್ಕುವ ಹಾಲು

೧೭. ತಕ್ಕಡ್ಯಾಗ ಇಟ್ಟು ತೂಕಾ ಮಾಡುದಿಲ್ಲ
ಮಾಪ ತಗೊಂಡ ಅಳೆಂಗಿಲ್ಲಾ
ಅವಿಲ್ಲದೆ ಹಬ್ಬ ಆಗೋದಿಲ್ಲಾ — ಶೆಗಣಿ

೧೮. ಬಟ್ಟ ಮುಖದ ಬಾಲೆ ಬಹಳ ಸುಂದರಳು
ಅಷ್ಟಮಿಯ ಚಂದ್ರನ ಆಕಾರದವಳು
ಮೊದಲ ಅಕ್ಷರ "ಹೂ" ಕಡೆ ಅಕ್ಷರ 'ಬು' — ಹೂರಣ ಗಡುಬು

೧೯. ಮಡಚಿದರೆ ಮೊಗ್ಗು ಬಿಡಿಸಿದರೆ ಹೂವು
ವಾಸನೆಯಿಲ್ಲಾ ಪರಿಮಳವಿಲ್ಲ
ಜಹಾಗಿರದಾರ ಬಿಟ್ಟು ಇರಾಂಗಿಲ್ಲಾ — ಕೊಡೆ (ಛತ್ರಿ)

**ಒಗಟುಗಳು**

೧. ಬಂಗಾರದ ಗುಬ್ಬಿ ಬಾಗಿಲಲ್ಲಿ ನೀರು ಕುಡಿಯುತ್ತದೆ — ಹಣತಿಯ ದೀಪ
೨. ಬಾಯಲ್ಲಿ ತಂದು ಬಗಲಲ್ಲಿ ಕಾರುತ್ತದೆ — ಬೀಸುವ ಕಲ್ಲು
೩. ಸಾಲು ಗಿಡಗಳು ಸಪ್ಪಳಿಲ್ಲದೆ ಬಡಿಯುತ್ತವೆ — ಕಣ್ಣೆವೆ
೪. ಅವ್ವ ಎಂದರೆ ಕೂಡುವದಿಲ. ಅಪ್ಪನೆಂದರೆ ಕೂಡುತ್ತವೆ — ತುಟಿ
೫. ಗುಡಿಯ ಹಿಂದೆ ಗುಂಡುಗಲ್ಲು ಬಿದ್ದಿದೆ — ತುರುಬು
೬. ತಗ್ಗಿನಲ್ಲಿ ಬಸುರಾಗಿ ತೆವರಲ್ಲಿ ಹಡೆಯುತ್ತದೆ — ಮೊಟ್ಟೆ
೭. ಕರೆದರೆ ಬರುವುದಿಲ್ಲ, ಕೈಹಿಡಿದರೆ ಬರುವರು — ತಂಬಿಗೆ
೮. ಹಗ್ಗ ಹಾಸಿದೆ ಗೂಳಿ ಮಲಗಿದೆ — ಕುಂಬಳಿಕಾಯಿ
೯. ಅಡ್ಡ ಗೋಡೆಯ ಮೇಲೆ ಗಿಡ್ಡಪ್ಪ ಕುಳಿತು ಹೋಗಿ ಬರುವವರಿಗೆ ಪ್ರಸಾದ ಕೊಡುತ್ತಾನೆ. — ಚೇಳು
೧೦. ಗಿಡ್ಡನ ಗಿಡಕ್ಕೆ ಗಿಣಿ ಮುಕುರೀರೆ — ಮೆಣಸಿನಕಾಯಿ
೧೧. ಕರಿಸೀರೆ ಉಟ್ಟಾಳ, ಕಾಲುಂಗರ ತೊಟ್ಟಾಳ ಮೇಲೆ ಹೆಗ್ತಾಳ ಕೆಳಗ ಬರತಾಳೆ — ಒನಕೆ
೧೨. ಬಾಬಾ ಅಂಬೋಳು, ಬಣ್ಣವೆರಸಿ ಕರೆವಳು ಇಕ್ಕಿಸಿಕೊಂಬಳು ಕಕ್ಕಸಬಡುವಳು — ಬಳೆ ತೊಡಿಸಿಕೊಳ್ಳುವವಳು
೧೩. ಅಕ್ಕಕ್ಕ ತೇರು ನೋಡು, ತೇರ ಮೇಲಿನ ಗೊಂಬೀ ನೋಡು ಗೊಂಬೀ ಮೂಗಿನ ಸುಂಬಳ ನೋಡು — ಹತ್ತಿಗಿಡಿ
೧೪. ಅಕ್ಕಾ ಅಕ್ಕಾ ಗಿಡ ನೋಡು ಗಿಡದ ತುಂಬ ಕಾಯಿನೋಡು ತಿಂದವರ ಬಾಯಿನೋಡು — ಏಲಕ್ಕಿ
೧೫. ಗುಡ್ಡದ ಮೇಲೆ ಗುಡಾರ ಹಾಸಿದ್ದೇನೆ, ಒಣಗವಲ್ಲದು — ನಾಲಗೆ
೧೬. ಬಗ್ಗಿದರೆ ಬಾಯಿಗೆ ಬಡಿಯುವುದು — ಮಾಂಗಲ್ಯ

೧೭. ಯಾದವಾಡದಲ್ಲಿ ಯಾತ ಹೊಡೆದರೆ ಕಲಕೇರಿಯಲ್ಲಿ ಕಾಯಿ ಆಗುತ್ತವೆ — ತಕ್ಕಡಿ

೧೮. ಅಂಗಡ್ಯಾಗ ಇಟ್ಟು ಮಾರುವುದಿಲ್ಲ, ತಕ್ಕಡಿಯಾಗ ಹಾಕಿ ತೂಗುವುದಿಲ್ಲ
ಅದಿಲ್ಲದೆ ಹಬ್ಬವಾಗುವುದಿಲ್ಲ — ಶಗಣಿ

೧೯. ಅಂತರದಲ್ಲಿ ಹಾರುವುದು ಪಕ್ಷಿ ಅಲ್ಲ, ಕೊಂಬುಂಟು ಹಸುವು ಕೂಡ ಅಲ್ಲ,
ಬಾಲವು ಉಂಟು ಆದರೆ ಕೋತಿ ಅಲ್ಲ — ಗಾಳಿಪಟ

೨೦. ತತ್ತರ ಎಲೆ, ತಾರೆಯ ಎಲೆ, ಮುಚ್ಚಳ ತೆರೆದು ನೋಡಿದರೆ ಮುನ್ನೂರು ಎಲೆ — ಸೇವಂತಿ

೨೧. ಮುಂಜಾನೆ ನಾಲ್ಕು ಕಾಲು, ಮಧ್ಯಾಹ್ನ ಎರಡು ಕಾಲು, ಸಂಜೆಗೆ ಎರಡು ಕಾಲು
ಊರಿ ನಡೆಯುವ ಪ್ರಾಣಿ ನಾನ್ಯಾರು — ಬಾಲ್ಯ, ಯೌವನ, ವೃದ್ಧಾಪ್ಯ

**ಕೊಂಕು ನುಡಿಗಳು**

೧. ಬೇಸತ್ತು ಬೇರೆ ಆದರೆ ಪಾಲಿಗೆ ಅತ್ತೆ ಬಂದಳು

೨. ಅಪ್ಪನಿಗೆ ಅಪ್ಪಾ ಅನಲಿಕ್ಕೆ ಒಪ್ಪೊತ್ತಿನ ಕೂಲಿ ಬೇಡಿದರು.

೩. ಹೊಟಗೇಡಿಯ ಮುಂದೆ ಹುಲ್ಲು ಹಾಕಿದರೆ ಗೂಟ ಕಿತ್ಕೊಂಡು ಎದುರಿಗೆ ಬರುತ್ತಿತ್ತಂತೆ.

೪. ಮನೆಗೆ ಬಂದರೆ ಮಜ್ಜಿಗೆ ಕೊಡದೆ, ಹಾಲು ಕೊಟ್ರಂತೆ.

೫. ತನ್ನ ಸಂಗಡ ಬರಬೇಡ ಎಂದವನಿಗೆ ಯಾವ ಎತ್ತಿಯ ಮೇಲೆ ಕುತ್ಕೊಲಿ ಎಂದು ಕೇಳಿದಂತೆ

೬. ಸಿರಿಗೇಡಿಗೆ ಸೀರೆ ಉಡಿಸಿದರೆ ಹೊಲಗೇರಿ ಹೇಳಲಿಕ್ಕೆ ಹೋಯಿತು.

೭. ಎಂದೂ ಇಲ್ಲದ ಒಮ್ಮೆ ಎಲಗ ಅಂದರೆ ತಿಂಗಳಿಗೊಮ್ಮೆ ನಗೆ ಬಂದಿತು.

೮. ಧರ್ಮಕ್ಕೆ ದಟ್ಟೀ ಉಡಿಸಿದರೆ ದಡ್ಡಿಯಲ್ಲಿ ಒಯ್ದು ಮೊಳಹಾಕಿದರಂತೆ

೯. ಊರಿಗೆ ಒಂದು ಚಿಂತೆಯಾದರೆ ಉಡಾಳನಿಗೆ ಮತ್ತೊಂದು ಚಿಂತೆ ಆಗಿತ್ತಂತೆ.

೧೦. ಅಂದ ಅನಿಸಿಕೊಂಡು ಚೆಂದಗೇಡಿ

೧೧. ಉಂಡು ಹೋಗೋ ಮೂಳ ಅಂದ್ರ ಯಾವ ಹೊಲದ ಜೋಳ ಅಂದಿದ್ಕಂತೆ

೧೨. ಹಾಲು ಬೋನ ಉಂಡು ಹಾಸುಹೊಯ್ಕೋ ಮಗಳೆ ಅಂದರೆ ಊರ ಮಿಂಡರೊಡನೆ ನೀರು ಹೊಕ್ಕಿನಿ ಅಂದಿದ್ಲಂತೆ.

೧೩. ಹಾದೀಲಿ ಹೋಗುವವನನ್ನು ಅಪ್ಪಾ ಎಂದರೆ ಯಾರಿಗೆ ಹುಟ್ಟಿದೆಯೋ ಮಗನೆ ಎನ್ನುವನು.

೧೪. ಕರೆದು ಹೆಣ್ಣು ಕೊಟ್ಟರೆ ಅಳಿಯನಿಗೆ ಮಲರೋಗ ಬಂದಂತೆ.

೧೫. ಕುಂಡರಲಾರದೆ ಕುಲಕರ್ಣಿಯ ಮನೆಗೆ ಹೋದರೆ ಕುದ್ರುಸಿಕೊಂಡು ಮೂರು ರೂಪಾಯಿ ತಗೊಂಡನಂತೆ.

೧೬. ಕಂಗೆಟ್ಟು ಕುಂಬಾರನಿಗೆ ಹೋದರೆ ಮೂಗಿಕ ತಟುಕು ಬಾಯಲ್ಲಿ ಬಿತ್ತಂತೆ.

**ವೀಡಿಯೋ ಆಡಿಯೋ ಸಂಬಂಧಿತ ಭಕ್ತಿಗೀತೆಗಳು**

ಇಂದು ಅಭಿವೃದ್ಧಿ ಪಥದಲ್ಲಿ ಸಾಗುತ್ತಲಿರುವ ಕೇವಲ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ವಲಯಗಳಲ್ಲಿ ಅಷ್ಟೇ ಅಲ್ಲ, ಧಾರ್ಮಿಕ ಕ್ಷೇತ್ರದಲ್ಲಿಯೂ ಅದರ ವ್ಯಾಪಕತೆ ಹೆಚ್ಚಾಗಿ ಕಂಡುಬರುತ್ತದೆ. ಪುಣ್ಯಪುರುಷರ, ಮಹಾತ್ಮರ, ಚರಿತ್ರೆ ಪವಾಡಗಳನ್ನು ಲೌಕಿಕತೆಯನ್ನು ಮೀರಿ ಬ್ರಹ್ಮಜ್ಞಾನವನ್ನು ಪಡೆದು ತಮ್ಮ ಜೀವನವನ್ನು ಮಹೋನ್ನತಿಗೆ ಏರಿಸಿರುವುದನ್ನು ವಿವಿಧ ಮಾಧ್ಯಮಗಳ ಮೂಲಕ ಪಸರಿಸುವ ಕಾರ್ಯವನ್ನು ಈ ವೀಡಿಯೋ ಆಡಿಯೊ ಕ್ಷೇತ್ರವು ಬಹಳ ಪರಿಣಾಮಕಾರಿಯಾಗಿ ಚಿತ್ರಿಸುತ್ತದೆ. ನಮ್ಮ ಭಾಗದಲ್ಲಿ ನೋಡುವುದಾದರೆ

ಹುಬ್ಬಳ್ಳಿಯ ಸಿದ್ಧಾರೂಢರ ಭಕ್ತಿಗೀತೆಗಳು, ಸವದತ್ತಿಯ ಎಲ್ಲಮ್ಮನ ಕುರಿತ ಗೀತೆಗಳು ಹಾಗೂ ಅತ್ಯಂತ ಪ್ರಸಿದ್ಧವಾದ ಕರ್ನಾಟಕದ ಕಬೀರ ಎನಿಸಿರುವ ಹಿಂದೂ ಮುಸ್ಲಿಂ ಭಾವೈಕ್ಯದ ರೂವಾರಿಯಾದ ಶಿಶುನಾಳ ಶರೀಫರ ತತ್ವಪದಗಳಂತೆ ಇತ್ತೀಚಿನ ದಿನಗಳಲ್ಲಿ ಶ್ರೀ ಹನುಮಂತ ಸುಣಗಾರ ಉಗರಗೋಳ ರಚಿಸಿದ ಈ ಗೀತೆಗಳ ಆಡಿಯೋ, ವೀಡಿಯೋಗಳ ಮೂಲಕ ಯಮನೂರಿನ ಚಾಂಗದೇವನ ಕುರಿತ ಗೀತೆಗಳು ರಾಜ್ಯದ ವಿವಿಧ ಭಾಗಗಳಿಗೆ ಪಸರಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಕೆಲವು ಸೂಕ್ತವಾದ ಮತ್ತು ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಭಕ್ತಿಗೀತೆಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಗೀತೆಯು ಭಕ್ತಿಯ ಭಾವೈಕ್ಯ ಸಂಕೇತವಾಗಿದೆ. ಪ್ರತಿಯೊಂದು ಸಾಲುಗಳು ಆತನ ಮಹಿಮೆಯನ್ನು ಸಾರುತ್ತವೆ. ನಿಶ್ಚಲ ಭಕ್ತಿಯಲ್ಲಿ ಮಿಂದ ಜನರಿಗೆ ಆತನ ಪರಮದೃಷ್ಟಿ ಬೀಳುತ್ತದೆ, ಪ್ರತಿ ವರುಷಕ್ಕೊಮ್ಮೆ ಉರುಸಿಗೆ ಬಂದು ಭಕ್ತಿಯಿಂದ ನಮಿಸಿದವರಿಗೆ ನವನಿಧಿಯ ಕೊಟ್ಟ ಸಾಮ್ರಾಟನ ವರ್ಣನೆ ಈ ಗೀತೆಯಲ್ಲಿ ಕಂಡುಬರುತ್ತದೆ.

೧. ದೇವಾ ಯಮನೂರ ಪೀರಾ

ಭಕ್ತರಿಗೆ ಬೇಡಿದ ವರಕೊಟ್ಟಿ, ನಿಶ್ಚಲ ಭಕ್ತಿಗೆ ನಿನ್ನ ಪರಮದೃಷ್ಟಿ
ಊದು ಸಕ್ಕರೆಯ ನೀಡಿದರ ಸಿರಿ ಸಂಪತ್ತುಕೊಟ್ಟಿ
ಭಕ್ತರನು ಸಲುಹಲು ನೀ ಗಟ್ಟಿ
ನಿನಗ ಸಿಟ್ಟು ಬಂತೆಂದರ ನೀ ಬಾಳ ಖೊಟ್ಟಿ
ಯಮನೂರ ಪುರದಾಗ ನಿನ್ನ ಪಾದಾ ಇಟ್ಟಿ
ನಿನ್ನ ನಂಬಿದ ಇದ್ದಾವ್ರಿಗೆ ಬುದ್ಧಿ ಕಲಿಸಿ ಬಿಟ್ಟಿ
ನಂಬಿದವರ ಬಾಳನ್ನ ಚೆಂದಾಗಿ ನಡೆಸಿಕೊಟ್ಟಿ
ದೂರದಿಂದ ಭಕ್ತರು ಬರತಾರಯ್ಯ ನಿನಗ ಆಗಾಕಬೆಟ್ಟಿ
ಕಂಟಕರ ಸದೆಬಡಿದು ರುದ್ರ ತಾಂಡವನೆನೆಸಿಬಿಟ್ಟಿ
ಯಮನೂರ ಕ್ಷೇತ್ರದಿ ನೆಲೆಸಿ ಕರುಣಾದಯಾಳು ಎನಿಸಿಬಿಟ್ಟೆ.
ಮೂರಮನಿ ಊರಾಗ ಮುಕ್ತಿದಾತಾ ಎನಿಸಿಬಿಟ್ಟಿ
ನಿನ್ನ ಪೂಜಿಸ್ತಾರಯ್ಯ ಗದ್ದುಗೆಗೆ ಲಾಡಿ ಕಟ್ಟಿ
ಉಗರಗೊಳ್ಳ ಹನುಮಂತಗ ನಿನ್ನ ಮಹಿಮಾ ಹಾಡುವಂತಾ ಶಕ್ತಿ ಕೊಟ್ಟಿ
ಹುಟ್ಟಿದ ಊರು ಸುಂದರ ಪುರ
ಮೆಟ್ಟಿದ ಊರು ಯಮನೂರ
ಅಷ್ಟ ದಿಕ್ಕುಗಳು, ಅಷ್ಟದಿಕ್ಪಾಲಕರು, ಅಷ್ಟೈಶ್ವರ್ಯಗಳು ನಿನ್ನ ಸಂಕಲ್ಪ
ಮಾತ್ರದಿ ಚಲಿಸುವರು ಹೇ ಪೀರಾ
ಪ್ರತಿ ವರುಷಕ್ಕೊಮ್ಮೆ ನಿನ್ನ ವರುಷಕೊಮ್ಮೆ ನಿನ್ನ
ಉರುಸಿಗೆ ಬಂದು ಭಕ್ತಿಯಿಂದ ನಮಿಸಿದವರಿಗೆ

ನವನಿಧಿಯ ಕೊಡುವ ಯೋಗಿ ಸಾಮ್ರಾಟ

ರಾಜಭಾಗ ಸವಾರಾ ಶ್ರೀಚಾಂಗದೇವಾ ಯಮನೂರಿನ ಪೀರಾ

ಯಮನೂರ ಪುರದೊಡೆಯ ನಿನ್ನನ್ನು ಹಾಡಿ ಕೊಂಡಾಡಿದವರಿಗೆ,

ನಿನ್ನ ಕೀರ್ತಿಯನ್ನು ಬರೆದವರಿಗೆ

ಕೇಳಿದವರಿಗೆ ಸದಾ ಮಂಗಳವನ್ನುಂಟು ಮಾಡಯ್ಯಾ ತಂದೆ,

ಜೈ ಚಾಂಗದೇವಾ

ಶರಣು ರಾಜಬಾಗ ಸವಾರಾ

ನಮೋ ನಮೋ ಯಮನೂರ ಪೀರಾ

**ಸೃಷ್ಟಿಯನ್ನೇ ಎತ್ತಿಹಿಡಿದ ಚಾಂಗದೇವ**

ತಂಗಿ ಮದುವಿ ಆಗಿ ಮೂರು ವರ್ಷ ಆದ್ರೂ ಮಕ್ಕಳು ಆಗಲಿಲ್ಲಂತ ಕೊರಗಿ ನೊಂದಿದ್ದಳು. ಕಡೀಕ ಯಮನೂರಿಗೆ ಹೋಗಿ ಪೀರಾನ ಗದ್ದುಗಿ ಮುಂದ ನಿಂತು ನನಗೆ ಮಕ್ಕಳಾದರೆ ತಪ್ಪದೇ ಪ್ರತಿವರ್ಷ ನನ್ನ ಮಗುವನ್ನು ಕರೆದುಕೊಂಡು ಜಾತ್ರೆಗೆ ಬರುತ್ತೇನೆ ಎಂದು ಬೇಡಿಕೊಂಡು ಮಕ್ಕಳಾದ ಮೇಲೆ ಹರಕೆ ತೀರಿಸದೆ ಇದ್ದಾಗ ಆಕೆಯ ಸಂಸಾರದೊಳಗೆ ಯಾವ ರೀತಿ ಕಷ್ಟ ಕಾದಾಟ ಇದ್ದವು ಎಂಬುವದು ಮತ್ತು ಯಮನೂರ ಪೀರಾನ ಸತ್ಯ ಸಂದತೆ ಈ ಗೀತೆಯಲ್ಲಿ ವ್ಯಕ್ತವಾಗಿದೆ.

ಸೃಷ್ಟಿಯನ್ನೇ ಎತ್ತಿಹಿಡಿದ ಚಾಂಗದೇವನೇ

ಧರೆಯಲ್ಲಿ ಭಕ್ತಿಬೀಜ ಬಿತ್ತಿರುವವನೇ

ದಿವ್ಯ ವಾಣಿಯಿಂದ ಜಗವ ಬೆಳಗಿರುವವನೇ

ಪೀರಾ... ಪೀರಾ... ಪೀರಾ ||ಅ.ಪ||

ಪೀರಾ ಈ ಕಷ್ಟ ತಾಳೆನಯ್ಯಾ

ನಿನ್ನ ಮೊಗವ ತೋರೋ ಪೀರಾ| ಎನ್ನ ಬಾಳ ಬೆಳಗು ಬಾರಾ

ಕತ್ತಲೆಯ ನೀಗುವ ಜೋತಿಯು ನೀನಯ್ಯಾ

ನನ್ನ ಕತ್ತಲೆಯ| ನೀ ತೊಡೆಯಲು ಬಾರಯ್ಯಾ

ಗುರುವಾಗಿ ಬಂದು ನೀ ನಮ್ಮನು ಸಲಹಯ್ಯಾ

ನಿನ ಹರಕೆಯ ತೀರಿಸಲೆಂದೇ| ನಿನ್ನಡಿಗೆ ಓಡಿ ಬಂದೆ

ಅಜ್ಞಾನವ ಕಳೆದು ಪೀರಾ| ನನ ಬಾಲನು ಹರಸಯ್ಯಾ

ಸುಖ ಶಾಂತಿಯ ನೀಡಯ್ಯಾ ||೧||

ಸಂಸಾರವೆಂಬುವ ಬಾವಿಯಲ್ಲಿ ಬಿದ್ದವಗೆ

ನಿನ್ನಯ ನಾಮ ಮೆಟ್ಟಿಲು ಹೇ ಪೀರಾ

ನಿನ್ನಯ ಸ್ಮರಣೆ| ನಮಗೆಲ್ಲಾ ಆಧಾರಾ

ನಿನ್ನಯ ಶಕ್ತಿಯ ಅರಿತು| ನಿನ್ನ ಸನ್ನಿಧಿಗೆ ನಾ ಬಂದು
ಬೇಡುವೆನು ಯಮನೂರ ಪೀರಾ| ದರುಶನವ ನೀ ತೋರಾ
ಹರಿಬ್ರಹ್ಮನ ಅವತಾರ ||೨||
ಬೆಣ್ಣೆಯ ಹಳ್ಳ| ಸ್ನಾನವಗೈದು ನಾನು
ನಿನ್ನ ಭಜಿಸಿ| ನಾನಲಿದೆ ಹೇ ಪೀರಾ
ನಿನ್ನಯ ಒಲುಮೆ ನಾ ಪಡೆದೇ ಹೇ ಧೀರಾ
ನನ್ನಯ ಗರ್ವದ ಕಳೆದು| ವರವನ್ನು ನೀಡಿದೆ ಪೀರಾ
ನೀನೇ ಈ ಲೋಕವೆಲ್ಲಾ| ನಿನ್ನಿಂದ ಜಗವೆಲ್ಲಾ
ಯಮನೂರಿನ ಪುರದೊಡೆಯಾ

**೩. ಯಮನೂರಿನ ಪೀರ ನಮ್ಮನೆಗೆ ಬಾರಯ್ಯ**

ಯಮನೂರಿನ ಪೀರ ಭಕ್ತರ ಮನೆಗೆ ಬಂದರೆ ಆ ಬಕ್ತ ಏನೇನು ಕೊಡುತ್ತಾನೆಂದು ಬೇಡಿಕೊಳ್ಳುತ್ತಾನೆ ಎನ್ನುವುದು ಮತ್ತು ಪೀರನನ್ನು ನೆನೆದರೆ ಏನೆಲ್ಲಾ ದೂರಾಗುವುದು ಹಾಗೂ ಭಕ್ತರ ಭಾಗ್ಯವೇ ನೀನಯ್ಯಾ ಎಂದು ಹೊಗಳುವ ಗೀತೆಯಿದು.

ಯಮನೂರಿನ ಪೀರಾ| ನಮ್ಮನೆಗೆ ಬಾರಯ್ಯಾ
ಭಕ್ತಿಯ ಸಿರಿಯ | ನೀ ನಮಗೆ ನೀಡಯ್ಯಾ
ಕಾವಿ ಬಣ್ಣದ| ಪಂಚೆಯ ಉಡಿಸಿ| ರುದ್ರಾಕ್ಷಿ ಮಾಲೆ
ಕೊರಳಿಗೆ ತೊಡಿಸಿ,
ಹಣೆಗೆ ಚಂದನವ| ನಾ ಹಚ್ಚುವೆ ಬಾರಯ್ಯ
ಊದು ಸಕ್ಕರೆ ಬೆಳ್ಳಿಯ ಕುದುರೆ| ನಿನಗಾಗಿ ನಾ ತಂದಿಹೆನು
ಮಂದ ಬುದ್ಧಿಯ ಬಿಡಿಸಿ ಕಂದನ| ಹಲವು ಎಂದು ಬೇಡುವೆನು,
ಮಲ್ಲಿಗೆ ಹೂ ಮಾಲೆಯನು ಹಾಕಿ| ಚಂದನಹಚ್ಚಿ ಸಿಂಗರಿಸಿ
ನಿನ್ನ ನಾಮದ ಸುಧೆಯ| ಅಭಿಷೇಕದ ಅಮೃತವ ಉಣಿಸುವೆನು
ನಮ್ಮಯ ಭಕ್ತಿಗೆ ಒಲಿಯಯ್ಯಾ ಮುಕ್ತಿಯ ಮಾರ್ಗವ ತೋರಯ್ಯಾ
ಯಮನೂರ ಪುರದ ಒಡೆಯನು ನೀನು| ಭಕ್ತಕೋಟಿಯ ಸಿರಿಯು ನೀನು
ಶರಣು ಎನಲು| ಬರುವೆ ನೀನು
ನಿತ್ಯವೂ ನಿನ್ನ ನೆನೆದರೆ ಪೀರಾ| ಕಷ್ಟವು ಎಲ್ಲಿ ಒಗದಲ್ಲಿ
ಕೊರೆವ ಚಿಂತೆ ಮಣ್ಣಾಗುವುದು|| ನಿನ್ನ ದರುಶನ ಮಾತ್ರದಲಿ
ಸುಂದರ ಪುರದ ಒಡೆಯನೆ ನಿನ್ನ| ಕೀರ್ತಿಯು ಮೊಳಗಿ ಜಗದಲ್ಲಿ
ನಿತ್ಯ ನೂತನವಾಗಿ ಬೆಳಗಿ| ಸಾರಿದೆ ಇಹದಲ್ಲಿ

ಪರಮಂತ್ರ ದೈವವು ನೀನಯ್ಯಾ| ಭಕ್ತರ ಭಾಗ್ಯವು ನೀನಯ್ಯಾ

ಮನೆಯಲಿ ಹರುಷ ಮನದಿ ಶಾಂತಿ| ಭಕ್ತಿಹೃದಯ ನೀಡು ದೇವಾ

ನೀನೇ ನಮ್ಮ ವರವು ಪೀರಾ

೪. ಶರಣು ಶರಣು ಓ ಪೀರಾ

'ಶರಣು ಓ ಪೀರಾ' ಎಂಬ ಗೀತೆಯಲ್ಲಿ ಸುಂದರ ಪುರದಲ್ಲಿ ಬಾಲಲೀಲೆಯ ತೋರುತ, ದುಷ್ಟ ಶಕ್ತಿಯನ್ನು ಕ್ಷಣದಲ್ಲಿ ಧ್ವಂಸ ಮಾಡಿದ, ನಿಜ ಭಕ್ತರ ಪಾಲಿನ ದೈವವಾಗಿ ಮೆರೆದ ಗೀತೆಯಿದು, ಬೆಣ್ಣೆ ಹಳ್ಳದಲ್ಲಿ ಮಿಂದು ಬಂದವರ ಪಾಪಕಾರ್ಯಗಳು, ರೋಗಗಳನ್ನು ಕಳೆವ ಶಕ್ತಿಯಿದೆ ಎಂದು ಹಾಡಿದ ಗೀತೆಯಿದು.

ಶರಣು ಶರಣು ಓ ಪೀರಾ| ಮಾಯಾ ರೂಪಿ ಓ ಧೀರಾ

ನಿನ ಮಹಿಮೆ| ಕೊಂಡಾಡಿ| ನಾಹಾಡಿ ಹೊಗಳುವೆ

ನಿನ ಕೀರ್ತಿ| ಜಗದಲ್ಲಿ| ನಾಸಾರಿ ಹೇಳುವೆ

ಸುಂದರ ಪುರದ ಈಶ| ನಿಜಭಕ್ತರ ಪಾಲಿನ ದೈವ

ನೀ ನನ್ನಯ ನಾಲಿಗೆ ಮೇಲೆ ನಿನ ಚರಿತೆಯನಿಂದು ಬರೆದು

ನಾ ಹಾಡೋ ಶಕ್ತಿಯನು| ನೀ ನನಗೆ ಕರುಣಿಸು

ಶರಣು ಶರಣು ಓ ಪೀರಾ ||ಪ||

ಸುಂದರ ಪುರದಿ ಬಾಲ ಲೀಲೆಯ| ತೋರುತ ನೀ ಬೆಳೆದೆ

ಮಾಧವ ಪಂಡಿತನ ಮಗನಾಗಿ ನೀ ಕೀರ್ತಿಯನು ಮೆರೆದು

ನೀ ಪಾಂಡುರಂಗನ ಸ್ವಪ್ನದಿ ಕಂಡು ವರವನು ನೀ ಪಡೆದೆ

ಕ್ಷತ್ರೋಜಿ ಬರ್ಗೆಯವರಿಗೆ ನೀನೊಲಿದು ಅಭಯವನು ಕೊಟ್ಟೆ

ದುಷ್ಟಶಕ್ತಿಯ ಕ್ಷಣದಲಿ ಧ್ವಂಸ ಮಾಡಿದಿ| ಇಹದಲ್ಲಿ

ಯಮನೂರ ಪೀರನ ಹೆಸರಲಿ ದೇವ ಜಗವನೇ ಹರಿಸುವೆ

ಸುಂದರ ಪುರದ ಈಶ ನಿಜಭಕ್ತರ ಪಾಲಿನ ದೈವ

ನೀ ನನ್ನಯ ನಾಲಿಗೆ ಮೇಲೆ ನಿನ ಚರಿತೆಯ ನಿಂದು ಬರೆದು

ನಾ ಹಾಡೊ| ಶಕ್ತಿಯನು| ನೀ ನನಗೆ ಕರುಣಿಸು ||೧||

ಬೆಣ್ಣೆಯ ಹಳ್ಳದಿ| ಮಿಂದ ಮಾತ್ರದಿ ರೋಗಗಳ ಕಳೆದೆ

ಭೂತ ಪ್ರೇತ ಭಾದೆಯನು ಪೀರಾ| ಕ್ಷಣದಿ ಅಡಗಿಸಿದೆ

ಊದು ಸಕ್ಕರೆ ಸ್ವೀಕರಿಸಿ ನೀ ವರಗಳ ಮಳೆಗರೆದೆ

ಕಾಲಜ್ಞಾನದ ಶಕ್ತಿಯಿಂದ ನೀ ಧರೆಯನೆ ಬೆಳಗಿರುವೆ

ಯಮನೂರಿನಲ್ಲಿ ನೆಲೆಸಿರುವೆ| ಬಂದ ಭಕ್ತರ ಹರಸಿರುವೆ

ನಿಜಭಕ್ತರಿಗೆ ಕಣ್ಣಿಗೆ ಇಂದಿಗೂ| ಕಾಣುವೆ ನೀ ಪೀರಾ

ಸುಂದರ ಪುರದಾ ಈಶಾ| ನಿಜ ಭಕ್ತರ ಪಾಲಿನಾ ದೈವಾ

ನೀ ನನ್ನಯ ನಾಲಿಗೆ ಮೇಲೆ ನಿನ ಚರಿತೆಯನಿಂದು ಬರೆದು

ನಾ ಹಾಡೊ ಶಕ್ತಿಯನು| ನೀ ನನಗೆ ಕರುಣಿಸು||೨||

ನಿನ್ನ ನೈವೇದ್ಯಕ್ಕೆ ಯಾವುದೇ ರೀತಿಯಾದ ಮೃಷ್ಟಾನ್ನ ಭೋಜನ ತರಬೇಕಾಗಿಲ್ಲ. ಕೇವಲ ಊದು ಸಕ್ಕರೆ ಎರಡು ಊದಿನಕಡ್ಡಿಯನ್ನು ನಾವು ಕೊಟ್ಟರೆ, ಕರುಣಾಲು ಆದ ದಯಾಮಯನಾದ ನೀನು ನಮಗೆ ಸಿರಿ ಸಂಪತ್ತನ್ನು ಕೊಟ್ಟು ಭಕ್ತರನ್ನು ಸಲಹುವ ಕರುಣಾ ಸಿಂಧುವಾಗಿದ್ದಿಯಾ ತಂದೆ ಎಂದು ಕೊಂಡಾಡುತ್ತಾರೆ.

ಇಂಥ ದಯಾಮಯನಾದ ಚಾಂಗದೇವ ದುಷ್ಟರ ಸಂಹಾರಕ ಶಿಷ್ಟರ ರಕ್ಷಕನಾಗಿದ್ದು, ನಂಬದೇ ಇದ್ದ ಜನರಿಗೆ ಬುದ್ಧಿಯನ್ನು ಕಲಿಸಿ, ನಂಬಿದವರನ್ನು ಕೈಹಿಡಿದು ನಡೆಸಿದೆ ಗುರುವೆ, ಅಷ್ಟೇ ಅಲ್ಲದೇ ದೇವಾನು ದೇವತೆಗಳು ಕೂಡಾ ನಿನ್ನ ಸಂಕಲ್ಪದಿಂದ ಇರುವರು. ನಿನ್ನ ತಪಶ್ಯಕ್ತಿಯನ್ನು ತಿಳಿದ ಭಕ್ತಸಮೂಹ ನಾಡಿನ ಮೂಲೆ ಮೂಲೆಗಳಿಂದ ನಿನ್ನ ದರ್ಸನಕ್ಕೆ ಬಂದು ಪುನೀತರಾಗುತ್ತಾರೆ ಎಂದು ಈ ಹಾಡಿನ ಮೂಲಕ ಚಾಂಗದೇವರ ಮಹಿಮೆಯನ್ನು ಕೊಂಡಾಡಿದ್ದಾರೆ.

ಭೂಮಿಯ ಮೇಲೆ ಹುಟ್ಟಿದ ಪ್ರತಿಯೊಬ್ಬ ಮಾನವನಿಗೆ ಒಂದಿಲ್ಲ ಒಂದು ರೀತಿಯಲ್ಲಿ ಕಷ್ಟ ಕೋಟಲೆಗಳು ಉಂಟಾಗುತ್ತವೆ. ಆಗ ಮಾನವ ದೇವರ ಮೊರೆ ಹೋಗುತ್ತಾನೆ. ಓ ದೇವರೆ ನನ್ನ ಕಷ್ಟಗಲನ್ನು ನಿವಾರಿಸು ತಂದೆ ಎಂದು ಬೇಡಿಕೊಳ್ಳುತ್ತಾನೆ.

ನನ್ನಲ್ಲಿರುವ ಅಜ್ಞಾನವನ್ನು ತೊಡೆದುಹಾಕಿ ಜ್ಞಾನದ ಬೆಳಕಿನೆಡೆಗೆ ನನ್ನನ್ನು ಕೈಹಿಡಿದು ನಡೆಸು ಬಾ ಗುರುವೆ. ನಾನು ಸಂಸಾರ ಸಾಗರದಲ್ಲಿ ಬಿದ್ದು ಹೊರಳಾಡುತ್ತಿದ್ದೆ, ನನ್ನನ್ನು ಸಲಹು ಬಾ ತಂದೆ, ಸಂಸಾರ ಎಂಬುದು ಕೆಸರು ಆ ಕೆಸರಿನಲ್ಲಿ ಬಿದ್ದು ಮೇಲೇಳಲಿಕ್ಕಾಗದೇ ಒದ್ದಾಡುತ್ತಿದ್ದೇನೆ. ಓ ಎನ್ನಲಾಗದೇ ದೇವ ಏಕೆಂದರೆ ನಿನ್ನ ಮಹಿಮೆ, ಶಕ್ತಿ ಅಪಾರವಾದುದು. ಅದಕ್ಕಾಗಿ ನನ್ನನ್ನು ಕರುಣೆಯಿಂದ ಮೇಲಕ್ಕೆತ್ತು ತಂದೆ ಎಂದು ಈ ಪದ್ಯದ ಮೂಲಕ ಬೇಡಿಕೊಳ್ಳುತ್ತಾನೆ.

“ಬಾಗಿಲನು ತೆರೆದು ಸೇವೆಯನು ಸ್ವೀಕರಿಸು ಹರಿಯೇ” ಎಂದು ಕನಕದಾಸರು ಹರಿಯಲ್ಲಿ ಬೇಡಿಕೊಳ್ಳುವ ಹಾಗೆ, ಇಲ್ಲಿ ಭಕ್ತನು ಸದಾ ಕಾಡುವ ಚಿಂತೆಯಿಂದ ನಲುಗಿ ಹೋಗಿದ್ದೇನೆ, ಆ ಚಿಂತೆಯಿಂದ ನನ್ನನ್ನು ಪಾರು ಮಾಡು ತಂದೆ.

ನಾನು ನಿನಗೆ ಚಂದನವ ಹಚ್ಚುವೆ, ಊದು ಸಕ್ಕರೆ ಕೊಡುಸುವೆ, ನನ್ನಲ್ಲಿರುವ ಮಂದ ಬುದ್ಧಿಯನು ಬಿಡಿಸು ನಿನಗೆ ಮಲ್ಲಿಗೆ ಹೂ ಮಾಲೆಯನು ತನು, ಮನದಿಂದ ಅರ್ಪಿಸುವೆನು. ನಿತ್ಯವೂ ಚಾಂಗದೇವನನ್ನು ನೆನೆದರೆ ಎಲ್ಲ ಕಷ್ಟವು ದೂರವಾಗುವುದೆಂಬ ನಂಬಿಕೆಯಿಂದ ಏನೆಲ್ಲಾ ವಸ್ತುವನ್ನು ತಂದು ನಿನಗೆ ಅರ್ಪಿಸುವೆನೆಂದು ಕವಿ ಹೇಳುತ್ತಾನೆ.

ಹುಬ್ಬಳ್ಳಿಯ ಶ್ರೀ ಸಿದ್ಧಾರೂಢರು ತಮ್ಮ ಶಿಷ್ಯರಾದ ಗುರುನಾಥ ರೂಢರಿಗೆ ನನ್ನ ಮಹಿಮೆಯನ್ನು ಜಗತ್ತಿಗೆ ಸಾರಿ ಹೇಳು ಎಂದು ಹೇಳುವ ಹಾಗೆ ಚಾಂಗದೇವರು ತಮ್ಮನ್ನು ಆರಾಧ್ಯ ದೈವವನ್ನಾಗಿ

ಮಾಡಿಕೊಂಡು ಸಾಯುವವರೆಗೂ ಚಾಂಗದೇವರನ್ನೇ ನಂಬಿ ಬಾಳಿ ಬದುಕಿದ ಕ್ಷತ್ರೋಜಿ ಬರ್ಗೆಯವರಿಗೆ ತಮ್ಮ ಕೀರ್ತಿಯನ್ನು ಮಹಿಮೆಯನ್ನು ನಾಡಿನೆಲ್ಲೆಡೆ ಸಾರು ಎಂದು ಅಭಯನಿತ್ತರು. ಕೇವಲ ಬೆಣ್ಣೆಹಳ್ಳದಿ ಮಿಂದ ಮಾತ್ರಕ್ಕೆ ಭವರೋಗವನ್ನು ಕಳೆವ ಅಪಾರಶಕ್ತಿ ಆ ನೀರಿನಲ್ಲಿದೆ. ಅಂದರೆ ಅಂತಹ ಶಕ್ತಿ ಆ ಮಹಾಮಹಿಮನಲ್ಲಿ ಇದೆ ಎಂದು ಕವಿ ಹಾಡಿದ್ದಾನೆ.

**ಯಮನೂರಿನ ಪೀರಾನ ಜಾತ್ರೆ**

ಜಾತ್ರೆಯ ಸಂಭ್ರಮದ ಒಟ್ಟು ಪರಿಭಾವಿಸುವಿಕೆ ಈ ಗೀತೆಯಲ್ಲಿ ಅಭಿವ್ಯಕ್ತಗೊಂಡಿದೆ. ಸಾಮಾನ್ಯವಾಗಿ ಗ್ರಾಮಗಳಲ್ಲಿನ ಜಾತ್ರೆಗಳಿಗೆ ವಿವಿಧ ಹಳ್ಳಿಗಳಿಂದ ಜನರು ಜೋಡೆತ್ತು ಕಟ್ಟಿಕೊಂಡು ಚಕ್ಕಡಿಯಲ್ಲಿ, ಟ್ರ್ಯಾಕ್ಟರ್‌ನಲ್ಲಿ ಬರುವುದು ಕಂಡುಬರುತ್ತದೆ. ಒಬ್ಬಂಟಿಗರಾಗಿ ಬಾಳದೇ ಸಾಮೂಹಿಕವಾಗಿ ನಾವೆಲ್ಲರೂ ಒಂದೇ ಎಂಬ ಪರಿಕಲ್ಪನೆಯೊಳಗೆ ಭಕ್ತರನ್ನು ಹುರಿದುಂಬಿಸುವುದು ಈ ಗೀತೆಯ ಒಟ್ಟು ಆಶಯವಾಗಿದೆ.

ಯಮನೂರ ಪೀರಾನ ಜಾತ್ರಿ ಮಾಡು
ಚಾಂಗ ಭಲೋ ಎಂದು
ಶ್ರೀ ಚಾಂಗದೇವಗೆ ನೀನಮಿಸು
ಚಾಂಗ ಭಲೋ ಎಂದು
ಬೆಣ್ಣೆಯ ಹಳ್ಳದಿ ಮಿಂದು ನಾವು ಹರಕೆ ತೀರಿಸೋಣ ಬಾ
ಚಾಂಗ ಭಲೋ ಎಂದು
ಶರಣೆನ್ನಿ ನಮ್ಮ ನಿಮ್ಮೆಲ್ಲರ ಹಠಯೋಗಿಗೆ
ಶರಣೆನ್ನಿ ನಮ್ಮ ನಿಮ್ಮೆಲ್ಲರ ಪೀರನಿಗೆ ||ಪ||
ಊದು ಸಕ್ಕರೆಯ ಬುಟ್ಟಿ| ತುಂಬಿಕೊಂಡು ತಿಳಿಯ ನೀರ
ಪೀರಾಗೆ ಎಡೆಯ ಹಿಡಿದು| ನಮಿಸೋಣ ಬಾ,
ಯಮನನ್ನೇ ಗೆದ್ದ ಊರು| ಚಾಂಗದೇವನ ಕ್ಷೇತ್ರ
ಬಂದು ಬಳಗವ ಕೂಡಿ ಹೋಗೂಣು ಬಾ
ಡೊಳ್ಳಿನ ಶಬ್ದಕೆ| ತಾ ಕುಣಿವವನು| ಕರಡಿಯ ಮಜಲಿಗೆ ತಾ ನಲಿವವನು
ಬಡತನವ ದೂರ ಮಾಡಲು ಪೀರಾಗೆ ವರವ ಕೇಳು ತಾ
ವಂದಿಸಿ ಹಾಡೋಣು ಪೀರಾಗೆ ಶರಣೆಂದು ||೧||
ಢಣ ಢಣ ಢಮರುಗ ನಾದ| ಕಣ ಕಣ ತಾಳ ಬಾರಿಸಿ
ಚೆಂದದಿ ಬರುವ ಪೀರನ| ಭಕ್ತ ಜನ ಸಾಗರೊಳಗ
ಅಂದದಿ ಬರುವ ದೃಶ್ಯವ ನೋಡೋಣಾ ಬಾ
ಒಲಿದರೆ ಭಕ್ತರ ಕಣ್ಮಣಿ ಇವನು|
ಮುನಿದರೆ| ಮಹಾರುದ್ರ| ಈ ಹಟಯೋಗಿ

ದಿಟಯೋಗಿ ಚಾಂಗದೇವಗೆ ಹರುಷದಿ ವರವ ಬೇಡಿ

ಹಾಡಿ ಹೊಗಳೋಣ ಪೀರಾನ ಶರಣು ಎಂದು ||೨||

**ಯಮನೂರ ಓ ಪೀರಾ ವರನ ನೀಡೋ ಓ ಧೀರಾ**

'ಯಮನೂರ ಓ ಪೀರಾ' ಎಂಬ ಗೀತೆಯಲ್ಲಿ ಭಕ್ತನೊಬ್ಬನು ದೇವರ ಇರುವಿಕೆ ಅಂದರೆ ಪ್ರತಿಯೊಂದು ಚರಾಚರ ವಸ್ತುವಿನಲ್ಲಿಯೂ ದೇವರಿರುವುದನ್ನು ಕಂಡು ನನ್ನ ಬಾಳಿನಲ್ಲಿ ಬಂದಿರುವ ಕಷ್ಟಗಳನ್ನು ಕಳೆದು, ನಾನು ಮಾಡಿದ ಪಾಪವೆಲ್ಲವ ಹೋಗಿಸಿ ನನ್ನ ಬಾಳನ್ನು ಉದ್ಧರಿಸುವ ದೇವನೆ, ರಾಗ ದ್ವೇಷಾದಿಗಳಿಂದ ತುಂಬಿ ಹೋಗಿರುವ ಈ ಜಗತ್ತಿನಿಂದ ಬೇಸತ್ತಿರುವ ನನಗೆ ನಿನ್ನ ಒಲುಮೆಯ ಬೆಳಕ ನೀಡಿ ನನ್ನ ಬಾಳಿನಲ್ಲಿ ಹರುಷವ ನೀಡಯ್ಯಾ ತಂದೆ ಎಂದು ಬೇಡಿಕೊಳ್ಳುವ ಪರಿ ವ್ಯಕ್ತವಾಗಿದೆ.

ಯಮನೂರ ಓ ಪೀರಾ| ವರ ನೀಡೋ ಓ ಧೀರಾ

ನೀನೇನೇ ಗತಿಯು ಎಂದು ನಿನ್ನಡಿ ಬಂದಿಹೆ ನಾ

ಅಣುರೇಣು ತೃಣದಲ್ಲೂ ನೆಲೆಸಿರುವ ಓ ದೇವಾ

ಶರಣೆಂದೆ ಪೀರಾ ಶರಣೆಂದೆ| ಭವದ ಈ ಬಂಧನವ ಬಿಡಿಸಿಂದೆ

ಬಾಳ ಕಷ್ಟವ ಕಳೆದು| ಪೀರಾ ಭಾಗ್ಯವ ನೀಡು

ನಿನ್ನ ಬಿಟ್ಟು ಗತಿಯಾರಿಲ್ಲ| ಯಮನೂರ ಪುರದೊಡೆಯ

ಪಾಪ ನೀಗಿಸು ಪೀರಾ| ತಾಪ ತೀರಿಸು ಪೀರಾ

ಬಾಳದೋಣಿಯ ಕಣ್ಣಾಗಿ| ಕರುಣಿಸು ಜಗದೊಡೆಯ

ಜನುಮ ಜನುಮದ ಪಾಪವನು| ಹೊತ್ತು ನಿನ್ನಡಿ ಬಂದಿಹೆನಾ

ಉದ್ಧರಿಸು ಬಾ ಲೋಕದ ಒಡೆಯನೇ

ಶರಣೆಂದೆ ಪೀರಾ ಶರಣೆಂದೆ ಭವದ ಈ ಬಂಧನವನ್ನು ಬಿಡಿಸೆಂದೆ

ರಾಘು ದ್ವೇಷದ ಜಗದಿ| ನೊಂದು ಬೆಂದಿಹೆನಯ್ಯ

ನಿನ್ನ ಒಲುಮೆ ಬೆಳಕ ನೀಡಿ| ಹರುಷವ ನೀಡಯ್ಯ,

ಆಸೆ ಪಾಶೆಯನಳಿದು| ಬೇಡಿ ಬಂದಿಹೆನಯ್ಯ,

ಮಾಯಾ ಮೂರ್ತಿ| ಓ ಪೀರಾ ನೀ ನನಗೊಲಿದು ಬಾರಯ್ಯ,

ಜಗವ ಕಾಯುವ ಜಗದೊಡೆಯ ಜಗದ ರಕ್ಷಕ ಓ ದೇವಾ

ಬಿಡಿಸೆಂದೆ ಬಂದ ಕಂಟಕ ಕಳೆ ಬಾ ಪೀರನೇ

ಶರಣೆಂದೆ ಪೀರಾ ಶರಣೆಂದೆ ಭವದ ಈ ಬಂಧನವನ್ನು ಬಿಡಿಸೆಂದೆ

**ಸಂಸಾರ ಎಂಬ ಭವಸಾಗರ**

ಸಂಸಾರ ಎಂಬ ಭವಸಾಗರದಲ್ಲಿ ಮಾಯೆ ಮೋಹಗಳ ಬಲೆಯಲ್ಲಿ ಬಿದ್ದು ಏರು ಪೇರುಗಳೆಂಬ ಅಲೆಯ ಹೊಡೆತಕ್ಕೆ ಸಿಲುಕಿ ದಾರಿಕಾಣದಂತಾಗಿರುವ ಮಾನವನಿಗೆ ನೀನೆ ತೋರಿಸಬೇಕು ಎಂದು ಕವಿ

ಪ್ರಸ್ತುತ ಪದ್ಯದಲ್ಲಿ ಪವಾಡ ಪುರುಷ ಚಾಂಗದೇವರಲ್ಲಿ ಬೇಡುತ್ತಾನೆ. ಅಲ್ಲದೇ ಕಷ್ಟಕೋಟಲೆಗಳ ಈ ಬಾಳಿಗೆ ನಿನ್ನ ನಾಮವೇ ಸಂಜೀವಿನಿ, ನಿನ್ನ ನಾಮದ ಬಲ ಮತ್ತು ನನ್ನ ಭಕ್ತಿಯ ಫಲ. ಇವೇ ಭವಸಾಗರ ದಾಟಿಸುವ ಶಕ್ತಿ ಎನ್ನುತ್ತಾನೆ ಕವಿ.

ಭವದ ಬಾಧೆ| ತಾಳದಾದೆ| ಯಮನೂರ ಪೀರಾ

ಬಾಳ ನೋವ| ಸಹಿಸಲಾರೆ| ಕರುಣೆ ತೋರೆಯಾ

ಮೋಹದ ಬಲೆಯಲಿ ಬಿದ್ದು ದಾರಿ ಕಾಣದಾಗಿದೆ

ನಿನ್ನನು ಕಾಣುವ ಆಸೆಗೆ ಜೀವ ಕೊರಗಿ ನೊಂದಿದೆ

ಬಾಳ ಜ್ಯೋತಿಯ| ಬೆಳಗಿಸುವ ಪೀರಾ| ಯಮನೂರ ಪುರಕೆ ನಾ ಬಂದಿಹೆನು

ಕಷ್ಟವ ಕರಗಿಸು| ಇಷ್ಟದೇವನೇ ಬಾ...||ಪ||

ನಿನ್ನನು ನಂಬದೆ ಮೂರ್ಖನಾದೆ| ಭವದಿ ಯಮನೂರ ಪೀರಾ

ನೀನೇ ಬರೆದ| ಹಣೆ ಬರಹದಲಿ| ನಿನ್ನಿಂದ ಮುಕ್ತಿ ದೇವಾ

ಎನ್ನಯ ಪಾಪದ| ಮನ್ನಿಸು ಪ್ರಭುವೆ| ಕರುಣಿಸು ಹೇ ಚಾಂಗದೇವಾ

||ಬವದ ಭಾದೆ ತಾಳದಾದೆ||

ದೋಷ ದುರ್ಗುನ ಅಳಿದು ಪೀರಾ| ನಿನ್ನಡಿ ನಾನೋಡಿ ಬಂದೆ

ಕಷ್ಟದ ಬಾಳಿಗೆ| ಬ್ರಹ್ಮಾಸ್ತ್ರವಂತೆ| ನಿನ್ನಯ ಸಿಹಿ ನಾಮ ತಂದೆ

ಶರಣು ಎನುತ| ಬೇಡುವೆ ಪೀರಾ|ವರವನು ನೀಡು ಎನಗೆ

ನಿರ್ಮಲ ಭಕ್ತಿಗೆ| ಶಕ್ತಿಯ ನೀಡಿ| ಭಕ್ತನ ಕಾಯೋ ನೀ ಗುರುವೆ

||ಬವದ ಭಾದೆ ತಾಳದಾದೆ||

ಶರಣಾದೆನು| ಶರಣೆಂದೆನು| ಯಮನೂರ ಪೀರಾ

ಅಣುಕ್ಷಣವು ನಾ| ನಿನ್ನ ನಮಿಸುವೆ| ಹೇ ಚಾಂಗದೇವಾ

ನಮ್ಮ ಪಾಲಿಗೆ| ನೀ ದೈವವು| ಹಟಯೋಗಿ ಪೀರಾ

ಶರಣು ಓ ಪೀರಾ| ಶರಣು ಮಹಾಧೀರಾ ||ಪ||

ಹುಟ್ಟು ಸಾವನು | ನೀ ನಾಶವ ಮಾಡಿಹೆ

ಶ್ರೇಷ್ಠ ಯೋಗಿಯು | ನೀನಾಗಿ ಮೆರೆದಿಹೆ

ಭವದ ಚಿಂತೆ | ಇನ್ಯಾಕೆ ಹೇ ಈಶ್ವರಾ

ನಿನ್ನ ಒಲುಮೆ| ನಮಗಿರಲು ಪರಮೇಶ್ವರಾ

ಪಾಮರ ಭಕ್ತಿಗೆ ಪರ ಜ್ಯೋತಿ ನೀನು

ಧರೆಯಲಿ ಧರ್ಮವು ನೀನಯ್ಯ ||ಶರಣಾದೆನು||

ಧೀನರ ಸಲಹುವ| ನಿಜ ಅಮೃತದಾಯಿ ನೀ

ಪರಮ ಪಾವನ| ಶುಭ ಮಂಗಳಕಾರ ನೀ

ಶಕ್ತಿ ಯುಕ್ತಿ ನೀ ಮುಕ್ತಿ ಸ್ವರೂಪಿ ನೀ

ಆದಿ ಅಂತ್ಯ ಎಲ್ಲವೂ ಓ ಪೀರ ನೀ

ಚಾಂಗಭಲೋ ಎನಲು| ಹರುಷದ ಹೊನಲು

ಜಗದಲಿ ನಿನ್ನದೇ ಶುಭ ನಾಮವು ||ಶರಣಾದೆನು||

**ಶರಣೆಂದೆನು ಯಮನೂರ ಪೀರ**

'ಶರಣೆಂದೆನು ಯಮನೂರ ಪೀರ' ಎಂಬ ಪದ್ಯದ ಮೊದಲ ನುಡಿಯ ನಾಲ್ಕು ಸಾಲುಗಳಲ್ಲಿ ಶ್ರೀ ಕ್ಷೇತ್ರ ಯಮನೂರಿನ ದೈವ ಚಾಂಗದೇವರಿಗೆ ವಿನಮ್ರವಾಗಿ ಕವಿ ಶರಣಾಗುತ್ತಾನೆ. ದೈವಿ ಶಕ್ತಿಯ ಅವತಾರಿ ಚಾಂಗದೇವರು ಹುಟ್ಟು ಸಾವುಗಳ ಮೀರಿದ ಮಹಾಧೀರ. ಬದುಕಿಗೆ ಬೆಳಕು ನೀಡಿದ ಪರಂಜ್ಯೋತಿ, ನಿನ್ನ ಒಲುಮೆಯೊಂದಿದ್ದರೆ ಮತ್ತೇನು ಬೇಡ ಎನ್ನುತ್ತಾನೆ. ಚಾಂಗದೇವನು ಮೃತ್ಯುವಿನಿಂದ ಅಮೃತತ್ವದೆಡೆಗೆ ಕರೆದೊಯ್ಯುವ ಅಮೃತಮಯಿ, ಶಕ್ತಿ ಯುಕ್ತಿ, ಮುಕ್ತಿ, ಆದಿ, ಅಂತ್ಯ ಎಲ್ಲವೂ ನೀನೆ. ಇಂತಹ ದಿವ್ಯಶಕ್ತಿಗೆ ಶರಣು ಬಂದಿದ್ದೇನೆ ಎನ್ನುತ್ತಾನೆ ಕವಿ.

ಹೇಗೆ ನಾ ಪೂಜಿಸಲಿ| ನಿನ್ನ ಯಮನೂರಿನ ಪೀರಾ

ಹೇಗೆ ನಿನ್ನ ಬೇಡುವುದು ನಾ ಅರಿಯೆನು ಓಧೀರಾ

ಯಾವ ನಾಮದಿ ನಿನ್ನ ಹೊಗಳಿ ಸಂತೋಷಗೊಳಿಸಲಯ್ಯಾ

ಶರಣು ಶರಣು ಪೀರಾ ಎಂದು ನಿನ್ನಡಿ ಬಂದಿಹೆ ನಾ (ಪ)

ದೀಪ ಬೆಳಗುವೆನೆಂದರೆ ಜ್ಯೋತಿಯು ನೀನು

ಹಾಡಿ ಹೊಗಳುವೆನೆಂದರೆ ನುಡಿಮುತ್ತು ನೀನು

ಗಾಳಿ ಬೀಸುವೆನೆಂದರೆ ಜಗದುಸಿರೇ ನೀನು

ಅಭಿಷೇಕ ಮಾಡುವೆನೆಂದರೆ ಅಮೃತವು ನೀನು

ಹೇಗೆ ನಾ ಪೂಜಿಸಲಿ ನಿನ್ನ ಯಮನೂರಿನ ಪೀರ (೧)

ಹೂವು ಮುಡಿಸುವೆನೆಂದರೆ ಬಾಡುವುದು ತಾನು

ಹಣ್ಣು ನೀಡುವೆನೆಂದರೆ ಕಲ್ಪವೃಕ್ಷ ನೀನು

ಮಂಟಪ ಕಟ್ಟುವೆನೆಂದರೆ ಸೃಷ್ಟಿಯೇ ನೀನು

ನನ್ನೇ ನೀಡುವೆನೆಂದರೆ ನಿನ್ನ ಶಿಸುವು ನಾನು

ಹೇಗೆ ನಾ ಪೂಜಿಸಲಿ ನಿನ್ನ ಯಮನೂರಿನ ಪೀರ (೨)

ಕರುಣಾಮೂರ್ತಿ ಯಮನೂರ ಪೀರ| ಭಕ್ತರ ದೈವ ಶ್ರೀ ಚಾಂಗದೇವ

ಹುಲಿಯನ್ನೇ ಏರಿ ಬಂದ ಪೀರಾ ಶರಣು| ಯಮನನ್ನೇ ತಡೆದು ನಿಂತ ಧೀರಾ ಶರಣು

ಅಣುರೇಣು ತೃಣದಲ್ಲೂ ನೀ| ನೆಲೆಸಿ ಜಗವನ್ನೇ ಬೆಳಗಿಹ ಪೀರಾ

ನೆನೆದವರ ಮನದಲ್ಲಿ ನೀ| ನೆಲೆಸಿ ಬಾಳನ್ನೇ ಹರಸಿಹೆ ದೇವಾ (ಪ)

ಈ ಹಸುರಿನ ತೀರದಿ| ಹಸನಾಗಿ ಕುಳಿತಿರುವಿ| ಯಮನೂರಲಿ ಚಾಂಗದೇವಾ
ಹರಕೆಯ ತೀರಿಸಲು| ಹಂಬಲದಿ ಬಂದಿಹೆವು| ಸ್ವೀಕರಿಸು ಮಹಾದೇವಾ
ವರ ನೀಡು ಭಲ ನೀಡು ಬಾಗಸವಾರಾ| ಗುರು ನೀನೇ ಸಿರಿ ನೀನೇ ಧೀರಾ ಪೀರಾ
ಬೆಣ್ಣೆ ಹಳ್ಳದ ಒಡೆಯನೆ| ನಿನ್ನ ನಂಬಿದರೆ ಕಷ್ಟವೇ ಇಲ್ಲಾ
ದೇವಾ ಕಲಿಯುಗದ ಕರುಣಾಮಯಿ| ನಿನ್ನ ಒಲುಮೆಯಿರಲು ಸ್ವರ್ಗವೇ ಎಲ್ಲಾ (೧)
ಭವಮಾಲೆ ಪರಿಹರಿಸೊ| ಶಿವನ ಅವತಾರವು ನೀ| ಭಕ್ತರ ಬಂದು ಓ ಪೀರಾ
ಮಾಯಾವಿ ಶಕ್ತಿ ನೀ| ಮಮತೆಯ ಮೂರುತಿ ನೀ| ಸೌಭಾಗ್ಯ ನೀಡೋ ಧೀರಾ
ಸತ್ಯವಂತರಾ ಮನದಿ ನೆಲೆಸೊ ಪೀರಾ| ಸದ್ಬುದ್ಧಿ ನೀಡಿ ನೀ ಹರಸೊ ಧೀರಾ
ಜಗದಿ ನೀನೆ ಅಂತಕರುಣಿ| ನಿಜ ಭಕ್ತರಿಗೆ ಕರುನಾಳು ನೀ
ನೀ ಮೆಟ್ಟಿದ ಕನ್ನಡ ಮಣ್ಣು| ಪರಮ ಪಾವನ. ಪುಣ್ಯದ ಭೂಮಿ

**ಹೇಗೆ ನಾ ಪೂಜಿಸಲಿ**

ದೇವರನ್ನು ಹಲವು ಬಗೆಯಲ್ಲಿ ಹಾಡಿ ಹೊಗಳಿ ಅನನ್ಯವಾಗಿ ಪೂಜಿಸುವುದು ಭಾರತೀಯ ಧಾರ್ಮಿಕ ಪರಂಪರೆ. ಆದರೆ ಪೂಜೆ ಹಲವು ರೀತಿಯಲ್ಲಿ ನಡೆಯುತ್ತದೆ. ಹೂವು ಹಣ್ಣು ಕಾಯಿ ಕರ್ಪೂರ ಗಂಧ ಮುಂತಾದವುಗಳಿಂದ ಪೂಜಿಸುವುದು ಆಡಂಬರದ ಪೂಜೆ ಎನಿಸಿದರೆ, ಇವೆಲ್ಲ ವಸ್ತುಗಳನ್ನು ದೇವರಿಗೆ ಅರ್ಪಿಸುತ್ತೇನೆ ಎಂದು ಭಾವಿಸಿ ಪೂಜಿಸುವುದು ಮಾನಸಿಕ ಪೂಜೆ ಎನಿಸುತ್ತದೆ.

ಪ್ರಸ್ತುತ ಪದ್ಯದಲ್ಲಿ ಕವಿ ಜಗದೊಡೆಯ ಚಾಂಗದೇವರನ್ನು ನಿನ್ನನ್ನು ಹೇಗೆ ಪೂಜಿಸಲಿ? ಎಂದು ಕೇಳುತ್ತಾರೆ. ಪೂಜಿಸುವ ವಸ್ತುಗಳಾದ ದೀಪ, ದೂಪ, ಗಾಳಿ, ಗಂಧ, ಹೂವು, ಹಣ್ಣು, ಮಂಟಪ, ತೇರು, ಪಲ್ಲಕ್ಕಿ ಮುಂತಾದವು ದೇವರೇ ಆಗಿರುವಾಗ ಏನನ್ನು ಅರ್ಪಿಸಿ ಪೂಜಿಸುವುದು ಎಂದು ಕೇಳುವಲ್ಲಿ ಪೂಜೆ ಮಾಡುತ್ತ ದೇವರನ್ನು ಅರಿಯುತ್ತ ದೇವರೇ ಆಗುವ ಅಲೌಕಿಕ ಅನುಭವ ಇಲ್ಲಿ ಅನಾವರಣಗೊಳ್ಳುತ್ತದೆ. ಬಸವಣ್ಣನವರ-ಕಂಗಳು ತುಂಬಿದ ಬಳಿಕ ನೋಡಲಿಲ್ಲ. ಕಿವಿಗಳು ತುಂಬಿದ ಬಳಿಕ ಕೇಳಲಿಲ್ಲ ಎಂಬ ವಚನವನ್ನು ನೆನಪಿಸುತ್ತದೆ.

**ಕರುಣಾಮೂರ್ತಿ ಯಮನೂರ ಪೀರ**

ಪವಾಡ ಪುರುಷರಾದ ಶ್ರೀಚಾಂಗದೇವರು ನಂಬಿ ಬಂದ ಭಕ್ತರ ಇಷ್ಟಾರ್ಥ ಪೂರೈಸಲು ಯಮನೂರಿನಂತಹ ಬಯಲು ಸೀಮೆಯ ಸುಂದರ ತಾಣವನ್ನೇ ತಮ್ಮ ತಪೋ ಭೂಮಿಯನ್ನಾಗಿ ಮಾಡಿಕೊಂಡರು. ಈ ಹಿನ್ನೆಲೆಯಲ್ಲಿ ಶ್ರೀ ಕ್ಷೇತ್ರ ಯಮನೂರಿಗೆ ಪ್ರತಿವರ್ಷ ಸಾವಿರಾರು ಭಕ್ತರು ಬಂದು ಇಲ್ಲಿಯ ಬೆಣ್ಣೆ ಹಳ್ಳದಲ್ಲಿ ಮಿಂದು ಭಕ್ತಿಯಿಂದ ತಮ್ಮ ಹರಕೆ ತೀರಿಸಲು ಬರುತ್ತಾರೆ. ಹಾಗೆ ಬಂದ ಭಕ್ತರು ಹುಲಿಯನೇರಿ ಬಂದು ಯಮನನ್ನೇ ತಡೆದ ಧೀರ, ಶಿವನ ಅವತಾರ, ಮಮತೆಯ ಮೂರುತಿ ಎಂದು ಹಾಡಿ ಹೊಗಳುತ್ತಾ ತಮ್ಮ ಕಷ್ಟ ಕಾರ್ಪಣ್ಯ ಪರಿಹರಿಸಲು ಬೇಡಿಕೊಳ್ಳುವ ಚಿತ್ರಣವನ್ನು ಪ್ರಸ್ತುತ ಪದ್ಯದಲ್ಲಿ ಕವಿ ಚಿತ್ರಿಸಿದ್ದಾರೆ.

ನೀ ವರುಷಕ್ಕೊಮ್ಮೆ ಮಾಡೊ ತಮ್ಮಾ ಪೀರಾನ ಜಾತರಿ
ಮಾಡೊ ತಮ್ಮಾ ಪೀರಾನ ಜಾತರಿ| ಸಿಗುವುದಯ್ಯಾ ಸುಖವು
ಚಾಂಗದೇವನ ನಾಮದ್ಯೆಸಿರಿ| ಪಡೆದು ಕಾಣೊ ಮುಕ್ತಿಯ ದಾರಿ (ಪ)
ಬ್ರಹ್ಮ ಕೊಟ್ಟ ದೇಹವ ಹೊತ್ತ| ಒಮ್ಮನದಿ ಬಾ ಯಮನೂರಕ
ಎಲ್ಲಾ ಬಲ್ಲ ಪೀರಾನ ನೆನೆದು| ಮುಕ್ತಿ ದಾರಿನೀ ಕಾಣುದಕ
ಮಾಡೊ ತಮ್ಮಾ ಪೀರಾನ ಜಾತರಿ||೧||
ಸಂಸಾರದೊಳಗ ಗಂಡಾಗುಂಡಿ| ಮಾಡಿ ಮಾಡಿ ನೀ ಏನ ಕಂಡಿ
ಪೀರಾನ ಪಾದವ ನಂಬಿ| ನಡೆಸೊ ತಮ್ಮಾ ಬಾಳಿನ ಬಂಡಿ
ಮಾಡೊ ತಮ್ಮಾ ಪೀರಾನ ಜಾತರಿ ||೨||
ನಾನೇ ಎಂಬ ಗರ್ವವ ತೊಡೆದು| ನೀನೇ ಎಂಬ ಪೀರಾನ ನೆನೆದು
ಕೆಟ್ಟ ಮನವ ದೂರ ಮಾಡಿ| ಮುಕ್ತಿ ದಾರಿ ನೀ ಕಾಣುದಕ
ಮಾಡೊ ತಮ್ಮಾ ಪೀರಾನ ಜಾತರಿ ||೩||
ಕರುನಾಳು ಓ ಪೀರಾ| ಶರನೆನುವೆ ಓ ಧೀರಾ| ಬೇಡುವೆ ಶಿರಬಾಗಿ
ದೇವಾ ಬೇಡುವೆ ಶಿರಬಾಗಿ
ಸಂಸಾರ ಸಾಗರ ಹೂವಂತೆ ನಡೆಸಯ್ಯಾ| ಭಕ್ತಿಯ ಹೊನಲಾಗಿ (ಪ)
ಹಸನುಳ್ಳ ವಿಭೂತಿ| ನೊಸಲೀಗೆ ಹಚಿಕೊಂಡ| ಬಂದೆವ ನಿನ್ನಡಿಗೆ
ಮಲ್ಲಿಗಿ ಹೂವಿನ ತೂಕದ| ಓಪೀರಾ| ಬಾರಯ್ಯಾ ಬೆಳಕಾಗಿ
ಜಾತಿಯ ಕಳೆ ತೆಗೆದು| ನೀತಿಯ ಬೆಳೆ ಬಿತ್ತು
ಬಾರಯ್ಯಾ ನೀ ಧರೆಗಿ
ಭಕ್ತಿಯ ಪಂಜರದಿ| ಸಾಕಿ ನೀ ಸಲುಹಯ್ಯಾ| ಬಾರಯ್ಯಾ ಮಹಾತ್ಯಾಗಿ ||೧||
ಹಸುರಿನ ತೀರದಿ ಚಂದುಳ್ಳ ಹೇ ಪೀರಾ| ಮಹಾದೇವ ಜಗದೊಡೆಯಾ
ಅಸಾಮಾನ್ಯ ದೇವಾ ನೀ| ಯಮನೋರಿನ ಪೀರಾ| ಭಕ್ತಿಗೆ ಒಲಿಯಯ್ಯಾ
ಅಂಗೈಲಿ ಅಮೃತ| ಮುಂಗೈಲಿ ವಿಷ ಸರ್ಪ| ಹಿಡಿದೋನೆ ಹೇ ಪೀರಾ
ಬಂದು ಬೇಡುವ ಜನಕೆ| ನಿಂಬು ನೀಡಿ ನೀ| ಹರಸಯ್ಯಾ| ಜಗದೊಡೆಯಾ ||೨||

**ಪೀರಾನ ಜಾತ್ರೆ**

ಹಬ್ಬ-ಹರಿದಿನ, ಜಾತ್ರೆ-ಉತ್ಸವ ಇವು ಭಾರತೀಯ ಸಂಸ್ಕೃತಿಯ ಜೀವಾಳ. ಅಲ್ಲದೇ ಒಂದರ್ಥದಲ್ಲಿ ಜನರನ್ನು ಒಟ್ಟುಗೂಡಿಸುವ ಭಾವೈಕ್ಯದ ಜೀವ ಸೆಲೆಗಳಾಗಿವೆ. ಜಾತ್ರೆಗಳಿಂದ ನಮ್ಮ ಪರಂಪರೆ ಮತ್ತು ಸಂಸ್ಕೃತಿಗಳು ಪುನರುಜ್ಜೀವನಗೊಳ್ಳುತ್ತವೆ. ಈ ಹಿನ್ನಲೆಯಲ್ಲಿ ಗ್ರಾಮಭಾರತದ ಪ್ರತಿ ಊರುಗಳಲ್ಲಿ ಒಂದಿಲ್ಲೊಂದು ಉತ್ಸವ, ಜಾತ್ರೆಗಳು ನಡೆದೇ ನಡೆಯುತ್ತವೆ. ಪ್ರಸ್ತುತ ಪದ್ಯದಲ್ಲಿ ಪವಾಡ ಪುರುಷನಾದ ಚಾಂಗದೇವರ ಜಾತ್ರೆಯನ್ನು ಪ್ರತಿವರುಷ ತಪ್ಪದೇ ಮಾಡಬೇಕು. ಈ ಜಾತ್ರೆಯಿಂದ ಸುಖ ಸಮೃದ್ಧಿಗಳು

ಲಭಿಸುವುದಲ್ಲದೇ ಮುಕ್ತಿಯ ಮಾರ್ಗ ಸುಲಭವಾಗುತ್ತದೆ. ಮಾನವ ಜನ್ಮ ದೊಡ್ಡದು ಈ ಜನ್ಮ ಸಂಸಾರವೆಂಬ ವಿಷವರ್ತುಲದಲ್ಲಿ ಸಿಲುಕಿ ಐಹಿಕ ಸುಖಭೋಗಗಳಲ್ಲಿ ತೊಳಲುವ ಬದಲು ಈ ಪರಬ್ರಹ್ಮನಾದ ಪೀರಾನನ್ನು ಒಮ್ಮನದಿಂದ ನೆನೆದರೆ ಭವ-ಬಂಧನ ಕಳಚಬಹುದೆಂದು ಕವಿ ಹೇಳುತ್ತಾನೆ.

**ಕರುಣಾಳು ಓ ಪೀರಾ**

ಈ ಪದ್ಯದಲ್ಲಿ ನಿರ್ಮಲಭಕ್ತಿ ಅನಾವರಣಗೊಂಡಿದೆ. ಕರುಣಾಮಯನಾದ ಚಾಂಗದೇವರನ್ನು ಭಕ್ತ ಅನನ್ಯವಾಗಿ ಬೇಡುತ್ತಾನೆ. ಈ ಸಂಸಾರ ಸಾಗರ ದಾಟಲು ನಿನ್ನ ಸಹಾಯ ಬೇಕು, ನಿನ್ನ ಒಲುಮೆಯಿಂದ ಎಂಥಹ ಸಾಗರವೂ ತೊರೆಯಾಗಿ ಬಿಡುತ್ತದೆ.

ಜಾತಿಗಿಂತ ನೀತಿ ಮತ್ತು ಪ್ರೀತಿ ಮುಖ್ಯ. ಜಾತಿ ಎಂಬ ಕಳೆ (ಕೊಳೆ) ತೊಳೆಯಲು ನಿನ್ನ ಕರುಣೆ ಬೇಕೆ ಬೇಕೆಂದು ಕವಿ ಬೇಡುತ್ತಾನೆ. ಅಂಗೈಲಿ ಅಮೃತ ಮುಂಗೈಲಿ ವಿಷಸರ್ಪ ಹಿಡಿದುನಿಂತ ಜಗದೊಡೆಯ ಪರಶಿವನವತಾರಿ ಚಾಂಗದೇವರು ಭಕ್ತ ಒನಕೆ ಅಮೃತ ಸುರಿದು ಹರಸಲು ಬೇಡುತ್ತಾನೆ.

ಕರುಣಾಳು ಓ ಪೀರಾ| ಶರಣೆನುವೆ ಓ ಧೀರಾ| ಬೇಡುವೆ ಶಿರಬಾಗಿ
ದೇವಾ ಬೇಡುವೆ ಶಿರಬಾಗಿ
ಸಂಸಾರ ಸಾಗರಹೂವಂತೆ ನಡೆಸಯ್ಯಾ| ಭಕ್ತಿಯ ಹೊನಲಾಗಿ ||ಪ||
ಹಸನುಳ್ಳ ವಿಭೂತಿ ನೊಸಲಿಗೆ ಹಚಿಕೊಂಡ ಬಂದೇಜ ನಿನ್ನಡಿಗೆ
ಮಲ್ಲಿಗಿ ಹೂವಿನ ತೂಕದ| ಓಪೀರಾ| ಬಾರಯ್ಯಾ ಬೆಳಕಾಗಿ
ಜಾತಿಯ ಕಳೆ ತೆಗೆದು| ನೀತಿಯ ಬೆಳೆ ಬಿತ್ತು
ಬಾರಯ್ಯಾ ನೀ ಧರೆಗಿ
ಭಕ್ತಿಯ ಪಂಜರದಿ ಸಾಕಿ ನೀ ಸಲುಹಯ್ಯಾ| ಬಾರಯ್ಯಾ ಮಹಾತ್ಯಾಗಿ

ಹಸುರಿನ ತೀರದಿ ಚಂದುಳ್ಳ ಹೇ ಪೀರಾ| ಮಹಾದೇವ ಜಗದೊಡೆಯಾ
ಅಸಾಮಾನ್ಯ ದೇವಾ ನೀ| ಯಮನೂರಿನ ಪೀರಾ| ಭಕ್ತಿಗೆ ಒಲಿಯಯ್ಯಾ
ಅಂಗೈಲಿ ತಮ್ಮ್ರತ| ಮುಂಗೈಲಿ ವಿಷ ಸರ್ಪ| ಹಿಡಿದೋನೆ ಹೇ ಪೀರಾ.
ಬಂದು ಬೇಡುವ ಒನಕೆ| ನಿಂಬು ನೀಡಿ ನೀ ಹರಸಯ್ಯಾ| ಜಗದೊಡೆಯಾ

ಬಂಧು ಬಳಗಾ ಎಲ್ಲಾ ಕೂಡಿಕೊಂಡು| ಯಮನೂರಿಗೆ ಹೋಗುನ್ರೆವ್ವಾ
ಊದು ಸಕ್ಕರೆಯ ಬುತ್ತೀಯ ಹಿಡಿದು| ಉದ್ಧಾರ ಮಾಡೋ ಗುರುವೇ ನೀನೆಂದು
ಶ್ರೀ ಚಾಂಗದೇವನ ದರುಶನ ದರುಶನಕ| ಯಮನೂರಿಗೆ ಹೋಗುನ್ರೆವ್ವಾ ||ಪ||
ಭಕ್ತಿಯಿಂದಲಿ ಉಡುಗೊರೆಯ| ನಮ್ಮ ಪೀರಾಗೆ ತೊಡಿಸಾಕ
ಬಂದ ಕಷ್ಟವ ಕಳೆಯೆಂದು| ಚಾಂಗದೇವನಿಗೆ ಬೇಡುದಕ
ಯಮನನ್ನೇ ಗೆದ್ದ ಯೋಗಿಯ ದರುಶನಕ
ಅಕ್ಕ ತಂಗಿ ಎಲ್ಲಾ ಕೂಡಿಕೊಂಡು ಯಮನೂರಿಗೆ ಹೋಗುನ್ರೆವ್ವಾ ||೧||

ನಿಶ್ಚಲ ಭಕ್ತಿಗೆ ಕ್ಷಣದಿ| ಓಡಿ ಬರುವನು ನಮ್ಮ ಪೀರಾ
ಸ್ವಚ್ಛ ಮನದಿಂದ ಪೂಜಿಗೆ| ವರವ ನೀಡುವನು ಈ ಧೀರಾ
ಇಷ್ಟ ದೇವನ ಸನ್ನಿಧಿ ನೋಡುದಕ
ಅಣ್ಣಾ ತಮ್ಮಾ ಎಲ್ಲಾ ಕೂಡಿಕೊಂಡು ಯಮನೂರಿಗೆ ಹೋಗುನ್ರೆವ್ವಾ (೨)
ಜಟಾಧಾರಿ ಪೀರನಿಗೆ| ರುದ್ರಾಕ್ಷಿಯ ದರ್ಬಾರ
ನಮ್ಮ ಹಠಯೋಗಿ ದೇವನಿಗೆ| ಊದು ಸಕ್ಕರೆಯೇ ಬಂಗಾರ
ರಾಜಾಬಾಗ ಸವಾರನ ದರುಶಕ
ಮನೆಮಂದಿ ಎಲ್ಲಾ ಕೂಡಿಕೊಂಡು ಯಮನೂರಿಗೆ ಹೋಗುನ್ರೆವ್ವಾ (೩)
ಯಮನನ್ನೇ ಗೆದ್ದ| ಪೀರಾ ನಿನ್ನ| ಕರುಣೆ ನನಗಿರಲಯ್ಯಾ
ಬಿಡದೇ ನಿನ್ನ| ಸ್ಮರಣೆಯ ಮಾಡುವ| ವರವ ಎನಗೆ ನೀಡಯ್ಯಾ
ಯಮನೂರ ಕ್ಷೇತ್ರದ ಪುರದೊಡೆಯಾ ||ಪ||
ಭಕ್ತರ ಕರೆಗೆ ಓಗೊಡುವಂತ| ಚಾಂಗದೇವನು ನೀನಯ್ಯಾ
ನೆನೆದ ಮನದಿ ನೆಲೆಸುವಂತ| ತ್ರಿಭುವನ ಪಾಲಕ ನೀನಯ್ಯಾ
ಕೈಯ್ಯ ಹಿಡಿದು ದಾರಿ ತೋರುವ| ಜಗದೊಡೆಯಾ ನೀ ಹೇ ದೇವಾ
ಮನದಂಗಳದಿ ಮಮತೆಯ ಮೂರುತಿ ನೀ
ಉದ್ಧರಿಸಯ್ಯಾ ಹೇ ಪೀರಾ (೧)
ಹರಿಹರ ಬ್ರಹ್ಮರ ಆ ಶಕ್ತಿಗಳ| ನಿಜ ಅವತಾರವು ನೀನಯ್ಯಾ
ಕರುಣೆಯ ಕಡಲು ನೀ| ಭಕ್ತರ ಭಾಗ್ಯವು ನೀ
ಜಗವ ಕಾಯುವ ಜಗದೊಡೆಯಾ
ನನ್ನ ನಾನು ಗೆಲ್ಲುವಂಥ| ಶಕ್ತಿ ಎನಗೆ ನೀಡಯ್ಯಾ
ನಿನ್ನ ರೂಪವ ನೋಡುವ ಭಾಗ್ಯವ
ಪೀರಾ ಎನಗೆ ನೀಡಯ್ಯಾ (೨)
ಶರಣು ಓ ಪೀರಾ| ಶರಣು ಮಹಾಧೀರಾ ||ಪ||
ಜಂಗಮನ ರೂಪದಿ ಬಂದು| ವರ ನೀಡೋ ಅಮೃತ ಸಿಂಧು
ಭಕ್ತರ ಭವನೆಯ ಕಂಡು| ಜಗದಲ್ಲಿ ನೆಲೆಸಿರುವೆ ಇಂದು
ಹುಲಿಯನ್ನು ಏರಿ| ಹರುಷದಿ ಬರುವ ಯಮನೂರಿನೊಡೆಯ ಶ್ರೀ ಚಾಂಗದೇವ ||ಅ|| ||ಪ||
ಭೂತ ಪ್ರೇತ ಬಾಧೆಯ| ಕ್ಷಣದಿ ನಾಶ ಮಾಡಿದೆ
ಭಕ್ತರಿಗೆ ವರವು| ಧೀನರಿಗೆ ಗುರುವು| ನೀನಾಗಿ ತೋರಿದೆ
ಹುಚ್ಚು ಕುಲದ ವಂಶವ| ನೀ ಕ್ಶಣದಿ ನಾಶ ಮಾಡಿದೆ
ನಿನ್ನಯ ದಿವ್ಯ| ವಾಣಿಯ ನೀಡಿ| ಈ ಜಗವನು ಬೆಳಗಿದೆ

ಬೆಣ್ಣೆಯ ಹಳ್ಳದಿ| ಅಮೃತ ತುಂಬಿ ನೀ
ರೋಗವ ಕಳೆಯುವ| ಶಕ್ತಿಯ ನೀಡಿದೆ ||೧||
ಮದದಿ ಮೆರವ ದುಷ್ಕರ
ನೀ ಮದವ ಬಿಡಿಸಿ ಕ್ಷಣದಲಿ
ಸನ್ಮಾರ್ಗ ತೋರಿ| ನಿಜ ಮುಕ್ತಿ ನೀಡಿ| ಆನಂದವ ಹರಡಿದೆ
ನಂಬಿ ಬಂದ ಭಕ್ತರ| ನೀ ನಿಂಬು ನೀಡಿ ಸಲುಹಿದೆ
ಅವಗುಣವ ಕಳೆದು| ಅಮೃತದ ಮಳೆಯ| ನೀ ಜಗದಿ ಸುರಿಸಿದೆ
ನಿನ್ನ ಮಹಿಮೆಯ| ಜಂಗಮ ರೂಪದಿ| ತೋರುವ ದೇವನೇ| ಜಗವ ಬೆಳಗಿದೆ
||ಶರಣು ಓ ಪೀರಾ||

**ಯಮನೂರಿಗೆ ಹೋಗುವುದ್ಯಾತಕ**

ಯಮನೂರಿಗೆ ಹೋಗುವುದ್ಯಾತಕ್ಕ| ಕಲಿಯುಗದೀಶಾ
ಶ್ರೀ ಚಾಂಗದೇವನ ದರುಶನಕ ||ಪ||

ಭವರೋಗ ಕಳೆಯುವುದಕ್ಕ| ಕರುಣೆಯ ಪಡೆಯುವುದಕ್ಕ
ಯಮನನ್ನೇ ಗೆದ್ದಿಹ ಧೀರನ| ಸಡಗರ ನೋಡುದಕ್ಕ ತಂಗಿ
ಯಮನೂರಿಗೆ ಹೋಗಬೇಕ ||ಯಮನೂರಿಗೆ||

ನನದೆಂಬ ಮೋಹವ ಬಿಟ್ಟು| ಕಾಮ ಕ್ರೋಧವ ಸುಟ್ಟು
ಅಜ್ಞಾನವ ಕಳೆದುಕೊಂಡು| ಶಾಂತಿ ನೆಲೆಸುದಕ| ತಂಗಿ
ಯಮನೂರಿಗೆ ಹೋಗಬೇಕ ||ಯಮನೂರಿಗೆ||

ಶರಣರಿಗೆ ಶರಣ ಪ್ರೀತ| ಭಕ್ತರಿಗೆ ಲೋಕನಾಥಾ
ಚಿಂತಿಪರಿಗೆ ಚಿಂತಾನಾಶಕ ಯೋಗಿಯ ದರುಶನಕ| ತಂಗಿ
ಯಮನೂರಿಗೆ ಹೋಗಕ ||ಯಮನೂರಿಗೆ||

**ಹುಟ್ಟು ಕುರುಡಾ**

ಹುಟ್ಟು ಕುರುಡಾ ನಾನು ಓ ಪೀರಾ| ನನ ಭಕ್ತಿಗೊಲಿದು|
ಹರಸಿಕಾಯೋ| ಬಾಗ ಸವಾರಾ|
ಹೇ ಜಗದ ಒಡೆಯಾ| ನಿನ್ನದರುಶನ ಭಾಗ್ಯ ನೀಡಯ್ಯ

ಯಮೆನ ಗೆದ್ದ ಧೀರಾ ಓ ಪೀರಾ| ನಿನ್ನಂತೆ ನಿನಿಗೂ
ಧೈರ್ಯ ನೀಡಿ ಬಾಳು ಬೆಳಗಯ್ಯಾ| ಯಮನೂರಿನೀಶಾ
ನಿನ್ನ ದರುಶನ ಭಾಗ್ಯ ನೀಡಯ್ಯಾ ||ಹುಟ್ಟು ಕುರುಡಾ||

ಒಂದೆ ಮನದಿ| ನಂಬಿ ಬಂದಿಹೆನಾ|

ಮುಂದಿನ ಜನ್ಮ| ಯಮನೂರಲಿ ನೀಡು ಓ ಪೀರಾ

ನಿನ್ನೊಲುಮೆಯಿರಲು| ಕಷ್ಟವೆಲ್ಲಿದೆ ಹೇಳು ನನ್ನೊಡೆಯಾ ||ಹುಟ್ಟುಕರುಡಾ||

ನಿನ್ನ ಹೊರತಿನ್ಯಾರು ಇಲ್ಲಯ್ಯಾ

ನನ ಅರಿವು ಮರಿನಿಗೆ| ತಿರುವು ನೀಡಿ ಎನ್ನಕಾಯಯ್ಯಾ

ಕರುಣಾಲು ಪೀರಾ| ನನ್ನಿ ಕಣ್ಣಿಗೆ ಬೆಳಕು ನೀಡಯ್ಯ

ಯಮನೂರ ಪೀರನ ಮರಿಬ್ಯಾಡಾ

ಮದದಿಂದ ಮೆರೆದವಗೆ ಬುದ್ಧಿಯ ಕಲಿಸ್ಯಾನ

ದುಷ್ಟ ಶಕ್ತಿಯ ತಾನು ಕಾಲಲ್ಲಿ ಮೆಟ್ಯಾನ

ಶ್ರೀ ಚಾಂಗದೇವನ ಮರಿಬ್ಯಾಡಾ ||ಪ||

ಅಷ್ಟ ಮದಂಗಳ ತೊಡೆದ್ಹಾಕೋ| ನಿನ್ನ

ದುಷ್ಟದುರ್ಗನಗಳ ಸುಟ್ಟು ಹಾಕೋ

ಮಂಗಳ ಮೂರುತಿ ಯಮನೂರ ಪೀರನ

ಪಾದಕ್ಕ ಹಣೆಯೊತ್ತಿ ನೀನಮಿಸೋ ||ದೇವರೆ ಇಲ್ಲಿಂದ ಬರಬ್ಯಾಡ||

ಅಜ್ಞಾನವೆಂಬುವ ಕಳೆ ತೆಗೆಯೊ| ತಮ್ಮಾ

ಭಕ್ತಿ ಎಂಬೊ ಬೀಜವ ನೀ ಬಿತ್ತೋ

ನಂಬಿಗಿ ಎನ್ನುವ ಬೇಲಿಯ ಹಾಕಿ ನೀ

ಪೀರಾನ ಪಾದಾ ನೀ ಸೇರಿಕೋ ||ದೇವರೆ ಇಲ್ಲಿಂತ ಬರಬ್ಯಾಡಾ||

**ದಿಟ್ಟ ಭಕ್ತಿಯಿಂದ ಬನ್ನಿರೆ**

ದಿಟ್ಟ ಭಕ್ತಿಯಿಂದ| ಗಟ್ಟಿಮನದಿಂದ| ಬನ್ನಿರೆ ಯಮನೂರಕ

ದುಷ್ಟದುರ್ಗನವ| ಸುಟ್ಟು ಹಾಕಿ ನಾವು| ಹೋಗೋಣ ದರಗಾಕ

ಕೋಟಿ ದೈವದ ಅವತಾರ| ಗುಡಿಯಲಿ ಕುಳಿತಿಹನು

ಮಹಾದೇವಾ ಮಹಾದೇವಾ| ಶ್ರೀಚಾಂಗದೇವಾ ದೇವಾ ||ಪ||

ಬೆಣ್ಣಿಯ ಹಳ್ಳದಿ ಸ್ನಾನವ ಮಾಡೋಣ

ಕುಂಕುಮ ಭಾಗ್ಯವ ಪೀರಾಗೆ ಬೇಡೋಣ

ಶರಣು ಶರಣು ಎನಲು ವರವ ನೀಡುವವನು

ಆ ಶಿಲ್ಪದಲ್ಲಿನ ಶಿವ ಕಳೆಯಂತೆ ಇವನ ಮಂದಿರವು

ಆ ಮಲ್ಲಿಗೆಯೊಳಗಿನ ಗಂಧದಂತೆ ಇವನ ನಗುಮೊಗವು

ನಮ್ಮ ಭಕ್ತಿಗೆ ಒಲಿದು ಶಕ್ತಿಯ ನೀಡುವನು

ಮಹಾದೇವಾ| ಮಹಾದೇವಾ| ಶ್ರೀ ಚಾಂಗದೇವಾ ದೇವಾ

ಊದು ಸಕ್ಕರೆಯ ನೈವೇದ್ಯ ಹಿಡಿಯೋಣ

ಮಂಗಳದಾತಗೆ ಶರಣು ಎನ್ನೋಣ

ಮೊದದಿ ಒಲಿದು ಬಂದು| ಸಲಹು ಪೀರಾ ಎಂದು

ಯಮನೂರ ಪೀರನ ಪುಣ್ಯದ ಚರಿತೆ ಹಾಡಿಹೊಗಳೋಣ

ಯಮನೂರ ಪುರದ ಮಹಿಮೆಯನಿಂದು ಜಗದಿ ಸಾರೋಣ.

### ವಾರ ಬಂದೈತೆ

ವಾರ ಬಂದೈತೆ| ಗುರುವಾರ ಬಂದೈತೆ| ಯಮನೂರ ಪೀರಾನ

ವಾರ ಬಂದೈತೆ ||ಪ||

ಸುಂದರ ಪುರದಿ ಜನಿಸಿದ| ಶ್ರೀಚಾಂಗದೇವನ ಪುಣ್ಯದವಾರ ಬಂದೈತೆ

ಬೆಣ್ಣಿಹಳ್ಳದ ನೀರ ತಂದು| ಜ್ಯೋತಿಯ ಬೆಳಗಿದಾತ

ಸಿದ್ಧಿ ಪುರುಷನ ವಾರ ಬಂದೈತೆ ||ವಾರ ಬಂದೈತೆ||

ಜಾತಿ ಬೇಧ ಅಳಿದಂತ| ಯಮನೂರ ಪೀರನ

ವರವನು ಪಡೆಯುವ ವಾರ ಬಂದೈತೆ

ಸಿದ್ಧರ ಸಿದ್ಧಿ ಹಠಯೋಗಿ ಪೀರನ ದರುಶನ ಪಡೆಯುವ ವಾರ ಬಂದೈತೆ

||ವಾರ ಬಂದೈತೆ||

ಭಕ್ತರು ಬೇಡಿ ರವನು ನೀಡುವ| ಜಗದೊಡೆಯ ಪೀರನ ವಾರ ಬಂದೈತೆ

ಚಾಂಗದಭಲೋ ಎನ್ನುವ ಭಕ್ತರ ಧ್ಯಾನವ ಆಲಿಸೋ

ದೇವನ ವಾರ ಬಂದೈತೆ

### ಅಂಧನ ಬಾಳಿಗೆ ಬೆಳಕಾಗು

ಅಂದನ ಬಾಳಿಗೆ ಬೆಳಕಾಗು ಬಾ| ದೇವಾ ಯಮನೂರೇಶಾ

ಸರ್ವಶಕ್ತಿಗಳ ಮಹಾಶಕ್ತಿ| ನಿನ ನಂಬಿ ಬಂದಿಹೆ ಈಶಾ

ಬಾ ನಿನ್ನ ಮೊಗವ ತೋರುಬಾ ಸರ್ವೇಶಾ ||ಪ||

ಕಣ್ಣೆರಡು ನಿನ್ನ ನೋಡಿ| ಖುಷಿಯಿಂದ ತನಿಯಬೇಕು

ನಿನ್ನ ಕೀರ್ತಿಯನ್ನು ನಾಲಿಗೆಯ| ತಾ ನುಡಿಯ ಬೇಕು

ಕಿವಿಗಳೆರಡು ನಿನ್ನ ನಾಮಾಮೃತವ| ಕೇಳಿ ಕುಣಿಯಬೇಕು

ಮನದಲ್ಲಿ ನಿನ್ನ ನೆನಪುತುಂಬಿ| ನಾ ಹರುಷಗೊಳ್ಳಬೇಕು

ಬಾಬಾ ಯಮನೂರೇಶಾ

ಭಕ್ತಿಯ ಪಣತೆಗೆ ನೀ| ಹನತೆಯಾಗಿ ಬರಬೇಕು

ಶಿಷ್ಟ ಪರಿಪಾಲಣೆಗೈಯ್ಯೊ| ಮೂರ್ತಿಯಾಗಿ ನೀ ಬರಬೇಕು

ನಿನ್ನ ಕಣ್ಣಾ ಕಾಂತಿಯ ಬೆಳಕ ನನ್ನಿ ಕಣ್ಣಲಿ ನೀಡಬೇಕು

ಸಾರ ಸಜ್ಜನರ ಕರುಣಾಮೂರ್ತಿ ನೀನನಗೊಲಿಯಬೇಕು

ಬಾಬಾ ಯಮನೂರೇಶಾ

## ಪಲ್ಲಕ್ಕಿ ಮ್ಯಾಲ ಪೀರಾ

ಪಲ್ಲಕ್ಕಿ ಮ್ಯಾಲ| ನಮ್ ಯಮನೂರ ಪೀರಾ|

ಸರ್ಪ ಚಾವಟಿ ಹಿಡಿದು| ತಾ ಮಿನುಗುವತಾನ ನೋಡಯ್ಯ

ಜೈ ಜಗದೊಡೆಯಾ| ಚಾಂಗಭಲೋ ದೇವಾ ||ಪ||

ಡೊಳ್ಳಿನ ನಾದಕ್ಕ ಕಂಚಿನ ತಾಳಕ್ಕ ಒಲಿಯುವವನು

ಪೀರಾ ನಲಿಯುವವನು ||ಅ||ಪ||

ಚಾಂಗ ಭಲೋ ಎಂದಾಗೆಲ್ಲಾ| ಉದ್ಧರಿಸುವ ಪೀರಾ ಇವನು

ಕರುಣಾಡಲ್ಲಿ ನೆಲೆಯಾದವನು

ಕರುಣೆಯ ಸುಧೆಯಾಗಿ| ಅಮೃತದ ನಿಧಿಯಾಗಿ

ಯಮನೂರಲ್ಲಿ ನೆಲೆಸಿದವನು| ನಿತ್ಯ ಧರೆಯನ್ನು ಬೆಳಗುವವನು ||೧||

ಎಲ್ಲೋ ಸೇರಿ| ಬಲ್ಲಂಗ ನೆನೆದು|

ವಲ್ಲದ ಕಷ್ಟವ ದೂರಮಾಡಿ| ಇಲ್ಲ ಭ್ಯಾಗವ ನಾವೆ ಪಡೆಯೋಣ

ಪೀರಾ ಶರಣೆಂದು ಬೇಡುವಗೆ| ಕ್ಷಣದಿ ತಾವರವನ್ನು| ಬಿಡದೇತಾ ನೀಡುವವನು

ಕೋಟಿ ದೈವಗಳ ದೇವಾ ಇವನು ||೨||

## ಶ್ರೀ ಯಮನೂರ ಪೀರಾ

ಶ್ರೀಯಮನೂರ ಪೀರಾ ಶರಣು ನಿನ್ನ ಪಾದಕ

ಬೆಟ್ಟಗುಡ್ಡ ಅಲೆದು ಬಂದೆ ನಿನ್ನ ದರುಶನಕ ||ಪ||

ಗಂಧದಲ್ಲಿ ಪರಿಮಳದಂತೆ ನಿನ್ನ ನಾಮ ಸ್ಪಟಿಕ

ಉಸಿರಿನಲ್ಲಿ ಬಿಡದೇ ನೆನೆವೆ ನಿನ್ನ ಕಡಿತನಕ

ಬಾಳದೋಣಿ ಬಿಡದೇ ಸಲಹು ಶರಣು ನಿನ್ನ ಪಾದಕ

ಚಲಬಿಡದೆ ಬಂದಿಹೆನಯ್ಯಾ ಪೀರಾ ನಿನ್ನ ಕಾಣುದಕ ||೧||

ನಿನ್ನ ನಾಮದ ಭಲದಿಂದ| ಸೌಭಾಗ್ಯವು ತಂದೆ

ನಿನ್ನ ಮಾಯದಿಂದಲಿ| ಸುಖಸ್ವರ್ಗವು ತಂದೆ

ನಿನ್ನ ಚರಣ ಮೆಟ್ಟಿದ ಮಣ್ಣು ಪಾವನವು ತಂದೆ

ನಿನ್ನ ಮಹಿಮೆ ತಿಳಿಯಲು ನಾನೋಡಿ ಬಂದೆ ||೨||

ನನ್ನ ಮನವ ಮಲ್ಲಿಗೆ ಮಾಲೆ ಮಾಡಿ| ತೊಡಿಸುವೆನು ತಂದೆ

ಕಣ್ಣ ಬೆಳಕ ಆರತಿ ಮಾಡಿ ಬೆಳಗುವೆನು ಇಂದೆ

ಭಕ್ತರನ್ನು ಬಿಡದೇ ಸಲಹು ಅಣುಕ್ಷಣವು ಮುಂದೆ

ಕಾಮಧೇನು ಕಲ್ಪವೃಕ್ಷ ನೀನೇ ತಂದೆ ||೨||

ಪ್ರಾಚೀನ ಕಾಲದಿಂದ ನಮ್ಮ ನಾಡು, ನುಡಿ, ಸಂಸ್ಕೃತಿ, ಪರಂಪರೆಯನ್ನು ಕಟ್ಟಿ ಬೆಳೆಸಿದ ಮಹಾತ್ಮರ, ಅಸಂಖ್ಯ ಇವರೆಲ್ಲ ಇಂದಿನ ಮುಂದಿನ ಪೀಳಿಗೆಗೆ ತಮ್ಮದೆಲ್ಲವನ್ನು ನೀಡಿದ ಮಹಾಚೇತನಗಳು ಕಾಶ್ಮೀರದಿಂದ ಕನ್ಯಾಕುಮಾರಿವರೆಗಿನ ಭಾರತ ದೇಶದಲ್ಲಿ ಹಲವಾರು ಜನ ಪುಣ್ಯಪುರುಷರು ನಮ್ಮ ದೇಶದ ಹಿರಿಮೆ ಗರಿಮೆಗಳನ್ನು ಜಗತ್ತಿನ ಉತ್ತುಂಗ ಶಿಖರದಲ್ಲಿ ನಿಲ್ಲಿಸಿದ್ದಾರೆ. ಮೌಲ್ಯಾದರ್ಶಗಳ ಪ್ರತೀಕವಾಗಿ ಜೀವನ ಸವೆಸಿದ ಮಹನೀಯರು ಇಂದಿನ ಯುವಪೀಳಿಗೆಗೆ ಆದರ್ಶಪ್ರಾಯರು. ಅಂತಹ ಮಹಾನ್ ಪುರುಷರ ಸಾಲಿನಲ್ಲಿ ಬಂದವರೆಂದರೆ ಯಮನೂರಿನ ರಾಜಾ ಬಾಗಸವಾರ ಯೋಗಿ ಚಾಂಗದೇವರು ಒಬ್ಬರು.

ಯಮನೂರು ಇದು ಧಾರವಾಡ ಜಿಲ್ಲೆಯ ನವಲಗುಂದ ತಾಲೂಕಿನ ಭಾವೈಕ್ಯತೆ ಸಂಕೇತವಾಗಿ ನೆಲೆಯೂರಿರುವ ಸ್ಥಳವೇ ಯಮನೂರು. ಯಮನೂರಿನ ಚಾಂಗದೇವನ ಮಹಿಮೆಯನ್ನು ಅರಿಯಲಾರದ ಹಾಗೂ ಆತನ ಹೆಸರು ಕೇಳದಿರುವ ಈ ಭಾಗದ ಮನುಷ್ಯರೇ ಇಲ್ಲವೆಂದರೆ ತಪ್ಪಾಗಲಾರದು.

"ಯಮನೂರು" ಹೆಸರೆ ಸೂಚಿಸುವಂತೆ ಸಾವನ್ನು ಬೆನ್ನಟ್ಟ ಬಂದ ಯಮನನ್ನು ಸೋಲಿಸಿ ಚಿರಂಜೀವಿಯಾದ ಮಾರ್ಕಂಡೇಶ್ವರ ಹಾಗೂ ಚಾಂಗದೇವರ ನೆಲೆನಿಂತ ಹೆಮ್ಮೆಯ ಸ್ಥಳವೇ ಯಮನೂರು.

**ಯಮನೂರಿಗೆ ಹೋಗುವದ್ಯಾತಕ**

ಯಮನೂರಿಗೆ ಹೋಗುವುದು ಕಲಿಯುಗದ ಕಲ್ಪವೃಕ್ಷವೆಂದು ಹೆಸರುವಾಸಿಯಾದ ಚಾಂಗದೇವನ ದರ್ಶನ ಪಡೆಯಲು ಬಂದ ಭವರೋಗಗಳನ್ನು ನಿವಾರಿಸಿಕೊಂಡು, ರೋಗಮುಕ್ತರಾಗಿ ಆ ಕಲಿಪುರುಷನ ಕರುಣೆಯ ಅಮೃತಗಂಗೆಯಲ್ಲಿ ಮಿಂದು ಸಾವನ್ನೇ ಮೆಟ್ಟಿನಿಂತು ಯುಮನನ್ನೇ ಗೆದ್ದ ಧೀರರಾದ ಚಾಂಗದೇವನ ಸಡಗರ ಸಂಭ್ರಮಗಳನ್ನು ನೋಡುವುದಕ್ಕೆ.

ಮನುಷ್ಯರಲ್ಲಿ ಅಡಗಿರುವ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಮಧ, ಮತ್ಸರ, ಮೋಹ, ಅಸೂಯೆಗಳನ್ನು ಕಳೆದುಕೊಂಡು ಮನಸ್ಸಿನ ಅಜ್ಞಾನ ನೀಗಿಸಿಕೊಂಡು ಶಾಂತಿಯುನ್ನು ಕಾಣುವುದಕ್ಕೆ ಹಾಗೂ ಅದನ್ನು ಪ್ರತಿಷ್ಠಾಪಿಸಲು ತಂಗಿ ಯಮನೂರಿಗೆ ಹೋಗಬೇಕಾಗಿದೆ.

ಶರಣರಲ್ಲಿ ಶರಣ ಶ್ರೇಷ್ಠನಾದ ಭಕ್ತ ಪ್ರಿಯನಾದ ಲೋಕನಾಥ ಚಿಂತೆಯುಳ್ಳವರ ಚಿಂತೆ ನಾಶಮಾಡುವ ಯೋಗಿಯ ದರುಸನಕ ತಂಗಿ ಯಮನೂರಿಗೆ ಹೋಗಬೇಕ. ತಂಗಿ ಯಮನೂರಿಗೆ ಚಾಂಗದೇವರ ದರುಶನಕ.

**ಹುಟ್ಟು ಕುರುಡ**

ಹುಟ್ಟ ಕುರುಡರ ಅಂಧಕಾರವನ್ನು ಹೋಗಲಾಡಿಸಿ ಬಾಳಿಗೆ ಬೆಳಕನ್ನು ನೀಡುವ ದೇವರ ಪ್ರಿಯ. ದೇವ (ಪೀರಾ) ನನ್ನಂತಹ ಭಕ್ತರ ಭಕ್ತಿಗೊಲಿದು ತುಂಬು ಹೃದದಿಂದ ಹರಿಸಿ ನಮ್ಮನ್ನು ಕಾಯೋ ತಂದೆ ಬಾಗ ಸವಾರಾ ಚಾಂಗದೇವ.

ಹೇಜಗದ ಒಡೆಯಾ ಜಾತಿಯನ್ನಾ ಮೀರಿನಿಂತ ವೀರ ನಿನ್ನ ದರುಶನದ ಭಾಗ್ಯ ನೀಡಿ ನಮ್ಮನ್ನು ಸಲಹು ತಂದೆ. ಕಾಲಭೈರವನಂತೆ ಬಂದ ಯಮನನ್ನೇ ಗೆದ್ದ ಧೀರ. ದೇವ ಓ ನನ್ನ ದೇವ ಪ್ರಿಯ ಚಾಂಗದೇವ (ಪೀರಾ) ನಿನ್ನಂತೆ ನನಗೂ ಧೈರ್ಯ, ಸ್ಥೈರ್ಯಗಳನ್ನು ನೀಡಿ ನಮ್ಮ ಬಾಳನ್ನು ಬೆಳಗು ತಂದೆ ಯಮನೂರಿನ ಧೀರ ನಿನ್ನ ದರುಶನದ ಭಾಗ್ಯವ ನೀಡು ತಂದೆ.

ಶುದ್ಧ ಮನಸ್ಸಿನ ಏಕ ಚಿತ್ತದಿಂದಲೇ ನಿನ್ನ ನಂಬಿ ಬಂದಿರುವೆ. ಮುಂದಿನ ಜನ್ಮ ಇರುವುದಾದರೆ ಅದು ಯಮನೂರಿನ ಪೀರಾ ಸಾನಿಧ್ಯದಲ್ಲಿ ನೀಡು ತಂದೆ ನನಗೆ ನಿನ್ನ ಒಲುಮೆಯಿಂದ ಬಂದ ಕಷ್ಟಗಲಲ್ಲಿ ಮಾಯವಾಗಿದೆ ನನ್ನ ಒಡೆಯ ಚಾಂಗದೇವ.

ನಿನ್ನ ಹೊರತು ನನಗೆ ಮತ್ಯಾರು ಇಲ್ಲ ನಿನ್ನ ನೆನವು ನಿನ್ನ ದರುಶನವೇ ನನಗೆ ಪಾವನ. ನನ್ನ ಮನಸ್ಸಿನ ಅರಿವು-ಮರೆವುಗಳಿಗೆ ಹೊಸ ತಿರುವು ನೀಡಿ ಜಗದ ಭಯದ ಭವಣೆಗಲಿಂದ ನನ್ನನ್ನು ರಕ್ಷಿಸು ತಂದೆಯೇ. ಕರುಣಾ ಪ್ರಿಯನಾದ ಪ್ರಿಯ ಚಾಂಗದೇವನೇ ನನ್ನ ಕಣ್ಣಿಗೆ ಬೆಳಕು ನೀಡಿ ನನ್ನ ಬಾಳು ಬೆಳಕಾಗಿಸುವ ದೇವನೇ.

**ಪೀರಾನ ಮರಿಬ್ಯಾಡ**

ದೇವರು ಇಲ್ಲವೆಂದು ಜಂಭದಿಂದ ಜರಿಯಬೇಡ ದೇವ ಪ್ರಿಯ ಯಮನೂರಿನ ಚಾಂಗದೇವ ಭಕ್ತಪ್ರಿಯ ಹಾಲಿನಲ್ಲಿರುವ ಬೆಣ್ಣೆಯಂತೆ ಗುಪ್ತ ಗುಪುನಿಯಾಗಿ ಬಡವರ ಭವಣೆಯ ನಿವಾರಿಸುವ ಕಷ್ಟಕ್ಕೆ ಕರುಣೆಯ ಹಸ್ತವ ನೀಡುವ ಚಾಂಗದೇವನ ಮರೆಯಬೇಡ.

ಸೊಕ್ಕಿನಿಂದ ಮೆರೆದವರಿಗೆ ತನ್ನ ಶಕ್ತಿಯಿಂದ ಬುದ್ಧಿ ಕಲಿಸಿ ಅವರ ಅಟ್ಟಹಾಸಕ್ಕೆ ಅಡಿಯಿಟ್ಟಿರುವನು. ದುಷ್ಟರನ್ನು ಅವರ ದುಷ್ಟಶಕ್ತಿಯನ್ನು ಕಾಲಲ್ಲಿ ಮೆಟ್ಟಿನಿಂತ ಮಹಾತ್ಮ ಕಲಿಯುಗದ ಕಲಿಪುರುಷ ಚಾಂಗದೇವನ ಮರಿಯಬೇಡ.

ಮಂಗಳ ಮೂರ್ತಿಯಾದ ಚಾಂಗದೇವನ ನೆನೆಯುವುದಕ್ಕೆ ಅಷ್ಟ ಮದಗಳನ್ನು ತೊಡೆದುಹಾಕಿ ದುಷ್ಟ ದುರ್ಗನಗಳನ್ನು ಸುಟ್ಟುಹಾಕಿ ಹಣೆಹಚ್ಚಿ ನಮಸ್ಕರಿಸಿದರೆ ನಿನ್ನ ಮನದಲ್ಲಿಯೇ ಬಂದು ನಿಲ್ಲುವನು ನಲುಮೆಯಿಂದ ಯಮನೂರಿನ ಧೀರ.

ಮನಸ್ಸಿನಲ್ಲಿರುವ ಅಜ್ಞಾನವೆಂಬ ಕಳಿಯನು ತಗಿದು ಭಕ್ತಿ ಎಂಬ ಬೀಜವ ಬಿತ್ತಿ ನಂಬಿಕೆಯಿಂಬ ಬೇಲಿಯ ಹಾಕಿ ಶ್ರದ್ಧಾ ಭಕ್ತಿಗಲಿಂದ ಪೂಜಿಸುತ್ತಾ ದೇವ ಪ್ರಿಯ ಚಾಂಗದೇವರ ಸೇರಿದರೆ ನಿನಗೆ ತನ್ನ ದರುಶನ ಭಾಗ್ಯವ ನೀಡಿ ಕರುಣೆಯಿಂದ ನಿನ್ನ ಜೀವನ ಕಲ್ಯಾಣವಾಗುವಂತೆ ಮಾಡುವನು. ಅದಕ್ಕಾಗಿ ದೇವರಿಲ್ಲವೆಂದು ಜಂಭದಿಂದ ಜರಿಯಬೇಡ.

**ದಿಟ್ಟ ಭಕ್ತಿ**

ಕಾಶಿಗೆ ಹೋಗಲಿಕ್ಕೆ ಎಷ್ಟೊಂದು ದಿನಬೇಕು. ತಾಸ್ಹೊತ್ತಿನ ಹಾದಿ ಯಮನೂರ. ಕಾಶಿ ವಿಶ್ವನಾಥನ ರೂಪದಲ್ಲಿ ಕುಳಿತಿರುವನು ದೇವಪ್ರಿಯ. ಚಾಂಗದೇವ ಅವನನ್ನು ಕಾಣಲು ದಿಟ ಭಕ್ತಿಯಿಂದ ಗಟ್ಟಿ

ಮನಸ್ಸಿನಿಂದ ಬರಬೇಕು. ಯಮನೂರಿನ ದುಷ್ಟ ದುರ್ಗಣಗಳನ್ನು ಸುಟ್ಟುಹಾಕಿ ಒಂದೇ ಮನಸ್ಸಿನಿಂದ ಹೋಗೋದು ದರಗಾಕ. ಚಾಂಗದೇವನು ನೆಲೆನಿಂತ ತಾಣಕ್ಕೆ... ಕೋಟಿ, ಕೋಟಿ ದೇವತೆಗಳ ಅವತಾರ ಪುರುಷ ಮೂರ್ತಿ ರೂಪವಾಗಿ ಗುಡಿಯಲ್ಲಿ ಕುಳಿತಿರುವನು ಮಹಾದೇವ ಮಹಾ ಮಹೀಮನಾದ ಚಾಂಗದೇವ.

ಭಕ್ತರ ಪಾಲಿನ ಪಾವನ ಗಂಗೆ ಬೆಣ್ಣಿಹಳ್ಳದ ಸ್ನಾನವನ್ನು ಮಾಡೋಣ, ಬಕ್ತಿಯಿಂದ ಕುಂಕುಮ ಭಾಗ್ಯವ ನೀಡೆಂದು ದೇವ ಪ್ರಿಯ ಚಾಂಗದೇವರ ಕೇಳೋಣ. ಶರಣೆಂದು ಬೇಡಲು ಹಸನ್ಮುಖದಿಂದ ನೀಡುವನ್ನು ವರ ವೈಕುಂಠದ ಶಿವಾಲಯದಂತಿ ಇವನ ಮಂದಿರವು ಮಲ್ಲಿಗೆಯ ಪೂವಿನಲ್ಲಿರುವ ಪರಿಮಳದಂತೆ ಇವನ ನಗುಮುಖವು ನಮ್ಮೆಲ್ಲರ ಬಕ್ತಿಗೆ ಒಲಿದು ಬಾಳಿಗೆ ಶಕ್ತಿಯನ್ನು ನೀಡುವ ಮಹಾಮಹಿಮ ಮಹಾದೇವ ಚಾಂಗದೇವನು.

ಭಕ್ತರು ಪ್ರೀತಿಯಿಂದ ಊದು, ಸಕ್ಕರೆಯ ನೈವೇದ್ಯ ಹಿಡಿಯಲಿರುವ ಮಂಗಳಮೂರ್ತಿ ಮಹಾಮಹಿಮ ಮಹಾದೇವನಾದ ಚಾಂಗದೇವನಿಗೆ ಶರಣು ಶರಣಾರ್ಥಿಗಳು. ಭಕ್ತಿಗೆ ಒಲಿದು ಬಂದು ನಮ್ಮೆಲ್ಲರನ್ನು ಸಲಹು ದೇವ ಪ್ರಿಯನೇ ಯಮನೂರಿನ ಮಹಾದೇವನೆಂದು ಹಾಡೋಣ. ಯಮನೂರ ಮಹಿಮೆಯನ್ನು ಜಗತ್ತಿಗೆ ಸಾರಿ ಹೇಳೋಣ. ಯಮನೂರ ಮಹಿಮೆಯನ್ನು ಜಗತ್ತಿಗೆ ಸಾರಿ ಹೇಳೋಣ. ಬಕ್ತಿಗೆ ಒಲಿದು ಶಕ್ತಿ ನೀಡುವ ಮಹಾಮಹಿಮ ಚಾಂಗದೇವನ ಚರಿತ್ರೆಯನ್ನು.

**ವಾರ ಬಂದೈತೆ**

ಹಿಂದೂ ಪಂಚಾಗದಲ್ಲಿ ಬರುವ ವಾರಗಳ ಪ್ರತಿ ದಿನಗಳು ವೈಶಿಷ್ಟ್ಯ ಪೂರ್ಣವಾದ ವಾರಗಳಾಗಿವೆ. 'ಗುರುವಾರ'ವು ಹೆಸರೇ ಸೂಚಿಸುವಂತೆ ಗುರುವಿನ ಮಹಾಮಹಿಮನನ್ನು ಸಾರುವ ವಾರವೇ ಗುರುವಾರ. ಇದು ಕಲಿಯುಗದ ಕಲ್ಪವೃಕ್ಷ. ಮಹಾಮಹಿಮ ಯಮನೂರಿನ ದೇವಪ್ರಿಯ ಚಾಂಗದೇವನ ವಾರ ಗುರುವಾರ ಬಂದಿರುವುದು.

ಸುಂದರ ಪಟ್ಟಣದಲ್ಲಿ ಜನಿಸಿದ ಅವತಾರ ಪುರುಷ ಚಾಂಗದೇವನ ಪುಣ್ಯದ ವಾರ ಗುರುವಾರ ಭಕ್ತರ ಪಾಲಿನ ಪಾವನ ಗಂಗೆ ಬೆಣ್ಣಿ ಹಳ್ಳದ ನೀರಿನಿಂದ ಜ್ಯೋತಿಯನ್ನು ಬೆಳಗಿನ ಸಿದ್ಧಿ ಪುರು,ನಾದ ಯಮನೂರಿನ ದೇವಪ್ರಿಯ ಚಾಂಗದೇವನ ವಾರ ಗುರುವಾರ ಬಂದಿರುವುದು.

ಜಾತಿ ಬೇಧ ಅಳಿಸಿ ಹಾಕಿ ಬಡವ ಶ್ರೀಮಂತ ಎಂಬ ಬಾವಗಳನ್ನು ದೂರ ಮಾಡಿದ ಯಮನೂರಿನ ಪ್ರಿಯದೇವನ ವರವ ಪಡೆಯುವ ವಾರ ಬಂದಿರುವುದು. ಭಕ್ತರು ಬೇಡಿದ ವರವನ್ನು ಕೊಟ್ಟ ಕಲ್ಪವೃಕ್ಷ, ಜಗದೊಡೆಯ ಜಗದೀಶನ ವಾರ ಗುರುವಾರ ಬಂದಿರವುದು. ಬಕ್ತಿಯಿಂದ ಮಿಂದು ಮೈಮರೆತು ಚಾಂಗ ಭಲೋ ಎನ್ನುವ ಚಾಂಗದೇವನ ವಾರ ಬಂದಿರುವುದು.

**ಅಂಧರ ಬಾಳಿಗೆ ಬೆಳಕಾಗು**

ಕಣ್ಣಿನ ಅಂದತ್ವವನ್ನು ಹೋಗಲಾಡಿಸಿ ಬಾಳಿಗೆ ಬೆಳಕಾಗು ತಂದೆ ಯಮನೂರಿನ ಧೀಶ, ಸರ್ವಶಕ್ತಿಗಳಲ್ಲಿ ಮಹಾಸಕ್ತಿಯಾಗಿರುವ ನಿನ್ನನ್ನು ನಂಬಿ ಬಂದಿರುವೆನು. ಜಗದೀಶ ನಿನ್ನ ದರುಶನವ ಕೊಟ್ಟು ಕರುಣೆ ತೋರಿಸು ಸರ್ವೇಶನಾದ ಚಾಂಗದೇವನೆ.

ನನ್ನ ಕಣ್ಣುಗಳೆರಡು ನಿನ್ನನ್ನು ನೋಡಿ ಸಂತೋಷ ಪಡೆಯಬೇಕು. ಹರ್ಷದಿಂದ ಹಾಡಿ ತನಿಯಬೇಕು. ನಿನ್ನ ಕೀರ್ತಿಯನ್ನು ನನ್ನ ನಾಲಿಗೆಯ ನುಡಿಯಬೇಕು. ಕವಿಗಳಲ್ಲಿ ನಿನ್ನ ನಾಮಮೃತದ ವಾಕ್ಯಗಳಲ್ಲಿ ಮೊಳಕೆ ಒಡೆಯದು ಕುಣಿಯಲಿ. ಮನಸ್ಸಿನಲ್ಲಿ ನಿನ್ನ ನೆನಪು ತುಂಬಿ ನಾನು ಹರುಷಗೊಂಡು ನಲಿಯಬೇಕು. ಬಾ ಎಂದು ಕರೆದಾಗ ಭಾಗ್ಯದ ದರುಶನ ನೀಡು ಬಾ ತಂದೆ ಭಕ್ತರ ಭಕ್ತಿಯ ಪಣತಿಗೆ ನೀನು ಹಣತೆಯಾಗಿ ಬಾಳ ಜ್ಯೋತಿ ಬೆಳಗಿಸು. ದುಷ್ಟರನ್ನು ಸಂಹರಿಸಿ ಶಿಷ್ಟ ಸಜ್ಜನರ ರಕ್ಷಿಸುತ್ತ ಸಾಕಾರಮೂರ್ತಿಯಾಗಿ ಬರಬೇಕು. ನಿನ್ನ ಕಣ್ಣ ಕಾಂತಿಯಿಂದ ಪ್ರಜ್ವಲಿಸುವ ಬೆಳಕು ನನ್ನ ಕಣ್ಣಗಳಲ್ಲಿ ಗೋಚರಿಸುವ ಕಾಂತಿ ನೀಡು ನನಗೆ ಎಲ್ಲಿ ಸಜ್ಜನರ ಕರಣಾಮೂರ್ತಿ ಅವರವರ ಬಕ್ತಿಗೆ ಒಲಿಯುವ ಭಾಗ್ಯದ ನಿಧಿಯಾಗಿ ಬರಬೇಕು ಯಮನೂರಿನ ಧೀಶ, ಬಕ್ತಿಯ ಪ್ರಿಯ ಚಾಂಗದೇವ.

**ಪಲ್ಲಕ್ಕಿ ಮ್ಯಾಲ ಪೀರಾ**

ವನರಾಜನಾದ ಹುಲಿಯನ್ನು ತನ್ನ ವಾಹನವಾಗಿ ಮಾಡಿಕೊಂಡು ಸರ್ಪವನ್ನೇ ಚಾವಡಿಮಾಗಿನ ಚೇಳನ್ನು ಹುಲಿಗೆ ಮೂಗುದಾರವನಾಗಿ ಮಾಡಿಕೊಂಡು ಕಾಲಭೈರವನಂತೆ ಬರುವ ನಮ್ಮ ಯಮನೂರಿನ ಈಶ, ಜಗದೀಶ, ಚಾಂಗದೇವ, ಜೈ ಜಗದೊಡೆಯ ಚಾಂಗಭಲೋ ದೇವಾ ದೇವಪ್ರಿಯ ಯಮನೂರೇಶಾ ಬರುವನು ಪಲ್ಲಕ್ಕಿ ಮೇಲೆ ಕುಳಿತು.

ಜಾತ್ರೆಯಲ್ಲಿ ಭಾರಿಸುವ ಡೊಳ್ಳಿನ ನಾದಕ್ಕೆ ಕಂಚನ ಗಂಟೆಯ ತಾಳಕ್ಕೆ ಒಲಿಯುವ ಒಲುಮೆಯ ಮೂರ್ತಿ ಬಾಗ ಸಚಾರ ಯೋಗಿ ಚಾಂಗದೇವ ತನ್ನ ಕರುಣೆಯ ಗಂಗೆಯಿಂದ ಬಂದವರ ಬವಣೆಗಳನ್ನು ದೂರಮಾಡಿ ಬಡವರ ಪಾಲಿನ ಭಾಗ್ಯದ ನಿಧಿಯಾಗಿ ಧರೆಯಲ್ಲಿ ಬೆಳಗುವನು ಯಮನೂರಿನ ಪುಣ್ಯಕ್ಷೇತ್ರದಲ್ಲಿ ನೆಲೆಸಿರುವನು. ಕಲಿಯುಗದ ಕಲಿ ಪುರುಷ ಚಾಂಗದೇವ.

**ಶ್ರೀಯಮನೂರ ಪೀರಾ**

ಶರಣು ಶರಣು ಯಮನೂರಿನ ಧೀಶ. ಜಗಧೀಶ ನಿನ್ನ ಪಾದಗಳಿಗೆ ನಿನ್ನ ದರುಶನವನ್ನು ಪಡೆದು ನಲಿಯಬೇಕೆಂದು ಬೆಟ್ಟಗುಡ್ಡ ಅಲೆಯುತ್ತಾ ಬಂದಿರುವೆ. ಗಂಧದಲ್ಲಿರುವ ಪರಿಮಳದಂತೆ, ಸೂರ್ಯನಲ್ಲಿರುವ ಅಗ್ನಿಯಂತೆ, ಸಿಡಿಲಲ್ಲಿರುವ ಗಾತ್ರದ ತೇಜದಂತೆ ನಿನ್ನ ನಾಮವು ಸ್ಪಟಿಕವಾದುದು. ನನ್ನ ಜೀವನದ ಕೊನೆಯ ಉಸಿರಿನಲಿ ನಿನ್ನ ನೆನಪು ಕಡೆಯತನಕ. ಬಾಳ ದೋಣಿಯನ್ನು ಕೈಬಿಡದೇ ಸಲಹು ಕಾಪಾಡು ಜಗದೀಶ ಕಲಿಯುಗದ ಕುಲ ಪುರುಷ ಚಾಂಗದೇವ.

ನಿನ್ನಂತಹ ಮಹಾಮಹಿಮನ ದರುಶನಕ್ಕಾಗಿ ಬಿಡದೆ ಬಂದಿರುವೆನು. ನಿನ್ನ ಹೆಸರಿನ ಚಲದಲ್ಲಿ ಇದೆ. ಸೌಭಾಗ್ಯವು ನಿನ್ನ ಮಾಯೆಯಿಂದ ನನಗೆ ಸುಖಸ್ವರ್ಗವು ನಿನ್ನ ಪಾದ ಮೆಟ್ಟಿದ ಈ ಮಣ್ಣು ಪಾನವು ನಿನ್ನ ಮಹೀಮೆ ತಿಳಿಯಲೆಂದು ಲಗುಬಗೆಯಿಂದ ಓಡೋಡಿ ಬಂದಿರುವೆನು ನಾನು. ನನ್ನ ಮನವನ್ನು ಮಲ್ಲಿಗೆಯ ಹಾರ ಮಾಡಿ ತೊಡಿಸುವೆನು. ಕಣ್ಣ ಬೆಳಕ ಆರತಿ ಮಾಡಿ ಬೆಳಗಿಸುವನು ಇಂದು. ಬಕ್ತರನ್ನು ಬಿಡದೆ ಸಲುಹುತ್ತಾ ಕ್ಷಣ ಕ್ಷಣ ಮುಂದೆದಾರಿತೋರಿಸು ತಂದೆ ಕಲಿ ಮಲಿಗಾದ ಕಾಮಧೇನು. ಕಲ್ಪವೃಕ್ಷ ಐರಾವತ ನನ್ನ ಪಾಲಿಗೆ ನೀನು ಚಾಂಗದೇವ.

ಸಕ್ಕರೆ ಗೊಂಬೆಯನ್ನು ಎಲ್ಲಿ ಕಚ್ಚಿ ತಿಂದರೂ ಅದು ಸಿಹಿಯಾಗಿರುತ್ತದೆ. ಹಾಗೆಯೇ ಯೌಗಿಕ ಪುರುಷರ ಎಲ್ಲಾ ಸಿದ್ಧಿಗಳು, ಭಕ್ತ ಜನರ ತೊಂದರೆಗಳನ್ನು, ಕಷ್ಟಗಳನ್ನು ಕುರುಡುತನ, ಅಜ್ಞಾನವನ್ನು ಅಹಂಕಾರವನ್ನು, ರೋಗ ರುಜಿನಗಳನ್ನು ಮೌನವಾಗಿಯೇ ಪರಿಹರಿಸಿದ ಸ್ಥಿತಿಯನ್ನು ಈ ಹಾಡಿನಲ್ಲಿ ಕಾಣುತ್ತೇವೆ. ಮನಸ್ಸು ಶುದ್ಧಿಯಾಗುವುದು. ದಿವ್ಯವಾಗುವುದು ಎಂಬುದನ್ನು ಸಾಧಿಸಿ ತೋರಿಸಿದ ಪುಣ್ಯಪುರುಷ ದೈವಾಂಶ ಸಂಭೂತನಾದ ರಾಜಾಭಾಗ ಸವಾರ ಯೋಗಿ ಚಕ್ರವರ್ತಿ ಚಾಂಗದೇವರ ಕುರಿತು ಉಲ್ಲೇಖಿತ ಕೃತಿಗಳು ಭಕ್ತಿಗೀತೆಗಳ ಮೂಲಕ ನೋಡಲಾಗಿದ್ದು, ರಚನೆಗೊಂಡ ಕೃತಿಗಳು ವ್ಹಿ.ಜಿ.ದೀಕ್ಷಿತ ಮತ್ತು ಶ್ರೀ ಹನುಮಂತ ಸುಣಗಾರ ಇವರಿಂದ ದೊರೆತ ಮಾಹಿತಿಯಿಂದ ಸ್ಪಷ್ಟವಾಗಿದೆ.

# ಅಧ್ಯಾಯ ಆರು

# ಯಮನೂರಿನ ಚಾಂಗದೇವನ ಪವಾಡ ಸಾದೃಶ್ಯಗಳು

## ಯಮನೂರ ರಾಜಾಬಾಗ ಸವಾರ ಚಾಂಗದೇವರು

ಈಶ್ವರ-ಅಲ್ಲಾ ಒಬ್ಬನೇ, ಮಸೀದಿ-ಮಂದಿರ ಒಂದೇ, ಕಾಶಿ-ಕಾಬಾ ಒಂದೇ. ಪುರಾಣ-ಕುರಾನ ಒಂದೇ ಎಂಬ ಹಿಂದೂ-ಮುಸ್ಲಿಂ ಭಾವೈಕ್ಯ ಸಂದೇಶದ ನಿದರ್ಶನವನ್ನು ಧಾರವಾಡ ಜಿಲ್ಲೆಯ ನವಲುಗುಂದ ತಾಲೂಕಿನ ಯಮನೂರಿನ 'ರಾಜಭಾಗ ಸವಾರ' ಶ್ರೀ ಚಾಂಗದೇವರ ಕ್ಷೇತ್ರದಲ್ಲಿ ಕಾಣಬಹುದು. ಶ್ರೀ ಶಿರಹಟ್ಟಿಯ ಫಕೀರಸ್ವಾಮಿ ಮಠ, ಸಾವಳಗಿಯ ಶಿವಲಿಂಗೇಶ್ವರ ಸಿದ್ಧಸಂಸ್ಥಾನಮಠ, ತಿಂಥಣಿಯ ಮೌನೇಶ್ವರಮಠ, ಶರೀಫ ಸಾಹೇಬರ ಶಿಶುನಾಳ ಕ್ಷೇತ್ರಗಳು ಈ ದಿಸೆಯಲ್ಲಿ ಉಲ್ಲೇಖನೀಯ. ಈ ಪರಂಪರೆಯಲ್ಲಿ ಯಮನೂರು ಸುಕ್ಷೇತ್ರವು ಹಿಂದೂ-ಮುಸ್ಲಿಂ ಭಾವೈಕ್ಯತೆಯ ಬಂಧುರ ಕೇಂದ್ರವೆನಿಸಿದೆ. (ಪುಣ್ಯದಂತೆ ಬಂದವರು ಪುಟಸಂಖ್ಯೆ.೨೪, ಸಂಗಮೇಶ ಹಂಡಿಗಿ)

## ತಾತ್ವಿಕ ಹಿನ್ನಲೆ

ಮಾನವನು ತನ್ನ ಬದುಕಿನುದ್ದಕ್ಕೂ ಅನುಭವಿಸುವ ಅನಿಶ್ಚಿತ ಸಂಕಷ್ಟಗಳಿಂದ ಬಿಡುಗಡೆ ಹೊಂದಲು ತನಗಿಂತ ಅಗಮ್ಯ ಶಕ್ತಿಯೊಂದಕ್ಕೆ ಮೊರೆಹೋಗುತ್ತಾನೆ. ಈ ಅಗಮ್ಯ ಶಕ್ತಿಯೇ ಧರ್ಮ. "ಪ್ರಾಚೀನರು ಧಾರಣಾತ್ ಧರ್ಮ ಇತ್ಯಾಹು" ಎಂದರು. ಅಂದರೆ ಧರ್ಮವು ಮನುಷ್ಯನನ್ನು ಧರಿಸುತ್ತದೆ ಎನ್ನುವರು. ಧರ್ಮವು ಮನುಷ್ಯನ ಜೊತೆ ಜೊತೆ ಹುಟ್ಟಿ ಬೆಳೆದು ನಿಂತಿದ್ದು ಅದು ಅವನ ಅಂತರಂಗದ ನಿಧಿಯಂತಿರುವುದು.

ಪ್ರಪಂಚದಲ್ಲಿ ಯಾವುದೇ ಮನುಷ್ಯನು, ಧರ್ಮವನ್ನು ತ್ಯಜಿಸಿ ಬಾಳಲಾರ. ಧರ್ಮವು ಸದಾ ಲೋಕಕಲ್ಯಾಣವನ್ನೇ ಬಯಸುವಂತದ್ದು. ಮಾನವನನ್ನು ಪಾರಮಾರ್ಥಿಕ ಕಡೆಗೆ ಕೈ ಹಿಡಿದು ಮುನ್ನಡೆಸುತ್ತದೆ. ಜೀವನದ ಬಗೆಗೆ ಗೌರವ ಆದರಗಳನ್ನು ಹುಟ್ಟಿಸಿ, ಅವನ ಹೋರಾಟಕ್ಕೆ ಸಾರ್ಥಕತೆಯನ್ನು ನೀಡುತ್ತದೆ. ಮತ್ತು ಆತನ ಬದುಕಿನಲ್ಲಿ ಶ್ರದ್ಧೆಯನ್ನು ಒಡಮೂಡಿಸುವುದು. ಇಂತಹ ಧರ್ಮಮಾರ್ಗದಲ್ಲಿ ನಡೆದ ಸಾಧು ಸಂತರು, ಅಂತರ್ಮುಖಿಗಳೂ, ಚೈತನ್ಯ ಮೂರ್ತಿಗಳೂ ಆಗಿದ್ದು, ಗೌರವ ಆದರಗಳಿಗೆ ಒಳಪಡುವರು. ಅಂತಹ ಸಾಧು, ಸತ್ಪುರುಷರು, ಸಂತರು, ಶರಣರು ಭಾರತದಂತೆಯೇ ಕರ್ನಾಟಕದಲ್ಲಿಯೂ ಅಸಂಖ್ಯಾತರಿದ್ದಾರೆ. ಅವರ ಬದುಕು ನಡೆ ನುಡಿಗಳು ಮಾನವನಿಗೆ ದಾರಿದೀಪವಾಗಿವೆ.

ಭಾರತವು ಅನಾದಿಕಾಲದಿಂದಲೂ ಆಧ್ಯಾತ್ಮಿಕ ತತ್ವಗಳಿಗೆ ಪ್ರಾಮುಖ್ಯ ನೀಡಿದೆ. ಆದ್ದರಿಂದ ಅದು ಉತ್ಕೃಷ್ಟ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದೆ. ಧಾರ್ಮಿಕ ತೊಟ್ಟಿಲೆನಿಸಿದ ಕರ್ನಾಟಕವು ಅನೇಕ

ಧರ್ಮಗಳಿಗೆ ದಾರಿ ತೋರಿದ ಆಧ್ಯಾತ್ಮಿಕ ರಂಗಭೂಮಿ ಎನಿಸಿದೆ. ಈ ರಂಗಭೂಮಿಯಲ್ಲಿ ಸಂತರು, ಸತ್ಪುರುಷರು ಶಿವಶರಣರು, ಶರಣೆಯರು ಆಗಿಹೋಗಿರುವರು. ಅಂಥವರಲ್ಲಿ ಭಕ್ತಿಭಂಡಾರಿ ಬಸವಣ್ಣ, ಶೂನ್ಯಸಿಂಹಾಸನಾಧಿಪತಿ ಅಲ್ಲಮ, ಮಹಾಜ್ಞಾನಿ ಚನ್ನಬಸವಣ್ಣ, ಅಕ್ಕಮಹಾದೇವಿ, ಪುರಂದರದಾಸ, ಕನಕದಾಸರಂತಹ ಮಹಾನ್ ದೈವಿಪುರುಷರನ್ನು ಪಡೆದ ಪುಣ್ಯಭೂಮಿ ನಮ್ಮದು. ಇವರೆಲ್ಲರೂ ಧರ್ಮಮಾರ್ಗದಲ್ಲಿ ನಡೆದು, ಸಮಸ್ತ ಕುಲಕೋಟಿಯನ್ನು ಭಕ್ತಿ ಮಾರ್ಗದಲ್ಲಿ ನಡೆಸಿದರು. ಅವರು ಮಾನವ ಕೋಟಿಗೆ ಆಧ್ಯಾತ್ಮಿಕ ಅಮೃತವನ್ನುಣ್ಣಿಸಿದರು. ಈ ಅನುಭವಿಗಳು, ಪರಮಾತ್ಮನಲ್ಲಿ ಅನನ್ಯ ಪ್ರೇಮದ ಬಗ್ಗೆ, ಸೇವಾಕಾರ್ಯಗಳ ಬಗ್ಗೆ ಮನುಕುಲದ ಐಕ್ಯತೆಯ ಬಗ್ಗೆ ಬೋಧಿಸಿ, ಭಾರತೀಯರ ಜೀವನದಲ್ಲಿ ಸಂಜೀವಿನಿ ಶಕ್ತಿಯನ್ನು ಪ್ರವಹಿಸಿ, ಆಧ್ಯಾತ್ಮಿಕತೆಗೆ ಭದ್ರವಾದ ತಳಹದಿಯನ್ನೊದಗಿಸಿದರು. ಇಂತಹ ಮಹಾತ್ಮರ ಪಂಕ್ತಿಯಲ್ಲಿ ಸೂಫಿಸಂತರು ಸೇರುತ್ತಾರೆ. ಈ ಸೂಫಿಗಳು ಲೋಕವೇ ನನ್ನ ಮನೆ, ಮಾನವ ಕುಲವೇ ಕುಟುಂಬವೆಂದು ನುಡಿದು, ನಡೆದು ತೋರಿಸಿದ ಅವರು ಸಂಸ್ಕೃತಿ ಮತ್ತು ವೇದಾಂತಗಳಿಗೆ, ತಮ್ಮ ಅಮೂಲ್ಯ ಕೊಡುಗೆಯನ್ನು ಸಲ್ಲಿಸಿರುವರು. ಹೀಗೆ ಪರಿಸರ, ಸಮಾಜ ಸುಧಾರಣೆಗಳ ಜೊತೆಗೆ ಆತ್ಮ ಸಂಸ್ಕಾರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಅನುಭಾವಿ ಸೂಫಿಗಳು ಕೇವಲ ಯೋಗಸಾಧಕರಾಗಿರದೇ "ಕವಿಗಳು ವಿದ್ವಾಂಸರು, ವಿರಕ್ತರಾಗಿದ್ದರು.

ಇವೆಲ್ಲಾ ಲಕ್ಷಣಗಳನ್ನು ನೋಡಿದಾಗ ಒಂದು ಸರ್ವಸಮ್ಮತವಾದ ಅಭಿಪ್ರಾಯಕ್ಕೆ ಬರಬೇಕಾಗುತ್ತದೆ. ಏನೆಂದರೆ ಯಮನೂರಿನ ಚಾಂಗದೇವರು ಸೂಫಿಗಳ ಲಕ್ಷಣವನ್ನೂ ಹಾಗೂ ಒಬ್ಬ ಸಂತನ ಲಕ್ಷಣವನ್ನು ಹೊಂದಿದ್ದರು. ಇದರಿಂದ ಮುಸ್ಲಿಂರು ಸೂಫಿ ಎಂದರು. ಹಿಂದೂಗಳು ಸಂತ ಎಂದು ಪೂಜಿಸುತ್ತಾ ಯಮನೂರಿನಲ್ಲಿ ಇಂದಿಗೂ ಹಿಂದೂ ಮುಸ್ಲಿಂ ಭಾವೈಕ್ಯತೆಯಿಂದ ಉರುಸಿನಲ್ಲಿ ಪಾಲ್ಗೊಳ್ಳುತ್ತಾರೆ.

ಎಲ್ಲ ಧರ್ಮಗಳ ಮೂಲ ಉದ್ದೇಶ 'ಸರ್ವೇ ಜನಾಃ ಸುಖಿ ನೋ ಭವಂತು' ಎಂಬುದಾಗಿದೆ. ಅಂದರೆ ಭೂಮಿಯ ಮೇಲೆ ಎಲ್ಲ ಜೀವಿಗಳ ಒಳಿತನ್ನು ಹಾರೈಸುವುದಾಗಿರುತ್ತದೆ. ಪ್ರತಿಯೊಂದು ಧರ್ಮ ಸಂಸ್ಥಾಪಕರೂ ತಮ್ಮದೇ ಆದ ತತ್ವ, ಆಚರಣೆಗಳ ಮೂಲಕ ಸಮುದಾಯದ ಒಳಿತಿಗಾಗಿ ಪ್ರಯತ್ನಿಸಿರುವುದನ್ನು ಇತಿಹಾಸದುದ್ದಕ್ಕೂ ಕಾಣುತ್ತ ಬಂದಿದ್ದೇವೆ. ಭಾರತ ಅನೇಕ ಧರ್ಮಗಳಿಗೆ ಜನ್ಮವಿತ್ತದೇಶ. ಅಷ್ಟೇ ಅಲ್ಲ ಜಗತ್ತಿನ ಹಲವು ಧರ್ಮಗಳಿಗೂ ಅದು ಆಶ್ರಯವಿತ್ತಿದೆ.

ಪ್ರಾಚೀನ ಪರಂಪರೆಯುಳ್ಳ ಭರತ ಖಂಡವು ಕಾಲಕಾಲಕ್ಕೆ ಅನೇಕ ಏರಿಳಿತಗಳನ್ನು ಕಂಡಿದ್ದರೂ ಅದು ಭವ್ಯವೂ ಸಂಪದ್ಭರಿತವೂ ಆಗಿ ರೂಪಾಂತರಗೊಂಡಿದೆ. ನಮ್ಮ ದೇಶವು ಹಲವು ಧರ್ಮಗಳ ನೆಲೆಬೀಡಾಗಿದೆ. ಇಲ್ಲಿರುವಷ್ಟು ಧರ್ಮಗಳು ಮತ್ತು ಧಾರ್ಮಿಕ ಪಂಥಗಳು ಪ್ರಪಂಚದ ಬೇರ್‍ಯಾವ ರಾಷ್ಟ್ರದಲ್ಲಿಯೂ ಕಂಡುಬರುವುದಿಲ್ಲ. ಆದರೆ ಅನೇಕತೆಯಲ್ಲಿ ಏಕತೆ (Unity in diversity)ಯನ್ನು ಮೈಗೂಡಿಸಿಕೊಂಡಿರುವುದು ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯಗಳಲ್ಲೊಂದಾಗಿದೆ. ದೇಶದ ಒಳಗಿನ ಹಾಗೂ ಹೊರಗಿನ ಸಂಸ್ಕೃತಿಗಳ ಮೂಲಾಂಶವನ್ನು ಗರ್ಭೀಕರಿಸಿಕೊಂಡು ಸಮಷ್ಟಿ ಸಂಸ್ಕೃತಿಯಾಗಿ ಹೊರ ಹೊಮ್ಮಿದ್ದರಿಂದ ಜಗತ್ತಿನ ಸಂಸ್ಕೃತಿಗಳಲ್ಲಿಯೇ ಭಾರತೀಯ ಸಂಸ್ಕೃತಿಗೆ ಶ್ರೇಷ್ಠಸ್ಥಾನಮಾನವಿದೆ. ಇಷ್ಟೊಂದು ಬಗೆಯ ವೈವಿಧ್ಯಪೂರ್ಣವಾದ ಭಾರತದ ಚರಿತ್ರೆಯನ್ನು ವಸ್ತುನಿಷ್ಠವಾಗಿ ಕಟ್ಟಿಕೊಡುವ ಕಾರ್ಯಸಮರ್ಪಕವಾಗಿ ನಡೆಯಬೇಕಾದುದರ ಅವಶ್ಯಕತೆ ಕಂಡುಬರುತ್ತದೆ.

"ಭಾರತ ಪರ್ಯಾಯ ದ್ವೀಪದ ಹೃದಯಭಾಗದಲ್ಲಿರುವ ದಕ್ಷಿಣ ಭಾರತವು ಐತಿಹಾಸಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಹಾಗೂ ಕಲಾಪರಂಪರೆಯಲ್ಲಿ ಅನನ್ಯವಾದ ಸ್ಥಾನಮಾನಗಳನ್ನು ಉಳಿಸಿಕೊಂಡು ಬಂದಿದೆ. ಅಲ್ಲದೇ ಅದು ತನ್ನದೇ ಆದ ಪುಣ್ಯ ಧಾರ್ಮಿಕ ಕ್ಷೇತ್ರಗಳನ್ನೂ ಆದರ್ಶಗಳನ್ನೂ ಹೊಂದಿದೆ. ಭಾರತದ ಚೌಕಟ್ಟಿನಲ್ಲಿ ಅಳವಟ್ಟು ಸುಂದರವಾಗಿ ಅರಳಿರುವ ಸಂಸ್ಕೃತಿ ಕುಸುಮಗಳಲ್ಲಿ ಕರ್ನಾಟಕದ ಸ್ಥಾನ ಹಿರಿದಾದುದು ಮತ್ತು ವಿಶಿಷ್ಟವಾದುದು. ಅದು ಸರ್ವಧರ್ಮಗಳ ತೊಟ್ಟಿಲು ಎಂದು ಹೆಸರು ಪಡೆದಿದ್ದಲ್ಲದೇ, ವಿಫುಲವಾದ ನೈಸರ್ಗಿಕ ಸಂಪನ್ಮೂಲಗಳನ್ನು, ಧಾರ್ಮಿಕ ಪುಣ್ಯ ತಾಣಗಳನ್ನು ಒಳಗೊಂಡಿದೆ. ಒಟ್ಟಿನಲ್ಲಿ ಕರ್ನಾಟಕ ಸಂಸ್ಕೃತಿಯ ಸಾರಸರ್ವಸ್ವವನ್ನು ಸಂಗ್ರಹಿಸಿ ಹೇಳುವುದಾದರೆ ಅದು, ಇಹ-ಪರಗಳಲ್ಲಿ, ಭಕ್ತಿ-ಜ್ಞಾನ-ಕರ್ಮಗಳಲ್ಲಿ ವ್ಯಕ್ತಿ-ಸಮಾಜಗಳಲ್ಲಿ, ಒಳಿತು-ಕೆಡುಕುಗಳಲ್ಲಿ, ಹಳತು-ಹೊಸತರಲ್ಲಿ, ಒಳಗೂ ಹಾಗೂ ಹೊರಗಿನವುಗಳಲ್ಲಿ ಸಮನ್ವಯತೆಯನ್ನು ಸಾಧಿಸಿರುವುದೊಂದು ಅದರ ವೈಶಿಷ್ಟ್ಯವಾಗಿದೆ.

ಆಧ್ಯಾತ್ಮಿಕ ಜೀವನವೇ ಭಾರತದ ಸಹಜ ಪ್ರವೃತ್ತಿ. ಈ ದೇಶದ ಪ್ರತಿಯೊಂದು ಭಾಗದಲ್ಲಿಯೂ ಪ್ರತಿ ತಲೆಮಾರಿನಲ್ಲಿಯೂ ಅತ್ಯುತ್ತಮರಾದ ಅತಿಪವಿತ್ರರಾದ ಆಧ್ಯಾತ್ಮಯೋಗಿಗಳು ಇದ್ದರೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ಜನತೆಯ ಅಜ್ಞಾನ, ಅಂಧಕಾರವನ್ನು ಕಳೆದು ಜ್ಞಾನದ ಬೆಳಕನ್ನು ಬೆಳಗಿದ ಭವರೋಗ ವೈದ್ಯರಾಗಿದ್ದಾರೆ. ಸಮಾಜದ ಎಲ್ಲಾ ವರ್ಗದವರನ್ನು ಸಮಾನವಾಗಿ ನೋಡಿ, ಕಾಪಾಡಿ, ಲೋಕೋಪಕಾರಕ್ಕಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ್ದಾರೆ.

ಬದುಕಿನ ಸಂಘರ್ಷದಿಂದ ದೂರವಾಗಿದ್ದ ಇವರು ಆಧ್ಯಾತ್ಮಿಕ ಶಕ್ತಿಯನ್ನು, ತಮ್ಮ ಸಾದನೆಯ ಸಿದ್ಧಿಯಿಂದ ಪಡೆದುಕೊಂಡಿರುತ್ತಾರೆ. ಅಧಿಕಾರ, ಅಹಂಕಾರ, ಐಶ್ವರ್ಯ, ವೈಭವ, ಸಂಸಾರ, ಮೋಹ ಇವೆಲ್ಲವುಗಳನ್ನು ತ್ಯಜಿಸಿ, ವೈರಾಗ್ಯ ತಾಳಿ, ಲೌಕಿಕ ಬಂಧನದಿಂದ ಸಂಪೂರ್ಣ ಬಿಡುಗಡೆ ಹೊಂದಿರುತ್ತಾರೆ. ಏಕಾಂಗಿಯಾಗಿ ಊರೂರು ಅಲೆದಾಡುವುದು ಇವರ ವಿಶೇಷ ಗುಣವಾಗಿರುತ್ತದೆ. ಇವರು ಬೆಟ್ಟ ಗುಡ್ಡ, ಗುಹೆಗಳಲ್ಲಿ ಯೋಗ ಸಾಧನೆ ಮಾಡಿ ಅವ್ಯಕ್ತ ಶಕ್ತಿಯನ್ನು ಪಡೆದಿರುತ್ತಾರೆ. ಮುಂದೆ ಮೋಕ್ಷ ಕಾಣಲು ಗುರುಗಳನ್ನು ಹುಡುಕುತ್ತಾ, ಗುರು ದೊರೆತ ಮೇಲೆ, ಗುರುಕೃಪೆ ಮತ್ತು ಗುರೂಪದೇಶ ಪಡೆದು, ಜೀವನ್ಮುಕ್ತ ಸ್ಥಿತಿಯನ್ನು ಪಡೆದಿರುತ್ತಾರೆ. ಆಗ ಜ್ಞಾನಸನ್ಯಾಸಿಗಳಾಗಿ, ಸದ್ಗುರುಗಳಾಗಿ, ವಿಭೂತಿಪುರುಷರಾಗಿ, ಅನೇಕ ಅದ್ಭುತ ಅತ್ಯಾಶ್ಚರ್ಯಭರಿತವಾದ ಊಹಾತೀತವಾದ ಪವಾಡಗಳನ್ನು ಸಹಜವಾಗಿಯೇ ತೋರಿದ್ದಾರೆ. ಇಂಥವರನ್ನು ಜೀವನ್ಮುಕ್ತ, ಪರಬ್ರಹ್ಮ, ಪರಮಹಂಸ, ಪರಮರೂಢ, ಸಂತ, ಸೂಫಿ, ಅವಧೂತರೆಂದೂ ಕರೆಯಲಾಗಿದೆ.

ಇಂತಹ ಸಂತರು, ಅವಧೂತರು, ಸೂಫಿಗಳು, ಜಾತಿ, ಮತ, ಪಂಥಗಳೆನ್ನದೆ ಭಕ್ತಿಪೂರ್ವಕ ಗೌರವ ಮನ್ನಣೆಪಡೆದು, ಸಮಾಜಕ್ಕೆ ಕೋಮುಸೌಹಾರ್ಧತೆಯನ್ನು, ಭಾವೈಕ್ಯತೆಯನ್ನು ಸಾರಿದ್ದಾರೆ. ತಮ್ಮನ್ನು ನಂಬಿದ್ದ ಭಕ್ತರ ವಯಕ್ತಿಕ ಹಾಗೂ ಸಮುದಾಯಿತ ಜೀವನದಲ್ಲಿ ಎದುರಾಗುವ ಕಷ್ಟ-ನಷ್ಟಗಳಿಗೆ ಸಮಸ್ಯೆಗಳಿಗೆ ಪರಿಹಾರ ನೀಡಿರುತ್ತಾರೆ.

ಸೂಫಿಸಂತರು, ಆರೂಢರು, ಅವಧೂತರು, ಸಿದ್ಧರು, ತತ್ವಪದಕಾರರು, ಧರ್ಮವನ್ನು ಜಾತಿ, ಮತ, ಲಿಂಗಾತೀತವಾಗಿ ನೀಡಿದರು. ಖಾಜಾ ಅಮೀನುದ್ದೀನ್, ಶಿರಹಟ್ಟಿ ಫಕೀರೇಶ, ತಿಂತಿಣಿ ಮೋನಪ್ಪ, ಕಡಕೋಳ ಮಡಿವಾಳಪ್ಪ, ಶಿಶುನಾಳ ಶರೀಫ, ಶೀಲವೇರಿ ಶಿವಪ್ಪ ಕೈವಾರ ತಾತಯ್ಯ, ಹುಬ್ಬಳ್ಳಿಯ ಸಿದ್ಧಾರೂಢರು,

ನವಲಗುಂದದ ನಾಗಲಿಂಗ ಗರಗದ ಮಡಿವಾಳಪ್ಪ ಮೊದಲಾದವರು ಎಲ್ಲ ಜಾತಿಯ ಮರಗಳನ್ನು ಹೊಟ್ಟೆಯಲ್ಲಿಟ್ಟುಕೊಂಡ ಒಂದು ಕಾಡು ಇದ್ದಂತೆ". ಒಟ್ಟಾರೆ ಶರಣರಿಗೂ, ಸೂಫಿಗಳಿಗೂ, ಅವಧೂತರಿಗೂ ಹರಿದಾಸರಿಗೂ ಸಮಾನ ಅಂಶವಿರುವುದು ಸಾಂಸ್ಥಿಕ ಧರ್ಮಗಳನ್ನು ವಿರೋಧಿಸುವ ವಿಷಯದಲ್ಲಿ, ಇವರೆಲ್ಲಾ ಜಾತಿ, ಮತ, ಲಿಂಗಭೇದಗಳನ್ನು ಮುಖ್ಯವಾಗಿಸದೆ ಪ್ರಾಮಾಣಿಕ ಭಕ್ತಿ ಸಾಧನೆಯನ್ನು ಮೆರೆದವರಾಗಿದ್ದಾರೆ.

ಯೌಗಿಕ ಪಂಥಗಳ ಅವಧೂತರು, ಆರೂಢರು, ಸಿದ್ಧರು, ನಾಥರು ಎಂದು ಕರೆಸಿಕೊಳ್ಳುವ ಸಂತರು, ಅನುಭಾವಿಗಳು, ೧೭-೧೮ನೇ ಶತಮಾನದಲ್ಲಿ ತಮ್ಮ ಅನುಭಾವಿಕ ವ್ಯಕ್ತಿತ್ವದಿಂದಲೇ ಜನಸಾಮಾನ್ಯರನ್ನು ಆಕರ್ಷಿಸಿದರು. ಸಮಾಜದಲ್ಲಿ ತುಂಬಿದ್ದ ಅರಾಜಕತೆಯನ್ನು ಕಡಿಮೆ ಮಾಡಲು ಇವರು ಪರೋಕ್ಷವಾಗಿ ಕಾರಣರಾದರು. ಹಾಗೆ ನೋಡಿದರೆ ಈ ಸಂತ ಪರಂಪರೆಯವರು ವ್ಯಕ್ತಿಗತವಾಗಿ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂದು ನಂಬಿದ್ದರು. ಅಂಥ ಅನುಭವಕ್ಕಾಗಿ ತನ್ಮಯತೆಯನ್ನು ಪಡೆಯಲು ಲೌಕಿಕದ ಕಟ್ಟುಪಾಡುಗಳನ್ನು ಬದಿಗೊತ್ತಿ, ತಮ್ಮ ಒಳದನಿಗೆ ಮಾತ್ರ ಓಗೊಡುವ ಸ್ಥಿತಿಗೆ ಬದ್ಧರಾದರು. ತಾವು ಸಾಧನೆಯಿಂದ ದಕ್ಕಿಸಿಕೊಳ್ಳುವ ಅನುಭಾವಿಕ ಶಕ್ತಿಗೆ ಶರಣಾಗಿ ಅದರ ಜೊತೆ ಮೌನಸಂಧಾನವನ್ನು ನಿರಂತರವಾಗಿ ನಡೆಸಿ, ಅನುಭವದ ಆತ್ಯಂತಿಕ ಗತಿಗೆ ಯತ್ನಿಸಿದವರು. ತಮ್ಮ ಸಾಧನೆಗೆ ಆರಂಭದಲ್ಲಿ ಗುರುವಿನ ನೆರವನ್ನು ಉತ್ಕಟವಾಗಿ ಬಯಸಿದರು. ವ್ಯಕ್ತಿಗತವಾಗಿ ತಮ್ಮ ಆತ್ಮೋನ್ನತಿಗಾಗಿ ಧ್ಯಾನ, ಯೋಗದಲ್ಲಿ ನಿರತರಾಗಿ ಲೌಕಿಕದ ವ್ಯಾಮೋಹವನ್ನು ಕಳೆದುಕೊಂಡು ಯೋಗಿಗಳಾದರು. ಇಂಥ ಯೋಗಿಗಳು ಯಾವುದೇ ಧರ್ಮವನ್ನು ಪ್ರತಿಪಾದಿಸಿದವರಲ್ಲ. ಅವರು ಯಾವುದೇ ಜಾತಿಯಲ್ಲಿ ಹುಟ್ಟಿರಬಹುದು. ಆ ಜಾತಿ ಧರ್ಮವನ್ನು ಅವರು ಪ್ರಚಾರಮಾಡುವ ಯಾವುದೇ ಕೆಲಸಕ್ಕೆ ಕೈ ಹಾಕಿದವರಲ್ಲ. ಅಧಿಕಾರ ಸಂಪತ್ತು ಹಾಗೂ ಭೋಗಸುಖವನ್ನು ಖಂಡಿಸಿದವರು ಈ ಸಂತರು ಎಂದು ಹೇಳಬಹುದು.

೧೭ನೇ ಶತಮಾನ ಹಲವು ಬಗೆಯ ಸಂಕೀರ್ಣಗಳ ಆಗರ. ಕನ್ನಡದ ನೆಲದಲ್ಲಿ ಹಲವು ಬಗೆಯ ಚಿಂತನೆಗಳು ನಡೆಯುತ್ತಿದ್ದ ಕಾಲ. ಸೂಫಿಗಳು, ದಾಸರು, ತತ್ವಪದಕಾರರು, ಜಾನಪದಕಾರರು, ಅವಧೂತರು, ಸಿದ್ಧರು ಇಂಥವರೆಲ್ಲ ಒಂದೇ ಕಾಲದಲ್ಲಿ ಇದ್ದುದನ್ನು ನೆನಪಿಸಿಕೊಳ್ಳಬೇಕು. ಇದು ಆಕಾಲದ ಸಂದರ್ಭ. ಈ ಸಂದರ್ಭವು ಪರಸ್ಪರ ಕೊಳುಕೊಡುಗೆಗಳಲ್ಲಿ ತಾನು ಮೈವೆತ್ತುಕೊಳ್ಳುತ್ತಿದ್ದುದನ್ನು ಗಮನಿಸಬೇಕಾಗಿದೆ. ಇಲ್ಲಿ ಯಾವೊಂದು ಮತದ ಗೆಲುವು ಸೋಲುಗಳಲ್ಲ. ಅವೆಲ್ಲವೂ ಸಾಮರಸ್ಯದ ಕೊಂಡಿಗೆ ಬೆಸೆದುಕೊಂಡ ಸಂದರ್ಭ.

೧೮, ೧೯ನೇ ಶತಮಾನದ ಕಾಲವನ್ನು ಅವಲೋಕಿಸಿದರೆ, ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾಲಘಟ್ಟ, ಯುದ್ಧದ ಭೀತಿ, ಬರಗಾಲ, ಕಗ್ಗತ್ತಲು, ಕಾರ್ಮೋಡ ತುಂಬಿದ ಸಂದರ್ಭ. ಪರಕೀಯರ ಆಕ್ರಮಣದಿಂದ ಸಾಮಾಜಿಕ ಮತ್ತು ಧಾರ್ಮಿಕ ಜೀವನ ತತ್ತರಿಸಿತ್ತು. ಬ್ರಿಟಿಷ್ ಮಿಶನರಿಗಳು ಹಿಂದೂ ಧರ್ಮವನ್ನು ಮನಸಾರೆ ತೆಗಳಿ, ಜನರನ್ನು ಅಧರ್ಮದಿಂದ ವಿಮುಖರನ್ನಾಗಿ ಮಾಡಬಯಸಿದರು. ಆದರೆ ಜನರಲ್ಲಿ ಪುರಾತನ ಮತತತ್ವ, ಪರಂಪರೆಗಳಲ್ಲಿ ಅಭಿಮಾನ ಹೆಚ್ಚುತ್ತಾ ನಡೆಯಿತು. ಮುಂದಿನ ರಾಜಕೀಯ ಆಂದೋಲನಕ್ಕೆ ನೆಲವನ್ನು ಹರಗಿ ಸಜ್ಜುಗೊಳಿಸಿತ್ತು. ಜನತೆಗೆ ಅದೊಂದು ಉಪಕೃತಿಯಾಗಿ ಪರಿಣಮಿಸಿತು. ಪೂರ್ವಾಚಾರವೂ, ಭಕ್ತಿಶ್ರದ್ಧೆಗಳು, ಸಡಿಲವಾದವು. ಅಭಿವ್ಯಕ್ತಿಯಲ್ಲಿ ವೈಯಕ್ತಿಕ ವಿಚಾರ ಸರಣಿ, ತಾರ್ಕಿಕದೃಷ್ಟಿ ಮತ್ತು ವಾಸ್ತವತೆಯ ಪ್ರಜ್ಞೆ ಇವು ಒಡಮೂಡಿದ್ದವು. ಒಟ್ಟಾರೆ ದೇಶದಲ್ಲಿ ವಿಷಮ ಪರಿಸ್ಥಿತಿ ತಲೆದೋರಿತ್ತು.

ಇಂತಹ ಪರಿಸ್ಥಿತಿಯಲ್ಲಿ ನಾಡಿನಾದ್ಯಂತ ಹಲವಾರು ಶಿವಯೋಗಿಗಳು, ಆರೂಢರು, ಅವಧೂತರು, ಅನುಭಾವಿಗಳು ತತ್ವಪದಕಾರರು, ಅವತರಿಸಿದರು. ನಂತರ ಅವರು ಜನತೆಯ ಬದುಕಿನಲ್ಲಿ ಕವಿದ ಕತ್ತಲೆಯನ್ನು ಹೋಗಲಾಡಿಸಿದರು. ಇವರುಗಳ ಯೋಗದಲ್ಲಿ, ಆಚರಣೆಯಲ್ಲಿ ವಿವಿಧತೆ ಇರಬಹುದು. ಸಾಧಿಸಿದ ಸಿದ್ಧಿಯಲ್ಲಿ ತಾರತಮ್ಯ ಇರಬಹುದು. ಆದರೆ ಅವರೆಲ್ಲರ ಗುರಿ ಮಾತ್ರ ಒಂದೇ ಆಗಿತ್ತು. ಹಾಗಾಗಿ ಇವರೆಲ್ಲಾ ಸದಾ ಅಭಿವಂದ್ಯರಾಗಿ ಮಹಾತ್ಮರಾಗಿದ್ದಾರೆ.

ನವಲಗುಂದದ ನಾಗಲಿಂಗಸ್ವಾಮಿಗಳು, ಹೊಸರಿತ್ತಿಯ ಗುದ್ದಲೀ ಸ್ವಾಮಿಗಳು, ಉಣಕಲ್ಲು ಶ್ರೀ ಸದ್ಗುರು ಸಿದ್ದಪ್ಪಜ್ಜನವರು ಹೊಸಳ್ಳಿಯ ಶ್ರೀ ಬೂದಿಸ್ವಾಮಿಗಳು, ಕಳಸದ ಗೋವಿಂದಭಟ್ಟರು, ತಿಂತಿಣಿ ಮೋನಪ್ಪಯ್ಯ, ಶಿಶುನಾಳ ಶರೀಫರು ಮುಖ್ಯ ಅನುಭಾವಿಗಳಾಗಿದ್ದಾರೆ.

ಆಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿ ಸ್ಥಿತಿ ಅತ್ಯುತ್ತಮವಾದ ಆದರ್ಶ. ಈ ಸ್ಥಿತಿ ಮುಟ್ಟಿದವರು ಲೌಕಿಕ ಸಂಘರ್ಷಗಳಿಂದ ದೂರವಾಗಿ ಆಶಾಪಾಶಗಳಿಂದ ಮುಕ್ತರಾಗುತ್ತಾರೆ. ಮನುಷ್ಯರೇ ಸೃಷ್ಟಿಸಿಕೊಂಡ ದುಃಖಗಳಿಂದ, ತಾಪತ್ರಯಗಳಿಂದ ಮುಕ್ತರಾಗಿದ್ದು, ಶಾಂತಚಿತ್ತರಾಗಿರುತ್ತಾರೆ. ಇವರುಗಳ ಮುಖ್ಯ ಸ್ವಭಾವಗಳು ನಿರಹಂಕಾರಿಗಳು, ದ್ವೇಷರಹಿತರು, ಜಾತ್ಯಾತೀತರು, ಅತಿವರ್ಣಾಶ್ರಮಿಗಳು, ನಿಷ್ಪಕ್ಷಪಾತರು, ಭಯರಹಿತರು, ವಿಶಾಲಹೃದಯವುಳ್ಳವರು. ಪೂರ್ಣಪರಿಶುದ್ಧರು. ಇವರುಗಳ ವರ್ತನೆ ಲೌಕಿಕ ನೋಟಕ್ಕೆ ವಿಚಿತ್ರವಾಗಿ ಕಂಡರೂ ಅಂತರಂಗದಲ್ಲಿ ಪರಶಿವನನ್ನು ಸಾಕ್ಷಾತ್ಕರಿಸಿಕೊಂಡವರು. ಆಧ್ಯಾತ್ಮ, ವೇದಾಂತ ಮುಂತಾದ ವಿಷಯಗಳನ್ನು ಜನರಿಗೆ ತಮ್ಮ ನಡೆ-ನುಡಿಗಳಿಂದ ಸಮಾಜದಲ್ಲಿ ಜನಜಾಗೃತಿಯನ್ನುಂಟು ಮಾಡುವಲ್ಲಿ ಶ್ರಮಿಸಿದವರಾಗಿದ್ದಾರೆ.

ಪ್ರತಿಯೊಬ್ಬ ಮಾನವನು ಮುಕ್ತಿಗಾಗಿ ಶಾಂತಿ-ನೆಮ್ಮದಿಗಾಗಿ ಪರಿತಪಿಸುವುದು ಸಹಜ. ಅಂತಹ ಮುಕ್ತಿ ಪಡೆಯಲು ಭಕ್ತಿಯಿಂದ ಸಾದ್ಯವೆಂದು ಅನೇಕ ಅನುಭಾವಿಗಳು ಜಗತ್ತಿನಾದ್ಯಂತ ಸಾರಿದ್ದಾರೆ. ಸಂತರು ಶರಣರು, ದಾಸರು, ಸೂಫಿಗಳು ಮುಂತಾದ ಅನುಭಾವಿಗಳು, ಜಗತ್ತಿನಾದ್ಯಂತ ಸಾರಿದ್ದಾರೆ. ಸಂತರು, ಶರಣರು, ದಾಸರು, ಸೂಫಿಗಳು ಮುಂತಾದ ಅನುಭಾವಿಗಳು ಮುಕ್ತಿಮಾರ್ಗದ ಮಹತ್ವಪಡೆದು, ನುಡಿದಂತೆ ನಡೆದು, ಜೀವನ್ಮುಕ್ತಿಯ ಸ್ಥಿತಿ ಪಡೆದಿದ್ದಾರೆ. ಆಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿಯ ಸ್ಥಿತಿ ಪಡೆದಿದ್ದಾರೆ. ಆಧ್ಯಾತ್ಮಿಕ ಜೀವನದಲ್ಲಿ ಜೀವನ್ಮುಕ್ತಿಯು ಅತ್ಯುತ್ತಮವಾಗಿದ್ದು, ಇದರಲ್ಲಿ ನೆಲೆನಿಂತುಕೊಂಡು ಲೌಕಿಕ ಸಂಘರ್ಷಗಳಿಂದ ದೂರವಾಗಿ ಎಲ್ಲ ಆಶಾ-ಪಾಶಗಳಿಂದ ಮುಕ್ತರಾಗಿರುತ್ತಾರೆ. ಜಾತಿ, ಮತ, ಧರ್ಮ, ಅಂತಸ್ತುಗಳನ್ನು ಮೀರಿ ನಿರಹಂಕಾರ ಮತ್ತು ದ್ವೇಷರಹಿತರಾಗಿದ್ದಾರೆ. ತಮ್ಮನ್ನು ನಂಬಿದ ಎಲ್ಲ ವರ್ಗದ ಜನತೆಯ ಮೇಲೆ ಪ್ರೀತಿ-ದಯೆ ತೋರುತ್ತಾ ಮಾನವೀಯತೆ ಮೆರೆದಿದ್ದಾರೆ.

ಅವಧೂತರು, ಸಂತರು ಹಾಗೂ ಸೂಫಿಗಳು ಮತ್ತು ಶರಣರ ಮಾರ್ಗದಲ್ಲಿ ಗುರುವಿಗೆ ಅಗ್ರಸ್ಥಾನವಿದೆ. ಪರಮಾತ್ಮನು ಗುರುವಿನ ರೂಪದಲ್ಲಿ ಬಂದಿರುವನೆಂದು ನಂಬಿರುತ್ತಾರೆ. ಶರಣರು ಸಂಗದಲ್ಲಿ ಬೆರೆತರೆ, ಅವಧೂತರು ಸಂತರು ಏಕಾಂಗಿಗಳು. ಶರಣರ ಧರ್ಮ ವೀರಶೈವ ಧರ್ಮವಾದರೆ ಸಂತರದೇ ಒಂದು ಮಾರ್ಗವಾಗಿ ಬೆಳೆಯಿತು.

**ಸೂಫಿಗಳು**

'ಸೂಫಿ' ಎಂದರೆ ಪರಮಾತ್ಮನನ್ನು ಅತ್ಯಂತ ಪ್ರೀತಿಯಿಂದ ಉಪಾಸನೆ ಮಾಡುವವನು ಎಂದರ್ಥ.

"ಸೂಫಿ ಎಂದರೆ ಅನುಭಾವಿ, ಸಿದ್ಧಿ. "ಹೆಣ್ಣಾಗಲಿ, ಗಂಡಾಗಲಿ, ಸಚ್ಚಾರಿತ್ರ್ಯ-ತ್ಯಾಗ ಮನೋಭಾವ, ಆಡಂಬರ ರಹಿತ, ಇಂದ್ರಿಯ ಸುಖರಹಿತ ಭೌತಿಕ ಸಂಪತ್ತನ್ನು ಬಿಟ್ಟು ಮಹಾತ್ಮರಾಗಿದ್ದು, ಸೂಫಿ ಧರ್ಮದಲ್ಲಿ ಆದರ್ಶ ವ್ಯಕ್ತಿಗಳೆನಿಸುತ್ತಾರೆ. ಪ್ರೇಮವೇ ಸೂಫಿಗಳ ಮೂಲ ಸಿದ್ಧಾಂತವಾಗಿದೆ. ಇವರು ಏಕೇಶ್ವರವಾದಿಗಳು, ನಿರಾಕಾರ ದೇವರ ಆರಾಧನೆ, ಇವರು ಪ್ರಪಂಚವನ್ನು ಮಾಯ ಎಂದು ಭಾವಿಸದೆ ಸತ್ಯವಸ್ತುಗಳ ವ್ಯಕ್ತಿರೂಪ ಎಂದು ಭಾವಿಸಿದರು. ಭಕ್ತಿಮಾರ್ಗ ಅನುಸರಿಸಿದರು. ಸರ್ವರಲ್ಲಿಯೂ ದಯೆವುಳ್ಳವರಾಗಿದ್ದರು. ಸದಾಚಾರ ಮತ್ತು ಸರಳತೆಯುಳ್ಳವರು. ಆಧ್ಯಾತ್ಮಿಕತ ಸಾಧನೆಯಲ್ಲಿ ಸೂಫಿತತ್ವ ಅತ್ಯಂತ ಸರಳವಾದುದಾಗಿರುತ್ತದೆ. ಈ ಸೂಫಿಗಳು ಭಗವಂತನನ್ನು ಭಯದಿಂದ ಭಜಿಸುವುದಕ್ಕಿಂತ ಪ್ರೇಮದಿಂದ ಆರಾಧಿಸುವುದು ಮೇಲು ಎಂದು ತಿಳಿದಿರುತ್ತಾರೆ. ಮತ್ತು ತನ್ನನ್ನು ತಾನು ತಿಳಿಯುವ ಸ್ವಸ್ವರೂಪ ಆತ್ಮಜ್ಞಾನಕ್ಕೆ ಹೆಚ್ಚಿನ ಮಹತ್ವ ನೀಡುತ್ತಾರೆ. ಸಂಕೇತ ಮತ್ತು ಸೂಚನೆಗಳ ಮೂಲಕ, ಮುಂದೆ ಆಗಬಹುದಾದುದನ್ನು ಸೂಚಿಸುವಂತೆ ಒಂದು ಅಂತಃಚಕ್ಷು ಈ ಸೂಫಿಗಳಲ್ಲಿರುತ್ತದೆ.

**ಸಂತರು**

ಸಂತ ಶಬ್ದ ಸಂಸ್ಕೃತದ ಸತ್‌ನಿಂದ ರೂಪುಗೊಂಡಿದ್ದು, ಸತ್ ಎಂದರೆ ಶುದ್ಧ ಅಸ್ತಿತ್ವವುಳ್ಳದ್ದು ಎಂದರ್ಥ. ಈ ಸತ್ ಚಿಂತನೆಯಲ್ಲಿ ತೊಡಗಿರುವ ಸಾಧಕನೇ ಸಂತ. ಸಂತ ಶಬ್ದವನ್ನು ನಮ್ಮ ಸಾಹಿತ್ಯ ಪರಂಪರೆಯಲ್ಲಿ, ಬಹು ಆಯಾಮದ ಅರ್ಥದಲ್ಲಿ ಬಳಸಲಾಗಿದೆ. "ಸಜ್ಜನ ಪವಿತ್ರಾತ್ಮ, ಪರೋಪಕಾರಿ, ಸದಾಚಾರಿ, ಸರ್ವಭೂತಹಿತ ಬಯಸುವವ, ಜಪ-ತಪ ದಾನ-ಧರ್ಮಾದಿಗಳಲ್ಲಿ ನಿರತನಾಗಿರುವವ. ಆಧ್ಯಾತ್ಮ ಚಿಂತನೆಯನ್ನು ಬದುಕಿನ ಅವಿಭಾಜ್ಯ ಅಂಗವನ್ನಾಗಿಸಿಕೊಂಡವ. ನಡೆ-ನುಡಿಯಲ್ಲಿ ಸಾಂಗತ್ಯವುಳ್ಳವ, ನಿಷ್ಕಾಮಿಯಾಗಿರುವವ, ಸೇವಾಭಾವ ಮತ್ತು ಮಾನವೀಯ ಅಂತಃಕರಣವನ್ನು ಆತ್ಮೀಕರಿಸಿಕೊಂಡಿರುವ ಸಾಧಕರನ್ನು ಸಂತ ಎಂದು ವ್ಯಾಪಕ ಅರ್ಥದಲ್ಲಿ ಕರೆದಿದ್ದಾರೆ".

ಸಂತರು ನಿರ್ಗುಣ ಭಕ್ತಿಯ ಉಪಾಸಕರು ಮತ್ತು ಪ್ರಚಾರಕರಾಗಿದ್ದ ಸಂತರು ಪ್ರತಿಪಾದಿಸಿದ ಜೀವನಮೌಲ್ಯ ಮತ್ತು ಆಧ್ಯಾತ್ಮಿಕ ಚಿಂತನೆಗಳನ್ನು ಸಂತಮತದವುಗಳೆಂದು ಕರೆಯಲಾಯಿತು. ಸಂತನು ಹೇಗಿರಬೇಕೆಂಬುದನ್ನು ಕಬೀರರೇ ಹೇಳುವಂತೆ ನಿರ್ವೈರಿ ಹಾಗೂ ಕಾಮರಹಿತನಾಗಿರಬೇಕು. ಪರಮಾತ್ಮನಲ್ಲಿ ಅನುರಾಗವುಳ್ಳವನಾಗಿದ್ದು, ವಿಷಯಾಸಕ್ತಿಯಿಂದ ದೂರವಿರಬೇಕು ಎಂದು ಆತನ ಸ್ವಭಾವವನ್ನು ತಿಳಿಸಿದ್ದಾರೆ. ಒಂದು ರೀತಿಯಲ್ಲಿ ಸಂತ ಮತ್ತು ಪರಮಾತ್ಮನ ಮಧ್ಯೆ ಯಾವ ವ್ಯತ್ಯಾಸವೂ ಇಲ್ಲದ ಪರಮಾತ್ಮನ ಪ್ರತಿನಿಧಿಗಳೇ ಸಂತರೆಂಬ ಭಾವನೆಯಿದೆ.

ಸಂತರು ಮಹಾನ್ ಮಾನವತಾವಾದಿಗಳು, ಜಾತಿ ವರ್ಗಗಳ ಸಂಕೋಲೆಯಿಂದ ಮಾನವ ಸಮಾಜವನ್ನು ಬಿಡುಗಡೆಗೊಳಿಸಿ ವರ್ಣರಹಿತ, ವರ್ಗರಹಿತ, ಸಮಾಜ ನಿರ್ಮಿಸಲು ಶ್ರಮಿಸಿದವರು. ಅಹಂಕಾರ ತೊರೆದು ಸಕಲ ಜೀವ ಜಗತ್ತನ್ನು ಪ್ರೀತಿಯಿಂದ ಕಾಣುವ ಸಂತರಿಗೆ ಯಾವುದೇ ಆಚಾರದ ಕಟ್ಟುಪಾಡುಗಳಿಲ್ಲ. ಆತ್ಮಜ್ಞಾನವೇ ಪರಮಗುರಿ ಎಂದು ನಂಬಿದ ಸಂತರು ಶಂಕರಾಚಾರ್ಯರ ಅದ್ವೈತ ಚಿಂತನೆಯ ನೆಲೆಗಟ್ಟಿನಲ್ಲಿ ತಮ್ಮ ಚಿಂತನೆಯನ್ನು ಮೂಡಿಸಿಕೊಂಡವರು.

**ಆರೂಢರು**

ಆರೂಢ ಎಂದರೆ ಏರಿದವನು ಎಂದರ್ಥ. (ಸಿಂಹಾರೂಢ, ಜ್ಞಾನರೂಢ, ಸಿದ್ಧಾರೂಢ) ಕರ್ಮಕಾಂಡ

ಇಲ್ಲದ ಆರೂಢ. ಆರೂಢ ಸ್ಥಿತಿ ತಲುಪಲು ಮೊದಲು ಹಠಯೋಗ, ಸಗುಣಯೋಗ, ಬ್ರಹ್ಮೋಪಾಸನೆಗಳು ಅಗತ್ಯ. 'ಅಖಿಲಭಾವ ರಹಿತನಾದ ಆರೂಢನು ತನುಮನಸಾದಿಗಳ ಚೇಷ್ಟೆಗೆ, ಇಷ್ಟಜನಕೆ, ವೇದ ವಿಧಿಗಳಿಗೆ ಎಷ್ಟು ಕಿಂಕರನಾಗಿರುವುದಿಲ್ಲ. ಈತನಿಗೆ ಕೂಡುವ, ಅಗಲುವ ಅರ್ಥಾತ್ ಯೋಗ-ವಿಯೋಗಗಳ ಕಲ್ಪನೆಯಿಲ್ಲ. ಆತನಿಗೆ ಸುಖ-ದುಃಖಾದಿ ದ್ವಂದ್ವಗಳಿರುವುದಿಲ್ಲ.

ಶ್ರೀ ಗುರುವಿನ ಕರುಣೆಯಿಂದ ಆರೂಢನಿಗೆ ಸರ್ವವೂ ಬ್ರಹ್ಮವೆಂಬ ಅನುಭವವಾಗುತ್ತದೆ. ತಾನಲ್ಲದೆ ಇನ್ನೊಂದಿಲ್ಲವೆನ್ನುವ ಅನುಭಾವದಲ್ಲಿ ನೆಲೆನಿಂತವನು ಆರೂಢನು.

ತನು-ಮನ-ಧನ-ಧ್ಯಾನ-ವನಿತೆ-ಪುತ್ರ ಇಂಥವುಗಳಲ್ಲಿ ರತಿಭಾವವಾಗಲಿ, ವಿರತಿಭಾವವಾಗಲಿ, ತಲೆದೋರದೆ, ನೈಜಭಾವನೆಯಿಂದಿರುತ್ತಾನೆ. ಭೋಗ ವಿಷಯಗಳಲ್ಲಿ, ತತ್ವ ವಿಷಯಗಳಲ್ಲಿ ರತಿಯಾಗಲಿ, ವಿರತಿಯಾಗಲಿ ಇಲ್ಲದ, ನಿರ್ವಿಷಯನಾಗಿರುತ್ತಾನೆ. ಒಟ್ಟಾರೆ ಆರೂಢನು ಸರ್ವಸಮತ್ವ ಭಾವನೆಯುಳ್ಳವನಾಗಿರುತ್ತಾನೆ.

ಶರಣರು, ಸೂಫಿಗಳು, ಸಂತರು, ಆರೂಢರು, ಅವದೂತರಗಳ ಮಾರ್ಗದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸ ಕಂಡುಬಂದರೂ ಅವರುಗಳ ಗುರಿ ಮಾತ್ರ ಒಂದೇ ಆಗಿದೆ. ಈ ಎಲ್ಲಾ ಅನುಭವ ಪಥಗಳು ಉದಯಿಸಿದ ಕಾಲ, ದೇಶ, ಭಾಷೆ, ನೆಲ, ಪರಿಸರ, ಪರಿಸ್ಥಿತಿಗಳು ಬೇರೆ ಬೇರೆಯಾಗಿ ಕಂಡುಬಂದರೂ ಅಂತರಂಗದ ನಿಲುವು ನಿರ್ಧಾರಗಳು ಒಂದೇ ರೀತಿಯಲ್ಲಿವೆ. ಇವರ ಚಿಂತನೆ, ಅನುಭವ, ಅನುಭಾವಗಳಲ್ಲಿರುವ ಸಾಮ್ಯತೆಗಳು ಆಶ್ಚರ್ಯ ಮೂಡಿಸುವುದರ ಜೊತೆಗೆ, ಚಿಂತನೆಗೆ ಇಂಬು ಕೊಡುತ್ತವೆ.

ಭಕ್ತರಾಗಿ ದಾರ್ಶನಿಕರಾಗಿ, ಸಮಾಜಸುಧಾರಕರಾಗಿ, ವಿರಕ್ತರಾಗಿ, ಆತ್ಮಜ್ಞಾನಿಗಳಾಗಿ, ಮೌನಿಗಳಾಗಿ, ಕವಿಗಳಾಗಿ, ಸಾಧಿಸಿದ ಸಿದ್ಧಿ-ಸಾಧನೆಗಳು, ಮನುಕುಲದ ಮುಂದೆ ಹೊಸ ಹೊಸ ಮೌಲ್ಯಗಳನ್ನು ಇರಿಸಿವೆ. ಇವರೆಲ್ಲಾ ತಮ್ಮ ಸಾಧನೆಗೆ ಬಳಸಿಕೊಂಡ ಪಥ ಅನುಭಾವದ ಪಥವಾಗಿದ್ದು, ದೈವವನ್ನು ಎಲ್ಲರೂ ಸತಿಪತಿಗಳ ರೂಪದಲ್ಲಿ ಕಂಡಿದ್ದಾರೆ. ಭಗವಂತನೊಂದಿಗೆ ನೇರ ಸಂಬಂಧ ಹೊಂದಿದ್ದ ಈ ಅನುಭಾವಿಗಳ ಬಗೆಗಿನ ನಿಲುವು ಒಂದೇ ಆಗಿರುತ್ತದೆ. ಇದರಲ್ಲಿ ಗುರುವಿನ ಬಗ್ಗೆ ಅತೀವ ಶ್ರದ್ಧೆ ಮತ್ತು ಗೌರವವನ್ನು ಹೊಂದಿದ್ದವರು.

ಒಟ್ಟಾರೆಯಾಗಿ ಎಲ್ಲಾ ಅನುಭಾವಿಗಳ ಉದ್ದೇಶ ಲೋಕಕಲ್ಯಾಣ ಸಕಲಜೀವಿಗಳಿಗೂ ಲೇಸನ್ನು ಬಯಸುವುದು. ಬಯಸಿದ್ದ ಕಲ್ಯಾಣ ಆತ್ಮಕಲ್ಯಾಣದಲ್ಲಿ ಅಡಗಿತ್ತು. ಇವರುಗಳಲ್ಲಿ ಯಾರ ಪ್ರಭಾವ, ಯಾರ ಮೇಲಾಗಿತ್ತು, ಯಾವ ರೀತಿಯ ಸಂಪರ್ಕಗಳಿದ್ದವೋ ನಿಚ್ಚಳವಾಗಿ ತಿಳಿಯದು. ಪರಸ್ಪರ ಪ್ರಭಾವವನ್ನು ಬೀರಿಕೊಂಡಿರುವ ಇವರೆಲ್ಲಾ ಸಮತಾವಾದಿಗಳಾಗಿದ್ದಾರೆ. ಒಟ್ಟಿನಲ್ಲಿ ೧೮-೧೯ನೆಯ ಶತಮಾನದಲ್ಲಿ ಅಧಿಕ ಸಂಖ್ಯೆಯಲ್ಲಿ ಅವತರಿಸಿದ ಸಂತರು ಧರ್ಮ ಜಾತಿಗಳನ್ನು ಮೀರಿದ ಗುರು-ಶಿಷ್ಯರ ಪರಂಪರೆಯನ್ನು ನಾಡಿನ ತುಂಬ ಹುಟ್ಟುಹಾಕಿದ್ದಾರೆ.

ಯೋಗ ಸಾದನೆಯಿಂದ ಅಣಿಮಾಡಿ ಅಷ್ಟೈಶ್ವರ್ಯಗಳನ್ನು ಪವಾಡಗಳಂತಹ ಸಿದ್ಧಿಗಳನ್ನು ಪಡೆದ ಅವಧೂತರು, ಲೋಕಕಲ್ಯಾಣವನ್ನು ಬಯಸಿ, ತನ್ನನ್ನು ನಂಬಿದ ಶುದ್ಧ ಮನಸ್ಸಿನ ಭಕ್ತರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳನ್ನು ಪರಿಹರಿಸಿ, ಇಷ್ಟಾರ್ಥವನ್ನು ನೀಡುವ ದೇವರಾಗಿದ್ದಾರೆ. ಇಂತಹ ಮಹಾತ್ಮರನ್ನು ನೋಡುವುದೇ ಭಾಗ್ಯ ಹಾಗೂ ಆತನು ನೆಲೆನಿಂತ ಕ್ಷೇತ್ರವೂ ಅಷ್ಟೇ ಪವಿತ್ರವೆಂಬ ಭಾವನೆ ಭಕ್ತರಮನದಲ್ಲಿ ಮೂಡಿರುತ್ತದೆ.

ಇಂತಹ ಮಹಾತ್ಮರು ತಮ್ಮ ಊರಲ್ಲಿಯೇ ಇರಲಿಯೆಂದು ಪರ ಊರಿಗೆ ಕಳಿಸಬಾರದೆಂದು ಭಕ್ತರು ನಿರ್ಧರಿಸಿ, ಅವಧೂತನಿಗಾಗಿ ಮಠ ಕಟ್ಟಿಸಿ, ಅಲ್ಲಿಯೇ ಸ್ಥಿರವಾಗಿ ನೆಲೆಸುವುದಕ್ಕೆ ವ್ಯವಸ್ಥೆ ಮಾಡುತ್ತಾರೆ. ಹೀಗೆ ಮಠವನ್ನು ಕಟ್ಟಿಸಿದ ಮೇಲೆ, ಅವಧೂತರಿಗೆ ಸಂತರಿಗೆ ನಿತ್ಯವೂ ಭಕ್ತರು ಸೇವೆ ಮಾಡುತ್ತಿರುತ್ತಾರೆ. ಎಲ್ಲೆಲ್ಲಿಂದಲೋ ಭಕ್ತರು ದರ್ಶನಕ್ಕೆ ಬರುತ್ತಾರೆ. ಹೀಗೆ ಸಂತರ ಪರಂಪರೆಯಲ್ಲಿ ಬಂದಿರುವ ಒಬ್ಬ ಯೋಗಿಯೇ ಯಮನೂರಿನ ರಾಜಾಭಾಗಸವಾರ ಚಾಂಗದೇವರು ಒಬ್ಬರು. ಇವರು ಬಂದು ನೆಲೆಸಿದ ಭೂಮಿಯೇ ತಪೋಭೂಮಿಯಾಗಿದೆ. ಇವರು ಒಬ್ಬ ಸೂಫಿಯೋ, ಸಂತರೋ ಎಂಬುದರಲ್ಲಿ ವಿಚಿತ್ರ ಸಮಸ್ಯೆಗಳಿವೆ ಎಂದು ಡಾ.ರಹಮತ್ ತರೀಕೆರೆಯವರು ತಮ್ಮ 'ಕರ್ನಾಟಕದ ಸೂಫಿಗಳು' ಎಂಬ ಪುಸ್ತಕದಲ್ಲಿ ಹೇಳಿದ್ದಾರೆ.

ಏಕೆಂದರೆ ಸೂಫಿ ಸಂತರ ಚರಿತ್ರೆಯನ್ನು ಕಟ್ಟುವುದೆಂದರೆ, ಹುಟ್ಟಿಲ್ಲದ ದೋಣಿಯಲ್ಲಿ ಕುಳಿತು ಹರಿವ ನದಿಯಲ್ಲಿ ಪಯಣ ಹೊರಟಂತೆ. ಸೆಳವು ಬಂದತ್ತ ಹೋಗುವ ಆಕರ್ಷಣೆಯೂ ಇದೆ. ಬೇಕಾದ ಕಡೆ ಹೋಗಲಾಗದ ಸಮಸ್ಯೆಯೂ ಇದೆ. ಗ್ರಂಥ-ಶಾಸನಗಳಂಥ ಸ್ಥಾವರ ದಾಖಲೆಗಳನ್ನು ನೆಚ್ಚಿ ಚರಿತ್ರೆಯನ್ನು ಕಟ್ಟುವ ಪ್ರಸಿದ್ಧ ವಿಧಾನವೊಂದು ಇದೆ. ಆದರೆ ಈ ವಿಧಾನವನ್ನು ಕಂಗೆಡಿಸುವ ಲೋಕ ಸೂಫಿಗಳದ್ದು, ವೇಷ ಮರೆಸಿಕೊಂಡು ಹಲವು ರೂಪಗಳಲ್ಲಿ ಸುಳಿದಾಡುವ 'ಚರಿತ್ರೆ' ಇಲ್ಲಿ ದೈವವಿದ್ದಂತೆ ಅನಿಸುತ್ತದೆ. ಏಕೆಂದರೆ ಇದೆ ಎಂದರೆ ಇದೆ, ಇಲ್ಲವೆಂದರೆ ಇಲ್ಲ, ಸೂಫಿಗಳ ಬಗೆಗೆ ಹೇಳುವ ಚರಿತ್ರೆಯು ಇಲ್ಲಿ ಪುರಣಾವಾಗಿ, ನಂಬಿಕೆಯಾಗಿ, ಆಚರಣೆಯಾಗಿ ಹೋಗಿಬಿಡುತ್ತದೆ. ಮತ್ತೆ ಅದು ನಿರಂತರವಾಗಿ ಬದಲಾಗುತ್ತಲೇ ಇರುತ್ತದೆ. ಗ್ರಾಮದ ಸಮುದಾಯಗಳು ಬಾಳಿನ ಒತ್ತಡಗಳಿಗೆ ತಕ್ಕಂತೆ ತಮ್ಮ ಅನುಭವಲೋಕದ ರಕ್ತಮಾಂಸಗಳಿಂದ ರೂಪಿಸಿದ ಕೂಸಿನಂತೆ ಈ ಚರಿತ್ರೆ ಇರುತ್ತದೆ. ಕಳೆದಿರುವ ನೆನಪುಗಳನ್ನು ಸದ್ಯದ ಅನುಭವಗಳೊಂದಿಗೆ ಬೆರೆಸುವಂತಹ ಸಮುದಾಯಗಳ ಸೃಜನಶೀಲತೆಯೇ ಆಕರ್ಷಕವಾಗಿರುತ್ತದೆ ಎನ್ನುತ್ತಾರೆ ರಹಮತ್ ತರೀಕೆರೆಯವರು.

ಇದಕ್ಕೆ ಉದಾಹರಣೆಯಾಗಿ ನವಲಗುಂದದ ಬಳಿ ಇರುವ ಯಮನೂರಪ್ಪನೇ ಸಾಕ್ಷಿ. ನವಲಗುಂದ ತಾಲೂಕಿನ ಧಾರವಾಡ ಜಿಲ್ಲೆಯ ಬಯಲು ಸೀಮೆಯ ಜನಪ್ರಿಯ ಸಂತರಲ್ಲಿ ಯಮನೂರಪ್ಪನ ಉರುಸಿಗೆ ಲಕ್ಷ ಲಕ್ಷ ಜನ ನೆರೆಯುತ್ತಾರೆ. ಈತ ಅಲೆದಾಡಿದ ಜಾಗಗಳಲ್ಲೆಲ್ಲ ಗದ್ದುಗೆಗಳಿವೆ. ಅದರಲ್ಲಿ ಯಮನೂರು ಕೂಡಾ ಒಂದು. ಇದೂ ಆತನ ತೋರುಗದ್ದಿಗೆಯೇ, ಮಹಾನುಭಾವರ ಪರಂಪರೆಯಲ್ಲಿ ಬರುವ ಪ್ರಸಿದ್ಧಯೋಗಿ ಚಾಂಗ ದೇವನೇ ಈ ಯಮನೂರಪ್ಪ. ಈತನ ನಿಜವಾದ ಸಮಾಧಿ ಇರುವುದು ಮಹಾರಾಷ್ಟ್ರದ ಪುಣತಾಂಬೆಯಲ್ಲಿದೆ. ಚಾಂಗದೇವನ ಹೇಳಿಕೆಯ ಮೇರೆಗೆ ಆತನ ಶಿಷ್ಯನಾದ ಕ್ಷತ್ರೋಜಿ ಬರ್ಗೆ ಹಾಗೂ ನರಸೂಬಾಯಿಯವರ ಸಮಾಧಿಗಳಿವೆ ಯಮನೂರಿನಲ್ಲಿ.

ಹಿಂದೂ ಮುಸ್ಲಿಂಮರೆಂಬ ಬೇಧಭಾವವಿಲ್ಲದೆ ಭಕ್ತವೃಂದವು ಚಾಂಗದೇವರ ಕ್ಷೇತ್ರಕ್ಕೆ ನಡೆದುಕೊಳ್ಳುವರು. ಚಾಂಗದೇವರು ವಿಶ್ವಬ್ರಹ್ಮ ಕುಲದಲ್ಲಿ ಜನಿಸಿದ್ದರಿಂದ ಸಮನ್ವಯದೃಷ್ಟಿ ಅವರಲ್ಲಿದ್ದಿತು. ಆದಿಲ್‌ಶಾಹಿಯ ಕಾಲದಲ್ಲಿ ಮೌನೇಶ್ವರರು ಇದೇ ವಂಶದಲ್ಲಿ ಜನಿಸಿದವರು. ಪಿಂಜಾರ ಹೆಣ್ಣು ಮಗಳಿಗೆ ಆಶೀರ್ವದಿಸಲು ಜನಿಸಿದ ಖಾದಿರಲಿಂಗನೆಂಬ ಸಂತನು ಹುಲಗೂರಿನಲ್ಲಿ ಆಗಿ ಹೋಗಿರುವನು. ಮಹಾತ್ಮರು ಅಂದು ಸರ್ವಜಾತಿಗಳಲ್ಲಿ ಸಾಮರಸ್ಯತರಲು ಪ್ರಯತ್ನಿಸಿದರು. ಇಲ್ಲಿ ಅಂದು ಚಾಂಗದೇವರು ಮುಸ್ಲಿಂರಿಗೂ

ಅನುಗ್ರಹಿಸಿದ್ದರಿಂದ ಈ ಕ್ಷೇತ್ರಕ್ಕೆ ಮುಸಲ್ಮಾನರು ಅಧಿಕ ಸಂಖ್ಯೆಯಲ್ಲಿ ನಡೆದುಕೊಳ್ಳುವುದುಂಟು. ಪ್ರತಿವರ್ಷ ಮುಸ್ಲಿಂರ ಪ್ರಕಾರ ಉರುಸು ಎಂದು, ಹಿಂದುಗಳ ಪ್ರಕಾರ ಜಾತ್ರೆ, ಉತ್ಸವ ಎಂದೂ ಆಚರಣೆಗೊಳ್ಳುತ್ತದೆ.

ಉರುಸಿಗೆ ಬಂದ ಮುಸ್ಲಿಮ್ ಭಕ್ತರನ್ನು ಕೇಳಿದರೆ, ಚಾಂಗಪೀರ್ ಬಾಗ್ದಾದಿನಿಂದ ಬಂದ ಸೂಫಿ ಎನ್ನುತ್ತಾರೆ. ಇವನ ಸಮಾಧಿ ಆಳಂದಿಯಲ್ಲಿದೆ ಎಂದು ಒಬ್ಬ ಎನ್ನುತ್ತಾನೆ. ಕಾಶ್ಮೀರದಲ್ಲಿದೆ ಎಂದು ಮತ್ತೊಬ್ಬ ಹೇಳುತ್ತಾನೆ. ಒಬ್ಬ ಸಂತನ ಸ್ಥಳ, ಕಾಲ, ಪಂಥಗಳ ಬಗ್ಗೆ ಕೇಳಿದರೆ ಸಿಗುವ ಉತ್ತರಗಳು ಜನರ ಕಲ್ಪಿತ 'ಚರಿತ್ರೆ'ಯನ್ನು ಹೇಳುತ್ತವೆ.

ಒಡವೋದುನಾಗರ ಸುಡುವೋದು ಲೋಬಾನ
ದರುಗಾಕ್ಕೆ ಹೋಗೋದು ಸಡಗ್ಯರ| ಯಮನೂರಸ್ವಾಮಿ
ಸಡಗಾರ ಮಾಡೋದು ಬೇಸ್ಕಾರ
ಹತ್ತು ಮಂದಿ ತುರುಕರುಕೂಡಿ ಸಂಜೀಲೆ ಚಂದಪ್ಪನ ನೋಡಿ
ಗುದ್ದಲಿ ಹಾಕೋದು ಸಡಗರ| ಯಮನೂರ ತೇರ
ಕರಡಿಯ ಮಜಲು ಧಿಮಿಧಿಮಿ

ಇದು ಯಮನೂರಪ್ಪನ ಕುರಿತು ಹಾಡುವ ಪದ್ಯವಾಗಿದೆ. ಈ ಪದ್ಯವನ್ನು ಗಮನಿಸಿದರೆ, ಮೊದಲ ಪದ್ಯ ಯಮನೂರಪ್ಪನನ್ನು ಸೂಪಿ ಪಂಥಕ್ಕೆ ಸಂಬಂಧಗೊಳಿಸುತ್ತದೆ. ಎರಡನೆಯದು ಮೊಹರಂ ಹಬ್ಬಕ್ಕೆ ಸಂಬಂಧಗೊಳಿಸುತ್ತದೆ. ಈ ಹಾಡನ್ನು ಈ ಜನರನ್ನೂ ನಂಬಿ ಹೊರಟರೆ ವಿಚಿತ್ರ ಸಮಸ್ಯೆಗಳು ಎದುರಾಗುತ್ತವೆ. ಚಾಂಗದೇವನು ಮೇಲೆ ಹೇಳಿದ ಹೇಳಿಕೆಗಳ ಪ್ರಕಾರ ಕರ್ನಾಟಕದವನೋ, ಕಾಶ್ಮೀರದವನೋ, ಮಹಾರಾಷ್ಟ್ರದವನೋ, ಸೂಫಿ ಸಂತನೋ, ಮಹಾನುಭಾವ ಪಂಥದ ಯೋಗಿಯೋ ಎಂಬ ಪ್ರಶ್ನೆ ಕಾಡುತ್ತದೆ ಎನ್ನುತ್ತಾರೆ ರಹಮತ್ ತರೀಕೆರೆಯವರು. ಅಂದರೆ ಹಿಂದುವೋ, ಮುಸ್ಲಿಂನೋ ಸಂತ ಎಂದಾದರೆ ಜನ ಯಮನೂರಪ್ಪನನ್ನು ಮೊಹರಂ ಹಬ್ಬದ ದೇವರನ್ನಾಗಿ ಭಾವಿಸಿದ್ದಾರೆ ಎನ್ನುವುದು ಒಟ್ಟಿನಲ್ಲಿ ಸಮುದಾಯಗಳ ಪಾಲಿಗೆ ಅವನು ಕೇವಲ ಯಮನೂರಪ್ಪ ಅಷ್ಟೇ. ತಮ್ಮ ಬದುಕಿನ ಕಷ್ಟ ಸುಖಗಳಿಗೆ ಸಂಬಂಧಿಸಿದ ದೈವ ಅಷ್ಟೇ. ಯಾವುದೋ ಕಾಲ ದೇಶಗಳಿಗೆ ಮತ ಪಂಥ ಸಂಸ್ಕೃತಿಗಳಿಗೆ ಸೇರಿದ ವ್ಯಕ್ತಿಯನ್ನು ಮತ್ತು ಅವನ ವ್ಯಕ್ತಿತ್ವದ ಪ್ರಭಾವದಿಂದಾಗಿ ತಮ್ಮೂರಿನವನನ್ನಾಗಿ ಮಾಡಿಕೊಳ್ಳುವುದು ಸಮುದಾಯಗಳ ಲಕ್ಷಣ. ಆದ್ದರಿಂದ ಯಮನೂರಿನ ಮುಸ್ಲಿಂ ಸಮುದಾಯದವರು ಚಾಂಗಪೀರ ಎಂದು ಕರೆದು ಪೂಜಿಸಿದರು. ಮತ್ತು ಇನ್ನೊಂದು ವಿಶೇಷತೆ ಏನೆಂದರೆ ಚಾಂಗದೇವರ ದೇವಸ್ಥಾನದಲ್ಲಿ ಪ್ರತಿ ಗುರುವಾರ ಮತ್ತು ರವಿವಾರ ಫಕೀರರು ತಮ್ಮ ಕೈಯಲ್ಲಿ ಚಮೇಲಿಯನ್ನು ಹಿಡಿದುಕೊಂಡು ಓದಿಕೆ ಸಕ್ಕರೆ ಹಾಕಿಸಿಕೊಳ್ಳಲು ಕುಳಿತಿರುವುದು ಇಂದಿಗೂ ಕಂಡುಬರುತ್ತದೆ. ಅದರಂತೆ ಹಿಂದೂಗಳ ಆರಾಧ್ಯದೇವರು ಹೌದು. ಹೀಗಾಗಿ ಹಿಂದೂಗಳು ತಮ್ಮ ಹರಕೆಯನ್ನು ತೀರಿಸಿಕೊಂಡು ಹೋಗುವುದುಂಟು.

ಯಮನೂರಪ್ಪನ ಇನ್ನೊಂದು ಹೆಸರು ರಾಜಾಭಾಗ ಸವಾರ. ಆತನು ಹುಲಿಯ ಮೇಲೆ ಕುಳಿತು, ಚೇಳಿನ ಸರಪಳಿ ಹಾಕಿ ಹಾವಿನ ಚಾಟಿ ಹಿಡಿದು ಬಾಗಸವಾರನಾಗಿ (ಬಾಗ್=ಹುಲಿ) ಬರುತ್ತಾನೆ. ಹೀಗೆ ಬರುವವರಲ್ಲಿ ಯಮನೂರಪ್ಪ ಒಬ್ಬನೇ ಅಲ್ಲ. ಬಂದೇನವಾಜನೂ ಬಾಗಸವಾರನೇ. ಹೀಗಾಗಿ ಯಮೂರಿನಿಂದ ಕಾಬೂಲಿನತಕ ನೂರಾರು ಸಂತರು ಹೀಗೆ ಹಲಿಯ ಮೇಲೆ ಬರುವುದು ತಿಳಿಯುತ್ತದೆ. ಕರ್ನಾಟಕದ ಸೂಫಿಸಂತ

ಗುಲಬರ್ಗೆಯ ಬಂದೇನವಾಜ ಹಾಗೂ ಸಾವಳಗಿ ಶಿವಲಿಂಗನ ಮುಖಾಮುಖಿಯ ಪರಿಣಾಮ ಗುರುಶಿಷ್ಯತ್ವದ ಇಲ್ಲವೆ ಗೆಳೆತನದ ಸಂಬಂಧಗಳಲ್ಲಿ ಮುಕ್ತಾಯವಾಗಿರುತ್ತದೆ. ಇದೇ ತೆರನಾದ ಒಂದು ಪವಾಡ ಯಮನೂರಪ್ಪ ಹಾಗೂ ಸಂತ ಜ್ಞಾನದೇವರ ಜೀವನದಲ್ಲಿಯೂ ನಡೆಯುತ್ತದೆ. ಒಬ್ಬ ಸಂತ ಹುಲಿಯ ಮೇಲೆ ಕುಳಿತುಕೊಂಡು, ಮತ್ತೊಬ್ಬ ಸಂತನನ್ನು ಭೇಟಿ ಮಾಡಲು ಬರುವುದು. ಹುಲಿಸವಾರ ಸಂತನು ಸಾಮಾನ್ಯವಾಗಿ ಹೊರಗಿನಿಂದ ಜ್ಞಾನದ ಅಹಂಕಾರದಿಂದ ಬರುವುದು ಊರಿನ ಸಂತನಿಗೆ ತಿಳಿದು ನಿರ್ಜೀವ ವಸ್ತುವಾದ ಕಟ್ಟೆಯನ್ನು ನಡೆಸಿಕೊಂಡು ಆತನ ಭೇಟಿಗಾಗಿ ಬರುತ್ತಾನೆ. ಆಡಂಬರದಿಂದ ಹುಲಿಸವಾರನಾಗಿ ಬಂದ ಸಂತನು ಜೀವವಿಲ್ಲದ ಕಟ್ಟೆಯನ್ನು ನಡೆಸಿದ ಊರಸಂತನ ಪವಾಡ ಶಕ್ತಿಗೆ ಮೆಚ್ಚಿ ಬೆರಗಾಗುತ್ತಾನೆ, ಮಣಿಯುತ್ತಾನೆ. ಗರ್ವಬಿಟ್ಟು ಊರಸಂತನನ್ನು ಗೆಳೆಯನನ್ನಾಗಿ ಸ್ವೀಕರಿಸುತ್ತಾನೆ. ಹೀಗೆ ಸೂಫಿಗಳಲ್ಲಿ ಸಂತರಲ್ಲಿ ಇಂತಹ ಪವಾಡಗಳು ನಡೆಯುತ್ತಾನೆ ಇರುತ್ತವೆ. ಇಲ್ಲಿ ಜನರು ಜಾತಿ ಮತ ಪಂಥ ಮರೆತು ಕೇವಲ ನಂಬಿಕೆ ಆಚರಣೆಗಳ ಮೂಲಕ ಜೀವನ ಸಾಗಿಸುವುದು ತಿಳಿದು ಬರುತ್ತದೆ. ಇಲ್ಲಿ ನಾನು ಹೇಳುವುದು ಇಷ್ಟೇ ಇದಕ್ಕೆಲ್ಲಾ ಜನರ ನಂಬಿಕೆ ಮಾತ್ರ ಒಂದು ಸತ್ಯವಾಗಿ ಗೋಚರಿಸುತ್ತದೆ. (ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪುಟ. ೨,೩)

### ೬.೧. ಚಾಂಗದೇವರ ಜನನ ಬಾಲ್ಯ ಮತ್ತು ಶಿಕ್ಷಣ

ಖಾನದೇಶದ ಸುಂದರಪುರದಲ್ಲಿ ಸುಮಾರು ೨ ಸಾವಿರ ವರ್ಷಗಳ ಹಿಂದೆ ಅಂದರೆ ಕ್ರಿ.ಶ. ೧ ಅಥವಾ ೨ನೆಯ ಶತಮಾನದಲ್ಲಿ ಮುಧೋ ಪಂಡಿತನೆಂಬ ಬ್ರಾಹ್ಮಣನಿದ್ದನು. ಆತನು ಆ ಊರಿನ ಸ್ಥಾನಪತಿಯಾಗಿ ಸಕಲ ಜನರಿಗೆ ಬೇಕಾದವರೂ, ಪೂಜಿತನೂ ಆದ ಧರ್ಮಾದಿಕಾರಿಯಾಗಿದ್ದನು. ಆತನು ಮಹಾವಿಷ್ಣುವಿನ ಆರಾಧಕನಾಗಿದ್ದನು. ಪ್ರತಿದಿವಸ ಆ ಪರಬ್ರಹ್ಮನನ್ನು ಪೂಜೆ ಪುನಸ್ಕಾರಗಳಿಂದ, ಜಪ-ತಪಗಳಿಂದ ಪೂಜಿಸುತ್ತಿದ್ದರು. ಈತನ ಪತ್ನಿಯು, ಸಕಲ ಸದ್ಗುಣೆಯೂ, ಪರೋಪಕಾರಿಯೂ ಪತಿವ್ರತೆಯೂ ಆಗಿದ್ದಳು. ಇವರಿಗೆ ಬಹಳ ದಿನಗಳವರೆಗೆ ಮಕ್ಕಳಾಗಿರಲಿಲ್ಲ. ಆದರಿಂದ ಮಕ್ಕಳನ್ನು ಪಡೆಯಲು ಯಾವಾಗಲೂ ಚಿಂತಿಸುತ್ತಿದ್ದರು.

ಒಂದು ದಿನ ಒಬ್ಬ ಮಹಾಯೋಗಿಯು ಭಿಕ್ಷಾಟನೆ ಮಾಡುತ್ತಾ ಮುಧೋಪಂಡಿತನ ಮನೆಗೆ ಬಂದರು. ಸದ್ಗ್ರುಸ್ಥನಾದ ಮುಧೋಪಂಡಿತನು ಪರಮಾತ್ಮನೇ ತನ್ನ ಮನೆಗೆ ಬಂದಿರುವಷ್ಟು ಸಂತೋಷಪಟ್ಟು ಆತನಿಗೆ ಅರ್ಘ್ಯವನ್ನಿತ್ತು ಪೂಜಿಸಿ ಸತ್ಕರಿಸಿದನು.

ಆ ಪತಿಗಳೀರ್ವರು ಮಾಡಿದ ಉಪಚಾರದಿಂದ ಯೋಗಿಯು ಸಂತುಷ್ಟನಾದನು. ಆ ಮಹಾತ್ಮನು ಅವರ ಮನದಿಚ್ಛೆಯನ್ನು ಅರಿತಿರುವೆನು. ಅದಕ್ಕಾಗಿ ನನ್ನಂತಹ ವ್ಯಕ್ತಿಯನ್ನು ಸ್ವಲ್ಪಕಾಲದಲ್ಲಿಯೇ ಮಗನಾಗಿ ಪಡೆಯುವಿರಿ. ಆತನು ಮಹಾಸಿದ್ಧನೆಂದು ಲೋಕ ವಿಖ್ಯಾತನಾಗುವನು ಚಿಂತಿಸದಿರಿ ಎಂದು ನುಡಿದು ಆಶೀರ್ವದಿಸಿ ಅಂತರ್ಧಾನನಾದನು. ಕೆಲವು ದಿನಗಳು ಕಳೆದ ಮೇಲೆ ಆ ಬ್ರಾಹ್ಮಣೆಯು ಋಷಿಯವರ ಪ್ರಭಾವದಿಂದ ಗರ್ಭಿಣಿಯಾದಳು. ಅದರಿಂದ ಅವರ ಕುಟುಂಬಕ್ಕೆ ಬಹಳ ಆನಂದವಾಯಿತು.

ಪುಣ್ಯದ ಚಂದಿರನು ಆಕೆಯ ಮುಖದಲ್ಲಿ ಮಿನುಗಿ ಮುಖವು ಬೆಳ್ಳಗಾಯಿತು. ಹೆರಿಗೆಯ ದಿನಗಳು ಸಮೀಪಿಸಿದವು. ಒಂದು ದಿನ ಒಳ್ಳೆಯ ಮುಹೂರ್ತದಲ್ಲಿ ಸರ್ವಗ್ರಹಗಳು ಯೋಗ್ಯಸ್ಥಾನಗಳಲ್ಲಿ ಇರಲು ಒಂದು ಗಂಡುಮಗುವಿಗೆ ಜನ್ಮಕೊಟ್ಟಳು. ಭೂಮಿಗೆ ಅವತರಿಸಿದ ಕೂಸು ಬಹಳ ಮುದ್ದಾಗಿದ್ದರಿಂದ ಹುಟ್ಟಿದ ೧೩ನೆಯ ದಿವಸಕ್ಕೆ ನಾಮಕರಣ ಮಾಡಿದರು. ಮಗುವು ಬಹಳ ಸುಂದರವಾಗಿದ್ದರಿಂದ ಜನರು ಚಾಂಗದೇವನೆಂದು ಕರೆದರು.

ಆದರೆ ಅವರ ತಂದೆ ತಾಯಿಗಳು ಅಶ್ವತ್ಥವೃಕ್ಷವನ್ನು ಪೂಜಿಸಿ ಮಗುವನ್ನು ಪಡೆದಿದ್ದರಿಂದ ವಟೇಶ್ವರನೆಂದು ತಿಳಿದುಬರುತ್ತದೆ. ಆದರೆ ಕಾಲಾಂತರದಲ್ಲಿ ಚಂದ್ರನಂತೆ ಬೆಳೆಯುತ್ತಿದ್ದ ಮಗುವಿಗೆ ಚಾಂಗದೇವನೆಂದೇ ರೂಢಿಯಾಯಿತು.

ಈ ಅಪ್ರತಿಮ ಬಾಲಕನು ವ್ರತನಿಷ್ಠನಾಗಿದ್ದನು. ಅನೇಕ ವಿಷಯಗಳನ್ನು ತಂದೆ ತಾಯಿಯರೊಂದಿಗೆ ಚರ್ಚಿಸಿ ತಿಳಿದುಕೊಳ್ಳುತ್ತಿದ್ದನು. ಆದರೂ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎನ್ನುವ ವಿದ್ಯೆ ಕಲಿಸಲಿಕ್ಕೆ ಒಬ್ಬ ಗುರುವು ಬೇಕೆಂದು ಉಪನಯನ ಮಾಡಿಸಿ ಒಬ್ಬ ಗುರುವಿನ ಆಶ್ರಮಕ್ಕೆ ಕಳಿಸಿಕೊಟ್ಟರು. ಬಾಲಕ ಬಹಳ ಚುರುಕಾಗಿದ್ದರಿಂದ ಸ್ವಲ್ಪ ಕಾಲದಲ್ಲಿಯೇ ೧೮ ಪುರಾಣಗಳು ಮಂತ್ರ, ತಂತ್ರ, ವ್ರತ, ಇತಿಹಾಸ, ಅಥರ್ವಣ ಇದರಂತೆ ವಿದ್ಯೆ ಕಲಿತರು. ಅಷ್ಟೇ ಅಲ್ಲದೆ ೬೪ ಕಲೆಗಳಲ್ಲಿನಿಷ್ಣಾತರಾದರು. ಗುರುಗಳ ಹತ್ತಿರ ಚಾಂಗದೇವರು ಗುರುಗಳೇ ಇನ್ನೇನು ಕಲಿಯುದಿದೆ? ಎಂದು ಕೇಳಿದರು. ಗುರುಗಳು ಎಲೈ ಕುಶಲಮತಿಯೇ ಯೋಗಾಭ್ಯಾಸದ ಹೊರತಾಗಿ ನಿನಗೆ ಕಲಿಯುವುದು ಯಾವುದು ಉಳಿದಿಲ್ಲ ಎಂದರು. ಹಾಗಾದರೆ ಯೋಗಾಭ್ಯಾಸವನ್ನು ಕಲಿಸಿರಿ ಎಂದು ಭಿನ್ನವಿಸಿಕೊಂಡರು. ಯೋಗಾಭ್ಯಾಸವನ್ನು ಕಲಿಸುವ ಗುರುಗಳು ಕಾಶೀ ಕ್ಷೇತ್ರದಲ್ಲಿ ಇದ್ದಾರೆಂದು ತಿಳಿದರು. ಚಾಂಗದೇವರು ಗುರುಗಳ ಆಶೀರ್ವಾದಪಡೆದು, ತಂದೆ ತಾಯಿಗಳ ಆಶೀರ್ವಾದ ಪಡೆದು ಕಾಶಿಗೆ ನಿರ್ಗಮನ ಮಾಡಿ ಮಹಾಯೋಗಿಯಾದರು.

**ಕಾಶಿಗೆ ನಿರ್ಗಮಿಸಿ ಮಹಾಯೋಗಿಯಾದುದು**

ಹಾಲು ಬೆಣ್ಣೆಗಳ ನೇಮವನ್ನೇ ಬಿಟ್ಟು ಅಂಬಲಿಯನೇಮ ಹಿಡಿಯದವನೇ ನಿಜವಾದ ಯೋಗಿ ಎಂಬುದು ಶರಣರ ಮತ. ಸೌಧ ಸುಪ್ಪತ್ತಿಗೆ ಬಿಟ್ಟು ಶೋಕಿಯ ಭೋಜನಬಿಟ್ಟು, ಬೆಲೆಯುಳ್ಳ ಒಡವೆ ವಸ್ತುಗಲನ್ನು ನಿರಾಕರಿಸಿ ಬಂದವನಂತೆ ಜೀವನ ನಡೆಸುವವನೇ ಸಮಾಜವಾದಿಯೆಂಬ ಗಾಂಧೀಜಿಯ ಹೇಳಿಕೆಗೂ ಶರಣರ ಅಭಿಪ್ರಾಯಕ್ಕೂ ನಿಕಟವಾದ ಸತ್ಯವಿದೆ. ಹಾಗೆಯೇ ಚಾಂಗದೇವನು ಹೆಚ್ಚಿನ ಯೋಗಾಭ್ಯಾಸ ಕಲಿಸುವ ಗುರುಗಳು ಎಲ್ಲಿರುವರು ಎನ್ನುತ್ತಾನೆ. ಅದಕ್ಕೆ ಅವರು "ಇಲ್ಲಿ ಒಬ್ಬ ದೊಡ್ಡ ಯೋಗಿಯು ಇರುವನೆಂದು ಕೇಳಿರುತ್ತೇವೆ. ಆದರೆ ಆ ಗವಿಯಲ್ಲಿ ಹೋದ ಮನುಷ್ಯ ಪುನಃ ತಿರುಗಿ ಬರುವುದಿಲ್ಲ ಎಂದು ಹೇಳುತ್ತಾರೆ. ಕಾರಣವೇನೆಂದರೆ ಅಲ್ಲಿ ದೊಡ್ಡ ಹುಲಿಗ್ಗಳು, ಸರ್ಪಗಳು ಇರುತ್ತವೆ. ಆದ್ದರಿಂದ ತಾವು ಸಹ ಹೋಗಬೇಡಿರಿ" ಎಂದರು. ಆದರೆ ಅವರು ಯಾರ ಮಾತನ್ನು ಕೇಳದೇ ಯೋಗಶಕ್ತಿಯನ್ನು ಪಡೆಯಲು ಆ ಗವಿಯನ್ನು ಹೊಕ್ಕರು. ಆ ಗವಿಯೊಳಗೆ ಯೋಗಿರಾಜ ಎಂಬ ಗುರುಗಳಿದ್ದರು. ಅವರಿಗೆ ಆಶ್ಚರ್ಯವಾಗುತ್ತದೆಯಂತೆ. ಆ ಮೇಲೆ ಆತನ ಬುದ್ಧಿಮತ್ತೆಯನ್ನು ನೋಡಿ ಅವರಿಗೆ ಸರ್ವಸಿದ್ಧಿಗಳು ಕೈವಶವಾಗುವಂತೆ ಹೇಳಿ ಕೊಡುತ್ತಾರೆ. ಅದರಂತೆ ಚಾಂಗದೇವರು ಸತತ ೭ವರ್ಷಗಳವರೆಗೆ ಗುರುಗಳ ಹತ್ತಿರ ಇದ್ದು ಯೋಗಾಭ್ಯಾಸದಲ್ಲಿ ನಿಪುಣನಾದನು. ಆಮೇಲೆ ಆ ಗವಿಯಿಂದ ಹೊರಗೆ ಬಂದು ಕಾಶಿಯ ಮಣಿಕರ್ಣಿಕಾ ಘಾಟದ ಮೇಲೆ ವಾಸಿಸತೊಡಗುತ್ತಾರೆ. ಅವರನ್ನು ಕಾಶಿಯ ನಿವಾಸಿಗಳು ಗುರುತಿಸುತ್ತಾ. ಆ ಒಂದು ಯೋಗ ಸಿದ್ಧಿ.ಇಂದ ಚಾಂಗದೇವರ ಶರೀರದಿಂದ ದಿವ್ಯ ತೇಜಸ್ಸು ಸ್ಫುರಿಸುತ್ತಿರುತ್ತದೆ. ಆಗ ಚಾಂಗದೇವರ ಕೀರ್ತಿಯು ನಾಲ್ಕೂ ದಿಕ್ಕಿಗೂ ಪಸರಿಸುತ್ತದೆ. ಅದೂ ಇಂದಿಗೂ

ಪಸರಿಸುತ್ತಲೇ ಇದೆ ಎಂದು ಹೇಳಬಹುದು. ಅನೇಕ ಜನರು ಚಾಂಗದೇವರ ಶಿಷ್ಯರಾಗತೊಡಗಿದರು. ಅಗ್ನಿಸ್ತಂಭನ, ಯಮನಿಯಮಾದಿ ಯೋಗಸಾಧನ ಅಣಿಮಾ ಗಾರುಡಿ ಪರಕಾಯ ಪ್ರವೇಶ, ಜಲಸ್ತಂಭನ ಆಕಾಶಗಮನ, ಇವೇ ಮೊದಲಾದ ಅಷ್ಟಾಂಗಗಳನ್ನು ಅಷ್ಟಸಿದ್ಧಿಗಲನ್ನು ತಪಃಶಕ್ತಿಯಿಂದ ವಶಪಡಿಸಿಕೊಂಡಿದ್ದರಿಂದ ಅಸಾಮಾನ್ಯ ಸಿದ್ಧರೆನಿಸಿಕೊಂಡರು. ಯೋಗರಹಸ್ಯವನನು ಗುರುಮುಖೇನ ಕಲಿತು ಆತ್ಮಸಾಧನೆಗೆ ಬಳಸುವ ಎಲ್ಲಾ ಜ್ಞಾನ ಅನುಭವಗಲನ್ನು ರಹಸ್ಯವಾಗಿಡಲು ಬಯಸುತ್ತವೆ. ಕೊಡೆಕಲ್ ಬಸವಣ್ಣ ಇದನ್ನು ಹೀಗೆ ಹೇಳುತ್ತಾನೆ. "ಗುಪ್ತದಾ ನುಡಿಯಿದು ಗುಪ್ತದಲಿರಬೇಕು ಒಪ್ಪಿದವರ ಮುಂದೆ ನುಡಿಯಬೇಡ" ಇದು ಗುಟ್ಟನ್ನು ಗುಟ್ಟಾಗೇ ಇಡಬೇಕು ಎಂಬ ಸೂಫಿಗಳ ಹೇಳಿಕೆಯನ್ನೇ ನೆನಪಿಸುತ್ತದೆ"(ಚೇಳಗುರಿಕೆ ಎರ್ರಿತಾತ, ಪಿಎಚ್.ಡಿ.ಪ್ರಬಂಧ, ಪುಟ ಸಂಖ್ಯೆ.೩೪, ಎಚ್.ಮಲ್ಲಿಕಾರ್ಜುನ).

ಧರ್ಮ, ಅರ್ಥ, ಕಾಮ, ಮೋಕ್ಷ ಜಯಿಸಿ ಅದರ ಸಿದ್ದಿಗೆ ತಮ್ಮನ್ನು ಸಂಪೂರ್ಣ ಸಮರ್ಪಿಸಿಕೊಂಡು ತನ್ನದೆಲ್ಲವನ್ನು ಬಿಟ್ಟು ಸಿದ್ದಿಯೆಡೆಗೆ ಆಧ್ಯಾತ್ಮಿಕ ದಿಗಂತದೆಡೆಗೆ ಸಾಗಲು ಯಾವ ವರ್ಗದ, ಯಾವ ವಯಸ್ಸಿನ ಅಂತರವಿಲ್ಲವೆಂಬಂತೆ, ಚಾಂಗದೇವನು ಪಂಢರಪುರಕ್ಕೆ ದೇವರ ಸಾಕ್ಷಾತ್ಕಾರಕ್ಕಾಗಿ ಹೊರಟರು.

**ಪಂಢರಪುರದಲ್ಲಿ ದೇವರ ಸಾಕ್ಷಾತ್ಕಾರ**

ಸಂಪೂರ್ಣ ಸಮಾಧಿ ಸಿದ್ಧಿಯ ಸಾಕ್ಷಾತ್ಕಾರ ಪಡೆಯಲು ಗುರುವಿನ ಅಪ್ಪಣೆಯಂತೆ ತಮ್ಮ ಶಿಷ್ಯರೊಡಗೂಡಿ ಮನಬಂದ ಕಡೆ ಸಂಚರಿಸುತ್ತಾ ದಿವ್ಯದರ್ಶನದ ಕಡೆಗೆ ನಡೆದರು. "ದೇಶಸುತ್ತು ಕೋಶ ಓದು" ಎಂಬ ನಾಣ್ನುಡಿ ಇಹ ಪರಗಳ ಪಾರಮಾರ್ಥಿಕತೆಯನ್ನು ಪಡೆಯಲು ಮುಂದಾದರು. ಹೀಗೆ ಚಾಂಗದೇವರು ಕಾಶಿಯಿಂದ ಹೊರಟು ಅನೇಕ ಕ್ಷೇತ್ರಗಳನ್ನು ನೋಡುತ್ತ ತಮ್ಮ ಜನ್ಮಸ್ಥಳ ಸುಂದರಪಕ್ಕೆ ಬಂದರು. ಅಲ್ಲಿ ಕೆಲವು ದಿನಗಳವರೆಗೆ ಇದ್ದು ದಕ್ಷಿಣಕ್ಕೆ ಹೊರಟರು. ಮಹಾತೇಜಸ್ವಿಯಾದ ಇವರು ದಕ್ಷಿಣಕ್ಕೆ ಹೊರಟರು. ಮಹಾತೇಜಸ್ವಿಯಾದ ಇವರಿಗೆ  ವಾಕ್ ಸಿದ್ಧಿಯಾಗಿತ್ತು. ದಾರಿಯಲ್ಲಿ ಅಸಂಖ್ಯ ಭಕ್ತರಿಗೆ ಉಪದೇಶಿಸುತ್ತ, ಆಶೀರ್ವದಿಸುತ್ತ ಪಂಢರಪುರಕ್ಕೆ ಬಂದರು. ಅಲ್ಲಿ ಚಾಂಗದೇವರು ಅನ್ನನೀರುಗಳಿಲ್ಲದೆ ಕೇವಲ ಹವೆಯ ಮೇಲೆ ಇದ್ದು, ಪರಮಾತ್ಮನನ್ನು ಧ್ಯಾನಿಸುತ್ತ ಕಠಿಣ ತಪಸ್ಸಿನಲ್ಲಿ ಮಗ್ನರಾದರು. ಈ ತರುಣ ಯೋಗಿಯ ತಪಸನ್ನು ನೋಡಿ ಋಷಿಮುನಿಗಳಿಗೆ ಆಶ್ಚರ್ಯವಾಯಿತು. ಈ ಹಠ ಯೋಗಿಯು ಒಂದೆ ಕಾಲಿನ ಮೇಲೆ ನಿಂತು ತಪಸ್ಸು ಮಾಡುತ್ತಿದ್ದರು. ಇವರ ತಪೋಭಂಗ ಮಾಡಲು ಅನೇಕ ತೊಂದರೆಗಳು ಉಂಟಾದವು. ಚಾಂಗದೇವರು ಯಾವುದನ್ನು ಲೆಕ್ಕಿಸದೆ ಯೋಗದಲ್ಲಿ ತಲ್ಲೀನರಾಗಿ ಪರಬ್ರಹ್ಮನಾದ ಪಂಚಾನನನ್ನು ಅನನ್ಯವಾಗಿ ಸ್ತುತಿಸಿ ತಮಗೆ ದರ್ಶನವೀಯಬೇಕೆಂದು ಪ್ರಾರ್ಥಿಸಿದರು. ಇವರ ಭಕ್ತಿ ತಪಸ್ಸಿಗೆ ಮೆಚ್ಚಿ ವಿಶ್ವಕರ್ತನಾದ ವಿರಾಟ್ ವಿಶ್ವಕರ್ಮನು ಪಂಚಮುಖ ದಶಮುಖಗಲಿಂದ ದಶ ಆಯುಧಗಳನ್ನು ಧರಿಸಿ ದಿವ್ಯಸ್ವರೂಪನಾಗಿ ಪ್ರಕಟಗೊಂಡನು. ಚಾಂಗದೇವನು ವಿಶ್ವಜ್ಞನನ್ನು ನೋಡಿ ಸಂತುಷ್ಟನಾದನು. ಇಂತಹ ಅಗಾಧವಾದ ಶಕ್ತಿಯನ್ನು ಚಾಂಗದೇವರು ಪಡೆದಿದ್ದರು.

ಮಹಾತ್ಮ ಚಾಂಗದೇವರಿಗೆ ಪಂಢರಪುರದಲ್ಲಿ ದೈವೀ ಸಾಕ್ಷಾತ್ಕಾರವಾದ ಮೇಲೆ ಅಮಾನುಷ ದೈವೀ ಪುರುಷರೆನಿಸಿಕೊಂಡರು. ಅವರು ಅನೇಕ ಪವಿತ್ರ ತೀರ್ಥಸ್ಥಾನಗಳನ್ನು ಸಂದರ್ಶಿಸಿ ಸುಂದರಪುರಕ್ಕೆ ಬಂದು ಅಲ್ಲಿ ಯೋಗದಲ್ಲಿ ಮಗ್ನರಾಗಿರುತ್ತಿದ್ದರು.

## ಮೃತ್ಯುವನ್ನು ಜಯಿಸಿ ಮೃತ್ಯುಂಜಯರಾದರು

ಋದ್ಧಿ ಸಿದ್ಧಿಯ ಬಲದಿಂದ ಚಾಂಗದೇವರು ಎಲ್ಲಿ ಬೇಕಾದಲ್ಲಿ ಮಾಯವಾಗುತ್ತಿದ್ದರು. ಮತ್ತೆ ಪ್ರಕಟವಾಗುತ್ತಿದ್ದರು. ತಮಗೆ ಯಾವುದಾದರೂ ಸ್ಥಳ ಇಷ್ಟವಾಯಿತೆಂದರೆ ಅದೇ ಸ್ಥಳದಲ್ಲಿ ಕುಳಿತು ಯೋಗ ಸಮಾಧಿಯಲ್ಲಿ ಮಗ್ನರಾಗುತ್ತಿದ್ದರು. ಆಕಾಸಗಮನ ವಿದ್ಯೆಯಿಂದ ಗಂಧರ್ವರಂತೆ ಆಕಾಶದಲ್ಲಿ ವಾಯುವೇಗದಿಂದ ಸಂಚರಿಸುತ್ತಿದ್ದರು. ಅವರಿಗೆ ನೂರು ವರ್ಷಗಳು ತುಂಬಿದ್ದವು. ಅವರಿಗೆ ಅವಧಿಯ ಜ್ಞಾನವಾಗಿ ಮೃತ್ಯುಸಮೀಪಿಸಿತೆಂದು ಅರಿವಾಗಿ ಕೂಡಲೇ ಅವರು ಸಮಾಧಿಸ್ಥರಾಗಿ ಪರಕಾಯ ಪ್ರವೇಶ ಮಾಡುತ್ತಿದ್ದರು. ಕಾಲನು ಆಗಮಿಸಿ ನಿರ್ಜೀವವಾದ ಚಾಂಗದೇವರ ಶರೀರವನ್ನು ನೋಡಿ ಈತನು ತನ್ನ ಕಾಲಜ್ಞಾನದ ಅರಿವಿನಿಂದಾಗಿ ಪ್ರಾಣವನ್ನು ಬಿಟ್ಟಿದ್ದಾನೆ. ನನ್ನ ಕೆಲಸವು ಮುಗಿಯಿತು ಎಂದು ನುಡಿದು ಹೊರಟು ಹೋಗುತ್ತಿದ್ದನು. ತಮ್ಮ ಮೊದಲಿನ ಶರೀರದಲ್ಲಿ ಅದನ್ನು ಪ್ರವೇಶಗೊಳಿಸಿ ಸಜೀವರಾಗಿ ಎದ್ದು ಕುಳಿತುಕೊಳ್ಳುತ್ತಿದ್ದರು. ಹೀಗೆ ಮೃತ್ಯುವನ್ನು ಗೆದ್ದು ಮೃತ್ಯುಂಜಯರಾದರು. ಈ ಕೌತುಕದ ಘಟನೆಯ ಸುದ್ದಿಯು ಎಲ್ಲ ಕಡೆಗೆ ಹಬ್ಬಿತು.

ಹೀಗೆ ಚಾಂಗದೇವರು ಪರಕಾಯ ಪ್ರವೇಶ ವಿದ್ಯೆ ಹಾಗೂ ಯೋಗಸಾಧನೆಗಳಿಂದ ಮೃತ್ಯುವು ಬಂದಾಗಲೆಲ್ಲ ಮೊದಲೆ ತಿಳಿದುಕೊಂಡು ಅದನ್ನು ತಪ್ಪಿಸಿಕೊಳ್ಳುತ್ತಿದ್ದರು. ಅವರಿಗೆ ಇದೊಂದು ಅದ್ಭುತ ಪ್ರಯೋಗವೆಂದೆನ್ನಿಸುತ್ತದೆ. ಚಾಂಗದೇವರು ೧೪೦೦ ವರ್ಷಗಳವರೆಗೆ ಜೀವಿಸಿದರೆಂದು ತಿಳಿದುಬರುತ್ತದೆ. ಇಷ್ಟೂ ದೀರ್ಘ ಅವಧಿಯವರೆಗೆ ಭಾರತದ ಯಾವ ಯೋಗಿಯೂ ಬದುಕಿಲ್ಲ. ಕ್ರಿ.ಶ.೧೧-೧೨ನೇ ಶತಮಾನದಲ್ಲಿ ಜೀವಿಸಿದ್ದ ಪ್ರಖ್ಯಾತ ರಾಜಯೋಗಿ ರೇವಣಸಿದ್ಧರೂ ಸಹ ೭೦೦ ವರ್ಷಗಳವರೆಗೆ ಜೀವಿಸಿದ್ದರು. ಈ ವಿಷಯವನ್ನು ಮಹಾಕವಿ ರಾಘವಾಂಕನು ತನ್ನ 'ಸಿದ್ಧರಾಮಚರಿತೆ'ಯಲ್ಲಿ ಹೇಳಿದ್ದಾನೆ. ಕಳೆದ ಶತಮಾನದವರೆಗೂ ಬಾಳಿದ ಮಹಾತ್ಮರುಂಟು. ನವಲುಗುಂದದ ನಾಗಲಿಂಗ ಸ್ವಾಮಿಗಳಿಗೆ ಭೇಟಿಯಾದ ಬೂದಿಸ್ವಾಮಿ ಎಂಬ ಯೋಗಿಯು ೬-೭ನೂರು ವರ್ಷಗಳವರೆಗೆ ಜೀವಿಸಿದ್ದರು ಎಂದು ಪ್ರತೀತ ಇದೆ. ಶ್ರೀನಾಗಲಿಂಗರು ಛೀಮಾರಿ ಹಾಕಲು ಆತನು ಪ್ರಾಣವನ್ನು ಬಿಟ್ಟನು. ಈ ಎಲ್ಲ ಯೋಗಿಗಳು ಯೋಗ ಸಾಧನೆಯಿಂದಲೇ ದೀರ್ಘ ಜೀವಿಗಳಾದರು. ಅದರಂತೆ ಅಪಾರಯೋಗ ಶಕ್ತಿಯನ್ನು ಪಡೆದ ಶ್ರೀ ಚಾಂಗದೇವರಿಗೆ ೧೪೦೦ವರ್ಷ ಬಾಳುವುದು ಕಠಿಣ ವಿಷಯವಾಗಿರಲಿಲ್ಲ(ರಾಜಾಬಾಗಸವಾರ ಯೋಗಿ ಚಕ್ರವರ್ತಿ ಚಾಂಗದೇವ, ಪುಟಸಂಖ್ಯೆ ೧೩-೧೪, ವ್ಹಿ.ಜಿ.ದೀಕ್ಷಿತ).

ಭಾರತೀಯ ಪುರಾಣ ಆಗಮಗಳು, ವೇದ ಉಪನಿಷತ್ತುಗಳು ಮುಂತಾದ ಧಾರ್ಮಿಕ ಸಾಹಿತ್ಯ ಕೃತಿಗಳಲ್ಲಿ ಗುರುಶಿಷ್ಯರ ಬಗೆಗಿನ ಹಲವಾರು ವಿರೋಧವಾದ ಎನ್ನುವದಕ್ಕಿಂತಲೂ ಪರವಾದ ಚಿಂತನೆಗಳು ನಡೆದಿರುವುದೇ ಹೆಚ್ಚು. ಪುರಾತನ ಕಾಲದಿಂದಲೂ ಅದಕ್ಕೆ ವಿಶೇಷವಾದ ಮಹತ್ವವಿದೆ. ಗುರು ಎಂದರೆ ಯಾರು? ಆತನ ವ್ಯಕ್ತಿತ್ವ ವಿಶಿಷ್ಟತೆಗಳೇನು? ಮುಂತಾದ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಬದಲು ಹುರಿದುಂಬಿಸಬಲ್ಲ, ಪ್ರೇರಕ ವ್ಯಕ್ತಿಯಾಗುತ್ತಾನೆ.

## ಕ್ಷತ್ರೋಜಿರಾವ್ ಬರ್ಗೆ ಶಿಷ್ಯರಾದುದು

ಗುರುವಿನ ಸ್ಥಾನದ ಬಗೆಗೆ ಅಲ್ಲಮಪ್ರಭುವಿನ ವಚನ ಈ ರೀತಿಯಾಗಿದೆ. "ಕೃತಯುಗದಲ್ಲಿ ಶ್ರೀಗುರು

ಬೆಳ್ಳಿಯ ಕಡಗವನ್ನು ಕೈಯಲ್ಲಿ ಹಾಕಿ, ಐಯ್ದು ಗುರುವಾರ ಉಪವಾಸವಿದ್ದು ದೇವರ ಸೇವೆ ಮಾಡಿದರೆ, ರೋಗವಿಲ್ಲದಾಗುವುದು ಎಂದು ಹೇಳಿದಂತೆ ನಾನು ಮಾಡಲು ಮಧುಮೇಹವು ವಾಸಿಯಾಯಿತು'' ಎಂದನು. ರಾಜನು ಪರಿವಾರದೊಂದಿಗೆ ಬೆಣ್ಣೆ ಹಳ್ಳದಲ್ಲಿ ಮಿಂದು, ದೀಡ ನಮಸ್ಕಾರ ಹಾಕುತ್ತಾ ಗುಡಿಗೆ ಬಂದು ಸಕ್ಕರೆ, ಊದುಬತ್ತಿ ಅರ್ಪಿಸಿ ದೇವರಿಗೆ ವಂದಿಸಿದನು. ಐದು ಗುರುವಾರ ಉಪವಾಸ ಇದ್ದು ಚಾಂಗದೇವರನ್ನು ಪ್ರಾರ್ಥಿಸಿ, ಸೇವೆಗೈಯ್ಯಲು ರಾಜನು ಮಹಾರೋಗದಿಂದ ಮುಕ್ತನಾಗಿ ಮೊದಲಿನಂತೆ ಸುಂದರ ಶರೀರವುಳ್ಳವನಾದನು. ರಾಜನು ಕ್ಷೇತ್ರದಲ್ಲಿ ಜನರಿಗೆ ಅರ್ಚಕರಾದ ಬರ್ಗೆಯವರಿಗೆ ಇನಾಮಾಗಿ ಹಾಕಿಕೊಟ್ಟನು. ಬರ್ಗೆ ವಂಶಿಕರು ಪ್ರತಿವರ್ಷ ಆನೆಗುಂದಿಗೆ ಹೋಗಿ ಹೊಲದ ಲಾವಣಿ ಉತ್ಪನ್ನ ತರುತ್ತಿರುವರು. ಚಾಂಗದೇವರು ತಮ್ಮ ಸಿದ್ಧಿಯಿಂದ ಈ ಭೂಮಿಯನ್ನು ಪುನೀತಗೊಳಿಸಿರುವುದರಿಂದ ಇಂಥ ಕೌತುಕಗಳು ನಡೆಯುತ್ತವೆ.

### ಸಂತಾನ ಕರುಣಿಸಿದುದು

ಕ್ರಿ.ಶ.೧೯೧೮ರಲ್ಲಿ ವಿಜಾಪುರ ಜಿಲ್ಲೆಯ ಯರಗಲ್ಲ ಗ್ರಾಮದಲ್ಲಿ ಕುರುಬ ಕುಲದ ಬಸಪ್ಪ ಯರಗೆಲ್ಲ ಎಂಬ ಸದ್ಗೃಹಸ್ಥನಿದ್ದನು. ಅವನಿಗೆ ಬಹುದಿನಗಳಿಂದ ಮಕ್ಕಳಾಗಿರಲಿಲ್ಲ. ಆತನು ದೇವರ ಮಹಿಮೆ ಕೇಳಿ ಯಮನೂರಿಗೆ ಬಂದು ದರ್ಶನ ಪಡೆದನು. ತನ್ನ ಇಚ್ಛೆಯನ್ನು ಪೂಜಾರಿಗಳಿಗೆ ಹೇಳಲು ಅವರು ಲಾಡಿಕಟ್ಟಿಕೊಂಡು ಪ್ರಸಾದ ಸ್ವೀಕರಿಸಿ ಭಕ್ತಿಯಿಂದ ನಡೆದುಕೊಳ್ಳುವಂತೆ ಹೇಳಲು ಅದರಂತೆ ಬಸಪ್ಪನು ಮಾಡಲು ಒಂದು ವರ್ಷದಲ್ಲಿ ಒಂದು ಗಂಡು ಮಗುವಾಯಿತು. ಮಗನಿಗೆ ಯಮನೂರಪ್ಪನೆಂದು ಹೆಸರಿಟ್ಟು, ಯಮನೂರಿಗೆ ಬಂದು ಮಗನ ತೂಕ ಸಕ್ಕರೆ ಹಂಚಿ ನೈವೇಧ್ಯ ನಂದಾದೀಪ ಅರ್ಪಿಸಿ ಮಗನು ವಿದ್ಯಾವಂತನಾಗಲೆಂದು ಬೇಡಿಕೊಂಡು ಊರಿಗೆ ಹೋದನು. ಮಗನು ದೊಡ್ಡವನಾಗಿ ಮುಲ್ಕೀ ಪರೀಕ್ಷೆ ಪಾಸಾಗಿ ವಿಜಾಪುರದಲ್ಲಿ ವಾರದ ಮನೆ ಮಾಡಿ ಊಟಮಾಡಿ ಅಭ್ಯಾಸ ಮಾಡಿ ಮ್ಯಾಟ್ರಿಕ್ ಪರೀಕ್ಷೆಯನ್ನು ಪಾಸಾದನು. ಅವರು ಮುಂದೆ ಎಲ್ಲ ಪರೀಕ್ಷೆಗಳನ್ನು ಪಾಸಾಗಿ ದೊಡ್ಡ ಅಧಿಕಾರಿಗಳಾದರಂತೆ. ಅವರು ತಮ್ಮ ಕುಟುಂಬದೊಂದಿಗೆ ಬಂದು ದೇವರಿಗೆ ನಂದಾದೀಪ, ಸಕ್ಕರೆ ಹಂಚಿದರು.

### ಉಷ್ಣರೋಗ ವಾಸಿಯಾದುದು

ರಾಯಚೂರು ಜಿಲ್ಲೆಯ ಗಂಗಾವತಿಯಲ್ಲಿ ವೆಂಕನಗೌಡ, ಜಂಬನಗೌಡ ಪಾಟೀಲನೆಂಬ ಈಡಿಗರನು ಶೆರೆ-ಸಿಂದಿಯ ಅಂಗಡಿ ನಡೆಸುತ್ತಿದ್ದನು. ಅವನಿಗೆ ಮಧುಮೇಹ ಅಂಟಿಕೊಂಡು ಬೇಕಾದಲ್ಲಿ ತೋರಿಸಿದರೂ ಗುಣವಾಗಲಿಲ್ಲ. ಕ್ರಿ.ಶ.೧೯೨೫ರಲ್ಲಿ ಅದೇ ಊರಿನ ಡಾಕಪ್ಪ ಗವಳಿ ಎಂಬುವನು ಯಮನೂರಿಗೆ ಬಂದು ದೇವರಿಗೆ ಕಾಣಿಕೆಯಿತ್ತು ಅರ್ಚಕರಾದ ಥೊಂಡೋರಾಯರ ಸಲಹೆಯಂತೆ ೫ ದಿನವಿದ್ದು ಬೆಣ್ಣೆಹಳ್ಳದಲ್ಲಿ ಮಿಂದು ಪ್ರಸಾದ ಸ್ವೀಕರಿಸಲು ರೋಗವು ಸ್ವಲ್ಪ ಗುಣವಾಯಿತು. ಆತನು ತನ್ನೂರಿಗೆ ಹೋಗಿ ೫ ಗುರುವಾರ ಉಪವಾಸವಿದ್ದು ಸಂಗಮವರೀ ಕಲ್ಲಿನ ಸಣ್ಣ ಗುಡಕಟ್ಟಿ ಯಮನೂರಿನಿಂದ ತಂದ ಕುದುರೆ, ಪಂಜಾ ಇರಿಸಿ ಪೂಜೆ ಮಾಡಲು ರೋಗವು ಪೂರ್ಣವಾಸಿಯಾಯಿತು. ನಂತರ ಅವನು ಪ್ರತಿವರ್ಷ ಕ್ಷೇತ್ರಕ್ಕೆ ಬಂದು ಅನ್ನ ಸಂತರ್ಪಣೆ ಮಾಡಿಸಲು, ಪುತ್ರ ಭಾಗ್ಯವನ್ನು ಪಡೆದನು. ಮಗನಿಗೆ ರಾಜನಗೌಡ (ಯಮನಪ್ಪ) ಎಂದು

ಆದ್ದರಿಂದ ಈ ಸಾಧ್ವಿಮಣಿಯು ಮಹಾಸತಿಯಾಗಿದ್ದಳೆಂದು ವಿಧಿತವಾಗುವುದು. ಕ್ಷತ್ರೋಜಿಗೆ ರಾಣೋಜಿ ಎಂಬ ಮಗನಿದ್ದನು. ತಂದೆ ಮಕ್ಕಳು ಆ ಪತಿವ್ರತೆಯ ಪೂಜೆ ನಡೆಯಲೆಂದು ಅವರ ಬಳೆ, ಸೀರೆಯ ನೆರಿಗೆಗಳನ್ನು ಸ್ಮಶಾನದಿಂದ ತಂದು ಚಾಂಗದೇವರು ತಪಸ್ಸಿಗೆ ಕೂಡುತ್ತಿದ್ದ ಕಟ್ಟೆಯ ಎದುರಿಗೆ ಸಮಾಧಿ ಮಾಡಿ ತುಳಸೀ ಕಟ್ಟೆ ಕಟ್ಟಿ ವೃಂದಾವನ ಮಾಡಿದರು. ಅದು ಇಂದಿಗೂ ಪೂಜೆಗೊಳ್ಳುತ್ತಿದೆ. ಸ್ತ್ರೀಯರು ವೃಂದಾವನವನ್ನು ಪೂಜಿಸಿ ಇಷ್ಟಾರ್ಥಗಳನ್ನು ಪಡೆಯುವರು.

ತಮ್ಮ ಗುರು, ಪತ್ನಿಯರ ಅಗಲಿಕೆಯಿಂದ ಕ್ಷತ್ರೋಜಿಯವರು ನಿರಾಶರಾಗಿ ಗುರುವನ್ನು ನೆನೆಸುತ್ತ ದೇಹಬಿಟ್ಟರು. ಅವರ ಅಸ್ತಿಬೂದಿಗಳನ್ನು ತಂದು ನರಸೂಬಾಯಿಯವರ ಸಮಾಧಿಯ ಹತ್ತಿರ ಹುಗಿದು ಸಮಾಧಿ ಮಾಡಿದ್ದಾರೆ. ಚಾಂಗದೇವರ ಪರಮಶಿಷ್ಯನ ಆತ್ಮವು ಈ ತಪೋವನದಲ್ಲಿ ಮಹಾಸಿದ್ಧನ ಸೇವೆಗೈದು ಪುಣ್ಯಭೂಮಿಯಲ್ಲಿ ಚಿರನಿದ್ರೆಯಲ್ಲಿ ಲೀನವಾಗಿದೆ. ಗುರುವಿದ್ದರೆ ಚಾಂಗದೇವರಂತೆಯೂ ಶಿಷ್ಯನಿದ್ದರೆ ಕ್ಷತ್ರೋಜಿಯವರಂತೆಯೂ ಇರಬೇಕೆಂದು ಈ ಕ್ಷೇತ್ರವು ಸಾರುತ್ತ ಭಾರತದ ಮೂಲೆ-ಮೂಲೆಗಳಿಂದ ಭಕ್ತರನ್ನು ಆಕರ್ಷಿಸುತ್ತ ಇಂದಿಗೂ ಪ್ರಸಿದ್ಧಿಯನ್ನು ಪಡೆದಿದೆ.

**ಚಾಂಗದೇವರು ನರಸಿಂಹಮೂರ್ತಿಯನ್ನು ಅನುಗ್ರಹಿಸಿದುದು**

ಚಾಂಗದೇವರು ತಾವು ಇರುವಂತಹ ತಪೋವನವನ್ನು ಬಿಟ್ಟು ಉತ್ತರ ಭಾರತದ ಸಂಚಾರಕ್ಕೆ ಹೋಗುತ್ತಾರೆ. ಈ ವಿಷಯವನ್ನು ತಿಳಿದು ಶಿಷ್ಯನಾದ ಕ್ಷತ್ರೋಜಿಯು ಅವರ ಪಾದಗಳನ್ನು ಹಿಡಿದು ನನ್ನನ್ನು ಅಗಲಿ ಹೋಗಬಾರದೆಂದೂ, ಹೋಗವುದಾದರೆ ತನ್ನನ್ನೂ ಕರೆದೊಯ್ಯಬೇಕೆಂದೂ ವಿನಂತಿಸಿ ಅಳತೊಡಗಿದನು. ಯಾವುದೋ ಒಂದು ಶಕ್ತಿಯು ಈ ಸದ್ಗುರು ಮತ್ತು ಕ್ಷತ್ರೋಜಿಯ ನಡುವೆ ಗಾಢವಾದ ಸಂಬಂಧವನ್ನು ಬೆಸೆದಿತ್ತು. ಕರುಣಾಮಶಾಲಿಯಾನು ಸಿದ್ಧಪುರುಷನು ಕ್ಷತ್ರೋಜಿಯನ್ನು ಎಬ್ಬಿಸಿ ಸಂತೈಸಿದನು. ತನ್ನೊಂದಿಗೆ ತಂದಿದ್ದ ಅನೇಕ ಸಾಲಿಗ್ರಾಮ ಶಿಲೆಗಳಲ್ಲಿ(ವಿಷ್ಣು ರೇಖೆಯುಳ್ಳ ಒಂದು ತರದ ಕಲ್ಲು) ಒಂದನ್ನು ತೆಗೆದುಕೊಂಡರು. ಅದೊಂದು ದಿವ್ಯ ಮೂರ್ತಿಯಾಯಿತು. ಜಗದ್ಗುರುವು ತನ್ನ ಕಣ್ಣಿನಿಂದ ಅದರ ಕಡೆಗೆ ದಿಟ್ಟಿಸಿ ನೋಡಿದನು. ಆ ಮೂರ್ತಿಯು ಉಗ್ರವಾಗಿ ತೇಜಃಪುಂಜವಾಯಿತು. ಆ ಮೂರ್ತಿಯನ್ನು ಕ್ಷತ್ರೋಜಿಯವರ ಕೈಯಲ್ಲಿ ಇಟ್ಟು ಪರಬ್ರಹ್ಮಮೂರ್ತಿ ಸ್ವರೂಪದ ಉಗ್ರನರಸಿಂಹ ಮೂರ್ತಿಯನ್ನು ಗುಪ್ತವಾದ ಸ್ಥಳದಲ್ಲಿ ಪ್ರತಿಷ್ಠಾಪಿಸಿ ತ್ರಿಕಾಲದಲ್ಲಿಯೂ ಪೂಜಿಸು ಎಂದು ಹೇಳಿದರು. ಆ ಪ್ರಕಾರ ಕ್ಷತ್ರೋಜಿಯು ಉಗ್ರನರಸಿಂಹ ಮೂರ್ತಿಯನ್ನು ತಂದು ಕಾತಗೂನಿನ ತನ್ನ ಮನೆಯ ದೇವರ ಕೋಣೆಯಲ್ಲಿ ದಿನಾಲು ಭಕ್ತಿಯಿಂದ ಪೂಜಿಸಿ ತನ್ನ ಕಿರುಬೆರಳಿಗೆ ಚೂರಿಯಿಂದ ಗಾಯ ಮಾಡಿಕೊಂಡು ಐದು ಹನಿ ರಕ್ತವನ್ನು ಅರ್ಪಿಸುತ್ತಿದ್ದನು. ನಂತರ ಜಗದ್ಗುರು ಚಾಂಗದೇವರು ಕಾತಗೂನಿನ ಆಶ್ರಮವನ್ನು ಬಿಟ್ಟು ಎಲ್ಲ ಭಕ್ತರಿಗೆ ಆಶೀರ್ವದಿಸಿ ಉತ್ತರಾಭಿಮುಖವಾಗಿ ಹೊರಟು ಹೋದರು. ಹೀಗೆ ಚಾಂಗದೇವರು ಹೋದಲ್ಲೆಲ್ಲಾ ತಮ್ಮ ಮಹಿಮೆಯನ್ನು ತೋರಿದರು.

**ದಿಲ್ಲಿಗೆ ಪ್ರಯಾಣ ಸುಲ್ತಾನನ ಮಗನನ್ನು ಬದುಕಿಸಿದ್ದು**

ದಿಲ್ಲಿಯಲ್ಲಿ ಆಗ ಗುಲಾಮ ವಂಶದ ಸುಲ್ತಾನರು ಆಳುತ್ತಿದ್ದರು. ಸುಲ್ತಾನರ ಪುತ್ರನನ್ನು

ರೋಗಪೀಡಿತನಾಗಿದ್ದನು. ಯಾರಿಂದಲೂ ಗುಣಪಡಿಸಲಾಗರಲಿಲ್ಲ. ಚಾಂಗದೇವರು ಹುಲಿಯನ್ನು ಹತ್ತಿ ಸಂಚರಿಸುತ್ತ ಅಲ್ಲಿಗೆ ಹೋಗಿ ಆತನ ರೋಗವನ್ನು ಗುಣಪಡಿಸಿದರು. ಸುಲ್ತಾನರು ಸಂತುಷ್ಟರಾಗಿ ಚಾಂಗದೇವರನ್ನು ಪೂಜಿಸಿ "ರಾಜಾಬಾಗ ಸವಾರ" ಎಂಬ ಖಿಲ್ಲತ್ತನ್ನು ಘೋಷಿಸಿ ತಾಮ್ರಪಟದಲ್ಲಿ ಬರೆಯಿಸಿ ತಮ್ಮ ಮೊಹರು ಹಾಕಿ ಕೊಟ್ಟರು. ಅಂದಿನಿಂದ ಚಾಂಗದೇವರ ಹೆಸರಿನ ಹಿಂದೆ "ರಾಜಾಬಾಗ ಸವಾರ" ಎಂಬ ಬಿರುದನ್ನು ಶಿಷ್ಯರು ನಾಡಿನಾದ್ಯಂತ ಸಾರತೊಡಗಿದರು.

**ಆಳಂದಿಗೆ ಪ್ರಯಾಣ, ಜ್ಞಾನೇಶ್ವರರ ಭೇಟಿ**

ಚಾಂಗದೇವರು ಭಾರತದ ಅನೇಕ ಕ್ಷೇತ್ರಗಳನ್ನು ಸಂದರ್ಶಿಸಿದರು. ತಮಗೆ ಉಪದೇಶಿಸುವ ಗುರು ಯಾರೂ ಇಲ್ಲವೆಂಬ ಅಹಂಕಾರ ಅವರಲ್ಲಿ ಉದಿಸಿತು. ವಯಸ್ಸಿನಲ್ಲಿ ಕಿರಿಯರಾದರೂ ಜ್ಞಾನದಲ್ಲಿ ಹಿರಿಯರಾದ ಜ್ಞಾನೇಶ್ವರರ ಹಿರಿಮೆಯನ್ನು ಕೇಳಿ ಚಾಂಗದೇವರು ಹುಲಿಯ ಸವಾರಿ ಮಾಡಿ ಆಳಂದಿಗೆ ಅವರ ದರ್ಶನಕ್ಕೆ ಹೋದರು.

ಜ್ಞಾನದೇವರು ಸಂತಕವಿಗಳು ಇವರು ತಾವು ಕುಳಿತ ಗೋಡೆಯನ್ನು ನಡೆಸುತ್ತ ಎದುರುಗೊಂಡರು. ತಾವು ಸಜೀವ ಪ್ರಾಣಿಯನ್ನು ನಡೆಸಿದರೆ ಜ್ಞಾನದೇವರು ನಿರ್ಜೀವ ಗೋಡೆಯನ್ನು ನಡೆಸುತ್ತಿರುವುದನ್ನು ಕಂಡು ಅಹಂಕಾರವಳಿದು, 'ಇವರೇ ನನ್ನ ಸದ್ಗುರು'ವೆಂದು ಚಾಂಗದೇವರು ಅವರ ಪಾದಕ್ಕೆರಗಿದರು. ಜ್ಞಾನೇಶ್ವರರು ಅವರಿಗೆ ಅದ್ವೈತಾಭವದ ರಹಸ್ಯವನ್ನು ೬೫ ಮರಾಠಿ ಪದ್ಯಗಳ ಮೂಲಕ ಉಪದೇಶಿಸಿದರು.

**ಸಜೀವ ಸಮಾಧಿ**

ನಂತರ ಅಹಮ್ಮದನಗರ ಜಿಲ್ಲೆಯ ನರ್ಮದಾ ನದಿ ತೀರದಲ್ಲಿರುವ ಪುಣತಾಂಬೆ ಗ್ರಾಮಕ್ಕೆ ಬಂದರು. ತಮ್ಮ ಅವತಾರ ಸಮಾಪ್ತಿಯಾಗುವುದೆಂದು ತಿಳಿದು ಕ್ರಿ.ಶ.೧೩೩೮ರಲ್ಲಿ ಶಿಷ್ಯರನ್ನು ಕರೆಯಿಸಿ ಕೊನೆಯ ದರ್ಶನವಿತ್ತು ಜೀವಂತ ಸಮಾಧಿ ಹೊಂದಿದರು. ಕ್ಷತ್ರೋಜಿರಾಯರು ಗುರುವಿನ ದರ್ಶನಪಡೆದು ಪುಣತಾಂಬೆಯಿಂದ ಮರಳಿ ಯಮನೂರಿಗೆ ಬಂದು ಚಾಂಗದೇವರ ಆರಾಧನೆ, ಭಕ್ತೋದ್ಧಾರ ಕಾರ್ಯ ಮಾಡುತ್ತ ನಿಧನರಾದರು. ಅವರಿಗಿಂತ ಮೊದಲೇ ಸತಿ ನರಸೂಬಾಯಿಯವರು ನಿಧರಾಗಿದ್ದರು. ಇಬ್ಬರ ಸಮಾಧಿಗಳು ಚಾಂಗದೇವರು ತಪಸ್ಸಿಗೆ ಕುಳಿತಿದ್ದ ಕಟ್ಟೆಯ ಎದುರುಗಡೆ ಇದ್ದು ಅವು ಇಂದಿಗೂ ಪೂಜಿಸಲ್ಪಡುತ್ತವೆ. ಚಾಂಗದೇವರಿತ್ತ ತ್ರಿಶೂಲ, ದಂಡೆ, ಡಮರು, ಎಡಮುರಿಗೆ ಬೆತ್ತಗಳನ್ನು ಗದ್ದುಗೆಯ ಮೇಲಿಟ್ಟು ಯಮನೂರಿನಲ್ಲಿ ಕ್ಷತ್ರೋಜಿರಾವ ಬರ್ಗೆ ವಂಶಸ್ಥರು ಇಂದಿಗೂ ಪೂಜಿಸುತ್ತಲಿದ್ದಾರೆ.

**೬.೨. ಪವಾಡ ಪದದ ಅರ್ಥ**

ಜನಪದ ಧರ್ಮ, ಅನುಕರಣೆ ಮತ್ತು ಆಚರಣೆಗಳಿಂದ ಹರಿದು ಬಂದುದಾಗಿದೆ. ಅತಿಮಾನುಷ ಕಲ್ಪನೆ, ಅಲೌಕಿಕ ಜೀವಿಗಳ ಆರಾಧನೆ ಹಾಗೂ ಅನೇಕ ಬಗೆಯ ಧಾರ್ಮಿಕ ನಂಬಿಕೆಗಳಿಂದ ಕೂಡಿದೆ. ಧರ್ಮದಲ್ಲಿ ಕಂಡುಬರುವ ಆಚಾರ-ವಿಚಾರಗಳು, ನಡಾವಳಿಗಳು, ನಂಬಿಕೆಗಳು, ಕಲೆಗಳು ಮತ್ತು ಹುಟ್ಟುಸಾವುಗಳ ಮಧ್ಯೆ ಅನುಸರಿಸಲೇಬೇಕಾದ ಸಂಪ್ರದಾಯಗಳು, ಜನರ ಜೀವನ ವಿಧಾನ ಮತ್ತು ಅವರ ಮನೋದೃಷ್ಟಿಯನ್ನು ಪ್ರತಿನಿಧಿಸುತ್ತವೆ (ಜಾನಪದ ಕೈಪಿಡಿ, ಪುಟ ಸಂಖ್ಯೆ.೧೪೫). ಜನಪದರು ಧರ್ಮವನ್ನು

ಪರಿಪಾಲಿಸುತ್ತ ಬಂದರೂ ಅದರ ಧ್ಯೇಯೋದ್ದೇಶಗಳ ಅರಿವು ಮಾತ್ರ ಇರುವುದಿಲ್ಲ. ಆದರೆ ತಮ್ಮನ್ನು ಕಾಯುವ ಅದ್ಭುತವಾದ ಒಂದು ಶಕ್ತಿ ಇದೆ ಎಂದು ನಂಬಿರುತ್ತಾರೆ. ಅದಕ್ಕಾಗಿ ಪ್ರಕೃತಿಯಲ್ಲಿ ದೈವತ್ವವನ್ನು ಕಾಣುತ್ತಾರೆ. ತಮಗೇನಾದರು ಕಾಯಿಲೆ ಕಸಾಲೆ ತೊಂದರೆಗಳು ಬಂದರೆ ಅದಕ್ಕೆ ಕಾರಣ ಆ ಪ್ರದೇಶದಲ್ಲಿ ವಾಸಿಸುವ ಒಡೆಯನೆ ಕಾರಣ ಎಂದು ನಂಬುತ್ತಾರೆ.

ಇಷ್ಟೇ ಅಲ್ಲದೆ, ಆಲ, ಬೇವು, ಅಶ್ವತ್ಥ ಹಾಲೆ, ತೆಂಗು, ತುಳಸಿ ಮುಂತಾದ ಸಸ್ಯಗಳನ್ನು ಪೂಜಿಸುವುದರಿಂದ ತಮ್ಮ ಇಷ್ಟಾರ್ಥ ಸಿದ್ಧಿಸುತ್ತದೆ ಎಂದು ನಂಬಿರುತ್ತಿದ್ದರು. ಆದ್ದರಿಂದ ಆ ಸಸ್ಯಗಳನ್ನು ಕಡಿಯದೆ ಅವುಗಳಿಗೆ ಕಟ್ಟೆಯನ್ನು ಕಟ್ಟಿ ಪೂಜಿಸುವ ಸಂಪ್ರದಾಯ ಇವತ್ತಿಗೂ ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಈ ಆಚರಣೆಗಳಲ್ಲಿ ಜನಪದ ಧರ್ಮದ ಅಸ್ತಿತ್ವವನ್ನು ಕಾಣಬಹುದಾಗಿದೆ.

ಇನ್ನು ದೇವತಾಶಾಸ್ತ್ರಕ್ಕೆ ಬಂದಾಗ ಗ್ರಾಮದೇವತೆಗಳು ಊರನ್ನು, ಊರಿನೊಳಗಿನ ಜನರನ್ನು ಪ್ರಾಣಿಗಳನ್ನು ಸಂರಕ್ಷಿಸುತ್ತವೆ ಎಂಬ ನಂಬಿಕೆ ಇದೆ. ಇಂತಹ ದೇವತೆಗಳನ್ನು ಆಗಾಗ ವಿಶೇಷ ದಿನಗಳಲ್ಲಿ, ವಾರ್ಷಿಕ ಆಚರಣೆಗಳಲ್ಲಿ ಪೂಜಿಸುವ ಸಂಪ್ರದಾಯವಿದೆ. ಹೀಗೆ ಪೂಜಿಸದಿದ್ದಲ್ಲಿ ದೇವತೆಗಳು ರೋಗರುಜಿನಗಳನ್ನು ತರುತ್ತವೆ. ಇಂತಹ ನಂಬಿಕೆಗಳ ಪ್ರತಿಫಲವಾಗಿ ಪ್ಲೇಗಿನಮ್ಮ, ಸಿಡುಬಿನಮ್ಮ, ದಡಾರದಮ್ಮ ಎನ್ನುವ ದೈವಗಳು ಸೃಷ್ಟಿಯಾಗಿವೆ. ಈಗಲೂ ಗೊಬ್ಬರ, ಗಣಜಲಿ ಮುಂತಾದವು ಮೈ ಮೇಲೆ ಕಾಣಿಸಿಕೊಂಡರೆ ಹೆಣ್ಣು ದೇವತೆಗಳಾದ ದ್ಯಾಮವ್ವ, ದುರುಗವ್ವನ ಗುಡಿಗೆ ಹೋಗಿ ಉಡಿ ತುಂಬಿ ಬರುವ ಪದ್ಧತಿ ಇಂದಿಗೂ ಹಳ್ಳಿಗಳಲ್ಲಿ ರೂಢಿಯಲ್ಲಿದೆ. ಗ್ರಾಮದೇವತೆಯ ಆರಾಧನಾ ಸಂದರ್ಭದಲ್ಲಿ ದೇವತೆಯನ್ನು ಸಂತೃಪ್ತಿಪಡಿಸುವುದಕ್ಕಾಗಿ ಸಿಡಿ ಆಡುವುದು, ಕೆಂಡಹಾಯುವುದು ಮುಂತಾದ ಉಗ್ರ ಆಚರಣೆಗಳು ಸೃಷ್ಠಿಯಾಗಿವೆ. ಇವು ಇಂದಿಗೂ ನಡೆದುಕೊಂಡು ಬರುತ್ತಿವೆ.

ಹೀಗೆ ಯಾರು ಧರ್ಮ, ದೇವರು, ದೇವತಾಶಾಸ್ತ್ರವನ್ನು ನಂಬುತ್ತಾರೆ ಅವರು ಪವಾಡವನ್ನು ನಂಬುತ್ತಾರೆ. ಪವಾಡ ಮಾಡುವ ವ್ಯಕ್ತಿಗೂ ಸಾಮಾನ್ಯ ಮನುಷ್ಯನಿಗೂ ಒಂದು ವ್ಯತ್ಯಾಸವಿದೆ. ಏನೆಂದರೆ ಪವಾಡ ಪುರುಷ ಸಾಮಾನ್ಯ ವ್ಯಕ್ತಿಯಲ್ಲ. ಆತ ಅಸಾಮಾನ್ಯನು. ಅವನಲ್ಲಿ ಒಂದು ವಿಶೇಷವಾದ ಶಕ್ತಿ ಇರುತ್ತದೆ. ಆ ಶಕ್ತಿಯಿಂದ ಆತ ತನಗೆ ತೋಚಿದ್ದನ್ನು ಮಾಡುತ್ತಾ ಹೋಗುತ್ತಾನೆ. ಆ ಸಂದರ್ಭಕ್ಕೆ ಅದು ಆಶ್ಚರ್ಯವಾಗಿ ಕಂಡುಬರುತ್ತದೆ. ಉದಾಹರಣೆಗೆ ಶಿಶುನಾಳ ಶರೀಫರು ಸಾಮಾನ್ಯರೇ, ಆದರೆ ತಮ್ಮ ತಪಶ್ಶಕ್ತಿಯಿಂದ ಅವರು ಅನುಭಾವಿ ಪುರುಷರಾದರು. ಅವರು ಮಾಡಿದ ಪವಾಡವೆಂದರೆ ಅಮವಾಸ್ಯೆಯ ದಿವಸ ಚಂದ್ರನನ್ನು ಕಾಣಿಸಿದ್ದು, ನವಲಗುಂದದ ಅಜಾತ ನಾಗಲಿಂಗಜ್ಜನವರು ಸಮಗಾರ ಭೀಮವ್ವನ ಎದೆ ಹಾಲು ಉಂಡದ್ದು, ಯಡೆಯೂರು ಸಿದ್ಧಲಿಂಗೇಶ್ವರರು ನದಿಗೆ ಬಂದ ಪ್ರವಾಹವನ್ನು ತಡೆದು ನದಿಯ ಮಧ್ಯದಲ್ಲಿ ದಾರಿಮಾಡಿಕೊಂಡು ಹೋದದ್ದು, ಇವೆಲ್ಲವೂ ಪವಾಡವೇ. ಮುಳುಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು ಶರಣೆ ಬಸವಾಂಬೆಯ ಎದೆ ಹಾಲನ್ನು ಉಂಡದ್ದು, ಪವಾಡವೇ ಸರಿ. ಹೀಗೆ ಧಾರ್ಮಿಕಾವರಣದ ಒಂದು ಚೌಕಟ್ಟಿನಲ್ಲಿ ಪವಾಡಗಳು ನಡೆಯುತ್ತವೆ. ಯಾರು ದೇವರನ್ನು ನಂಬುತ್ತಾರೆಯೋ ಅವರು ಪವಾಡಗಳನ್ನು ನಂಬುತ್ತಾರೆ.

ಯಮನೂರಿಗೆ ಮೂರು ಕಿ.ಮೀ. ದೂರದಲ್ಲಿರುವ ನವಲಗುಂದದಲ್ಲಿ ಪವಾಡ ಪುರುಷ ನಾಗಲಿಂಗಜ್ಜನ ಒಂದು ಪವಾಡವನ್ನು ಇಲ್ಲಿ ಸ್ಮರಿಸಬಹುದು. ನಾಗಲಿಂಗಸ್ವಾಮಿಗಳು ಸ್ಮಶಾನದಲ್ಲಿಯ ಸಿದಿಗೆ ತರಿಸಿ, ಬೋಯಿಗಳಿಗೆ ಹೊರಲಿಕ್ಕೆ ಹೇಳಿ, ಅದನ್ನು ಅಡ್ಡಪಲ್ಲಕ್ಕಿಯನ್ನಾಗಿ ಮಾಡಿ ಆಗಾಗ್ಗೆ ಅದರಲ್ಲಿ ಕುಳಿತು ಸಂಚರಿಸುತ್ತಿದ್ದರು. ಅದು ಓರ್ವ ಮುದುಕಿಯ ಸಿದಿಗೆಯಾದುದರಿಂದ ಅದಕ್ಕೆ "ಮುದುಕಿ" ಎಂದು ಸ್ವಾಮಿಗಳು ಕರೆಯುತ್ತಿದ್ದರು. ಒಮ್ಮೆ ನವಲುಗುಂದದ ಓಣಿಯಲ್ಲಿ ಆ ಪಲ್ಲಕ್ಕಿಗೆ ಅಡ್ಡಿಯನ್ನೊಡ್ಡಿದಾಗ ಸ್ವಾಮಿಗಳು ಪಲ್ಲಕ್ಕಿಯನ್ನು ಅಲ್ಲಿಯೇ ಬಿಟ್ಟು ಹೋದರು. ಅಂದಿನಿಂದ ಆ ಓಣಿಯಲ್ಲಿ ಮಾರಿ ಬೇನೆ ಪ್ರವೇಶಿಸಿ, ನಿತ್ಯವೂ ಅನೇಕ ಸಿದಿಗೆಗಳು ಹೊರಬೀಳಲಿಕ್ಕೆ ಪ್ರಾರಂಭವಾದವು. ಆ ಓಣಿಯ ಜನ ಪಶ್ಚಾತ್ತಾಪದಿಂದ ಸ್ವಾಮಿಗಳಲ್ಲಿ ಕ್ಷಮೆಕೋರಿ, ಅಡ್ಡಪಲ್ಲಕ್ಕಿಯನ್ನು ಅಡ್ಡಿಯಿಲ್ಲದೇ ಹೋಗಗೊಟ್ಟ ನಂತರವೇ ಮಾರಿಕಾ ಉಪದ್ರವ ನಿಂತುಹೋಯಿತು. ಇಂದಿಗೂ ಆ ಪಲ್ಲಕ್ಕಿ ಮಠದಲ್ಲಿ ಪೂಜೆಗೊಳ್ಳುತ್ತಲಿದೆ (ಪುಣ್ಯದಂತೆ ಬಂದವರು ಪುಟ.೫ ಮತ್ತು ೬, ಡಾ.ಸಂಗಮೇಶ ಹಂಡಿಗಿ). ಹೀಗೆ ಪವಾಡಗಳು ಆಯಾ ಕಾಲಕ್ಕೆ ಅನುಗುಣವಾಗಿ ನಡೆಯುತ್ತಾ ಬಂದಿವೆ.

ಪವಾಡಗಳು ಜೀವನದಲ್ಲಿ ಉತ್ಸಾಹ ತುಂಬುವ ಶ್ರೇಷ್ಠ ಸಾಧನೆಗಳಾಗಿವೆ. ಹೇಗೆಂದರೆ, ಬಂಜೆತನ ನಿವಾರಿಸಿದ್ದು, ಸತ್ತ ಎಮ್ಮೆಕರುವನ್ನು ಬದುಕಿಸಿದ್ದು, ರಾಜನಕುಷ್ಠರೋಗ ಕಳೆದದ್ದು, ಹೊಟ್ಟೆನೋವು ನಿವಾರಿಸಿದ್ದು, ಇವೆಲ್ಲವೂ ಪವಾಡವೇ. ಇದರಲ್ಲಿ ಬಂದ ರೋಗವನ್ನು ಕಳೆದುಕೊಂಡಾಗ ಉತ್ಸಾಹ, ಸಂತಾನವಿಲ್ಲದಾಗ ಸಂತಾನ ಪ್ರಾಪ್ತವಾದಾಗಲೂ ಉತ್ಸಾಹವಾಗುತ್ತದೆ. ಹೀಗೆ ಪವಾಡಗಳು ಜೀವನದ ಶ್ರೇಷ್ಠಸಾಧನೆಗಳಾಗಿವೆ.

**ಪವಾಡ ಪದದ ನಿಷ್ಪತ್ತಿ**

ಪವಾಡಗಳು ನಮ್ಮ ಪರಂಪರೆಯಲ್ಲಿ ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಅಲ್ಲದೆ ಜಗತ್ತಿನ ಮಹತ್ವದ ಹಾಗೂ ಪ್ರಮುಖ ಧರ್ಮಗಳ ಗ್ರಂಥಗಳಲ್ಲಿಯೂ ಅದರ ಸಾರತೆಯನ್ನು ಸಾರ್ಥಕಗೊಳಿಸಿದಂತಿವೆ. ಜನತೆಯ ನಂಬುಗೆಗೆ ಪಾತ್ರವಾಗಿದ್ದ ಅವು ಧಾರ್ಮಿಕ ಸಾಹಿತ್ಯದ ಅವಿಭಾಜ್ಯ ಅಂಗಗಳಾಗಿ ಇಂದಿನವರೆಗೆ ಉಳಿದುಕೊಂಡು ಬಂದುದನ್ನು ಕಾಣಬಹುದಾಗಿದೆ. ಅವುಗಳೆಲ್ಲ ಧಾರ್ಮಿಕ ಮಹಾಪುರುಷರ, ಪ್ರವಾದಿಗಳ, ಸಾಧು ಸಂತರ, ಸತ್ಪುರುಷರ ಜೀವನ ಚರಿತ್ರೆಯಲ್ಲಿ ಬೆರೆತುಕೊಂಡಿವೆ. ಅಗೋಚರತೆ, ಅಸಾಧ್ಯತೆಯ ನೆಲೆಯಿಲ್ಲದ ಸಂಗತಿಗಳನ್ನು ಜನರ ಸಮೀಪಕ್ಕೆ ತಂದು, ಆ ಮೂಲಕ ಪರಸ್ಪರ ಬಿಡುಗಡೆಯ, ಸಾರ್ಥಕತೆಯ ಬದುಕನ್ನು ನಿಭಾಯಿಸಲು ಪವಾಡಗಳು ಮಹತ್ವದ ಪಾತ್ರವಹಿಸುತ್ತವೆ.

ಪವಾಡ ಎಂಬ ಶಬ್ದವನ್ನು ಆಂಗ್ಲದ ಮಿರಾಕಲ್ (Miracle) ಶಬ್ದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. "Miracle is genarally difined by the etymology of the world, as that which causes wonder and astoinstment being extraordinary in itself and inepil by normal standard of and sign of indicating something other than itself (Encyclopedia Britanica vol-16).

'ಪವಾಡ' ಎಂದರೆ ಅಸಾಮಾನ್ಯ ಘಟನೆ ಅಥವಾ ನಿಸರ್ಗದ ಯಾವುದೇ ನಿಬಂಧನೆಗಳಿಂದ ವಿವರಿಸಲಾಗದ ಕಾರ್ಯಕಾರಣ ಸಂಬಂಧವಿಲ್ಲದ ಮತ್ತು ನಿಸರ್ಗದ ನಿಯಮಗಳಿಗೆ ಮಿಕ್ಕಿದ ಅಲೌಕಿಕ ಶಕ್ತಿಯ ಕಾರ್ಯ ಎನ್ನುವ ಅರ್ಥಗಳಿವೆ.

ಪವಾಡ, ಪ್ರಮಾದ (ಸಂ) ಸಂಸ್ಕೃತದ ವಾದ ಪದಕ್ಕೆ ಪ್ರ ಉಪಸರ್ಗ ಸೇರಿ ಪ್ರಮಾದ ಆಗುತ್ತದೆ. ವಾದ ಎಂದರೆ ಚರ್ಚೆ, ತರ್ಕ, ಮಾತು, ಸಂಭಾಷಣೆ ಎಂಬ ಅರ್ಥ ವಿವರಣೆ ಬರುತ್ತದೆ (ಕ.ಸಾ.ಪ. ನಿಘಂಟು, ಪುಟ ಸಂಖ್ಯೆ ೭೬೨). ಪವಾಡ ಎಂಬ ಪದಕ್ಕೆ ನಿರ್ದಿಷ್ಟವಾಗಿ ಒಂದು ಮಿತಿಯೊಳಗೆ ಸೇರಿಸಲು ಕಷ್ಟಸಾಧ್ಯ. ಏಕೆಂದರೆ ಅಲೌಕಿಕತೆಯೇ ಅದರ ಅಂತರಾಳ. ನಿರ್ಲಿಪ್ತವಾದ ಜೀವನದ ಗುರಿಯನ್ನು ದಾಟಿದ ಪರಾಕಾಷ್ಠೆಯ ಶಿಬಿರದೊಳಗೆ ಪ್ರಜ್ವಲಿಸುವ ದೀವಿಗೆಯಂತೆ ಆಧ್ಯಾತ್ಮಕತೆಯ ಪ್ರತೀಕವಾಗಿದೆ.

**ವೇದಾಂತದ ಪ್ರಕಾರ**

ಪವಾಡಗಳು ಒಬ್ಬ ಮಹಾಪುರುಷನಿಗೆ ಧಾರ್ಮಿಕ ಮುಂದಾಳುತನವನ್ನು ದೊರಕಿಸಿಕೊಡುವಲ್ಲಿ ಯೋಗ್ಯತಾ ಪತ್ರಗಳಂತೆ ಅಥವಾ ಪ್ರತ್ಯೇಕ ಒಂದು ದೇವರ ಶ್ರೇಷ್ಠತಮವಾದ ಶಕ್ತಿಯ ಪ್ರದರ್ಶನಕ್ಕೆ ದೃಷ್ಟಾಂತವಾಗಿ, ಇಲ್ಲವೆ ಒಂದು ನಿರ್ದಿಷ್ಟವಾದ ಶಕ್ತಿಯ ಪ್ರದರ್ಶನಕ್ಕೆ ದೃಷ್ಟಾಂತವಾಗಿ, ಇಲ್ಲವೆ ಒಂದು ನಿರ್ದಿಷ್ಟವಾದ ಧರ್ಮದ ಸತ್ಯದ ಸಾಕ್ಷಿಯನ್ನೊದಗಿಸುವ ಸಾಧನಗಳಾಗಿ ಕಾರ್ಯನಿರ್ವಹಿಸುವವು.

**ಕಿ.ರಂ.ನಾಗರಾಜ್**

ಕಲ್ಪನೆಯ ಉನ್ನತ ಹಂತವೇ ಪವಾಡ. ಅದಕ್ಕೆ ದೊಡ್ಡ ರೂಪಕ ಶಕ್ತಿಯಿದೆ.

**ರಹಮತ್ ತರೀಕೆರೆ**

ಸಿದ್ಧಿಗಳನ್ನು ಅಲೌಕಿಕ ಶಕ್ತಿಯಂತೆ, ಅದರ ಪ್ರದರ್ಶನವನ್ನು ಪವಾಡವೆಂದು ಜನ ಭಾವಿಸಿದರು. ಈ ಪವಾಡಗಳು ವಿಶೇಷ ಜ್ಞಾನ ಮತ್ತು ಸಾಧನೆಗಳ ಉತ್ಪ್ರೇಕ್ಷಿತ ರೂಪಗಳು.

ಪವಾಡಗಳು ಅನಂತತೆಯ ಅಗೋಚರತೆಯ ಸಂಕೇತಗಳಾಗಿವೆ. ವಿಚಿತ್ರವಾದ ಆಶ್ಚರ್ಯಕರವಾದ ಅಸಾಮಾನ್ಯವಾದ ವಸ್ತು ಅಥವಾ ಸಂಗತಿಗಳಾಗಿವೆ. ಈ ಪವಾಡಗಳು ಜನಸಾಮಾನ್ಯರ ಅನುಭವಕ್ಕಿಂತ ಬೇರೆಯಾದ ವಿಲಕ್ಷಣ ಸಂಗತಿಗಳು, ಇಂತಹ ಪವಾಡಗಳನ್ನು ದೇವರು ಇಲ್ಲವೇ ದೈವೀಶಕ್ತಿಯ ಒಲವಿದ್ದ ಮಾನವೀಯ ಅನುಕಂಪವುಳ್ಳ ಮಹಾಪುರುಷರಿಂದ, ದುಃಖಿತರ, ಆತ್ಮದ ರಕ್ಷಣೆಗಾಗಿ ಹಾಗೂ ಸಾಮಾನ್ಯ ಜನತೆ ದೈವೀ ಶಕ್ತಿಯಲ್ಲಿ ಸಂಶಯ ತಾಳಿದಾಗ ಅದರ ಸ್ಥಿರೀಕರಣಕ್ಕೆ ಯಾವುದೇ ಪೂರ್ವಭಾವಿ ತಯಾರಿಲ್ಲದೆ ಜರುಗುವ ಘಟನೆಗಳು ಎಂದು ಹೇಳಬಹುದು.

ಮನುಷ್ಯನ ಅಂತರಂಗ ಹಾಗೂ ಬಹಿರಂಗದ ನೇರ ಬಿಡುಗಡೆಗೆ ಸಹಾಯಕವಾಗುವ ಅಸಾಧ್ಯವಾದದ್ದನ್ನು ಸಾಧ್ಯವಾಗಿಸುವ ತಂತ್ರವೇ ಪವಾಡ. ಅದನ್ನು ಮಹತ್ಕಾರ್ಯ, ಸೂಚಕಕಾರ್ಯ, ಅದ್ಭುತಕಾರ್ಯ, ವಿವೇಚನಾಯುಕ್ತಕಾರ್ಯ, ಅಸಾಧ್ಯಕಾರ್ಯ, ಅಗೋಚರಶಕ್ತಿ, ಮಹೋನ್ನತಕಾರ್ಯ, ಸಿದ್ಧಿಕಾರ್ಯ, ರೀತಿಗಳು, ಮಹಿಮೆಗಳು ಎಂಬ ವಿವಿಧ ಹೆಸರುಗಳಿಂದ ಸೂಚಿಸಲಾಗುತ್ತದೆ.

ಪವಾಡಗಳು ಭೂತ-ಭವಿಷತ್‌ಗಳ ನಡುವಿನ ಅಂತರವನ್ನು ಕಡಿಮೆಮಾಡಲು ವರ್ತಮಾನದ ತಲ್ಲಣಗಳೊಂದಿಗೆ ಮಾರಾಮಾರಿ ಮಾಡಿ ತನ್ನಲ್ಲಿ ವಿಶಿಷ್ಟವಾದ ದೈವ ನೋಟವನ್ನು ಕಾಣಲು ಸಹಕಾರಿಯಾಗಿವೆ. ಅನಂತ ಅಪೇಕ್ಷೆಗಳಿಗೆ ಓ ಗುಟ್ಟುವಂತೆ, ಚೇತನಗಳಿಗೆ ಚೈತನ್ಯವನ್ನು ನೀಡಲು ಆ ಮೂಲಕ ಪರಂಪರೆಗಳ ಸ್ಥಿತ್ಯಂತರೀಕರಣಕ್ಕೆ ಮುಖವೊಡ್ಡಲು ಪ್ರೇರೇಪಿಸುತ್ತವೆ. ಪವಾಡಗಳು ನಂಬಿಕೆಯನ್ನು ಒಳಗೊಂಡ ತಾರ್ಕಿಕತೆಯನ್ನು ಮೀರಿದ ಕ್ರಿಯೆಗಳಾಗಿ ಕಾಣಿಸಿಕೊಂಡಿವೆ. ಈ ಪವಾಡಗಳು ಸಮುದಾಯದ ನಂಬಿಕೆಗಳನ್ನು ಆಧರಿಸಿರುವುದರಿಂದ ಈ ತರದ ನಂಬಿಕೆಗಳಿಗೆ ಧಾರ್ಮಿಕ ಪರಿವೇಷವಿರುವುದರಿಂದ ಅಂತಿಮವಾಗಿ ಅವು ಜನಪರ ಧೋರಣೆಯನ್ನು ಹೊಂದಿರುವುದರಿಂದ ಸಮುದಾಯಗಳು ತಾರ್ಕಿಕತೆಯನ್ನು ಬೆಳೆಸದೆ ನಂಬುತ್ತವೆ (ಡಾ.ರಹಮತ್ ತರೀಕೆರೆ, ಧರ್ಮವಿಶ್ವಕೋಶ, ಪು.೨೦೩). ಧಾರ್ಮಿಕತೆಯ ಮುಖ್ಯ ಆಶಯ, ಜನಮಾನಸದಲ್ಲಿಯ ಅನೇಕ ಕಷ್ಟಕಾರ್ಪಣ್ಯಗಳಿಗೆ ಸ್ಪಂಧಿಸಲು ಪವಾಡಗಳನ್ನು ಮಾಡಲಾಯಿತು.

ಅಸಾಮಾನ್ಯರು ಮಾಡಿದರೆನ್ನಲಾದ ರೀತಿಗಳಲ್ಲಿ ಸ್ವಾರ್ಥವಾಗಲಿ, ಮಂತ್ರವಿದ್ಯೆಗಳಲ್ಲಿರುವಂತ ಮಾಟದ ಅಂಶವಾಗಲಿ ವ್ರತಾಚರಣೆಯ ನಿಯಮ, ನಿಬಂಧನೆಗಳಾಗಲೀ ಇರುವುದಿಲ್ಲ. ಅವಧೂತರ ಹೆಚ್ಚಿನ ಪವಾಡಗಳೆಲ್ಲಾ ಮಕ್ಕಳಿಲ್ಲದವರಿಗೆ ಸಂತಾನಕೊಡುವುದು, ರೋಗರುಜಿನಗಳನ್ನು ಹೋಗಲಾಡಿಸುವುದು, ಬರಡು ಆಕಳು ಮತ್ತು ಎಮ್ಮೆಗಳಲ್ಲಿ ಹಾಲು ಕರೆಸುವುದು, ಸಾಂಕ್ರಾಮಿಕ ರೋಗಗಳನ್ನು ನಿವಾರಿಸುವುದು, ತನ್ನನ್ನು ನಿಂದಿಸಿದವರಿಗೆ ಕಷ್ಟಕೊಡುವುದು, ನಂತರ ಕ್ಷಮಿಸಿ ಮುಕ್ತಿ ನೀಡುವುದು, ಇತ್ಯಾದಿ. ಭಕ್ತ ಜನರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳಿಗೆ ಸಂಬಂಧಿಸಿದವುಗಳಾಗಿವೆ. ಉದ್ದೇಶಪೂರ್ವಕವಾಗಿ ಕೆಲವೊಮ್ಮೆ ದಿಢೀರ್ ಪರಿವರ್ತನೆಯ ಸಂಕಲ್ಪಗಳಿಂದ ಪವಾಡಗಳು ಜರುಗುತ್ತವೆ. ಹಾಗಾಗಿಯೇ ಎಷ್ಟು ಮುಂದುವರೆದ ಸಂಪ್ರದಾಯದ ಸಮುದಾಯಗಳಾದರೂ ಒಮ್ಮೊಮ್ಮೆ ಅದರ ಜಾಡಿನೊಳಗೆ ನಾಜೂಕಾಗಿ ಬೆರೆತು ಬೆಸೆದುಗೊಂಡಿರುವುದನ್ನು ಕಾಣುತ್ತೇವೆ.

ಪವಾಡವು ಮೇಲುನೋಟಕ್ಕೆ ಬಹುಮಟ್ಟಿಗೆ ಒಳ್ಳೆಯಮಂತ್ರವಿದ್ಯೆಯಂತೆ ಕಂಡರೂ ಅದನ್ನು ಒಂದು ಮಂತ್ರವಿದ್ಯೆಯೆಂದು ಪರಿಗಣಿಸಲಿಕ್ಕಾಗದು, ಏಕೆಂದರೆ ಇದರಲ್ಲಿ ಪವಾಡ ಪುರುಷನ ಸ್ವಾರ್ಥವಾಗಲಿ, ಮಂತ್ರವಿದ್ಯೆಯಲ್ಲಿರುವಂತೆ ಇರುವುದಿಲ್ಲ. ಪವಾಡವು ಚಮತ್ಕಾರಿಕವಾದದ್ದು, ಅದ್ಭುತ ಅತಿಮಾನುಷ ಸಂಗತಿಗಳಿಂದ ಒಡಗೂಡಿದುದರಿಂದ ಇಂದ್ರಜಾಲ, ಮಹೇಂದ್ರಜಾಲ, ನಯನಬಂಧ (ಕಣ್ಕಟ್ಟು) ಕೈಚಳಕ ಗಗನಗಾಮಿ ವಿದ್ಯೆ, ರಸವಿದ್ಯೆ, ಮಾಯಾವಿದ್ಯೆ ಇತ್ಯಾದಿ ವಿದ್ಯೆಗಳಂತೆ ಮೇಲುನೋಟಕ್ಕೆ ಕಾಣಿಸಿದರೂ ಅವುಗಳದೇ ಆದ ಒಂದು ವೈಶಿಷ್ಟ್ಯ ಇರುವುದನ್ನು ಮನಗಾಣಬಹುದು. ಅವು ಈ ವಿದ್ಯೆಗಳಂತೆ ಒಂದು ಸಾರ್ಥಕತೆಯನ್ನು ಪಡೆಯಲು ಯೋಗ, ಧ್ಯಾನ ಮುಂತಾದ ವಿಧಿ-ವಿಧಾನಗಳು ಸಹಕಾರಿ ಎಂಬುದು ನಿರ್ವಿವಾದ.

ಮೇಲೆ ಅರ್ಥೈಸಿದಂತೆ ಪವಾಡವೆಂದರೆ ಅಸಾಮಾನ್ಯವಾದ ಆಶ್ಚರ್ಯವನ್ನುಂಟುಮಾಡುವ ಲೋಕ ವಿಲಕ್ಷಣವಾದ ಅದ್ಭುತ ಘಟನೆ ಅಥವಾ ಸಂಗತಿ. ಕಾರ್ಯಕಾರಣವಿಲ್ಲದ ನಿಸರ್ಗನಿಯಮದ ವಿರುದ್ಧ ಘಟಿಸುವ ಇಂಥ ಘಟನೆ ಅಥವಾ ಸಂಗತಿಯನ್ನು ಮಾನವೀಯ ಶಕ್ತಿಯಿಂದ ಎಸಗುವುದು ಅಸಾಧ್ಯ. ಈ

ರೀತಿ ಮಾನವೀಯ ಶಕ್ತಿಗೆ ಅಸಾಧ್ಯವೆನಿಸಿದ ಕಾರ್ಯ ಇಲ್ಲವೆ ಸಂಗತಿಗಳನ್ನು ದೇವರ ಪ್ರೀತಿಗೆ ವಿಶೇಷವಾಗಿ ಪಾತ್ರನಾದವನು ಮಾತ್ರ ದೈವೀ ಶಕ್ತಿಯ ಬಲದಿಂದ ಎಸಗಬಲ್ಲ, ಪವಾಡಗಳು ದೇವರ ಪ್ರತಿರೂಪವೆನಿಸಿದ ವ್ಯಕ್ತಿಯಿಂದ ಪ್ರದರ್ಶಿತವಾಗುವಂತವು ಎಂದಾತಾಯಿತು.

ವಿಶ್ವದ ಪ್ರಮುಖ ಧರ್ಮಗಳು ವಿಭಿನ್ನವಾದ ನೆಲೆಯಲ್ಲಿ ಪವಾಡಗಳನ್ನು ಅರ್ಥೈಸಿವೆ. ಯೇಸುಕ್ರಿಸ್ತನನ್ನು ಕುರಿತ ಪವಾಡಗಳನ್ನು ಅರ್ಥೈಸಲಾಗಿದೆ. ಯೇಸುಕ್ರಿಸ್ತನನ್ನು ಕುರಿತ ಪವಾಡಗಳು ಜನರಿಗೆ ಹತ್ತಿರವಾದ ತತ್ವವನ್ನು ಪ್ರತಿಬಿಂಬಿಸಿದರೆ, ಬುದ್ಧನು ತದ್ವಿರುದ್ಧ ಎಂಬಂತೆ "ಓ ಬಿಕ್ಕುಗಳೇ! ನೀವು ಜ್ಞಾನದ ಪ್ರಭೆಯನ್ನು ಹೊಂದುವುದಕ್ಕೆ ಮೊದಲು ಅತಿಮಾನುಷ ಶಕ್ತಿಯ ಪ್ರದರ್ಶನಕ್ಕೆ ತೊಡಗಬೇಡಿ. ಯಾರು ಅದನ್ನು ಮಾಡುತ್ತಾರೋ ಅವರು ದುಷ್ಟತೆಯ ಬಗ್ಗೆ ಅಳುಕುಳ್ಳವರಾಗುತ್ತಾರೆ. ಪವಾಡಗಳನ್ನು ಆಧರಿಸಿ, ಜೀವನ ರೂಪಿಸಬೇಡಿ, ಎಂದೆಂದಿಗೂ ಇರುವ ಸನಾತನ ನಿಯಮದ ಮೇಲೆ ನೀವು ನಿಮ್ಮ ಬಾಳನ್ನು ರೂಪಿಸಿಕೊಳ್ಳಿ" ಎಂಬುದು ಆತನ ಧೋರಣೆಯಾಗಿತ್ತು. "ಯಾವುದೇ ಒಂದು ಅದೃಷ್ಟವನ್ನಾಗಲಿ ನಂಬಿ ಕೂತುಕೊಳ್ಳದೇ ಪ್ರಯತ್ನಶೀಲರಾಗಿ" ಎಂಬುದು ಅಂಬೇಡ್ಕರ್‌ರ ವಾದ. ಅಷ್ಟೇ ಅಲ್ಲ, ಸ್ವಾಮಿ ವಿವೇಕಾನಂದ ಬಸವಾದಿ ಪ್ರಥಮರ ಧ್ಯೇಯೋದ್ದೇಶಗಳು ಕೂಡ ಈ ಹಿನ್ನಲೆಯಲ್ಲಿಯೇ ಸೃಷ್ಟಿಯಾಗಿರಬೇಕು. ಏಕೆಂದರೆ ನಿಮಗೆ ನೀವೇ ದಾರಿ ದೀಪಗಳು. ನಿಮ್ಮನ್ನು ನೀವೇ ರೂಪಿಸಿಕೊಳ್ಳಿ ಎಂಬಂತಹ ಸಂದೇಶಗಳು ಒಡಮೂಡಿರಬೇಕು. ಕ್ರಿಸ್ತನದು ಜನಮುಖಿಯಾದ ಧೋರಣೆ ಎಂಬುದು, ಆತನು ತನ್ನ ಶಿಷ್ಯರಿಗೆ ಹೇಳಿದ ಸಂದೇಶದಿಂದ ತಿಳಿಯಬಹುದೇನೆಂದರೆ ನೀವು ಭೂಲೋಕದ ಕಟ್ಟಕಡೆಗೆ ಹೋಗಿ ನನ್ನ ನಾಮದಲ್ಲಿ ದೆವ್ವಗಳನ್ನು ಬಿಡಿಸಿರಿ, ರೋಗಗಳನ್ನು ವಾಸಿಮಾಡಿರಿ, ಬಂಧನದಲ್ಲಿರುವವರಿಗೆ ಬಿಡುಗಡೆ ಮಾಡಿರಿ, ಕುಷ್ಟರೋಗಗಳನ್ನು ಗುಣಪಡಿಸಿರಿ ಮತ್ತು ಎಲ್ಲಾ ದೇಶಗಳಿಗೆ ಹೋಗಿ ಸಾಕ್ಷಿಗಳಾಗಿರೀ" (ಬೈಬಲ್ ಹೊಸ ಒಡಂಬಡಿಕೆ ಮತ್ತಾಯನು ಬರೆದ ಸುವಾರ್ತೆ ಗಮನಿಸಬಹುದು) ಎನ್ನುವ ಚಿಂತನೆಯಿಂದಲೋ, ಇಂದು ಪ್ರಪಂಚದ ಮೂಲೆ ಮೂಲೆಗಳಲ್ಲಿ ಕ್ರೈಸ್ತತ್ವದ ಗಾಳಿ ಬೀಸಿರುವುದನ್ನು ಕಾಣಬಹುದು. ವಿಶ್ವದ ಜನಗಣತಿಯನ್ನು ಪರಿಗಣನೆಗೆ ತೆಗೆದುಕೊಂಡರೆ ಕ್ರೈಸ್ತರೇ ಅತೀ ಹೆಚ್ಚು ಎಂಬುದು ಗಮನಾರ್ಹವಾಗಿದೆ.

ಪರಸ್ಪರ ಹಲವು ಧರ್ಮಗಳಲ್ಲಿನ ಪವಾಡ ಸಾದೃಶ್ಯಗಳಿಗೆ ವೈರುಧ್ಯವಿದ್ದರೂ ದೃಷ್ಟಿಯಲ್ಲಿ ವಿಭಿನ್ನತೆಯಿದ್ದರೂ, ಅವರ ಆಂತರ್ಯದ ಗುರಿಸಾಧನೆಗೆ ಇಂಬುಗೊಡುತ್ತವೆ. ಆಚರಣೆಯಲ್ಲಿ ಅಗಾಧ ವ್ಯತ್ಯಾಸವಿದ್ದರೂ, ಸಹ ವಿಚಾರಣೆಗಳ ತಾತ್ವಿಕತೆಯ ಮೂಲ ತಿರುಳು ಒಂದೇ ಆಗಿದ್ದವು. ಅದಕ್ಕಾಗಿಯೇ ದೈವತ್ವಕ್ಕೆ ಸಿಗುವಷ್ಟು ಮನ್ನಣೆ ಬೇರೆ ಯಾವುದಕ್ಕೂ ಅಷ್ಟೊಂದು ಆದ್ಯತೆ ಸಿಗಲಾರದು ಎಂದೇ ಹೇಳಬೇಕಾಗುತ್ತದೆ. ಧಾರ್ಮಿಕ ಪರಿಕಲ್ಪನೆಯಲ್ಲಿ ಮನುಷ್ಯನ ಸಾಮಾನ್ಯವಾದ ಅಪರೂಪದ ಮತ್ತು ಅಸಹಜವಾದ ಘಟನೆ, ಕ್ರಿಯೆ ಮತ್ತು ಹೇಳಿಕೆಗಳ ಈ ದಾಖಲೆಗಳನ್ನು ಪವಾಡಗಳೆಂದು ಧರ್ಮ ತನ್ನಲ್ಲಿ ಕಾಪಾಡಿಕೊಂಡಿದೆ. ಈ ಪವಾಡಗಳು ಸಾಮಾನ್ಯವಾಗಿ ಅತೀಂದ್ರಿಯ ಶಕ್ತಿಯನ್ನು ದೈವೀಕತೆಯನ್ನು ಪರಿಪೂರ್ಣಗೊಳಿಸುವ ಪ್ರಣಾಳಿಕೆಗಳಾಗಿ ಧಾರ್ಮಿಕ ಚರಿತ್ರೆಯಲ್ಲಿ ಬಳಕೆಗೊಂಡಿವೆ. ಅಂದರೆ ತಾಂತ್ರಿಕ ವಿದ್ಯೆಗಳಿಗೆ ದೈವೀಕತೆಯ ಸ್ಥಾನವನ್ನು ದೊರಕಿಸಿಕೊಡುವ ಕೆಲಸವಾಗಿದೆ. ಯಾರು ತಮ್ಮ ಪ್ರಜ್ಞೆಯನ್ನು ದರ್ಶನಗಳ, ಕನಸುಗಳ ಅಥವಾ ಅಭ್ಯಾಸದ ಮೂಲಕ ನಿಯಂತ್ರಣದಲ್ಲಿರಿಸಿಕೊಂಡಿರುತ್ತಾರೋ ಅವರು ಪವಾಡ ಪುರುಷರೆನಿಸಿಕೊಳ್ಳುತ್ತಾರೆ.

ಶಿಶುನಾಳ ಶರೀಫ, ಸಿದ್ಧಾರೂಢರು, ಶಿರಹಟ್ಟಿ ಫಕೀರೇಶ್ವರರು, ಯಡೆಯೂರು ಸಿದ್ಧಲಿಂಗ, ಸೊನ್ನಲಿಗೆ ಸಿದ್ಧರಾಮ, ಮುಳುಗುಂದದ ಬಾಲಲೀಲಾಮಹಾಂತ ಶಿವಯೋಗಿಗಳು ಮುಂತಾದವರು ತಮ್ಮ ಪವಾಡಗಳನ್ನು ತೋರಿದ್ದಾರೆ. ಅಷ್ಟೇ ಅಲ್ಲದೇ ಮಧ್ಯಕಾಲೀನ ಸ್ಥಿತಿಯಲ್ಲಿ ಸೂಫಿಗಳು, ಅವಧೂತರು, ನೂರೊಂದು ವಿರಕ್ತರು, ಆರೂಢರು, ಸಿದ್ಧರನ್ನು ಪವಾಡಪುರುಷರೆಂದು ಕರೆಯಲಾಗಿದೆ.

ಪವಾಡಗಳು ಆಯಾ ಕಾಲ ಪ್ರದೇಶಗಳ ಸ್ಥಿತಿಯ ಮೇಲೆ ಗಂಭೀರ ಪರಿಣಾಮ ಬೀರುತ್ತವೆ. ಕೆಲವರು ಪವಾಡಗಳನ್ನು ತಿರಸ್ಕರಿಸಿದರು ಬಹುತೇಕರ ಬದುಕಿನೊಳಗೆ ಹಾಸುಹೊಕ್ಕಾಗಿ ಇಂದಿಗೂ ವೈಚಾರಿಕ ಜಗತ್ತಿಗೆ ಸವಾಲೊಡ್ಡುವಂತೆ ಮೈದಳೆದು ನಿಂತಿವೆ. ಒಂದೆಡೆ ಅವಮಾನ, ಮತ್ತೊಂದೆಡೆ ಅಭಿಮಾನ, ಭಿನ್ನಮತ, ಮತ್ತೊಂದೆಡೆ ಸಹಮತ, ನಂಬಿಕೆ ಮತ್ತೊಂದೆಡೆ ಅಪನಂಬಿಕೆ ಇವುಗಳ ಮದ್ಯೆ ಪವಾಡಗಳು ಸರಪಳಿಯ ಕೊಂಡಿಯಂತೆ ಬೇರ್ಪಡಿಸಲು ಹೋದರೆ ಸಮಾಜದ ಧಾರ್ಮಿಕ ಪಲ್ಲಟಗಳಿಗೆ ಸವಾಲೊಡ್ಡಿ ನಿಲ್ಲುತ್ತವೆ.

ದೊಡ್ಡ ದೊಡ್ಡ ಶರಣರು ಪವಾಡಗಳನ್ನು ಬರೆದಿದ್ದಾರೆ ಮತ್ತು ಮೆರೆದಿದ್ದಾರೆ. ದೊಡ್ಡವರ ಪವಾಡಗಳನ್ನು ನೋಡಿ ದೊಡ್ಡವರಾಗಬಯಸುವ ಸಣ್ಣತನದ ಕ್ಷುದ್ರಶಕ್ತಿಗಳೂ ಇಲ್ಲದಿಲ್ಲ. ದುಡಿದ ದುಡ್ಡನ್ನು ವ್ಯರ್ಥವಾಗಿಸುವಂತೆ ದುಡಿದ ಶಕ್ತಿಯನ್ನೋ, ಪಡೆದ ಶಕ್ತಿಯನ್ನೋ ಹ್ಯಾಗೆ ಬೇಕೋ ಹಾಗೆ ಹಾಳು ಮಾಡುವ ಸ್ವಾರ್ಥಕ್ಕಾಗಿ ದುರುಪಯೋಗ ಪಡಿಸುವ ಸ್ವಾಮಿಗಳ ರೂಪದಲ್ಲಿರುವ ಕಾಮಿಗಳೂ, ಯೋಗಿಗಳ ರೂಪದಲ್ಲಿರುವ ಭೋಗಿಗಳು ಬೇಕಾದಷ್ಟು ಜನ ಕಣ್ಣು ಮುಚ್ಚಿಕೊಂಡರೂ ಕಾಣುತ್ತಾರೆ.

ಪವಾಡಗಳ ವರ್ಣನೆಯು ಪುರಾಣಗಳಲ್ಲಿ ಹೇರಳವಾಗಿ ಬರುತ್ತದೆ. ಶ್ರೀಶಂಕರಚಾರ್ಯಾರ ಪರಕಾಯ ಪ್ರವೇಶ ಮಾಡಿದ್ದಾಗಲೀ ಶ್ರೀಮಧ್ವಾಚಾಯರು ಹಡಗು ಮುಳುಗುವಾಗ ತಮ್ಮ ಕಾವಿಯಶಾಟಿಯನ್ನು ಜಾಡಿಸಿ ಹಡಗನ್ನು ನಿಲ್ಲಿಸಿದರೆಂಬುದಾಗಲೀ, ರಾಮದಾಸಸ್ವಾಮಿಗಳು ಗಂಡ ಸತ್ತವಳಿಗೆ ಅಷ್ಟ ಪುತ್ರ ಸೌಭಾಗ್ಯವತಿ ಎಂದು ಆಶೀರ್ವಾದ ಮಾಡಿದ್ದಾಗಲೀ, ಜ್ಞಾನದೇವರು ಕೋಣನಿಂದ ವೇದಗಳನ್ನು ಅನ್ನಿಸಿದ್ದಾಗಲೀ ಏಸುಕ್ರಿಸ್ತನು ಸತ್ತವರನ್ನು ಬದುಕಿಸಿದ್ದಾಗಲೀ, ಇದರಂತೆಯೇ ಶ್ರೀ ಬುದ್ಧಮಹಾವೀರ, ಪೈಗಂಬರರೇ ಮೊದಲಾದ ಮಹಾನುಭಾವರ ಚರಿತ್ರೆಗಳಲ್ಲಿ ನಾವು ಬೇಕಾದಷ್ಟು ಪವಾಡಗಳ್ನು ಕಾಣಬಹುದು. ಕಬೀರದಾಸರು ಸತ್ತ ಮೇಲೆ ಅವರ ಹೆಣದ ಸಲುವಾಗಿ ಹಿಂದೂಗಳೂ, ಮುಸಲ್ಮಾನರೂ ತಮ್ಮ ತಮ್ಮೊಳಗೆ ಬಡಿದಾಡಲು ಅವರ ಶರೀರವು ಮಲ್ಲಿಯ ಹೂವುಗಳಾಗಿದ್ದವಂತೆ. ಹೀಗೆಯೇ ಸಾವಿರಾರು ಉದಾಹರಣೆಗಳನ್ನು ಭರತಖಂಡದ ದಿವ್ಯಜ್ಯೋತಿಗಳ ಚರಿತ್ರೆಯಲ್ಲಿ ಕಾಣಬಹುದು. ಇಂತಹ ಅಮಾನುಷ ಕಾರ್ಯಗಳು ಅವತಾರಿ ಪುರುಷರಿಗೆ ಅನಿವಾರ್ಯವಾಗಿ ಗಂಟುಬೀಳುತ್ತವೆ. ಇತಿಹಾಸಕಾರರು ಒಪ್ಪಲಿ ಅಥವಾ ಒಪ್ಪದಿರಲಿ ಅತ್ತ ಕಡೆಗೆ ಜನಗಳ ಲಕ್ಷ್ಯವಿರುವುದಿಲ್ಲ. ಅವರ ಪ್ರಭಾವಕ್ಕೊಳಗಾಗಿ ಅವುಗಳಲ್ಲಿ ಅವರಿಗೆ ತುಂಬಾ ವಿಶ್ವಾಸವು ಹುಟ್ಟಿ ತನ್ಮಯರಾಗಿ ಧ್ಯಾನಿಸುತ್ತಾರೆ. ಪವಾಡಗಳೆಂದರೆ ತಮ್ಮಿಂದಾಗುವ ದೊಡ್ಡ ಕೆಲಸವನ್ನು ಯಾರಾದರೂ ಮಾಡಿದರೆ ಅದಕ್ಕೆ ಪವಾಡವೆಂದು ಜನಗಳು ಅನ್ನುತ್ತಾರೆ. ಇಂತಹ ಪವಾಡ ಪುರುಷರಲ್ಲಿ ಯಮನೂರಿನ ರಾಜಭೋಗ ಸವಾರ ಶ್ರೀ ಚಾಂಗದೇವರು ಒಬ್ಬರು.

ಎಲ್ಲಾ ರಾಜ್ಯಗಳಿಂದ ಹಿಂದೂ, ಮುಸ್ಲಿಂ, ಕ್ರೈಸ್ತ, ಬೌದ್ಧ ಭಕ್ತರು ಬರುವರು. ಅದು ಹೋಳಿ ಹುಣ್ಣಿಮೆಯಾಗಿ ೩ನೆಯ ದಿನದಿಂದ ೫ ದಿನ ದೊಡ್ಡ ಪ್ರಮಾಣದಲ್ಲಿ ನಂತರ ಯುಗಾದಿಯವರೆಗೆ ಸಣ್ಣ

ಜಾತ್ರೆ ನಡೆಯುವುದು. ತೊನ್ನು ರೋಗಿಗಳೂ, ಸಂತಾನಹೀನರೂ, ಕುಷ್ಟರೋಗಿಗಳೂ ಬಂದು ಸೇವೆ ಮಾಡಿ ಇಷ್ಟಾರ್ಥ ಪೂರೈಸಿಕೊಳ್ಳುವರು.

**೬.೩. ಚಾಂಗದೇವರ ಪವಾಡಗಳು**

**ಹೊಟ್ಟೆನೋವು ನಿವಾರಿಸುವುದು**

ನವಲಗುಂದ, ಧಾರವಾಡ ಪ್ರದೇಶಗಳು ಟೀಪ್ಪು ಸುಲ್ತಾನನ ಅಧೀನದಲ್ಲಿದ್ದವು. ಆತನು ಕ್ಷೇತ್ರಕ್ಕೆ ಬಂದು ಹೋದ ಮೇಲೆ ಈ ಪ್ರದೇಶಕ್ಕೆ ಮುಸ್ಲಿಮ ಅಧಿಕಾರಿಗಳನ್ನು ನೇಮಿಸಿದ್ದನು. ಕ್ರಿ.ಶ. ೧೭೬೦ರಲ್ಲಿ ಆತನ ಅಧಿಕಾರಿ ಖಾನಾಸಾಹೇಬನು ನವಲಗುಂದ ತಾಲೂಕಿನ ತಹಶೀಲ್ದಾರನಾಗಿದ್ದಾಗ ದೇವರ ದರ್ಶನಕ್ಕೆ ಬಂದು ಅಲ್ಲಿರುವ ಪಂಜಾಗಳನ್ನು ನೋಡಿ ಈ ಗುಡಿಯು ಹಿಂದುಗಳದಾಗಿರದೇ ಮುಸಲ್ಮಾನರದೆಂದು ಭ್ರಮಿಸಿ, ಪೂಜಾರಿಗಳಾಗಿದ್ದ ಜೀಜೋಬಾ ಅವರಿಗೆ ಈ ದೇವರು ನಿಮ್ಮದೆನ್ನುವುದಕ್ಕೆ ಸನದುಗಳಿದ್ದರೆ, ಅವನ್ನೂ ದೇವರ ಸಾಮಾನುಗಳನ್ನೂ ನವಲಗುಂದಕ್ಕೆ ತಂದು ತೋರಿಸಲು ಆಜ್ಞಾಪಿಸಿ ಹೋದನು. ಅಂದೇ ರಾತ್ರಿ ಸಾಹೇಬರ ಕುದುರೆಗೆ ಹೊಟ್ಟೆನೋವು ಬಂದು ಹೊರಳಾಡಿ ಸತ್ತು ಹೋಯಿತು. ಸ್ವಲ್ಪ ಹೊತ್ತಿನಲ್ಲಿ ಅವರಿಗೂ ಹೊಟ್ಟೆ ಕಡಿತ ಬಂದು ಎಷ್ಟು ಔಷಧಿ ಕೊಡಿಸಿದರೂ ಗುಣವಾಗಲಿಲ್ಲ. ಆತನ ಮನೆಯವರು ತಮ್ಮ ಧರ್ಮದ ಖಾಜಿಗಳನ್ನು ಕರೆಯಿಸಿ, ಕಾರಣವನ್ನು ಕೇಳಿದರು. ಖಾಜಿಗಳು, ಸಾಹೇಬರೇ ನಿಜವು ಯಮನೂರಿನಲ್ಲಿ ಅಪಚಾರ ಮಾಡಿ ದೇವರನ್ನು ತರಲು ಹೇಳಿರುವಿರಿ, ಆ ದೇವರು ಹಿಂದುಗಳ ಪೀರಚಾಂಗದೇವರದು ಇದೆ. ದೇವರು ಜಾತಿ ಪ್ರಿಯನಲ್ಲ. ಭಕ್ತಪ್ರಿಯನು. ಆ ಕ್ಷೇತ್ರಕ್ಕೆ ಹಿಂದೂ ಮುಸ್ಲಿಂರರಿಬ್ಬರೂ ನಡೆದುಕೊಳ್ಳುವರು. ನೀವು ಯಮನೂರಿಗೆ ಹೋಗಿ ಕ್ಷಮೆ ಬೇಡಿ, ದೇವರಿಗೆ ಕಾಣಿಕೆ ಸಲ್ಲಿಸಿ, ಫಕೀರರಿಗೆ ಅನ್ನಸಂತರ್ಪಣೆ ಮಾಡಿಸಿರಿ ಎನ್ನಲು ಸಾಹೇಬರು ಕೂಡಲೇ ಯಮನೂರಿಗೆ ಬಂದು ಬೆಣ್ಣೆ ಹಳ್ಳದಲ್ಲಿ ಮಿಂದು ದೇವರಲ್ಲಿ ಕ್ಷಮೆಬೇಡಿ ಅಂಗಾರವನ್ನು ಮೈಗೆ ಸವರಲು ಹೊಟ್ಟೆನೋವು ಕಡಿಮೆಯಾಯಿತು. ಅಲ್ಲಿದ್ದ ಫಕೀರರಿಗೆ ಅನ್ನಸಂತರ್ಪಣೆ ಮಾಡಿ ಕಾಣಿಕೆಯರ್ಪಿಸಿ ಹೋದನು. ಇದರಿಂದ ಈ ಕ್ಷೇತ್ರದ ಮಹಿಮೆ ಎಷ್ಟಿದೆ ಎಂಬುದೇ ತಿಳಿಯುವದು.

**ರಾಜನ ಕುಷ್ಟರೋಗ ಕಳೆದುದು**

ಚಾಂಗದೇವರು ನಡೆದಾಡಿದ ಯಮನೂರಿನ ಭೂಮಿಯು ಅವರ ಸಿದ್ಧಿಶಕ್ತಿಯಿಂದ ರೋಗಿಗಳಿಗೆ ಸಂಜೀವಿನಿಯಾಯಿತು. ಹಂಪೆಯ ಹತ್ತಿರವಿರುವ ಆನೆಗೊಂದಿಯು ಪುರಾತನಕಾಲದಿಂದಲೂ ಸಂಸ್ಥಾನವಿದ್ದಿತು. ಅಲ್ಲಿನ ರಾಜನ ಕೆಕಾಟೊಂಕದಲ್ಲಿ ಉರಿತಬಿದ್ದು ತ್ವಚೆರೋಗ ಕಾಣಿಸಿತು. ಅದರ ಉರಿತದಿಂದ ರಾಜನು ಬಾಧೆ ತಾಳಲಾರದೆ, ತುಂಗಭದ್ರಾನದಿಯಲ್ಲಿ ಕೂಡುತ್ತಿದ್ದನು. ಯಾವ ವೈದ್ಯರು ಉಪಚಾರ ಮಾಡಿದರೂ ಗುಣವಾಗಲಿಲ್ಲ. ಆ ರಾಜನು ತನ್ನಲ್ಲಿ ಅಂಗರಕ್ಷಕನಾಗಿದ್ದ ರಾಣಾಸಿಂಗನು ಕೈಯಲ್ಲಿ ಬೆಳ್ಳಿಯ ಕಡಕವನ್ನು ಧರಿಸಿದ್ದನ್ನು ನೋಡಿ ಹಾಕಿದ ಕಾರಣವೇನೆಂದು ಕೇಳಿದನು. ರಾಣಾಸಿಂಗನು "ಮಹಾರಾಜ ನನಗೆ ಮಧುಮೇಹ ರೋಗವಿತ್ತು, ನಮ್ಮೂರಿನ ಜನರು ಯಮನೂರಿಗೆ ಹೋಗುವುದನ್ನು ಕಂಡು ನಾನು ಅವರೊಂದಿಗೆ ಹೋಗಿ ಬೆಣ್ಣೆಹಳ್ಳದಲ್ಲಿ ಮಿಂದು ಗುಡಿಗೆ ಹೋಗಿ ತೀರ್ಥಪ್ರಸಾದ ಪಡೆದನು. ಪೂಜಾರಿಯು ರೋಗವನ್ನು ವಿಚಾರಿಸಿ

ಬೆಳ್ಳಿಯ ಕಡಗವನ್ನು ಕೈಯಲ್ಲಿ ಹಾಕಿ, ಐಯ್ದು ಗುರುವಾರ ಉಪವಾಸವಿದ್ದು ದೇವರ ಸೇವೆ ಮಾಡಿದರೆ, ರೋಗವಿಲ್ಲದಾಗುವುದು ಎಂದು ಹೇಳಿದಂತೆ ನಾನು ಮಾಡಲು ಮಧುಮೇಹವು ವಾಸಿಯಾಯಿತು'' ಎಂದನು. ರಾಜನು ಪರಿವಾರದೊಂದಿಗೆ ಬೆಣ್ಣೆ ಹಳ್ಳದಲ್ಲಿ ಮಿಂದು, ದೀಡ ನಮಸ್ಕಾರ ಹಾಕುತ್ತಾ ಗುಡಿಗೆ ಬಂದು ಸಕ್ಕರೆ, ಊದುಬತ್ತಿ ಅರ್ಪಿಸಿ ದೇವರಿಗೆ ವಂದಿಸಿದನು. ಐದು ಗುರುವಾರ ಉಪವಾಸ ಇದ್ದು ಚಾಂಗದೇವರನ್ನು ಪ್ರಾರ್ಥಿಸಿ, ಸೇವೆಗೈಯ್ಯಲು ರಾಜನು ಮಹಾರೋಗದಿಂದ ಮುಕ್ತನಾಗಿ ಮೊದಲಿನಂತೆ ಸುಂದರ ಶರೀರವುಳ್ಳವನಾದನು. ರಾಜನು ಕ್ಷೇತ್ರದಲ್ಲಿ ಜನರಿಗೆ ಅರ್ಚಕರಾದ ಬರ್ಗೆಯವರಿಗೆ ಇನಾಮಾಗಿ ಹಾಕಿಕೊಟ್ಟನು. ಬರ್ಗೆ ವಂಶಿಕರು ಪ್ರತಿವರ್ಷ ಆನೆಗುಂದಿಗೆ ಹೋಗಿ ಹೊಲದ ಲಾವಣಿ ಉತ್ಪನ್ನ ತರುತ್ತಿರುವರು. ಚಾಂಗದೇವರು ತಮ್ಮ ಸಿದ್ಧಿಯಿಂದ ಈ ಭೂಮಿಯನ್ನು ಪುನೀತಗೊಳಿಸಿರುವುದರಿಂದ ಇಂಥ ಕೌತುಕಗಳು ನಡೆಯುತ್ತವೆ.

**ಸಂತಾನ ಕರುಣಿಸಿದುದು**

ಕ್ರಿ.ಶ.೧೯೧೮ರಲ್ಲಿ ವಿಜಾಪುರ ಜಿಲ್ಲೆಯ ಯರಗಲ್ಲ ಗ್ರಾಮದಲ್ಲಿ ಕುರುಬ ಕುಲದ ಬಸಪ್ಪ ಯರಗೆಲ್ಲ ಎಂಬ ಸದ್ಗೃಹಸ್ಥನಿದ್ದನು. ಅವನಿಗೆ ಬಹುದಿನಗಳಿಂದ ಮಕ್ಕಳಾಗಿರಲಿಲ್ಲ. ಆತನು ದೇವರ ಮಹಿಮೆ ಕೇಳಿ ಯಮನೂರಿಗೆ ಬಂದು ದರ್ಶನ ಪಡೆದನು. ತನ್ನ ಇಚ್ಛೆಯನ್ನು ಪೂಜಾರಿಗಳಿಗೆ ಹೇಳಲು ಅವರು ಲಾಡಿಕಟ್ಟಿಕೊಂಡು ಪ್ರಸಾದ ಸ್ವೀಕರಿಸಿ ಭಕ್ತಿಯಿಂದ ನಡೆದುಕೊಳ್ಳುವಂತೆ ಹೇಳಲು ಅದರಂತೆ ಬಸಪ್ಪನು ಮಾಡಲು ಒಂದು ವರ್ಷದಲ್ಲಿ ಒಂದು ಗಂಡು ಮಗುವಾಯಿತು. ಮಗನಿಗೆ ಯಮನೂರಪ್ಪನೆಂದು ಹೆಸರಿಟ್ಟು, ಯಮನೂರಿಗೆ ಬಂದು ಮಗನ ತೂಕ ಸಕ್ಕರೆ ಹಂಚಿ ನೈವೇಧ್ಯ ನಂದಾದೀಪ ಅರ್ಪಿಸಿ ಮಗನು ವಿದ್ಯಾವಂತನಾಗಲೆಂದು ಬೇಡಿಕೊಂಡು ಊರಿಗೆ ಹೋದನು. ಮಗನು ದೊಡ್ಡವನಾಗಿ ಮುಲ್ಕೀ ಪರೀಕ್ಷೆ ಪಾಸಾಗಿ ವಿಜಾಪುರದಲ್ಲಿ ವಾರದ ಮನೆ ಮಾಡಿ ಊಟಮಾಡಿ ಅಭ್ಯಾಸ ಮಾಡಿ ಮ್ಯಾಟ್ರಿಕ್ ಪರೀಕ್ಷೆಯನ್ನು ಪಾಸಾದನು. ಅವರು ಮುಂದೆ ಎಲ್ಲ ಪರೀಕ್ಷೆಗಳನ್ನು ಪಾಸಾಗಿ ದೊಡ್ಡ ಅಧಿಕಾರಿಗಳಾದರಂತೆ. ಅವರು ತಮ್ಮ ಕುಟುಂಬದೊಂದಿಗೆ ಬಂದು ದೇವರಿಗೆ ನಂದಾದೀಪ, ಸಕ್ಕರೆ ಹಂಚಿದರು.

**ಉಷ್ಣರೋಗ ವಾಸಿಯಾದುದು**

ರಾಯಚೂರು ಜಿಲ್ಲೆಯ ಗಂಗಾವತಿಯಲ್ಲಿ ವೆಂಕನಗೌಡ, ಜಂಬನಗೌಡ ಪಾಟೀಲನೆಂಬ ಈಡಿಗರನು ಶೆರೆ-ಸಿಂದಿಯ ಅಂಗಡಿ ನಡೆಸುತ್ತಿದ್ದನು. ಅವನಿಗೆ ಮಧುಮೇಹ ಅಂಟಿಕೊಂಡು ಬೇಕಾದಲ್ಲಿ ತೋರಿಸಿದರೂ ಗುಣವಾಗಲಿಲ್ಲ. ಕ್ರಿ.ಶ.೧೯೨೫ರಲ್ಲಿ ಅದೇ ಊರಿನ ಡಾಕಪ್ಪ ಗವಳಿ ಎಂಬುವನು ಯಮನೂರಿಗೆ ಬಂದು ದೇವರಿಗೆ ಕಾಣಿಕೆಯಿತ್ತು ಅರ್ಚಕರಾದ ಥೊಂಡೋರಾಯರ ಸಲಹೆಯಂತೆ ೫ ದಿನವಿದ್ದು ಬೆಣ್ಣೆಹಳ್ಳದಲ್ಲಿ ಮಿಂದು ಪ್ರಸಾದ ಸ್ವೀಕರಿಸಲು ರೋಗವು ಸ್ವಲ್ಪ ಗುಣವಾಯಿತು. ಆತನು ತನ್ನೂರಿಗೆ ಹೋಗಿ ೫ ಗುರುವಾರ ಉಪವಾಸವಿದ್ದು ಸಂಗಮವರೀ ಕಲ್ಲಿನ ಸಣ್ಣ ಗುಡಕಟ್ಟಿ ಯಮನೂರಿನಿಂದ ತಂದ ಕುದುರೆ, ಪಂಜಾ ಇರಿಸಿ ಪೂಜೆ ಮಾಡಲು ರೋಗವು ಪೂರ್ಣವಾಸಿಯಾಯಿತು. ನಂತರ ಅವನು ಪ್ರತಿವರ್ಷ ಕ್ಷೇತ್ರಕ್ಕೆ ಬಂದು ಅನ್ನ ಸಂತರ್ಪಣೆ ಮಾಡಿಸಲು, ಪುತ್ರ ಭಾಗ್ಯವನ್ನು ಪಡೆದನು. ಮಗನಿಗೆ ರಾಜನಗೌಡ (ಯಮನಪ್ಪ) ಎಂದು

ಕರೆದು ಕ್ಷೇತ್ರಕ್ಕೆ ಬಂದು ಮಗನ ತೂಕ ಸಕ್ಕರೆ ಹಂಚಿ ಸನ್ ೧೯೪೦ರ ವರೆಗೆ ನಂದಾದೀಪಕ್ಕೆ ಒಂದು ಹೊಲವನ್ನು ಕೊಟ್ಟನು.

**ಮಹಾರೋಗ ನಿವಾರಣೆ**

ಗುಲಬರ್ಗಾ ಜಿಲ್ಲೆಯ ಮಿಣಜಗಿ ಹಳ್ಳಿಯಲ್ಲಿದ್ದ ಹಾಲುಮತದ ಭೀಮಪ್ಪ ಜಟ್ಟೆಪ್ಪ ಎಂಬವನಿಗೆ ಕುಷ್ಟರೋಗ ಅಂಟಿ, ಯಾವ ಔಷಧಕ್ಕೂ ಗುಣವಾಗದಿರಲು, ಅವನು ಸನ್ ೧೯೬೨ರಲ್ಲಿ ದೇವರ ಕ್ಷೇತ್ರಕ್ಕೆ ಬಂದು ಸೇವೆ ಮಾಡುತ್ತಿದ್ದನು. ದಿನಾಲು ಬೆಳಿಗ್ಗೆ ನಾಲ್ಕು ಗಂಟೆಗೆ ಎದ್ದು ಗುಡಿಯ ಅಂಗಳಪೌಳಿಯ ಕಸವನ್ನು ತೆಗೆದು ಬೆಣ್ಣೆಹಳ್ಳದಲ್ಲಿ ಮಿಂದು ದೇವರ ತೀರ್ಥ ಪ್ರಸಾದ ಸ್ವೀಕರಿಸಿ ಹೊಟ್ಟೆಯ ಪಾಡಿಗಾಗಿ ಆಡುಗಳನ್ನು ಕಾಯ್ದು ಸಾಯಂಕಾಲ ೪ ಗಂಟೆಗೆ ಮತ್ತೆ ಗುಡಿಗೆ ಬಂದು ಕಂದೀಲು ಸ್ವಚ್ಛಮಾಡಿ ದೀಪ ಹಚ್ಚಿ ಪೂಜೆಗೆ ನಿಂತು ಪ್ರಸಾದ ಸ್ವೀಕರಿಸುತ್ತಿದ್ದನು. ಐದುವಾರ ಗತಿಸಲು ರೋಗವು ಅರ್ಧ ಗುಣವಾಯಿತು. ದೇವರ ಸೇವೆಯನ್ನು ಮುಂದುವರಿಸಿ ಕೆಲದಿನವಿರಲು ಜಿಡ್ಡುಪೂರ್ಣ ವಾಸಿಯಾಯಿತು. ಭೀಮಪ್ಪನು ಆಡು ಕಾಯ್ದು ಗಳಿಸಿದ ನೂರಾರು ರೂಪಾಯಿಗಳನ್ನು ಖರ್ಚುಮಾಡಿ ಗುಡಿಯ ಮಹಾದ್ವಾರದ ಒಲಭಾಗದಲ್ಲಿರುವ ಎರಡು ಕಟ್ಟೆಗಳಿಗೆ ಪಾಟೀಕಲ್ಲು ಹಾಕಿಸಿದನು. ಭಕ್ತರು ದೂರದ ಕೇರಳ ಮದ್ರಾಸ್ ರಾಜ್ಯಗಳಿಂದಲೂ ಬರುತ್ತಲಿರುವರು.

**ಹೋರಿಯಿಂದ ದೇವರ ಸೇವೆ**

ಯಮನೂರಿನಲ್ಲಿ ತಿಪ್ಪಣ್ಣ ಹೆಗಡಿ ಎಂಬುವನ ಮನೆಯಲ್ಲಿ ಒಂದು ಹೋರಿ ಇತ್ತು. ಅದು ಪ್ರತಿ ಗುರುವಾರ ಮೇವು ನೀರನ್ನು ಮುಟ್ಟದೇ ಸಂಜೆಯಾದ ಮೇಲೆ ತಿನ್ನುತ್ತಿತ್ತು. ಒಂದು ದಿನ ಗುರುವಾರ ತಿಪ್ಪಣ್ಣನ ತಮ್ಮ ಕಾಳಪ್ಪನು ದನಗಳನ್ನು ಹೊಡೆದುಕೊಂಡು ಹೊಲಕ್ಕೆ ಹೋಗಲು ಆ ಹೋರಿಯು ಬೆಣ್ಣೆಹಳ್ಳಕ್ಕೆ ಹೋಗಿ ಈಸಾಡಿ ದೇವರ ಗುಡಿಗೆ ಬಂದು ನಂತರ ಮನೆಗೆ ಹೋಯಿತು. ಪ್ರತಿ ಗುರುವಾರ ಅದು ಹಾಗೆಯೇ ಮಾಡಲು ಮನೆಯವರು ಅದರ ಬೆನ್ನು ಹತ್ತಿ ಹೋಗಿ ಅದು ಮಾಡುತ್ತಿರುವುದನ್ನು ನೋಡಿಕೊಂಡು ಗುರುವಾರ ದಿನ ಅದನ್ನು ಹೂಡುವುದನ್ನು ಬಿಟ್ಟರು. ಅವರು ಹೋರಿಯ ಈ ಭಕ್ತಿಯನ್ನು ನೋಡಿ ತಾವೂ ಪ್ರತಿ ಗುರುವಾರ ಬೆಣ್ಣೆ ಹಳ್ಳದಲ್ಲಿ ಮಿಂದು ಗುಡಿಗೆ ಬಂದು ನಮಸ್ಕರಿಸಿ ಮನೆಗೆ ಹೋಗುತ್ತಿದ್ದರು. ಇದರಿಂದ ಅವರ ಮನೆಯು ಊರ್ಜಿತವಾಯಿತು. ಮನೆಯವರು ಆ ಹೋರಿಯನ್ನು ಚೆನ್ನಾಗಿ ನೋಡಿಕೊಂಡರು.

ಹೀಗೆ ಸಾವಿರಾರು ಮಹಿಮೆಗಳು ಈ ಕ್ಷೇತ್ರದಲ್ಲಿ ನಡೆದಿವೆ. ಚಾಂಗದೇವರ ಕ್ಷೇತ್ರ ಮಹಾತ್ಮೆಯನ್ನು ಎಷ್ಟು ಹೊಗಳಿದರೂ ಕಡಿಮೆ. ಪ್ರತಿಯೊಬ್ಬರೂ ಶ್ರೀ ಚಾಂಗದೇವರ ದಿವ್ಯ ಚರಿತ್ರೆ ಮತ್ತು ಅವರ ಕ್ಷೇತ್ರ ಮಹಿಮೆಯನ್ನು ತಿಳಿದು, ಭಕ್ತಿಯನ್ನಿಟ್ಟು ಆ ಮಹಾಮಹಿಮನ ಪರೋಪಕಾರ ಗುಣವನ್ನು ಅಳವಡಿಸಿಕೊಂಡು ಧನ್ಯರಾಗಬೇಕು.

**ದಿಲ್ಲಿಗೆ ಪ್ರಯಾಣ, ಸುಲ್ತಾನನ ಮಗನನ್ನು ಬದುಕಿಸಿದ್ದು**

ಕ್ರಿ.ಶ.೧೩ನೆಯ ಶತಮಾನದಲ್ಲಿ ದಿಲ್ಲಿಯಲ್ಲಿ ಮುಸಲ್ಮಾನರ ಆಳ್ವಿಕೆಯ ಪ್ರಾರಂಭವಾಗಿತ್ತು. ಗುಲಾಮ

ವಂಶದ ಸುಲ್ತಾನರು ಆಳುತ್ತಿದ್ದರು. ಸುಲ್ತಾನನ ಮಗನಿಗೆ ಒಂದು ರೋಗವು ಅಂಟಿಕೊಂಡಿತ್ತು. ಬಹಳ ಜನ ಹಕೀಮರು ಮತ್ತು ಹಿಂದೂ ವೈದ್ಯರು ಔಷದೋಪಚಾರವನ್ನು ಮಾಡಿದರೂ ಸಹ ಗುಣವಾಗಲಿಲ್ಲ. ಬಾದಶಹರು ಬಹಳ ಚಿಂತಿತರಾದರು. ಹಕೀಮರು "ನಿಮ್ಮ ಮಗನು ಬದುಕಬೇಕಾದರೆ ಹುಲಿಯ ಹಾಲನ್ನು ತರಿಸಿರಿ" ಎಂದು ಹೇಳಿದರು. ಬಾದಶಹರು ತಮ್ಮ ದರಬಾರಿನಲ್ಲಿದ್ದ ಶೂರ ಸರದಾರರನ್ನು ಕರೆಯಿಸಿ ಹೆಣ್ಣು ಹುಲಿಯನ್ನು ಹಿಡಿದು ಅದರ ಹಾಲನ್ನು ತರಲು ಹೇಳಿದರು. ಆದರೆ ಹುಲಿಯ ಹಾಲನ್ನು ತರುವುದು ಯಾರಿಂದಲೂ ಸಾಧ್ಯವಾಗಲಿಲ್ಲ. ಅಷ್ಟರಲ್ಲಿ ಶ್ರೀ ಚಾಂಗದೇವರು ತಮ್ಮ ಸಾವಿರಾರು ಜನ ಶಿಷ್ಯರೊಂದಿಗೆ ತ್ರೈಂಬಕೇಶ್ವರ, ಸೋಮನಾಥ, ಹರಿದ್ವಾರ ಕ್ಷೇತ್ರಗಳನ್ನು ಸಂದರ್ಶಿಸಿ ದಿಲ್ಲಿಯ ಕಡೆಗೆ ಬರುತ್ತಿದ್ದರು. ಮಹಾಯೋಗಿಗಳು ಹುಲಿಯ ಮೇಲೆ ಕುಳಿತುಕೊಂಡು, ಅದಕ್ಕೆ ಚೇಳಿನ ಕಡಿವಾಣವನ್ನು ಹಾಕಿ ನಾಗರಹಾವನ್ನು ಬಾರಕೋಲನ್ನಾಗಿ ಮಾಡಿ ಹಿಡಿದುಕೊಂಡು ಭಯಂಕರ ರೂಪವನ್ನು ತಾಳಿ ಬರುತ್ತಿದ್ದರು. ಮಹಾಸಿದ್ಧನ ಈ ವಿಚಿತ್ರ ರೂಪ ನೀತಿಗಳನ್ನು ನೋಡಿ ಜನರು ಭಯ ಭಕ್ತಿಗಳಿಂದ ನಡೆದುಕೊಳ್ಳುತ್ತಿದ್ದರು. ಅವರು ಮಾಡಿದ ಪವಾಡಗಳ ಸುದ್ದಿಗಳು ಜನರಲ್ಲಿ ಹರಡತೊಡಗಿದವು. ದಿಲ್ಲಿಯ ದರಬಾರದ ಬಂಟ ಬಾದಶಹರಿಗೆ "ಜಹಾಂಪನಾ ಯಮನೂರಿನ ಮಹಾತ್ಮಾ ಚಾಂಗದೇವರು ಹಿಂದುಗಳಲ್ಲಿ ಒಬ್ಬ ಪೀರರು. ಅವರು ಮಹಿಮಾ ಶಾಲಿಗಳು. ಅವರು ಇತ್ತ ಕಡೆಗೇ ಸಂಚರಿಸುತ್ತಾ ಬರುತ್ತಾರೆ. ಅವರನ್ನು ಕರೆಸಿಕೊಂಡು ರಾಜಕುಮಾರನನ್ನು ತೋರಿಸಿರಿ ಗುಣವಾಗುವುದು" ಎಂದನು. ಬಾದಶಹರು ಒಪ್ಪಿ ಚಾಂಗದೇವರ ಕಡೆಗೆ ತಮ್ಮ ಮಂತ್ರಿಯನ್ನು ಕಳಿಸಿದರು. ಮಂತ್ರಿಗಳು ಚಾಂಗದೇವ ಮಹಾರಾಜರನ್ನು ಭೇಟಿಯಾಗಿ ವಂದಿಸಿ ಸುಲ್ತಾನರ ವಿನಂತಿಯನ್ನು ತಿಳಿಸಿದರು. ಯೋಗಿವರ್ಯರು ತಮ್ಮ ಶಿಷ್ಯರೊಂದಿಗೆ ದಿಲ್ಲಿಯನ್ನು ಪ್ರವೇಶಿಸಿದರು. ಬಾದಶಹರು ಮಹಾಸಿದ್ಧನನ್ನು ಗೌರವದಿಂದ ಸ್ವಾಗತಿಸಿದರು. ಅವರ ಪಾದಗಳಿಗೆ ವಂದಿಸಿ ಕಾಣಿಕೆಯಿತ್ತು ಅರಮನೆಗೆ ಕರೆದೊಯ್ದರು. ಚಾಂಗದೇವರು ಹುಲಿಯ ಮೇಲೆ ಕುಳಿತುಕೊಂಡೇ ಅರಮನೆಯ ಬಾಗಿಲಲ್ಲಿ ಇಳಿದರು. ಬಾದಶಹರು ತಮ್ಮ ಮಗನು ಮಲಗಿದ ಅಂತಃಪುರಕ್ಕೆ ಅವರನ್ನು ಕರೆದೊಯ್ದು ತೋರಿಸಿದರು. ರಾಜಕುಮಾರನು ಹಾಸಿಗೆಯ ಮೇಲೆ ಶಕ್ತಿಯಿಲ್ಲದೆ ಕಳೆಗುಂದಿ ಮಲಗಿದ್ದನು. ಯೋಗಿರಾಜರು ರಾಜಕುಮಾರನನ್ನು ದಿಟ್ಟಿಸಿ ನೋಡಿದರು. ಅವರ ಶರೀರವನ್ನು ತಮ್ಮ ಹಸ್ತದಿಂದ ಸ್ಪರ್ಶಿಸಿದರು. ತಮ್ಮ ಯೋಗದಂಡದಿಂದ ಎದೆಯ ಮೇಲೆ ಸವರಿದರು. ಕೆಲಸಮಯದಲ್ಲಿಯೇ ರಾಜಕುಮಾರನು ನಿರೋಗಿಯಾದವನಂತೆ, ಮೈಯನ್ನು ಅಲ್ಲಾಡಿಸಿ ನನಗೆ ಆರಾಮ ಆಯಿತು. ನನ್ನ ರೋಗವು ಕಳೆಯಿತು". ಎಂದು ಕೂಗುತ್ತ ಎದ್ದು ಕುಳಿತನು. ರಾಜನು ತನ್ನ ಮಗನನ್ನು ಅಪ್ಪಿಕೊಂಡರು.

ಬಾದಶಹ ಮತ್ತು ರಾಣಿಯರ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದವು. ಬಾದಶಹರು ಯೋಗಿಶ್ರೇಷ್ಟನ ಪಾದಗಳಿಗೆ ಎರಗಿದರು. ಮಹಾತ್ಮರು ಬಾದಶಹರನ್ನು ಎಬ್ಬಿಸಿ, ಆಶೀರ್ವದಿಸಿದರು. ಬಾದಶಹರು ತಾವು ದೊಡ್ಡ ಪೀರರು, ರಾಜನೆಂದರೆ ನಾನಲ್ಲ ನೀವು. ಹುಲಿಯ ಮೇಲೆ ಸವಾರಿ ಮಾಡುವಂತಹ ಮಹಾತ್ಮರು ನಿಜವಾಗಿಯೂ ಈ ಜಗತ್ತಿಗೆ ಚಕ್ರವರ್ತಿಗಳು, ನೀವು ನನ್ನ ವಂಶವನ್ನು ಉಳಿಸಿದಿರಿ. ನಿಮ್ಮ ಉಪಕಾರವನ್ನು ಎಂದಿಗೂ ಮರೆಯಲಾರೆನು. ನೀವು ಹುಲಿಯ ಮೇಲೆ ಸವಾರಿ ಮಾಡುತ್ತ ನಮ್ಮಂತ ಆರ್ತರ ದುಃಖವನ್ನು ಕಡಿಮೆ ಮಾಡುವವರು. ಆದ್ದರಿಂದ ನಿಮಗೆ "ರಾಜಾ ಬಾಘಸವಾರ" ಎಂಬ

ನಿರೂಪವನ್ನಿಯುತ್ತಾನೆ. ನನ್ನ ರಾಜ್ಯದಲ್ಲಿ ನೀವು ಸಂಚರಿಸುವಾಗ್ಗೆ ಸಕಲ ಮರ್ಯಾದೆಗಳು ನಿಮಗೂ ನಿಮ್ಮ ಶಿಷ್ಯರಿಗೂ ಸಿಗುವಂತೆ ಏರ್ಪಾಡು ಮಾಡುತ್ತೇನೆಂದರು. ಹೀಗೆ ಚಾಂಗದೇವರು ತಾವು ಹೋದಲ್ಲೆಲ್ಲಾ ಪವಾಡವನ್ನು ಮಾಡುತ್ತಾ ಬಂದರು.

**ಯಮನೂರು ಕ್ಷೇತ್ರದ ಪವಾಡಗಳು**

ಯೋಗಿ ಚಕ್ರವರ್ತಿ ಶ್ರೀಚಾಂಗದೇವರಿಗೆ ಭಕ್ತಿ ಶ್ರದ್ಧೆಯಿಂದ ನಡೆದುಕೊಂಡು ಅನೇಕ ಭಕ್ತಾದಿಗಳು ತಮ್ಮ ಇಷ್ಟಾರ್ಥಗಳನ್ನು ಈಡೇರಿಸಿಕೊಂಡಿದ್ದಾರೆ. ಇತ್ತೀಚಿನ ಕೆಲವು ಉದಾಹರಣೆಗಳನ್ನು ಇಲ್ಲಿ ನಿರೂಪಿಸಲಾಗಿದೆ.

**ಸಂತಾನ ಪ್ರಾಪ್ತಿ**

ಬೆಳಗಾಂವಿ ಉದ್ಯಮ ಭಾಗ ನಿವಾಸಿ ಪ್ರಿನ್ಸಿಪಾಲ ಶ್ರೀವಸಂತರಾವ ದೇಸಾಯಿ ಅವರಿಗೆ ವಿವಾಹವಾಗಿ ೧೨ ವರ್ಷಗಳಾದರೂ ಮಕ್ಕಳಾಗಿರಲಿಲ್ಲ. ಶ್ರೀ ಚಾಂಗದೇವರಿಗೆ ಭಕ್ತಿಯಿಂದ ನಡೆದುಕೊಂಡ ಫಲವಾಗಿ ಗಂಡುಮಗುವಿನ ಜನನವಾಯಿತು. ಯೋಗಿ ಚಕ್ರವರ್ತಿ ಶ್ರೀ ಚಾಂಗದೇವರ ಅನುಗ್ರಹದಿಂದ ಪುತ್ರಪ್ರಾಪ್ತಿಯಾದುದರಿಂದ ಮಗನಿಗೆ ಯೋಗೇಶನೆಂದು ನಾಮಕರಣ ಮಾಡಿದ್ದಾರೆ. ಹೀಗೆ ಹರಕೆ ಹೊತ್ತು ಪಡೆದ ಮಕ್ಕಳಿಗೆ ಯಮನಪ್ಪ ಯಮನೂರಪ್ಪ ಎಂದು ನಾಮಕರಣ ಮಾಡುವುದುಂಟು.

**ಹುಣ್ಣುಗಳು ವಾಸಿಯಾದುದು**

ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಹಳ್ಳೂರಿನ ಶ್ರೀ ಭೀಮಪ್ಪ ಬಸಪ್ಪ ಪಾಲಬಾವಿ ಅವರಿಗೆ ಮೈತುಂಬಾ ಹುಣ್ಣುಗಳಾಗಿ ಕೀವು, ರಕ್ತ ಸೋರುತ್ತಿತ್ತು. ಅನೇಕ ಬಗೆಯ ಔಷದೋಪಚಾರ ಮಾಡಿದರೂ ಗುಣವಾಗಲಿಲ್ಲ. ಕೊನೆಗೆ ಯಮನೂರು ಸುಕ್ಷೇತ್ರದ ಶ್ರೀ ಚಾಂಗದೇವರಿಗೆ ನಡೆದುಕೊಳ್ಳತೊಡಗಿದರು. ಪ್ರತಿನಿತ್ಯ ಬೆಣ್ಣೆ ಹಳ್ಳದಲ್ಲಿ ಸ್ನಾನಮಾಡಿ ದೇವರ ದರ್ಶನ ಪಡೆಯುತ್ತಿದ್ದರು. ಸತತ ಮೂರು ವರ್ಷಗಳವರೆಗೆ ದೇವರ ಸೇವೆಯನ್ನು ಭಕ್ತಿಶ್ರದ್ಧೆಯಿಂದ ಮಾಡಿದರು. ಅದರ ಫಲವಾಗಿ ಅವರು ವಾಸಿಯಾಗಿ ಊರಲ್ಲಿ ಕುಶಲನಾಗಿದ್ದಾನೆ.

**ಕುಷ್ಠರೋಗ ನಿವಾರಣೆ**

ಕಲಬುರ್ಗಿ ಜಿಲ್ಲೆಯ ಶಹಾಪೂರ ತಾಲೂಕಿನ ಅಂಬರ್ಯಾಳ ಗ್ರಾಮದ ಶ್ರೀಭೀಮಪ್ಪ ಮಾದರ ಅವರು ಕುಷ್ಟರೋಗದಿಂದ ಬಳಲುತ್ತಿದ್ದರು. ಹತ್ತುವರ್ಷಗಳವರೆಗೆ ಯಮನೂರು ಸುಕ್ಷೇತ್ರದಲ್ಲಿಯೇ ಇದ್ದು ಭಕ್ತಿಯಿಂದ ಶ್ರೀಚಾಂಗದೇವರ ಸೇವೆ ಮಾಡಿ ಗುಣಮುಖರಾಗಿದ್ದಾರೆ.

ಹೀಗೆ ಸಾವಿರಾರು ಮಹಿಮೆಗಳು ಈ ಕ್ಷೇತ್ರದಲ್ಲಿ ನಡೆದಿವೆ. ಚಾಂಗದೇವರ ಕ್ಷೇತ್ರ ಮಹಾತ್ಮೆಯನ್ನು ಎಷ್ಟು ಹೊಗಳಿದರೂ ಕಡಿಮೆ. ಪ್ರತಿಯೊಬ್ಬರೂ ಶ್ರೀ ಚಾಂಗದೇವರ ದಿವ್ಯ ಚರಿತ್ರೆ ಮತ್ತು ಅವರ ಕ್ಷೇತ್ರ ಮಹಿಮೆಯನ್ನು ತಿಳಿದು ಭಕ್ತಿಯನ್ನಿಟ್ಟು ಆ ಮಹಾಮಹಿಮನ ಪರೋಪಕಾರ ಗುಣವನ್ನು ಅಳವಡಿಸಿಕೊಂಡು ಧನ್ಯರಾಗೋಣ.

### ೬.೪. ಪವಾಡಗಳ ತಾತ್ವಿಕ ಅನುಸಂಧಾನ

ಪವಾಡಗಳು ಅಂತರಂಗದ ವಿವೇಚನೆಗೆ ನಮ್ಮನ್ನು ಒಡ್ಡುತ್ತವೆ ನಿಜ. ಆದರೂ ಪ್ರತಿಸಂದಿಗ್ಧ ಪರಿಸ್ಥಿತಿಯಲ್ಲಿ ಪವಾಡಗಳ ಸಾರ್ವತ್ರೀಕರಣ ಮಾನವನನ್ನು ಬಂಧಿಸಿಬಿಡುತ್ತದೆ. ಎಂತಹ ವೈಚಾರಿಕ ನೆಲೆಯಲ್ಲಿ ನಿಂತು ಬಾಳುತ್ತೇನೆ. ಆ ಮೂಲಕ ಸಮಾಜದ ದಿಕ್ಕನ್ನೇ ತಿರುಚು ಮುರುಚುಗೊಳಿಸುತ್ತೇನೆ ಎನ್ನುವ ಮನುಷ್ಯ ಜೀವಿಯು ಒಂದಲ್ಲ ಒಂದು ಪವಾಡ ತಿರುವಿನೊಳಗೆ ಅರಿವಿದ್ದೋ, ಅರಿವಿಲ್ಲದೆಯೋ ಒದ್ದಾಡುವದು ಸಹಜ. ಪವಾಡಗಳು ಮೂಢನಂಬಿಕೆಯ ಮನೆಯೊಳಗೆ ತಳ್ಳಲು ಯತ್ನಿಸಿದಾಗ ಮಾತ್ರ ಸೂಕ್ಷ್ಮವಾಗಿ ಅದರ ಅಂತರವನ್ನು ಗ್ರಹಿಸುವುದು ಅವಶ್ಯಕ. ಇಲ್ಲಿ ಪವಾಡಗಳು ಸತ್ಯವೋ ಅಸತ್ಯವೋ ಎಂಬುದು ನನ್ನ ಅಧ್ಯಾಯದ ಮುಖ್ಯ ಆಶಯವಲ್ಲ. ಹಾಗೂ ಅವುಗಳ ವಿವೇಚನೆಯ ಗೋಜಿಗೆ ಹೋಗುವುದು ನನ್ನ ಉದ್ದೇಶವಲ್ಲ. ಅವುಗಳ ಅಂತರ ವಿವೇಚನೆಯು ನಾಸ್ತಿಕರಿಗೆ ಬಿಟ್ಟದ್ದು.

ಧಾರ್ಮಿಕ ಮಹಾಪುರುಷರೆಲ್ಲರೂ ಸಾಮಾನ್ಯರಂತೆಯೇ ಜನಿಸಿದರು. ಸಮಾಜದಲ್ಲಿ ಎಲ್ಲರೊಂದಿಗೆ ಬದುಕಿ ಉನ್ನತ ಧ್ಯೇಯೋದ್ದೇಶಗಳಿಂದೊಡಗೂಡಿದ ಬಾಳನ್ನು ಬಾಳಿದರೆಂಬುದನ್ನು ಮರೆಯಕೂಡದು. ಜಗತ್ತಿನ ಪ್ರಮುಖ ಧರ್ಮವೆಲ್ಲಾ ಇವರ ಚಿಂತನೆಯ ಫಲಗಳೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಇವರು ತಮ್ಮ ದಿವ್ಯಶಕ್ತಿ ಹಾಗೂ ಸಮಾಜ ಸಂಘಟನಾ ಶಕ್ತಿಯಿಂದ ಜನತೆಯನ್ನು ತಮ್ಮತ್ತ ಆಕರ್ಷಿಸಿಕೊಂಡು ಅವರಿಗೆ ತಮ್ಮ ಅನುಭಾವಗಳನ್ನು, ಧರ್ಮದ ತತ್ವಗಳನ್ನು ಜೀವನ ಮೌಲ್ಯಗಳನ್ನು ಅರುಹಿದರು. ತಾವು ನಡೆದ ಮಾರ್ಗದಲ್ಲಿಯೇ ಜನತೆಯೂ ಮುನ್ನಡೆಯುವಂತೆ ಯತ್ನಿಸಿದರು.

ಮಹಾಪುರುಷರು ಕಾಲವಾದ ನಂತರ ಹಾಗೂ ಕೆಲವೊಬ್ಬರು ಜೀವಿತ ಅವಧಿಯಲ್ಲಿಯೇ ಅವರ ಜೀವಿತದ ಹಲವಾರು ಸಂಗತಿಗಳು, ಸಂದೇಶಗಳು, ದೇಶ ವಿದೇಶಗಳಲ್ಲಿ ಹಬ್ಬಿ, ಹರಡಿ ಗ್ರಾಮಗಳಲ್ಲಿ ವ್ಯಾಪಿಸಿ ವ್ಯಕ್ತಿ ವ್ಯಕ್ತಿಗಳ ಬಾಯಲ್ಲಿ ನಲಿದು ಹಲವಾರು ರೂಪಾಂತರಗಳನ್ನು ಪಡೆದವು. ಆಯಾ ಧರ್ಮದ ಅನುಯಾಯಿಗಳು, ಭಕ್ತರು ಅವರನ್ನೂ ಸ್ತುತಿಗೈದರು. ಭಾರತೀಯ ಚಾರಿತ್ರಿಕ ಸಾಹಿತ್ಯದಲ್ಲಿ ಪವಾಡಕ್ಕೆ ಪ್ರಧಾನ ಸ್ಥಾನ. ಚರಿತ್ರೆಗೆ ಗೌಣ ಸ್ಥಾನ. ಕನ್ನಡವೂ ಇದಕ್ಕೆ ಅಪವಾದವೇನಲ್ಲ. ಶರಣರು ನಡೆದುದು ನುಡಿದುದು ಸೂರ್ಯ ಪ್ರಕಾಶದಷ್ಟೇ ಸತ್ಯವಾದರೂ ಅವರ ಚರಿತ್ರೆ ಬೆಳಕು ಕಾಣದಿರುವುದು ನಮ್ಮ ಐತಿಹಾಸಿಕ ಪ್ರಜ್ಞೆಯ ಅಭಾವದ್ಯೋತಕ (ಹಿರೇಮಠ ಆರ್.ಸಿ., ಷಟ್‌ಸ್ಥಲ ಚಕ್ರವರ್ತಿ, ಚ.ಬ., ಪು.೨೯) ಎಂಬ ಅವರ ಅಭಿಪ್ರಾಯ ಇಲ್ಲಿ ಗಮನಿಸತಕ್ಕದ್ದು.

"ಪವಾಡಗಳನ್ನು ಮಾಡಿದರೆನ್ನಲಾದ ಮಹಾನುಭಾವಿಗಳಲ್ಲಿ ಅವಧೂತರು ಮುಖ್ಯರು. ಸೂಫಿಗಳು ತಮ್ಮ ಪವಾಡಶಕ್ತಿಗಳಿಂದ ಮುಖ್ಯವಾಗಿ ಎರಡು ಕಾರ್ಯ ಮಾಡುತ್ತಾರೆ. ಒಂದು ಪ್ರತಿಷ್ಠಿತ ಶಕ್ತಿಗಳನ್ನು ಎದುರಿಸಿ ಸೋಲಿಸುವುದು. ಎರಡು ರೋಗ, ಬರಗಾಲ, ಸಾವು, ಬಂಜೆತನ ನಿವಾರಿಸುವುದು ಮುಂತಾದ ಜನತೆಯ ಕಷ್ಟಗಳಲ್ಲಿ ಬಂದು ಪರಿಹಾರ ನೀಡುವುದು" (ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪುಟ.೧೫೧). ಸಹಜವಾಗಿ ಅವಧೂತರು, ಆರೂಢರು, ಸೂಫಿಗಳು, ಸಾಧುಸಂತರು, ಅವತಾರ ಪುರುಷರು ಮಾಡಿದರೆನ್ನಲಾದ ಪವಾಡಗಳು ಇಂತಿವೆ.

೧. ಮಳೆ ತರಿಸುವುದು

೨. ಮಕ್ಕಳಿಲ್ಲದವರಿಗೆ ಸಂತಾನಭಾಗ್ಯ ನೀಡುವುದು

೩. ಬರಡು ಆಕಳು ಎಮ್ಮೆಗಳಲ್ಲಿ ಹಾಲು ತರಿಸುವುದು.

೪. ಅಮವಾಸ್ಯೆ ದಿವಸ ಚಂದ್ರನನ್ನು ಕಾಣಿಸುವುದು.

೫. ಗೋಡೆಯನ್ನು ನಡೆಸುವುದು.

೬. ರೋಗಗಳನ್ನು ಪರಿಹರಿಸುವುದು.

೭. ಸತ್ತ ದೇಹಕ್ಕೆ ಮರುಜೀವಕೊಟ್ಟಿರುವುದು.

೮. ಬಡತನ ಹೋಗಲಾಡಿಸಿ, ನಂಬಿದವರನ್ನು ಉದ್ಧಾರಗೊಳಿಸುವುದು.

೯. ಸತ್ತ ದೇಹಕ್ಕೆ ಮರುಜೀವ ಕೊಟ್ಟಿರುವುದು.

೧೦. ಅವಮಾನಗೊಳಿಸಿದವರಿಗೆ ಕೋಪಿಷ್ಟರಾಗಿ ಶಾಪಹಾಕುವುದು.

ಈ ಪವಾಡಗಳು ಮಾನವಕುಲವನ್ನು ಅಲುಗಾಡಿಸಿ ನಿರ್ಲಿಪ್ತತೆಯಲ್ಲಿ ಬದುಕನ್ನು ಬಿಗಡಾಯಿಸಿ ಬಿಡುತ್ತವೆ. ಒಮ್ಮೊಮ್ಮೆ ಹಿಮ್ಮುಖ ಮುಮ್ಮುಖವಾಗಿ ಸಾಮಾಜಿಕ ಪರಿಚಲನೆಯನ್ನು ಪ್ರಶ್ನಿಸುವಂತೆ ಮಾಡಿ ಹಮ್ಮು ಬಿಮ್ಮುಗಳ ಸೋಂಕಿನಿಂದ ಮೇಲೇಳಲು ಸಹಾಯಕವಾಗುತ್ತವೆ. ಆ ನಿಟ್ಟಿನಲ್ಲಿ ಕ್ರೌರ್ಯತ್ವದ ಗುಣವನ್ನು ಮಾಯಮಾಡಿ ನಿರ್ಮಲತ್ವವನ್ನು ಸಮಾಜದಲ್ಲಿ ಬಿತ್ತರಿಸಲು ಎತ್ತರಿಸಲು ಪವಾಡಗಳು ಸಹಾಕಾರಿಯಾಗಿವೆ. ಧಾರ್ವಿಕ ಮಹಾತ್ಮರು ಸ್ಪರ್ಶಿಸಿದರೆ ಸಾಕು ಅಸಾಧ್ಯ ಅಥವಾ ಅಸಹಜವೆನ್ನಬಹುದಾದ ಘಟನೆಗಳು ಘಟಿಸುತ್ತವೆ ಎಂಬ ನಂಬಿಕೆಯಿಂದ ಹಲವಾರು ಪವಾಡಗಳು ಸೃಷ್ಟಿಯಾಗಿವೆ. ಈ ತತ್ವಗಳ ಸೃಷ್ಟಿಗೆ ಇಂಥ ವಚನಗಳು ಪುಷ್ಟಿ ನೀಡಿರಬಹುದು. ಬಸವಣ್ಣನವರ ಪವಾಡವನ್ನು ಇದಕ್ಕೆ ನಿದರ್ಶನವಾಗಿ ನೋಡಬಹುದು.

೧೨ನೇ ಶತಮಾನದ ಕ್ರಾಂತಿಪುರುಷನಾದ ಭಕ್ತಿ ಭಂಡಾರಿ ಎನಿಸಿರುವ ಬಸವಣ್ಣನವರ ಜೀವನದಲ್ಲಿ ಅನೇಕ ಪವಾಡಗಳು ನಡೆದಿವೆ.

ಒಮ್ಮೆ ಬಸವಣ್ಣನವರು ಸತಿಸುತಾದಿಗಳನ್ನು ಕರೆದುಕೊಂಡು ಕಪ್ಪಡಿಯ ಸಂಗಮನಾಥನ ದಾರಿಯನ್ನು ಹಿಡಿದು ಕಾಲ್ನಡಿಗೆಯಲ್ಲಿ ಹೋಗುತ್ತಿರುವಾಗ, ಸ್ವಲ್ಪ ದೂರದವರೆಗೆ ಬಂದ ಮೇಲೆ ಓರ್ವ ಅಯ್ಯನವರು ಲಿಂಗಮುದ್ರೆಯುಳ್ಳ ಒಂದು ಬರಡು ಗೋವನ್ನು ಕರೆದುಕೊಂಡು ಬರುತ್ತಿದ್ದರು. ಆ ಜಂಗಮಮೂರ್ತಿಯನ್ನು ನೋಡಿದ ಕೂಡಲೆ ಬಸವಣ್ಣನವರು ಸಾಷ್ಟಾಂಗ ನಮಸ್ಕಾರ ಮಾಡಿದರು. ಬಸವಣ್ಣನವರ ಪರಿವಾರ ಮತ್ತು ಆ ಜಂಗಮಮೂರ್ತಿಗಳು ಕಾಡಿನಲ್ಲಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡರು. ಆ ಮೇಲೆ ಸ್ವಾಮಿಗಳೇ ತಾವು ಶಿವಾರ್ಚನೆಯನ್ನು ಮಾಡಿರಿ ಎಂದು ಬಸವಣ್ಣನವರು ಹೇಳಲು, ಎಲೈ ಬಸವೇಶ್ವರರೇ ನಮ್ಮ ಹಾಲಿನ ನೇಮವು ನಿಮಗೆ ಗೊತ್ತೇ ಇದೆ. ಈ ಕಾಡಿನಲ್ಲಿ ಹೇಗೆ ಅನುಕೂಲವಾಗುವುದು ಎಂದರು. ಆಗ ಬಸವಣ್ಣನವರು ತಾವೇನು ಕಾಳಜಿ ಮಾಡಬೇಡಿರಿ ಎಂದು ಅಯ್ಯನವರು ತಂದ ಆಕಳಿನ ಕೆಚ್ಚಲಿನಲ್ಲಿ ಶಿವ ಶಿವ ಎಂದು ಕೈಯಾಡಿಸಲು ಕ್ಷೀರವು ಉಕ್ಕಿ ಸುರಿಯಲಾರಂಭಿಸಿತು. ಕ್ಷೀರವನ್ನು ತೆಗೆದುಕೊಂಡು ಹೋಗಿ ಸ್ವಾಮಿಗಳ ಶಿವಾರ್ಚನೆಗೆ ವ್ಯವಸ್ಥೆಯನ್ನು ಮಾಡಿದರು.

ಆಗ ದೈವಭಕ್ತರಿಗೆ ಯಾವುದು ಅಸಾಧ್ಯ ಎನ್ನುವುದು ಇಲ್ಲ ಎಂದು ಬಸವಣ್ಣನವರು ನೀ ನೊದಡೆ ಕೊರಡು ಕೊನರುವುದಯ್ಯಾ....

"ನೀನೊಲಿದರೆ ಕೊರಡು ಕೊನರುವುದಯ್ಯಾ

ನೀನೊಲಿದಡೆ ಬರಡು ಹಯನಹುದಯ್ಯಾ

ನೀನೊಲಿದಡೆ ವಿಷವು ಅಮೃತವಹುದಯ್ಯಾ

ನೀನೊಲಿದಡೆ ಸಕಲ ಪಡಿಪದಾರ್ಥ

ಇದರಲ್ಲಿರ್ಪವು ಕೂಡಲಸಂಗಮದೇವಾ"

ಈ ಮೇಲಿನ ಬಸವಣ್ಣನವರ ವಚನ ತಿಳಿಸುವಂತೆ ಆ ಪರಮಾತ್ಮ ಒಲಿದರೆ ಅಸಾಧ್ಯವಾದುದು ಯಾವುದು ಇಲ್ಲ.

ಸಧ್ಯದ ಪರಿಸ್ಥಿತಿಯೊಳಗೆ ಪವಾಡಗಳು ಹಲವೊಮ್ಮೆ ದಿಢೀರನೆ ಹುಟ್ಟುತ್ತವೆ. ಬೈಬಲ್‌ನ ಹೊಸ ಒಡಂಬಡಿಕೆ ಭಾಗದಲ್ಲಿ ಈ ಪ್ರಸಂಗವನ್ನು ಗಮನಿಸಬಹುದು. 'ಕಾನಾ' ಎಂಬ ಊರಿಗೆ ತನ್ನ ತಾಯಿಯಾದ ಮರಿಯಮ್ಮಳೊಂದಿಗೆ ಮದುವೆಗೆ ಹೋಗುತ್ತಾನೆ. ದ್ರಾಕ್ಷಾರಸವು ಮುಗಿದು ಹೋಯಿತು. ದ್ರಾಕ್ಷಾರಸವೆಂಬುದು ಆ ಕಾಲದಲ್ಲಿ ಮದುವೆಯ ಸಂದರ್ಭದಲ್ಲಿ ನೀಡುತ್ತಿದ್ದ ಉಪಚಾರ. ತಾಯಿ ಮರಿಯಾಳು ಬಂದು ದ್ರಾಕ್ಷಾರಸ ಖಾಲಿಯಾಗಿದೆ. ಏನಾದರೂ ಮಾಡು ಎಂದು ಹೇಳಿದಳು. ಯೇಸು ಅಲ್ಲಿದ್ದವರಿಗೆ ಬಾನೆಗಳಲ್ಲಿ ನೀರನ್ನು ತುಂಬಿರಿ ಎಂದು ಹೇಳುತ್ತಾರೆ. ಕೂಡಲೇ ಆ ಬಾನೆಗಳಲ್ಲಿದ್ದ ನೀರು ದ್ರಾಕ್ಷಾರಸವಾಗಿ ಮಾರ್ಪಟ್ಟು ಮದುವೆ ಮನೆಯವರ ಗೌರವ ಉಳಿಯಲು ಕಾರಣವಾಯಿತು. ಅದು ಯೇಸುವಿನ ಮೊದಲನೆಯ ಅದ್ಭುತಕಾರ್ಯ ಎಂದು ಬೈಬಲ್ ತಿಳಿಸುತ್ತದೆ.

ಮನುಷ್ಯರ ಬದುಕಿಗೆ ಹತ್ತಿರವಾದ ಇಂಥ ಪವಾಡಗಳನ್ನು ನಾವು ವೈಚಾರಿಕ ಹಿನ್ನಲೆಯಲ್ಲಿ ತಿರಸ್ಕರಿಸಿದರು. ಅವುಗಳು ಸಮಾಜದಲ್ಲಿ ಅವಮಾನದಿಂದ ತಪ್ಪಿಸಿಕೊಂಡು ತಮಗೆ ಸಹಾಯ ಮಾಡಿದ ದೈವಗಳನ್ನು ಆರಾಧ್ಯ ಪುರುಷರಿಗೆ ಕೊನೆಯವರೆಗೂ ಋಣಿಯಾಗಿರುವುದು ಕಂಡುಬರುತ್ತದೆ.

ಸತ್ತು ಮೂರು ದಿವಸ ಸಮಾಧಿಯಲ್ಲಿದ್ದ ಲಾಜರ್‌ನನ್ನು ಯೇಸುವು ಬದುಕಿಸಿದ್ದು, ಐದುರೊಟ್ಟಿ ಎರಡು ಮೀನು ಐದು ಸಾವಿರ ಜನಕ್ಕೆ ಊಟ ಮಾಡಿಸಿದ್ದು, ಕುರುಡರಿಗೆ ಕಣ್ಣು ಕೊಟ್ಟಿದ್ದು, ಮೂರ್ಛಾರೋಗಿಯನ್ನು ಸ್ವಸ್ಥಮಾಡಿದ್ದು, ರಕ್ತ ಕುಸುಮರೋಗದಿಂದ ನರಳುತ್ತಿದ್ದ ಹೆಂಗಸನ್ನು ಗುಣಪಡಿಸಿದ್ದು. ಮಹಾಯೋಗದಿಂದ ನರಳುತ್ತಿದ್ದ ಹೆಂಗಸನ್ನು ಗುಣಪಡಿಸಿದ್ದು. ಮಹಾರೋಗವಾದ ಕುಷ್ಟರೋಗವನ್ನು ಹೊಂದಿದ್ದ ಬುಟ್ಟಿ ಹೆಣೆದು ಜೀವನ ಸಾಗಿಸುತ್ತಿದ್ದ ಆ ವ್ಯಕ್ತಿಯನ್ನು ಸ್ವತಃ ಆತನ ಹೆಂಡತಿ ಮಕ್ಕಳೇ ಆತನನ್ನು ಮನೆಯಿಂದ ಓಡಿಸಿದ್ದರು. ಹೇಸಿಕೆ ತಿರಸ್ಕಾರ ಜಿಗುಪ್ಸೆಯಿಂದ ಜನ ದೂರ ಸರಿಯುತ್ತಿದ್ದರು. ಅಂತಹ ವ್ಯಕ್ತಿಯನ್ನು ಬಸವಣ್ಣನವರು ಕಂಡು ಸ್ವತಃ ತಾವೇ ಸ್ನಾನ ಮಾಡಿಸಿ ಆ ಗಾಯಗಳನ್ನು ಸ್ವಚ್ಛವಾಗಿ ತೊಳೆದು ಅದಕ್ಕೆ ಔಷಧಹಚ್ಚಿ, ವ್ಯಕ್ತಿಯನ್ನು ಗುಣಪಡಿಸಿದರು.

ಬಸವಣ್ಣನವರನ್ನು ಕಂಡರೆ ಕೆಲವು ಜನರು ಸಹಿಸುತ್ತಿರಲಿಲ್ಲ. ಮಹಾಮನೆಯಲ್ಲಿ ಲಿಂಗವಿಲ್ಲದವರಿಗೆ ಪ್ರವೇಶವಿರಲಿಲ್ಲ. ಆದರೆ ಕೆಲವು ಕುಹಕಿಗಳು ಬದನೆಕಾಯಿಯನ್ನು, ಕೆಲವರು ಕಲ್ಲುಗಳನ್ನು ಕೊರಳಲ್ಲಿ ಕಟ್ಟಿಕೊಂಡು ಬಂದಿದ್ದರು. ಅದನ್ನು ನೋಡಿದ ಭಕ್ತರು ಬಸವಣ್ಣನವರಿಗೆ ವಿಷಯ ತಿಳಿಸಿದರು. ಆಗ ಬಸವಣ್ಣನವರು ಸಮಾಧಾನದಿಂದ ವಿಷಯ ತಿಳಿಸಿದರು. ಆಗ ಬಸವಣ್ಣನವರು ಸಮಾಧಾನದಿಂದ ಹೋಗಿ ನೋಡಿರಿ ಎಂದಾಗ ಅವರು ನೋಡಿದರೆ ಆ ಬದನೆಕಾಯಿ ಕಲ್ಲುಗಳು, ಲಿಂಗಗಳಾಗಿದ್ದವು. ಇದರಿಂದ ನೊಂದ ಆ ಕುಹಕಿಗಳು, ಬಸವಣ್ಣನವರ ಭಕ್ತರಾಗುತ್ತಾರೆ. ಇವೆಲ್ಲಾ ಸಮಾಜದಲ್ಲಿ ಹೊಸ ನಿಲುವುಗಳನ್ನು ಕಾಣಲು ಸಾದ್ಯವಾಗಿಸಿವೆ ಎಂದು ಧರ್ಮಗ್ರಂಥಗಳು ಸಾರುತ್ತವೆ. ಪವಾಡಗಳು ನಡೆದಿಲ್ಲದಿದ್ದರೆ ಇಂದು ಬೃಹತ್ತಾಗಿ ಸೃಷ್ಟಿಯಾಗಿರುವ ಮಹಾಕಾವ್ಯಗಳೇ ಹುಟ್ಟುತ್ತಿರಲಿಲ್ಲ. ಮಹಾಕಾವ್ಯಗಳಲ್ಲಿ ವರ್ಣಿತವಾಗಿರುವ ಪವಾಡ ಪ್ರಸಂಗಗಳೇ ಇದಕ್ಕೆ ಕಾರಣ.

ಪ್ರವಾಹದಿಂದ ಬದುಕುಳಿಯುವುದು, ನದೀ ತೀರದ ಸಂತರೆಲ್ಲ ಕಂಬಳಿಹಾಸಿ ನದಿಯನ್ನು ದಾಟುವ ಪವಾಡ ಮಾಡುತ್ತಾರೆ. ಡೋಂಗ್ರಿ ಸಾಬನು ಕೃಷ್ಣೆಯನ್ನು ಹೀಗೆ ದಾಟುತ್ತಾನೆ. ಮೋನಪ್ಪ ಅಬ್ಬರಿಸುವ ಕೃಷ್ಣೆಯನ್ನು ನಿಶ್ಯಬ್ದಳಾಗಿಸುತ್ತಾನೆ. ಕಡಲಬದಿ ಇರುವ ಸಂತರು ನೀರಲ್ಲಿ ಮುಳುಗದಂತೆ ಜನರನ್ನು ಉಳಿಸುವರು. ಮುಳುಗದ ದೋಣಿಯನ್ನು ಇಟ್ಟುಕೊಂಡಿದ್ದ ಚಿತಾಕುಲದ (ಕಾರವಾರ) ಶಮ್ಸುದ್ದೀನನು ಸಹಜವಾಗಿ ಬೆಸ್ತರ ದೈವವಾಗಿದ್ದಾನೆ. ನವಲಗುಂದದ ಅಜಾತ ನಾಗಲಿಂಗನು ಸಮಗಾರ ಭೀಮವ್ವನ ಎದೆ ಹಾಲುಂಡದ್ದು, ಮತ್ತು ಮುಳುಗುಂದದ ಬಾಲಲೀಲಾ ಮಹಾಂತ ಶಿವಯೋಗಿಗಳು ಗಂಡಸತ್ತ ಶರಣೆ ಬಸವಾಂಬೆಯ ತೊಡೆಯ ಮೇಲೆ ಮಲಗಿ ಆಕೆಯ ಮೊಲೆಯುಂಡದ್ದು. ಇವೆಲ್ಲವುಗಳು ಪವಾಡಗಳೇ. ಪವಾಡಗಳ ತಾತ್ವಿಕ ನೆಲೆಯಲ್ಲಿ ಧಾರ್ಮಿಕ ಔನ್ನತ್ಯ ಮೆರೆದ ಬಹುತೇಕರು ಸಮಾಜದೊಳಗೆ ಎದುರಾದ ಸಮಸ್ಯೆಗಳಿಂದ ಹೆದರದೆ ತಮ್ಮದೇ ಆದ ಲೀಲೆಗಳಿಂದ ಪಾಠಕಲಿಸುತ್ತಾರೆ.

ಬಸವಣ್ಣನು ತನ್ನ ಪವಾಡ ಶಕ್ತಿಯಿಂದ ಅರಮನೆಯನ್ನು ಕಿಚ್ಚೆದ್ದು ಉರಿಯುವಂತೆ ಮಾಡಿದಾಗ ಇಡೀ ಅರಮನೆಯ ಭಂಡಾರ ನಾಶವಾಗಿ ಹೋಗುತ್ತದೆ. ಆಗ ಭಂಡಾರದ ಲೆಕ್ಕವ ಕೊಡುವುದು "ಲೆಕ್ಕವ ಕೊಡುವುದೇಕೆ ಮುಕ್ಕಾಲು ಮೂರು ಜಾವ" ಎಂದು ಹೇಳಿದರೆ ಕೊಂಡಿ ಮಂಚಣ್ಣನವರು ಅಪಹಾಸ್ಯಗೈದಿದ್ದನ್ನು ನೊಂದು ಬಸವಣ್ಣ ಲೆಕ್ಕಕೊಡಲು ಕರಣಿಕರನ್ನು ಕರೆಸುತ್ತಾನೆ.

"ಪಟ್ಟು ಪಚ್ಚಿವಳಿ ಕಟ್ಟು ಬಣ್ಣದ ನಾಣ್ಯ
ಪೆಟ್ಟಿ ಪೆಟ್ಟಿಗೀಲಿ ತೆರಸಿರ ಬಸವಣ್ಣ
ಮುಟ್ಟಿ ಲೆಕ್ಕಗಳ ಕೊಡುತಾನೆ"

ಹೀಗೆ ಲೆಕ್ಕ ಕೊಡುವಾಗ "ಬರೆವ ಕರಣಿಕರ ಹರಣ ನಡುಗಿದವು" ಬಸವಣ್ಣನು ಪರಿಸ್ಥಿತಿಯನ್ನು ಗಮನಿಸಿ ಮೂರು ಮಧ್ಯಾಹ್ನದಲ್ಲಿ ಸೂರ್ಯನನ್ನು ನಿಲ್ಲಿಸುತ್ತಾನೆ. ನಿಸರ್ಗದಲ್ಲಿ ಉಂಟಾದ ತಲ್ಲಣಗಳಿಂದ ಭಯಭೀತವಾದ ಪರಿಸ್ಥಿತಿಗೆ ಲೆಕ್ಕವು ಮುಗಿದು ಬಸವಣ್ಣ ತನ್ನ ಆಣೆಯನ್ನು ಹಿಂದಕ್ಕೆ ಪಡೆಯುತ್ತಾನೆ.

ಶ್ರದ್ಧೆ ಹಾಗೂ ಮೂಢನಂಬಿಕೆ ಇವುಗಳಲ್ಲಿರುವ ಸೂಕ್ಷ್ಮ ಅಂಶವನ್ನು ಗಮನಿಸುವುದು ಅವಶ್ಯಕ. ನಂಬಿಕೆ ದೃಢವಾಗಿದ್ದು ಸಂದಿದೆ. ಸಂದೇಹವಿಲ್ಲದಂತಹ ಶ್ರದ್ಧೆಯನ್ನು ಕುದುರಿಸುವಂತಿದ್ದರೆ ಸಾಧಕನ ಆಚಾರ

ವಿಚಾರಗಳಲ್ಲಿ ಸಂಕುಚಿತತೆ, ದೌರ್ಬಲ್ಯ ತಲೆಯಿಕ್ಕದಂತೆ ಶುದ್ಧವಾಗಿ ಇರುವಂತಿದ್ದರೆ, ವ್ಯರ್ಥ ತಾರ್ಕಿಕತೆಯಿಂದಾಗುವ ಪ್ರಯೋಜನವಾದರೂ ಏನು? ಎಲ್ಲ ಸಾಧನೆಗಳ ಗುರಿಯೂ ಅಂತರಂಗದ ಶುದ್ಧಿ ತಾನೆ? ಇದಿಲ್ಲದೆ ಪವಾಡಗಳನ್ನು ನಮ್ಮ ಜನತೆ ಮೂಲತಃ ಸಾಂಕೇತಿಕ ಸ್ವರೂಪದಲ್ಲಿ ಗ್ರಹಿಸಿದ್ದರೆ ಹೊರತು ಶಬ್ದಶಃ ಅಲ್ಲ, ಪ್ರತಿಯೊಂದು ಪವಾಡಗಳ ಹಿಂದೆ ಇರುವ ಮಹಿಮಾನ್ವಿತ ಆಚಾರ ವಿಚಾರಗಳನ್ನೇ ಅವರು ಮೆಚ್ಚಿಕೊಂಡಿದ್ದಂತೆ ತೋರುತ್ತದೆ. ಹೀಗಾಗಿ ಪವಾಡಗಳು ನಮ್ಮ ಜನತೆಯಲ್ಲಿ ಧಾರ್ಮಿಕ ಮಹಾಪುರುಷರ ಹಾಗೂ ತತ್ವಗಳ ಬಗೆಗೆ ಶ್ರದ್ಧೆಯನ್ನು ಮೂಡಿಸಿ ಅವರನ್ನು ಸಾಧನೆಗೆ ಅಣಿಗೊಳಿಸಬೇಕೆ? ವಿನಾ ಅವರಲ್ಲಿ ಅಂಧ ಶ್ರದ್ಧೆಯನ್ನಾಗಲೀ ಮೂಢನಂಬಿಕೆಯನ್ನಾಗಲೀ ಹುಟ್ಟಿಸತಕ್ಕದ್ದಲ್ಲ.

"ಯದಾಯದಾ ಹಿ ಧರ್ಮಸ್ಯೈಗ್ಲಾನಿಭವತಿ ಭರತ
ಅಭ್ಯುತ್ಥಾನಮ ಧರ್ಮಸ್ಯೈ ತದಾತ್ಮಾನಂ ಸೃಜಾತ್ಯುಹಂ
ಪರಿತ್ರಾಣಾಯ ಸಾಧೂನಾಂ ವಿನಾಶಾಯ ದುಷ್ಕೃತಾಮಾ
ಧರ್ಮಸಂಸ್ಥಾನಾರ್ಥಾಯ ಸಂಭವಾಮಿ ಯುಗೇ ಯುಗೇ"

(ಚಿದಂಬರಯ್ಯ ಹೊಸಕೆರೆ ಗೀತಾರ್ಥ ಚಂದ್ರಿಕೆ ಅಧ್ಯಾಯ ೪ ಶ್ಲೋಕ ೭-೮) ಧರ್ಮಕ್ಕೆ ಗ್ಲಾನಿಬಂಧ ಅದಮರು ಹೆಚ್ಚಾದಾಗ, ಸಜ್ಜನರ ರಕ್ಷಣೆ, ದುರ್ಜನರ ನಾಶ, ಧರ್ಮದ ಪುನರುತ್ಥಾನಗಳಿಗಾಗಿ ಯುಗಯುಗಗಳಲ್ಲಿಯೂ ನಾನು ಅವತರಿಸುತ್ತೇನೆ ಎಂಬುದು ಗೀತವಚನದ ಸಾರ, ಅವತಾರ ಎಂಬುದು ಸಾದೃಶ್ಯ ಅಸಾದೃಶ್ಯಗಳ ನಡುವಿನ ಬಂಧವಾಗಿದೆ.

ಇಲ್ಲಿ ಪವಾಡಗಳನ್ನು ಹೇಗೆ ಪರಿಗಣಿಸುವುದು? ಯಾವುದೋ ವೈಚಾರಿಕ ನೆಲೆಯಿಂದ ಪವಾಡಗಳನ್ನು ನೋಡಬೇಕೆ? ಪವಾಡವೆಂದರೆ ವಾಸ್ತವವನ್ನು ಮೀರುವ ಹಂಬಲ. ಎಲ್ಲ ಮನಸ್ಸುಗಳಲ್ಲೂ ಈ ಹಂಬಲವಿದೆ. ಕಲ್ಪನೆಯೇ ಪವಾಡವಲ್ಲವೇ? ಪವಾಡಗಳು ಸರಿಯೋ ತಪ್ಪೋ ಎಂದು ವಿಚಾರ ಮಾಡುವುದೇ? ಪವಾಡಗಳನ್ನು ಅಲ್ಲಗಳೆಯುವುದೆಂದರೆ ಡಾಂಟೆ, ಹೋಮರ್ ವರ್ಜಿಲ್ ಮಿಲ್ಟನ್ ಎಲ್ಲರನ್ನು ಅಲ್ಲಗಳೆದಂತೆ, ಮೇನಕೆ ಶಕುಂತಲೆಯನ್ನೆತ್ತಿಕೊಂಡು ಹೋದರೆ ಕಾಳಿದಾಸ ನಾಟಕದ ಸ್ವರೂಪವೇನು? ನಾವೇಕೆ ಪವಾಡಗಳ ಬಗೆಗೆ ಆತಂಕಿತರಾಗಿದ್ದೇವೆ? ಟಿ.ವಿ. ಸ್ವಿಚ್‌ಹಾಕಿದೊಡನೆ ಕುಣಿಸುವುದು ಪವಾಡವೇ.

ಮೇಲಿನ ಪವಾಡಗಳ ನೆಲೆಗಳು ಮೂಲತಃ ಆಧುನಿಕೋತ್ತರ ಸಮಾಜದ ನಿಲುವಿಗೆ ತರ್ಕಬದ್ಧವಾಗಿದ್ದರೂ ಅವುಗಳನ್ನು ಒಪ್ಪಲೇಬೇಕಾದ ಪರಿಣಾಮಗಳು ಜನತೆಯ ಮೇಲೆ ಆಗಿರುವುದನ್ನು ಕಾಣುತ್ತೇವೆ. ಈ ಉದ್ದೇಶದಿಂದಲೇ ಅವತರಿಸಿದ ಧಾರ್ಮಿಕ ಮಹಾಪುರುಷರನ್ನು ಜಗತ್ತಿನ ಎಲ್ಲಾ ಪ್ರಮುಖ ಧರ್ಮಗಳಲ್ಲೂ ಕಾಣಬಹುದು. ಯೇಸುವು ದೇವರ ಪುತ್ರ. ದೇವರ ಅಂಶವೆಂದು ಬಗೆದರೆ ಬುದ್ಧ ಬಸವನನ್ನು ವಿಷ್ಣುವಿನ ಅವತಾರವೆನ್ನಲಾಗಿದೆ. ಇಲ್ಲಿ ಮುಖ್ಯವಾಗಿರುವುದು ಅವರ ಅವತಾರಕ್ಕಿಂತ ಜನಸಾಮಾನ್ಯರ ಬಾಧೆಗಳನ್ನು ಬಗೆಹರಿಸಿ ಭಕ್ತರ ಬಯಕೆಗಳನ್ನು ಈಡೇರಿಸುವುದು. ಪವಾಡಗಳೇ ಕೇಂದ್ರತ್ವ ಪಡೆಯುತ್ತವೆ. ಎಲ್ಲ ಅಂಶಗಳೂ ಇಲ್ಲಿ ಒಂದರೊಳಗೊಂದು ವಿಚಿತ್ರವೆಂಬಂತೆ ತಳುಕು ಹಾಕಿಕೊಂಡಿವೆ. ಶುದ್ಧಶಾಸ್ತ್ರೀಯ ಮಾರ್ಗದಲ್ಲಿ ಹೊರಟರೆ ನಮಗೇನೂ ದಕ್ಕದು. ಹಾಗಾಗಿ ಪವಾಡಗಳನ್ನು ಜನತೆಯ ಬದುಕಿನ ಭಾಗಗಳಾಗಿ ಬೆಂಬಿಡದೆ ಹಾಸುಹೊಕ್ಕಾಗಿವೆ.

**ರಾಜಭಾಗ ಸವಾರ ಚಾಂಗದೇವರ ಇತರೆ ಶಾಖೆಗಳು**

೧. ರಾಜಾಭಾಗ ಸವಾರ ದೇವಸ್ಥಾನ-ರಾಮದುರ್ಗ, ಜಿ.ಬೆಳಗಾವಿ

೨. ರಾಜಾಭಾಗ ಸವಾರ ದೇವಸ್ಥಾನ-ಕೊಪ್ಪಳ, ಜಿ.ಕೊಪ್ಪಳ

೩. ಚಾಂಗದೇವ ದೇವಸ್ಥಾನ-ಹುಬ್ಬಳ್ಳಿ, ಜಿ.ಧಾರವಾಡ

೪. ರಾಜಾಭಾಗ ಸವಾರ ದೇವಸ್ಥಾನ-ಹಿಪ್ಪರಗಿ ತಾ. ಬ ಬಾಗೇವಾಡಿ ಜಿ.ವಿಜಾಪುರ

೫. ಯಮನೂರಪ್ಪ ಗುಡಿ-ದೊಡ್ಡ ಮಾಗಡಿಹಳ್ಳಿ ತಾ.ರಾಮದುರ್ಗ, ಜಿ.ಬೆಳಗಾವಿ

೬. ಚಾಂಗದೇವ ದೇವಾಲಯ-ನಿಪ್ಪಾಣಿ, ಜಿ.ಬೆಳಗಾವಿ

೭. ರಾಜಾಭಾಗ ಸವಾರ ದೇವಸ್ಥಾನ-ಚಿಂಚಲಿ ತಾ.ಗದಗ, ಜಿ.ಗದಗ

೮. ರಾಜಾಭಾಗ ಸವಾರ ದೇವಸ್ಥಾನ-ಮಲ್ಲಸಮುದ್ರ ತಾ.ಗದಗ, ಜಿ.ಗದಗ

೯. ಚಾಂಗದೇವ ದೇವಸ್ಥಾನ-ಕೋರೇಗಾಂವ್ ಜಿ. ಸತಾರ ಮಹಾರಾಷ್ಟ್ರ

೧೦. ಚಾಂಗದೇವ ದೇವಸ್ಥಾನ-ಪುಣತಾಂಬೆ ಜಿ. ಸತಾರಾ ಮಹಾರಾಷ್ಟ್ರ

೧೧. ರಾಜಾಭಾಗ ಸವಾರ ದೇವಸ್ಥಾನ-ಕಟಗಾಂವ್ ಜಿ.ಸತಾರ ಮಹಾರಾಷ್ಟ್ರ

೧೨. ಚಾಂಗದೇವ ದೇವಾಲಯ-ಇದಲಾಬಾದ್ ಜಿ.ಖಾನದೇಶ ಮಹಾರಾಷ್ಟ್ರ

**ಅಡಿ ಟಿಪ್ಪಣಿ**

೧. ಚಂದ್ರಶೇಖರ ಶಾಸ್ತ್ರಿ ಹಿರೇಮಠ ವಿರಚಿತ, ಬಸವ ತತ್ವರತ್ನಾಕರ ಪ್ರಕಾಶಕರು, ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ ಶ್ರೀ ಮುರುಘಾಮಠ, ಧಾರವಾಡ ಪರಿಷ್ಕರಣ, ಚಂದ್ರಶೇಖರ ವಸ್ತ್ರದ

## ಅಧ್ಯಾಯ ಏಳು

# ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳು

ಅಭಿವೃದ್ಧಿ ಹೊಂದುವುದು ಪ್ರತಿಯೊಂದು ದೇಶದ ಆಶಯ. ಈ ಆಶಯವನ್ನು ಈಡೇರಿಸಲು ಹಲವಾರು ಪ್ರಯತ್ನಗಳು ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಡೆದಿವೆ. ಹಲವು ವಿಭಾಗಗಳಲ್ಲಿ, ಕ್ಷೇತ್ರಗಳಲ್ಲಿ ಸಾಕಷ್ಟು ಅಭಿವೃದ್ಧಿಯನ್ನು ಸಾಧಿಸಿದೆ.

ಭಾರತದ ಮಟ್ಟಿಗೆ ಅಭಿವೃದ್ಧಿ ಎನ್ನುವುದು ದೆಹಲಿ, ಮುಂಬೈ, ಮದ್ರಾಸ್, ಕಲ್ಕತ್ತಾ, ಬೆಂಗಳೂರು ನಂತಹ ಮಹಾನಗರಗಳಿಗೆ ಸೀಮಿತವಾಗಿ ಉಳಿದಿಲ್ಲ. ಈ ದೇಶದ ಜೀವನಾಡಿಗಳಾದ ಹಳ್ಳಿಗಳು ಅಭಿವೃದ್ಧಿಯಾದಾಗ ಮಾತ್ರ ದೇಶ ಅಭಿವೃದ್ಧಿಯಾಗಿದೆ ಎಂದು ತಿಳಿಯಬಹುದು. ಸ್ವತಂತ್ರ ಭಾರತದಲ್ಲಿ ರಾಷ್ಟ್ರಪಿತ ಗಾಂಧೀಜಿಯವರ "ಗ್ರಾಮ ಸ್ವರಾಜ್"ದ ಮೂಲ ಕಲ್ಪನೆಯ ತಳಹದಿಯ ಮೇಲೆ ಅಭಿವೃದ್ಧಿಯ ಸೌಧವನ್ನು ಕಟ್ಟಲು ಸಾಕಷ್ಟು ಪ್ರಯತ್ನಗಳು ನಡೆದರೂ, ಅದರಿಂದ ನಿರೀಕ್ಷಿತ ಮಟ್ಟದ ಸಾಧನೆಯನ್ನು ಮಾಡಲಾಗಲಿಲ್ಲ. ಗ್ರಾಮೀಣಾಭಿವೃದ್ಧಿಯ ಪ್ರಮುಖ ಚಿಂತಕರಾದ ದಿ.ಎಸ್.ಕೆ.ಡೇ. ಅವರ ಚಿಂತನೆಯ ಫಲವಾಗಿ ಆರಂಭಗೊಂಡ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳಾಗಲಿ ಆನಂತರದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನುಷ್ಠಾನಗೊಳಿಸಿದ ಹತ್ತು ಹಲವು ಯೋಜನೆಗಳಿಂದಾಗಲಿ ನಮ್ಮ ದೇಶದಲ್ಲಿ ಗ್ರಾಮೀಣ ಭಾರತದ ನೈಜ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಬೇಕಾದ ಸಾಂಸ್ಥಿಕ ವ್ಯವಸ್ಥೆ ಇರಲಿಲ್ಲ. ಈ ಲೋಪವನ್ನು ಸರಿಪಡಿಸುವಲ್ಲಿ ಹಲವು ವರ್ಷಗಳ ಚಿಂತನೆ ಮತ್ತು ಪರಿಶ್ರಮದ ಫಲವಾಗಿ ನಮ್ಮ ದೇಶದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ನಾವು ಕಾಣುತ್ತಿದ್ದೇವೆ. ಈ ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ಥರದಲ್ಲಿರುವ ಗ್ರಾಮ ಪಂಚಾಯತಿ ಗ್ರಾಮೀಣ ಜನರ ಆಶೋತ್ತರಗಳಿಗೆ ಸ್ಪಂದಿಸುವ ಮೂಲಕ ಮತ್ತು ಎಲ್ಲಾ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಯೋಜಿಸಿ ರೂಪಿಸಿ ಅನುಷ್ಠಾನಗೊಳಿಸುವ ಮೂಲಕ ಗ್ರಾಮೀಣಾಭಿವೃದ್ಧಿಯ ಗತಿ ಹೆಚ್ಚುತ್ತಿದೆ ಎನ್ನುವ ಭರವಸೆ ಇಂದು ಸ್ವಲ್ಪ ಮಟ್ಟಿಗಾದರೂ ನನಸಾಗಿಸುವ ವಾಸ್ತವವನ್ನು ನಾವು ಕಾಣುತ್ತಿದ್ದೇವೆ. ಕರ್ನಾಟಕದಲ್ಲಿ ನಜೀರ್‌ಸಾಬ್ ಅವರ ಕನಸಿನ ಮಂಡಲ ಪಂಚಾಯಿತಿಯು ಜಿಲ್ಲಾ ಪರಿಷತ್ ವ್ಯವಸ್ಥೆ ಬಂದ ನಂತರ ಗ್ರಾಮೀಣ ಪ್ರದೇಶಗಳಿಗೆ ರಸ್ತೆ ಸಂಪರ್ಕ, ಶಾಲೆಗಳು, ಅಂಗನವಾಡಿಗಳು, ಆಸ್ಪತ್ರೆಗಳು, ಕುಡಿಯುವ ನೀರು ಇಂತಹ ಮೂಲಭೂತ ಸೌಕರ್ಯಗಳನ್ನು ಗ್ರಾಮೀಣ ಜನರಿಗೂ ತಲುಪಿಸುವಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳು ತಕ್ಕಮಟ್ಟಿಗೆ ಯಶಸ್ಸನ್ನು ಪಡೆದಿವೆ.

ಈ ಪಂಚಾಯತ್‌ರಾಜ್ ವ್ಯವಸ್ಥೆ ಗ್ರಾಮೀಣ ಪ್ರದೇಶವಾದ ಯಮನೂರಿನ ವ್ಯವಸ್ಥೆ ಸುಧಾರಣೆ, ಬದಲಾವಣೆಯ ಮೇಲೆ ಯಾವ ರೀತಿಯ ಪ್ರಭಾವ ಬೀರಿದೆ ಎಂಬುದನ್ನು ನೋಡೋಣ.

ಗ್ರಾಮ ಪಂಚಾಯತಿ ಮಟ್ಟದಲ್ಲಿದ್ದ ಯಮನೂರು ಗ್ರಾಮವು ಇಂದು ಸ್ವಲ್ಪಮಟ್ಟಿಗೆ ನಗರದ ಬಹುತೇಕ ಲಕ್ಷಣಗಳನ್ನು ಮೈಗೂಡಿಸಿಕೊಂಡು ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳಿಗೆ ಕಾರಣವಾಗಿದೆ. ಗ್ರಾಮದ ಭೌಗೋಳಿಕ ವಿಸ್ತೀರ್ಣ ವಿಸ್ತರಿಸಿದೆ. ಮಣ್ಣಿನ ರಸ್ತೆಗಳ ಬದಲಾಗಿ ಡಾಂಬರು ರಸ್ತೆಗಳು ಕಾಣಿಸಿಕೊಳ್ಳತೊಡಗಿವೆ. ಟಿ.ವಿ, ಸಿನೇಮಾ, ಸಂಪರ್ಕ ಸಾಧನಗಳಾದ ಸಾರಿಗೆ, ಫೋನ್, ಮೊಬೈಲ್‌ಗಳು ಜನಪದರ ಮೇಲೆ ಗಾಢ ಪ್ರಭಾವ ಬೀರಿವೆ. ಮತ್ತೊಂದು ಬದಲಾವಣೆ ಎಂದರೆ ಮನೆಯ ಬಾಗಿಲು, ಕದ, ತೊಳೆ ಇವೆಲ್ಲವುಗಳ ಮಾರಾಟ ಬಹಳ ಭರದಿಂದ ಸಾಗುತ್ತಿದೆ. ಸುತ್ತಮುತ್ತ ಹಳ್ಳಿಯ ಜನರಲ್ಲದೆ ನಗರ ಪ್ರದೇಶದಿಂದಲೂ ಜನರು ಬಂದು ಅವುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಜಾತ್ರೆಯ ಸಂದರ್ಭದಲ್ಲಿಯಂತೂ ಈ ಕದ, ಬಾಗಿಲುಗಳ ವ್ಯಾಪಾರ ಬಹಳ ಭರದಿಂದ ನಡೆಯುತ್ತದೆ.

ಇಲ್ಲಿನ ವ್ಯವಸಾಯವು ಮಳೆಯಾಧಾರಿತವಾಗಿದೆ. ಇತ್ತೀಚಿಗೆ ರೈತರಿಗೆ ಉಚಿತ ವಿದ್ಯುತ್, ಎತ್ತು, ಬಂಡಿ ಸಾಲ, ಕೃಷಿ ಸಾಲ, ಉಚಿತ ಬೀಜ ವಿತರಣೆ, ಟ್ರ್ಯಾಕ್ಟರ್‌ಸಾಲ ಮುಂತಾದ ನೆರವುಗಳು ಸರಕಾರದಿಂದ ದೊರೆಯುತ್ತಿರುವುದರಿಂದ ಕೃಷಿಕರ ಬದುಕು ತಕ್ಕಮಟ್ಟಿಗೆ ಸುಧಾರಿಸಿದೆ ಎನ್ನಬಹುದು. ಕೃಷಿ ಉತ್ಪನ್ನಗಳಿಗೆ ಸರಿಯಾದ ಬೆಲೆ ಬರುತ್ತಿರುವುದರಿಂದ ರೈತನ ಆರ್ಥಿಕ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ. ಆದರೆ ಮಳೆಯು ಸಕಾಲಕ್ಕೆ ಆಗದೇ ಇರುವುದರಿಂದ ರೈತರಿಗೆ ಅದೊಂದು ಚಿಂತೆಯೂ ಕಾಡತೊಡಗಿದೆ ಎಂದು ಹೇಳಬಹುದು. ಮೊದಲು ಹೊಲವನ್ನು ಊಳಲು, ರಂಟೆ ಹೊಡೆಯಲು, ಕುಂಟೆಯನ್ನು ರಂಟೆಯನ್ನು ಅವಲಂಬಿಸಿದ್ದರು. ಆದರೆ ಈಗ ಈ ಕೆಲಸಕ್ಕೆ ಹೆಚ್ಚಾಗಿ ಟ್ರ್ಯಾಕ್ಟರ್‌ನ್ನು ಅವಲಂಬಿಸತೊಡಗಿದ್ದಾರೆ. ಜವಾರಿ ಬೀಜಗಳ ಬದಲಾಗಿ ಹೈಬ್ರೀಡ್ ಬೀಜಗಳ ಬಳಕೆ ಹೆಚ್ಚಾಗತೊಡಗಿದೆ. ಸೆಗಣಿ ಗೊಬ್ಬರದ ಬದಲಾಗಿ ರಾಸಾಯನಿಕ ಗೊಬ್ಬರಗಳ ಬಳಕೆ ಹೆಚ್ಚಾಗತೊಡಗಿದೆ. ಜೋಳ, ಮೆಕ್ಕೆಜೋಳ, ಶೇಂಗಾ, ಸೂರ್ಯಪಾನ, ಗೋದಿಯ ರಾಶಿ ಮಾಡಲು ಇಂದು ಯಂತ್ರಗಳನ್ನು ಬಳಸತೊಡಗಿದ್ದಾರೆ. ಕಣಮಾಡುವುದು, ಹಂತಿ ಹೊಡೆಯುವುದು, ಕಡಿಮೆಯಾಗತೊಡಗಿದೆ. ಹಿಂದೆ ರಾಶಿ ತುಂಬುವಾಗ ಟವಲ್‌ನ್ನು ತಲೆಗೆ ಸುತ್ತಿಕೊಳ್ಳುವುದು. ವಿವಿಧ ಅಡಿಗೆ ಮಾಡಿ ಹೊಲಕ್ಕೆ ಹೋಗಿ ಚರಗ ಚಲ್ಲುತ್ತಿದ್ದರು. ಅದು ಈಗ ನಿಂತುಹೋಗಿದೆ. ಕಾಳು ಕಡಿಗಳನ್ನು ಸಂಗ್ರಹಮಾಡಿ ಇಡಲು ಹಿಂದೆ ಹಗೇವು ಬಳಸುತ್ತಿದ್ದರು. ಆದರೆ ಈಗ ಮನೆಯಲ್ಲಿ ಸಂಗ್ರಹಿಸುವುದು ಅಥವಾ ಕೃಷಿ ಮಾರುಕಟ್ಟೆಗಳಲ್ಲಿ ಸಂಗ್ರಹಿಸುವುದು ಮತ್ತು ಮಾರಾಟ ಮಾಡಿ ಬರುವ ಪರಿಪಾಠ ಜಾರಿಗೆ ಬಂದಿದೆ.

ಹೊಲಗಳಲ್ಲಿ ಕೆಲಸ ಮಾಡುವ ಹೆಂಗಸರು ಕೆಲಸ ಮಾಡಲು ಬೇಸರವಾಗದಿರಲು ಮತ್ತು ಕೆಲಸ ಬೇಗ ಸಾಗಲು ಜನಪದ ಹಾಡುಗಳನ್ನು ಹಾಡುತ್ತಿದ್ದರು. ಆದರೆ ಈಗ ಟಿ.ವಿ. ಸಿನಿಮಾ ಹಾಡಿಗೆ ಮರುಳಾಗಿ ಅವುಗಳನ್ನೇ ಹಾಡತೊಡಗಿದ್ದಾರೆ. ಹಿಂದೆ ಊರಿಂದ ಊರಿಗೆ ಹೋಗಲು, ಅಥವಾ ಸಂತೆಗೆಂದು ಯಮನೂರಿಗೆ ಸಮೀಪ ಇರುವ ಹುಬ್ಬಳ್ಳಿ, ನವಲಗುಂದಕ್ಕೆ ಹೋಗಲು ತುಂಬ ಕಷ್ಟ ಪಡಬೇಕಾಗುತ್ತಿತ್ತು. ಈಗ ಬಸ್ಸಿನ

ಸೌಕರ್ಯ ಜೀಪ್, ಟ್ರ್ಯಾಕ್ಸ್, ಟಂ ಟಂ ಗಾಡಿಗಳು ಹೋಗತೊಡಗಿವೆ. ಹೀಗಾಗಿ ಜನರು ಸಣ್ಣಪುಟ್ಟ ಕೆಲಸಗಳಿಗೂ ಪಟ್ಟಣಕ್ಕೆ ಹೋಗಿ ಬರುವ ಮಟ್ಟಕ್ಕೆ ಬೆಳೆದಿದ್ದಾರೆ. ಹಿಂದೆ ಫೋನ್‌ಗಳಲ್ಲಿ ಮಾತನಾಡಲು ಭಯಪಡುವ ಜನರು ಇಂದು ಟಿ.ವಿ. ಮೊಬೈಲ್‌ಗಳಿಲ್ಲದೆ, ಬದುಕಲು ಆಗುವುದಿಲ್ಲ ಎಂಬಂತಾಗಿದ್ದಾರೆ. ಯಮನೂರು ಒಂದು ಸಣ್ಣಗ್ರಾಮವಾದರೂ ಪ್ರತಿಯೊಂದು ಮನೆಯಲ್ಲಿ ಇಲ್ಲವಾದರೂ ಬಹುತೇಕ ಮನೆಗಳಲ್ಲಿ ಬಣ್ಣದ ಟಿ.ವಿ, ಜೇಬು ಜೇಬಿಗೂ ಮೊಬೈಲ್‌ಗಳು ಇರುವುದು ನವನಾಗರೀಕತೆಯ ಸಂಕೇತಗಳಾಗಿವೆ. ವ್ಯಾಪಾರ ವಹಿವಾಟು, ಸಂಬಂಧಿಕರ ಉಭಯ ಕುಶಲೋಪರಿ ಇತ್ಯಾದಿ ವಿಷಯಗಳು ಫೋನ್ ಮೊಬೈಲ್‌ಗಳಲ್ಲಿ ನಡೆಯತೊಡಗಿವೆ.

ಇತ್ತೀಚಿನ ಪ್ಲಾಸ್ಟಿಕ್ ಮತ್ತು ನೈಲಾನ್ ವಸ್ತುಗಳ ಕ್ರಾಂತಿಯಿಂದಾಗಿ ಕುಂಬಾರರ ಮಡಿಕೆ, ಕುಡಿಕೆಗಳನ್ನು ಜನಪದರು ಮೂಲೆಗೆ ತಳ್ಳಿದ್ದಾರೆ. ನೂತನ ಮಾದರಿಯ ಆತ್ಯಾಕರ್ಷಕ ಚಪ್ಪಲಿಗಳು ಮಾರುಕಟ್ಟೆಗೆ ಬಂದಾಗಿನಿಂದ ಮುಚ್ಚಿಗರು, ತಮ್ಮ ಕುಲಕಸಬನ್ನು ಕೈಬಿಟ್ಟು ಬೇರೆ ಕೆಲಸಕ್ಕೆ ಹೋಗತೊಡಗಿದ್ದಾರೆ. ಪ್ಲಾಸ್ಟಿಕ್ ಪುಟ್ಟಿಗಳು ಬಂದಾಗಿನಿಂದ ಕೊರವರು ತಯಾರಿಸುವ ಪುಟ್ಟಿ, ಮರ, ಕಸಬರಿಗೆ ಕೊಳ್ಳುವವರಿಲ್ಲದಾಗಿ ಕೊರವರು ಆರ್ಥಿಕ ಸಂಕಷ್ಟಕ್ಕೊಳಗಾಗುವಂತಾಗಿದೆ. ಒಟ್ಟಾರೆಯಾಗಿ ನಗರ ಜೀವನದ ಪ್ರಭಾವದಿಂದಾಗಿ ಇಲ್ಲಿನ ಕೊರವ, ಮುಚ್ಚಿಗ, ಕಂಬಾರ, ಮಡಿವಾಳ, ನೇಕಾರ ಮುಂತಾದ ಗುಡಿ ಕೈಗಾರಿಕೆಯನ್ನು ಅವಲಂಬಿಸಿದ ಜನರಿಗೆ ತಟ್ಟದೇ ಇರುವುದಿಲ್ಲ.

ಜಾತಿಪದ್ಧತಿ, ಅಸ್ಪೃಶ್ಯತೆಯ ಆಚರಣೆ ಹೆಚ್ಚಾಗಿ ಕಂಡುಬರುತ್ತಿತ್ತು. ನಗರ ಪ್ರದೇಶಕ್ಕಿಂತ ಹಳ್ಳಿಗಳಲ್ಲಿ ಬಹಳ ಇತ್ತು. ಅದಕ್ಕೆ ಯಮನೂರ ಗ್ರಾಮವೂ ಹೊರತಾಗಿಲ್ಲ. ಆದರೆ ಇಲ್ಲಿನ ಚಾಂಗದೇವರ ದೇವಸ್ಥಾನದಲ್ಲಿ ಜಾತಿ ಮತ, ಧರ್ಮದ ಯಾವುದೇ ನಿಷೇಧಗಳು ಇಲ್ಲ. ಮೊದಲು ಹೋಟೆಲ್, ಬಾವಿಗೆ ದೇವಸ್ಥಾನಕ್ಕೆ ಅಸ್ಪೃಶ್ಯರು ಬರುವಂತಿರಲಿಲ್ಲ. ಆದರೆ ಈಗ ಎಲ್ಲರ ಜೊತೆಗೂ ಬೆರೆಯುತ್ತಾರೆ. ಹಿಂದುಳಿದ ಸಮುದಾಯಗಳು ಸಹ ಊಟ-ಉಪಚಾರ, ಉಡುಗೆ-ತೊಡುಗೆ, ಆಚಾರ-ವಿಚಾರ ಮುಂತಾದ ವಿಷಯಗಳಲ್ಲಿ ಸುಧಾರಿಸಿರುತ್ತಾರೆ. ಮೇಲ್ವರ್ಗಗಳಲ್ಲಿ, ಶ್ರೀಮಂತರಲ್ಲಿ ಮಾತ್ರ ಕಂಡುಬರುತ್ತಿದ್ದ ಶಿಕ್ಷಣವನ್ನು ಈಗ ಬಹುತೇಕರು ಪಡೆಯುತ್ತಾರೆ.

ಶಿವರಾತ್ರಿಯಂದು ದೇವಸ್ಥಾನದಲ್ಲಿ ಜಾಗರಣೆ, ಕೀರ್ತನೆ, ಭಜನೆ,' ಪುರಾಣ, ಪ್ರವಚನಗಳು ನಡೆಯುತ್ತಿತ್ತು. ಆದರೆ ಇಂದು ಇಂತಹ ಪದ್ಧತಿಯು ಕಡಿಮೆಯಾಗಿ ಟಿ.ವಿ.ಯಲ್ಲಿ ದೇವರ ಸಿನೇಮಾ ನೋಡುತ್ತಾ ಜಾಗರಣೆ ಆಚರಿಸುತ್ತಾರೆ. ಮನರಂಜನೆಯ ಸಾರ್ವಭೌಮ ಎನಿಸಿಕೊಂಡಿರುವ ಟಿ.ವಿ. ಬಂದಾಗಿನಿಂದ ದೇವಸ್ಥಾನದಲ್ಲಿ ನಡೆಯುವ ಧಾರ್ಮಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವವರೂ ಸಹ ಕಡಿಮೆಯಾಗತೊಡಗಿದ್ದಾರೆ.

ಬಹುತೇಕ ಜನಪದ ವರ್ಗಗಳ ಮದುವೆ ಆಚರಣೆಗಳ ಬಗ್ಗೆ ಪ್ರಶ್ನಿಸಿದಾಗ ಎಲ್ಲರಲ್ಲೂ ಬರುವ ಒಂದೇ ಉತ್ತರವೆಂದರೆ "ಹಿಂದೆ ಒಂದು ವಾರದವರೆಗೆ ಮದುವೆ ಕಾರ್ಯಗಳು ನಡೆಯುತ್ತಿದ್ದವು. ಈಗ ಅದು ಎರಡು ದಿನಗಳಿಗೆ ಸೀಮಿತವಾಗಿದೆ" ಎಂಬುದು. ಎಲ್ಲ ಮದುವೆ ಸಂಪ್ರದಾಯದಲ್ಲೂ ಸಂಪೂರ್ಣವಾದ

ಬದಲಾವಣೆಯನ್ನು ಕಾಣುತ್ತೇವೆ. ಅಂದರೆ ವರೋಪಚಾರ ಹಿಂದೆ ಸ್ವ ಇಚ್ಛೆಯಿಂದ ಕೊಡುತ್ತಿದ್ದರೆ, ಇಂದು ಕಡ್ಡಾಯವಾಗಿದೆ. ಹಿಂದಿನ ಮದುವೆಯ ಆಚರಣೆಗಳಲ್ಲಿ ಪ್ರತಿಯೊಂದು ಕಾರ್ಯಕ್ಕೂ ಸೋಬಾನ ಪದ ಹಾಡುವುದು ಬಳಕೆಯಲ್ಲಿದ್ದಿತು. ಆದರೆ ಸಂಸ್ಕೃತಿಯ ಸ್ಥಿತ್ಯಂತರದಿಂದಾಗಿ ಅವುಗಳನ್ನು ಹೇಳುವವರೂ ಕೇಳುವವರೂ ಇಲ್ಲದಂತಾಗಿದೆ. ಮದುವೆಗಳಲ್ಲಿ ಐರಾಣಿ ತರುವ ಪದ್ಧತಿ, ಮದುಮಕ್ಕಳನ್ನು ಬಚ್ಚಿಡುವ ಪದ್ಧತಿ ಇಂತಹ ಅನೇಕ ಆಚರಣೆಗಳು ಇಂದು ಕಡಿಮೆಯಾಗತೊಡಗಿವೆ. ಹಿಂದೆ ಉಪಜಾತಿಗಳ ಮಧ್ಯೆ ಮದುವೆ ನಡೆಯುತ್ತಿರಲಿಲ್ಲ. ಈಗ ನಡೆಯತೊಡಗಿವೆ. ಹಿಂದೆ ಹೆಂಡತಿಯಾಗಿ ಬರುವವಳು ಗೃಹಿಣಿಯಾಗಿದ್ದರೆ ಸಾಕೆನ್ನುತ್ತಿದ್ದರು. ಆದರೆ ಅತಿಯಾದ ಬೆಲೆ ಏರಿಕೆಯಿಂದಾಗಿ ಇಬ್ಬರೂ ದುಡಿಯಬೇಕಾದ ಅನಿವಾರ್ಯತೆಯಿಂದಾಗಿ ನೌಕರಸ್ಥ ಹುಡುಗಿಯನ್ನೇ ಮದುವೆಯಾಗಲು ಬಯಸುತ್ತಾರೆ ಅಥವಾ ಹುಡುಗಿಯನ್ನು ಹೊರಗೆ ದುಡಿಯಲು ಕಳಿಸುತ್ತಾರೆ.

ಮನೆಯ ಪೂಜಾ ವಿಧಾನಗಳಲ್ಲೂ, ದೇವರುಗಳ ವಿಷಯದಲ್ಲೂ ಸಾಕಷ್ಟು ಬದಲಾವಣೆಗಳಾಗಿರುವುದನ್ನು ಕಾಣಬಹುದು. ದೇವರಿಗೆ ಕುಂಕುಮಪೂಜೆ, ಬಾಳೆಹಣ್ಣಿನ ಪೂಜೆ, ಸತ್ಯನಾರಾಯಣಪೂಜೆ, ಸಂಕಷ್ಟಿವ್ರತಾಚರಣೆ ಹೀಗೆ ಹಲವು ದೇವರುಗಳನ್ನು ಪೂಜಿಸುವ ಪದ್ಧತಿ ಕಂಡುಬರುತ್ತದೆ. ಇವೆಲ್ಲ ಸಂಸ್ಕೃತೀಕರಣದ ಪ್ರಕ್ರಿಯೆಯಲ್ಲಿ ಮುಖ್ಯವಾಗಿ ಗಮನ ಸೆಳೆಯುತ್ತವೆ.

ಹೆಣ್ಣುಮಕ್ಕಳು ಅಲಂಕಾರಕ್ಕಾಗಿ ಸೌಂದರ್ಯವರ್ಧಕ ವಸ್ತುಗಳನ್ನು ಹಲವು ವಿಧದ ಸ್ಟೇಷನರಿ ವಸ್ತುಗಳನ್ನು ಬಳಸುವುದು ಸಾಮಾನ್ಯವಾಗಿದೆ. ಪ್ಯಾಂಟ್, ಶರ್ಟ್, ಮಿಡಿ, ನೈಟಿ ಮುಂತಾದ ಆಧುನಿಕ ರೀತಿಯ ಡಿಸೈನ್ ಸೀರೆಗಳನ್ನು ಬಳಸಿದರೆ, ಯುವಕರು ಶರ್ಟ್, ಉಡುಪುಗಳನ್ನು ತೊಡುವುದನ್ನು ಕಾಣಬಹುದಾಗಿದೆ.

ವಿಶ್ರಾಂತಿ ಸಮಯದಲ್ಲಿ ಕಬ್ಬಡ್ಡಿ, ಮುಂಗೈ ಆಟ, ಗುಂಡು ಎತ್ತುವುದು, ಬಂಡಿಗಾಲಿ ಎತ್ತುವುದು, ನಿಂಬೆಹಣ್ಣು ಎಸೆಯುವುದು ಇನ್ನು ಮುಂತಾದ ಆಟಗಳು ಕಂಡುಬರುತ್ತಿದ್ದವು. ಈಗ ಟಿ.ವಿಯ ಪ್ರಭಾವದಿಂದಾಗಿ ಇವುಗಳು ಮರೆಯಾಗತೊಡಗಿವೆ. ಶಾಲಾಮಕ್ಕಳಲ್ಲಿ ಕ್ರಿಕೆಟ್ ಆಟದ ಹುಚ್ಚು ಹೆಚ್ಚಾಗತೊಡಗಿದೆ. ಜಾನಪದೀಯ ಆಹಾರದ ಜೊತೆ ಜೊತೆಗೆ ಬೇಕರಿ ತಿಂಡಿಗಳಾದ ಬ್ರೆಡ್, ಕೇಕ್, ಜಾಮ್, ಚಾಕಲೇಟ್, ಕುರ್‌ಕುರೆಯಂತಹ ಪದಾರ್ಥಗಳು ಜನರಲ್ಲಿ ಬೆರೆತುಹೋಗಿವೆ.

ದೈವ ಪಂಚಾಯತಿಗಳಲ್ಲಿ ನ್ಯಾಯ ತೀರ್ಮಾನವಾಗುತ್ತಿದ್ದರೆ ಈಗ ಅದು ಕಡಿಮೆಯಾಗಿ ಸರ್ಕಾರದ ಕಾನೂನುಗಳಾದ ಪೊಲೀಸ್, ಕೋರ್ಟ್ ಕಛೇರಿಗಳ ಮೆಟ್ಟಿಲು ಹತ್ತುವುದು ಕಂಡುಬರುತ್ತದೆ. ಈ ರೀತಿ ನ್ಯಾಯ ವ್ಯವಸ್ಥೆಯಲ್ಲಿ ಬದಲಾಗಿರುವುದು ಕಂಡುಬರುತ್ತದೆ. ಆಧುನೀಕರಣದಿಂದ ಕುಟುಂಬ ಮತ್ತು ಸಾಮಾಜಿಕ ಮೌಲ್ಯಗಳ ಮೇಲೆ ಗಾಢ ಪರಿಣಾಮ ಬೀರಿವೆ. ಇಲ್ಲಿ ಎಲ್ಲಾ ಜನಪದ ವರ್ಗಗಳಲ್ಲಿ ಅವಿಭಕ್ತ ಕುಟುಂಬಗಳಿದ್ದವು. ಅವುಗಳಿಂದ ಪರಸ್ಪರ ಸುಖದುಃಖದಲ್ಲಿ ಸಮಪಾಲು ಎಲ್ಲರಿಗೂ ದೊರೆಯುತ್ತಿತ್ತು. ಆದರೆ ಇಂದು ನಗರೀಕರಣದ ಬೆಳವಣಿಗೆಯಿಂದಾಗಿ ಉದ್ಯೋಗಗಳನ್ನು ಹುಡುಕಿಕೊಂಡು ಹೋಗುವವರು ಕೆಲವರಾದರೆ, ಹಿರಿಯರೊಂದಿಗೆ ಹೊಂದಾಣಿಕೆಯಿಂದ ಬದುಕಲಾರದೆ ಸ್ವತಂತ್ರವಾಗಿ ಬದುಕುವ ಆಸೆಯಿಂದ

ಅವಿಭಕ್ತ ಕುಟುಂಬ ಒಡೆದು ಹೋಗಿ ಪರಸ್ಪರ ನೈತಿಕ ಹಕ್ಕುಗಳನ್ನು ಕಳೆದುಕೊಂಡು ವಿಭಕ್ತ ಕುಟುಂಬಗಳಾಗಿವೆ.

ಕೆಲವೊಂದು ಹಬ್ಬಗಳಲ್ಲಿ, ಜಾತ್ರೆ ಉತ್ಸವಗಳಲ್ಲಿ ಜನಪದ ಪ್ರದರ್ಶನ ಕಲೆಗಳಾದ ನಾಟಕ, ಬಯಲಾಟ, ಗೊಂದಲಿಗರ ಆಟ, ತೊಗಲುಗೊಂಬೆ, ಸೂತ್ರದ ಗೊಂಬೆಯಾಟ, ಡಪ್ಪಿನಾಟ, ದೊಂಬರಾಟಗಳು ಪ್ರದರ್ಶನಗೊಳ್ಳುತ್ತಿದ್ದವು. ಇಂದು ದೂರದರ್ಶನ ಸಿನಿಮಾದ ಪ್ರಭಾವದಿಂದಾಗಿ ಇವು ನಶಿಸತೊಡಗಿವೆ.

ಜಾತಿ ಪದ್ಧತಿಯು ಹಿಂದೂ ಸಮಾಜದ ಒಂದು ವಿಶಿಷ್ಟ ಲಕ್ಷಣವಾಗಿದ್ದು, ಕರ್ನಾಟಕವು ಕೂಡಾ ತನ್ನದೇ ಆದ ಪ್ರಾದೇಶಿಕ ಜಾತಿಗಳನ್ನು-ಉಪಜಾತಿಗಳನ್ನು ಹೊಂದಿದೆ. ಜಾತಿಯು ವಂಶಪಾರ್ಯವಾಗಿ ಬಂದ ವೃತ್ತಿಯನ್ನು ಅನುಸರಿಸುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಕೆಲವು ಬದಲಾವಣೆಗಳು ಕಂಡುಬರುತ್ತವೆ. ಉಡಿಗೆ-ತೊಡುಗೆಗಳು, ಆಹಾರಾಭ್ಯಾಸಗಳಲ್ಲಿ ಬದಲಾವಣೆಗಳು ಕಂಡುಬರುತ್ತವೆ. ಉಡಿಗೆ-ತೊಡುಗೆಗಳು, ಆಹಾರಾಭ್ಯಾಸಗಳು, ವಿವಾಹ, ಅಂತ್ಯಕ್ರಿಯೆ ಮುಂತಾದ ಧಾರ್ಮಿಕ ಆಚಾರಗಳು ರೂಢಿ ಪದ್ಧತಿಗಳು ಜಾತಿಯಿಂದ ಜಾತಿಗೆ ಭಿನ್ನವಾಗಿವೆ.

ಆ ಭಿನ್ನತೆ ಹಾಗೂ ಬದಲಾವಣೆಯನ್ನು ಪ್ರತಿಯೊಂದು ಸಮುದಾಯದ ಆಧಾರದ ಮೇಲಿಂದ ಗುರುತಿಸಬಹುದು. ಜೀವನಾವರ್ತನ ಆಚರಣೆಯನ್ನು ತೆಗೆದುಕೊಂಡಾಗ ಮೊದಲು ಬರುವುದು ಗರ್ಭಾವಸ್ಥೆ ಜನನ-ಹೆಣ್ಣು ಮಗಳು ಗರ್ಭಧರಿಸಿದಾಗ ಆಕೆಯು ಹೊತ್ತುಮುಳುಗಿದ ಕೂಡಲೆ ಹೊರಹೋಗುವ ಹಾಗಿರಲಿಲ್ಲ. ಗ್ರಹಣ ಹಿಡಿದಾಗ ಯಾವುದೇ ಕೆಲಸ ಮಾಡಬಾರದು, ಏನೂ ತಿನ್ನಬಾರದು ಎಂಬ ನಿರ್ಬಂಧ ಮತ್ತು ಯಾರಾದರೂ ಸತ್ತರೆ, ಸೂತಕ ಇದ್ದರೆ ಮತ್ತು ಗರ್ಭಿಣಿ ಮಹಿಳೆ ಬಚ್ಚಲ ನೀರನ್ನು ದಾಟಬಾರದೆಂಬ ನಂಬಿಕೆಯಿತ್ತು. ಆದರೆ ಈಗ ಉದ್ಯೋಗಸ್ಥ ಮಹಿಳೆಯರು ಈ ರೀತಿ ಕಟ್ಟುಪಾಡುಗಳಿಗೆ ಹೊಂದಿಕೊಳ್ಳಲಾಗುವುದಿಲ್ಲ. ಇವೆಲ್ಲವನ್ನು ಮರೆತು ಜೀವನ ಸಾಗಿಸುತ್ತಾರೆ. ಇದಕ್ಕೆ ಕಾರಣ ವೇಳೆಯ ಅಭಾವ ಎಂದೇ ಹೇಳಬಹುದು.

ಋತುಮತಿಯಾದ ಹುಡುಗಿಯನ್ನು ಮೊದಲು ೨ಂದಿನದವರೆಗೆ ಕೂಡಿಸಿ ಪ್ರತಿದಿವಸ ರಾತ್ರಿ ಎಲ್ಲ ಮಹಿಳೆಯರು ಸೇರಿ ಆರತಿ ಮಾಡುವ ಪದ್ಧತಿ ಇತ್ತು, ಕೊನೆಯ ದಿವಸ ಅವರ ಬಂಧು ಬಳಗದವರೆಲ್ಲರೂ ಸೇರುತ್ತಿದ್ದರು. ದೊಡ್ಡ ಪ್ರಮಾಣದಲ್ಲಿ ಕಾರ್ಯಕ್ರಮ ಮಾಡುತ್ತಿದ್ದರು. ಅಂದಿನ ದಿವಸ ತಮ್ಮ ಪರಿಚಯದವರಿಗೆಲ್ಲ ಸಿಹಿಊಟ ಹಾಕಿಸಿ ಮನೆಮಂದಿಯೆಲ್ಲ ಸಂಭ್ರಮಿಸುತ್ತಿದ್ದರು. ಆದರೆ ಈಗಿನ ಸಮುದಾಯದಲ್ಲಿ ಈ ಸಂಪ್ರದಾಯ ಮಾಯವಾಗಿ ಹೋಗಿದೆ. ಏಕೆಂದರೆ ಋತುಮತಿಯಾದ ಹುಡುಗಿಯನ್ನು ಬಹಳ ದಿನಗಳವರೆಗೆ ಮನೆಯಲ್ಲಿ ಕೂಡಿಸಬಾರದು ಮತ್ತು ಸಮಾಜದಲ್ಲಿರುವ ಕೆಟ್ಟಪುರುಷರ ಕಣ್ಣು ಆ ಹುಡುಗಿಯ ಮೇಲೆ ಬೀಳುತ್ತದೆ ಎಂಬ ನಂಬಿಕೆಯಿಂದ ಆಕೆ ಋತುಮತಿಯಾದ ವಿಷಯವನ್ನು ಯಾರಿಗೂ ತಿಳಿಸಲಾರದೆ ಆ ಕ್ರಿಯೆಯನ್ನು ಮುಗಿಸಿ ಬಿಡುತ್ತಾರೆ.

ವಿವಾಹಕ್ಕೆ ಬಂದಾಗ-ಹಿಂದೆ ವಿವಾಹವು ಒಂದು ವಾರದವರೆಗೆ ನಡೆಯುತ್ತಿತ್ತು. ಅಂದರೆ ಒಂದು ವಾರ ಮುಂಚೆಯೆ ನೆಂಟರಿಷ್ಟರೆಲ್ಲ ಮದುವೆಗೆ ಬಂದು ಸೇರುತ್ತಿದ್ದರು. ಮನೆ ಮಂದಿಯೇ ಅಡಿಗೆ ಮಾಡಿ

ಬೀಗರು ಬಿಜ್ಜರಿಗೆ ಉಣಬಡಿಸುತ್ತಿದ್ದರು. ಇದರಿಂದ ಸಂಬಂಧ ಗಟ್ಟಿಯಾಗಿ ಉಳಿಯುತ್ತಿತ್ತು ಎಂಬುದು ಜನಪದರ ನಂಬಿಕೆಯಾಗಿತ್ತು. ಆದರೆ ಈಗ ನಮಗೆ ಸಂಬಂಧವೇ ಬೇಡ ಎನ್ನುವ ಮಟ್ಟಕ್ಕೆ ಬಂದಿದ್ದಾರೆ. ಇನ್ನೂ ಊಟದ ವಿಷಯಕ್ಕೆ ಬಂದಾಗ ಹೊಟೆಲ್‌ಗೆ ಇಂತಿಷ್ಟು ಊಟ ಎಂದು ಆರ್ಡರ್ ಮಾಡುವ ಪದ್ಧತಿ ಬಂದಿದೆ. ಇದನ್ನು ಸುಶಿಕ್ಷಿತ ಭಾಷೆಯಲ್ಲಿ ಹೇಳುವುದಾದರೆ ಪ್ಲೇಟ್ ಸಿಸ್ಟಂ ಎನ್ನಬಹುದು. ಇಂತಹ ಪದ್ಧತಿಯನ್ನು ಇಂದು ನಾವು ಕಾಣುತ್ತೇವೆ.

ಅದೇ ತಾನೇ ಜನಿಸಿದ ಮಗುವಿಗೆ ಜೇನುತುಪ್ಪವನ್ನು ನೆಕ್ಕಿಸುತ್ತಿದ್ದರು. ಆಗ ಪ್ರತಿಯೊಂದು ಹೆರಿಗೆಯೂ ಮನೆಯಲ್ಲಾಗುತ್ತಿತ್ತು. ಮತ್ತು ಮಗು ಜನಿಸಿದ ಮೂರು ದಿವಸದವರೆಗೆ ಮಗುವಿಗೆ ತಾಯಿಯ ಎದೆಹಾಲು ಕುಡಿಸುತ್ತಿರಲಿಲ್ಲ. ಆದರ ಬದಲಾಗಿ ಸಕ್ಕರೆ ನೀರು ಮತ್ತು ಜೇನುತುಪ್ಪ ನೆಕ್ಕಿಸುತ್ತಿದ್ದರು. ಆದರೆ ಈಗ ಪ್ರತಿಯೊಂದು ಮಹಿಳೆಯ ಹೆರಿಗೆಯೂ ಆಸ್ಪತ್ರೆಯಲ್ಲಾಗುವುದರಿಂದ ಮಗು ಹುಟ್ಟಿದ ಅರ್ಧ ಗಂಟೆಗೆ ತಾಯಿಯ ಎದೆಯ ಹಾಲನ್ನು ಕುಡಿಸುತ್ತಾರೆ. ಇದರಿಂದ ಮಗುವಿಗೆ ವಿಟ್ಯಾಮಿನ್ ದೊರೆಯುತ್ತದೆ ಎಂದು ವೈದ್ಯರು ಸಲಹೆ ನೀಡುತ್ತಾರೆ. ಅದೇ ರೀತಿ ವಿವಿಧ ರೀತಿಯ ಚುಚ್ಚುಮದ್ದುಗಳನ್ನು ಮಗುವಿಗೆ ನೀಡುತ್ತಾರೆ. ಆದರೆ ಹಿಂದೆ ಯಾವ ಚುಚ್ಚುಮದ್ದು ಇಲ್ಲದೆ ಮಕ್ಕಳು ಹೆರಿಗೆಯಾದ ಕೂಡಲೇ ಸಾವನ್ನಪ್ಪುತ್ತಿದ್ದವು. ಆದರೆ ಈ ರೀತಿಯಾದ ಬದಲಾವಣೆಯಿಂದ ಸಾವಿನ ಪ್ರಮಾಣವನ್ನು ಕಡಿಮೆ ಮಾಡಲಾಗಿದೆ.

ಶವಸಂಸ್ಕಾರ ಮಾಡುವಾಗ ಕೆಲವು ವಿಧಿ ವಿಧಾನಗಳನ್ನು ಅನುಸರಿಸುತ್ತಾರೆ. ಏಕೆಂದರೆ ಹುಟ್ಟಿದ ಮನುಷ್ಯ ಸಾಯಲೇಬೇಕು. ಹುಟ್ಟಿದಾಗ ಯಾವ ರೀತಿ ಸಂಸ್ಕಾರ ದೊರೆಯುತ್ತದೆಯೋ ಸತ್ತ ಮೇಲೂ ಅನೇಕ ಸಂಸ್ಕಾರಗಳನ್ನು ಪಡೆಯುತ್ತದೆ. ಆಯಾ ಜಾತಿ ಸಂಪ್ರದಾಯಕ್ಕನುಗುಣವಾಗಿ ಶವವನ್ನು ಹೂಳುವ ಹಾಗೂ ದಹನ ಮಾಡುವ ಎರಡೂ ಪದ್ಧತಿಗಳಿವೆ. ಪಂಚಭೂತಗಳಿಂದಾದ ಶರೀರವನ್ನು ಪಂಚಭೂತಗಳಲ್ಲಿ ಲೀನಮಾಡುವಾಗ ದೇಹದಿಂದ ಬಿಟ್ಟು ಹೋದ ಆತ್ಮಕ್ಕೆ ಒಂದು ಉತ್ತಮವಾದ ನೆಲೆಯನ್ನು ಅನುಸಂಧಾನ ಮಾಡುವ ಉದ್ದೇಶವೂ ಆಗಿರುತ್ತದೆ. ಆದ್ದರಿಂದ ಅವು ಅಂತ್ಯಕ್ರಿಯೆಗಳಲ್ಲಿ ಅಷ್ಟೇ. ಉತ್ತರ ಕ್ರಿಯೆಗಳು ಅನೇಕ ಶಾಸ್ತ್ರವಿಧಿಗಳಿಂದ ಕೂಡಿರುವುದರಿಂದ 'ಸಂಸ್ಕಾರ' ಎನ್ನುವರು. ಇಂತಹ ಸಂಸ್ಕಾರಗಳನ್ನು ಹಳ್ಳಿಗಳಲ್ಲಿ ಮಾತ್ರ ಕಾಣುತ್ತೇವೆ. ನಗರ ಪ್ರದೇಶಗಳಲ್ಲಿ ಜನರ ಅತ್ಮೀಯತೆಯ ಕೊರತೆಯ ಕಾರಣದಿಂದ ಹಾಗೂ ಸ್ಥಳದ ಅಭಾವದಿಂದ ಯಾವ ಸಂಸ್ಕಾರ ಮಾಡದೇ ಸತ್ತಸ್ವಲ್ಪ ಸಮಯಧಲ್ಲಿ ಶವವನ್ನು ಚಿತಾಗಾರಕ್ಕೆ ತೆಗೆದುಕೊಂಡು ಅರ್ಪಿಸುತ್ತಾರೆ. ಸ್ವಲ್ಪೇ ಸಮಯದಲ್ಲಿ ಶವದ ಬೂದಿ ಕೈಗೆ ದೊರೆಯುತ್ತದೆ. ಇದರಿಂದ ಸಂಬಂಧಕ್ಕೆ ಬೆಲೆಯೇ ಇಲ್ಲವೇನೋ ಎನ್ನಿಸುತ್ತದೆ. ಆದರೆ ಹಳ್ಳಿಗಳಲ್ಲಿ ಸ್ವಲ್ಪ ಮಟ್ಟಿಗೆ ಉಳಿದಿದೆ ಎನಿಸುತ್ತದೆ.

ಕೆಲವು ಶಾಸ್ತ್ರಸಂಪ್ರದಾಯಗಳನ್ನು ತೆಗೆದುಕೊಂಡಾಗ ಅಲ್ಲಿಯೂ ಸಾಮಾಜಿಕ ಸ್ಥಿತ್ಯಂತರಗಳನ್ನು ಕಾಣಬಹುದಾಗಿದೆ. ಮಗುವಿನ ಜವುಳ ತೆಗೆಸುವ ಕಾರ್ಯಕ್ಕೆ ಬಂದಾಗ ಮೊದಲು ಮಗುಹುಟ್ಟಿದ ಕೂಡಲೆ ಹರಕೆ ಹೊರುತ್ತಿದ್ದರು. ಗಂಡು ಹುಟ್ಟಿದರೆ ಧರ್ಮಸ್ಥಳಕ್ಕೆ ಬಂದು ತಲೆಮಂಡೆಕೊಡಿಸುತ್ತೇನೆಂದು ಅಥವಾ ಅಲ್ಲಿ ಜವುಳ ತೆಗೆಸುತ್ತೇನೆಂದು ಮತ್ತು ಹೆಣ್ಣು ಹುಟ್ಟಿದರೆ ಸವದತ್ತಿ ಎಲ್ಲಮ್ಮನ ಗುಡ್ಡದಲ್ಲಿ ಜವುಳ ತೆಗೆಸುತ್ತೇನೆಂದು ಹರಕೆ ಹೊರುತ್ತಿದ್ದರು. ಆ ಪ್ರಕಾರ ಮನೆ ಮಂದಿ ಬಂದು ಬಳಗದವರೆಲ್ಲರೂ ಸೇರಿ

ಬೇಡಿಕೊಂಡ ದೇವಸ್ಥಾನಕ್ಕೆ ಹೋಗಿ ಸೋದರ ಮಾವನ ತೊಡೆಯ ಮೇಲೆ ಮಗುವಿಗೆ ಹೊಸ ಬಟ್ಟೆ ಹಾಕಿ ಕೂಡಿಸಿ ಜವುಳ ತೆಗೆಸುತ್ತಿದ್ದರು. ವೀರಶೈವರಾದರೆ ಐನರ ಕಡೆಯಿಂದ ಎಲೆಗತ್ತರಿ ಮುಟ್ಟಿಸಿ ಜವುಳ ತೆಗೆಸುವ ಪದ್ಧತಿ ಇತ್ತು. ಆಗ ತೆಗೆಸಿದ ಕೂದಲನ್ನು ಒಂದು ಹೊಸ ಬಟ್ಟೆಯಲ್ಲಿ ಕಟ್ಟಿಟ್ಟು ಅದನ್ನು ಯಾವುದಾದರೂ ಹೊಳೆಯಲ್ಲಿ ಬಿಟ್ಟುಬರುವ ಪದ್ಧತಿ ವಾಡಿಕೆಯಲ್ಲಿತ್ತು. ಆದರೆ ಈಗ ಸಂಪೂರ್ಣವಾಗಿಯಲ್ಲದಿದ್ದರೂ ಸ್ವಲ್ಪ ಬದಲಾವಣೆ ಕಂಡುಬರುತ್ತದೆ. ಯಾವ ಜಂಜಾಟವನ್ನು ಹಚ್ಚಿಕೊಳ್ಳಲಾರದೇ ಮಗು ಹುಟ್ಟಿದ ೫ ತಿಂಗಳಲ್ಲಿ ಕುರುಬರಿಂದ ಎಲೆಗತ್ತರಿ ಮುಟ್ಟಿಸಿ ಪದ್ಧತಿಯನ್ನು ಮುಗಿಸಿಬಿಡುತ್ತಾರೆ. ಇದೆಲ್ಲವನ್ನು ನೋಡಿದಾಗ ಈಗಿನ ಜನರು ಯಾವುದೇ ಸಂಪ್ರದಾಯ ಕಟ್ಟುಪಾಡುಗಳಿಗೆ ಜೋತು ಬೀಳುವುದಿಲ್ಲ ಎಂದು ತಿಳಿಯುತ್ತದೆ.

ಉಡಿಯಕ್ಕಿ ಹಾಕುವ ಪದ್ಧತಿಗೆ ಬಂದಾಗ ಮದುವೆಯಾಗಿ ಹೆಣ್ಣು ಮಗಳು ಗಂಡನ ಮನೆಗೆ ಹೋಗುವಾಗ ತವರು ಮನೆಯವರು ಉಡಿಯಕ್ಕಿ ಹಾಕುವ ಪದ್ಧತಿ ಇದೆ. ಹಿಂದೆ ಉಡಿಯಕ್ಕಿಯನ್ನು ೯ ರಿಂದ ೧೧ ಮನೆಗಳಿಗೆ ಹೋಗಿ ಹಾಕಿಸುತ್ತಿದ್ದರು. ಆದರೆ ಈಗ ಅದು ಐದೇ ಮನೆಗಳಿಗೆ ನಿಂತು ಹೋಗಿಬಿಟ್ಟಿದೆ. ಬಾಣಂತಿಗೂ ನಾಮಕರಣದ ದಿವಸ ಉಡಿಯಕ್ಕಿ ಹಾಕುತ್ತಿದ್ದರು. ಆದರೆ ನಗರ ಪ್ರದೇಶದ ಪ್ರಭಾವ ಅಲ್ಪಸ್ವಲ್ಪ ಹಳ್ಳಿಯ ಮೇಲೂ ಆಗತೊಡಗಿ ಇಂತಹ ಸಂಪ್ರದಾಯಗಳು ಕಣ್ಮರೆಯಾಗುವುದನ್ನು ಕಾಣುತ್ತೇವೆ. ವಾರ್ಷಿಕಾವರ್ತನ ಆಚರಣೆಗಳಿಗೆ ಬಂದಾಗ ಅಲ್ಲಿಯೂ ಕೂಡಾ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕಾಣುತ್ತೇವೆ. ಹಿಂದೂಗಳು ವರ್ಷ ತುಂಬ ಹಬ್ಬಗಳನ್ನಾಚರಿಸುವ, ವೃತ ಉಪವಾಸ ಕೈಗೊಳ್ಳುವ ಹಬ್ಬಗಳಲ್ಲದೇ ಬೇರೆ ಬೇರೆ ಪಂಥಗಳಿಗೆ ಪ್ರತ್ಯೇಕ ಹಬ್ಬಗಳಿವೆ. ಅವುಗಳಲ್ಲಿ ಈಗ ಸಂಪೂರ್ಣ ಬದಲಾವಣೆಯನ್ನು ಕಾಣುತ್ತೇವೆ. ಉದಾಹರಣೆಗೆ ಪಂಚಮಿ ಹಬ್ಬವನ್ನು ತೆಗೆದುಕೊಂಡರೆ ಅದು ೫ ದಿವಸದ ಹಬ್ಬವಾಗಿದೆ. ಅದರಲ್ಲಿ ಒಂದು ದಿನ ರೊಟ್ಟಿ ಪಂಚಮಿ ಎಂದು ಬರುತ್ತದೆ. ಆ ದಿವಸ ವಿವಿಧ ರೊಟ್ಟಿಗಳಾದ ಸಜ್ಜಿರೊಟ್ಟಿ, ಬಿಳಿ ಜೋಳದ ಎಳ್ಳು ಹಚ್ಚಿದ ರೊಟ್ಟಿ, ಮತ್ತು ಚಪಾತಿ ಮಾಡುತ್ತಾರೆ. ಅದರ ಜೊತೆಗೆ ಮಡಿಕಿಕಾಳ ಪಲ್ಯ, ಹೆಸರಕಾಳಿನ ಪಲ್ಯ, ಕಡಲೆಕಾಳಿನಪಲ್ಯ, ಕೊರೆದಹಿಟ್ಟಿನ ಪಲ್ಯ ಮತ್ತು ವಿವಿಧ ತರದ ಸೊಪ್ಪನ್ನು ಕೂಡಿಸಿ ಪಚಡಿ ಮಾಡುತ್ತಾರೆ. ಅದರ ಜೊತೆಗೆ ಪುಟಾಣಿ ಚಟ್ನಿ, ಶೇಂಗಾಚಟ್ನಿ, ಗುರೆಳ್‌ಚಟ್ನಿ, ಅಗಸಿಚಟ್ನಿಯನ್ನು ಮಾಡಿ ಪರಿಚಯವಿದ್ದವರ ಮನೆಗೆ ರೊಟ್ಟಿಯನ್ನು ಹಂಚಿ ಬರುತ್ತಿದ್ದರು. ಇದನ್ನು ಮಾಡುವುದರಲ್ಲಿ ಜನಪದರಿಗೆ ಸಂಭ್ರಮವೋ ಸಂಭ್ರಮ. ಆದರೆ ಇಷ್ಟು ತೆರನಾದ ರೊಟ್ಟಿ ಚಟ್ನಿ ಪಲ್ಯ ಇದೆ ಎನ್ನುವುದನ್ನೇ ಜನರು ಮರೆತುಹೋಗಿದ್ದಾರೆ. ಏಕೆಂದರೆ ಈಗಿನ ಜನರು ಕಷ್ಟಪಟ್ಟು ಕೆಲಸ ಮಾಡಲು ಬಯಸುವುದಿಲ್ಲ. ಇದರಿಂದ ಇಂತಹ ಒಳ್ಳೆಯ ಸಂಸ್ಕೃತಿ ಮರೆಯಾಗತೊಡಗಿದೆ. ಅದೇ ರೀತಿ, ಉಂಡಿ ಕಟ್ಟುವ ವಿಷಯಕ್ಕೆ ಬಂದಾಗ ಶೇಂಗಾಉಂಡೆ, ಎಳ್ಳುಂಡೆ, ಕಡ್ಲಿಉಂಡೆ, ಗುಳ್ಳಡಿಕೆ ಉಂಡೆ, ರವಾಉಂಡೆ ಇವೆಲ್ಲವನ್ನು ಜನರು ಮನೆಯಲ್ಲೇ ಮಾಡಿಟ್ಟುಕೊಂಡು ಶ್ರಾವಣಮಾಸ ಮುಗಿಯುವವರೆಗೂ ತಿನ್ನುತ್ತಿದ್ದರು. ಆದರೆ ಈಗ ಯಾವುದೇ ಪ್ರಯಾಸ ಪಡದೇ ಅಂಗಡಿಯಲ್ಲಿ ಒಂದೆರಡು ರೀತಿಯ ಉಂಡೆಗಳನ್ನು ತಂದು ದೇವರಿಗೆ ನೈವೇದ್ಯ ಮಾಡಿ ಮುಗಿಸಿ ಬಿಡುತ್ತಾರೆ.

ಯುಗಾದಿ ಹಬ್ಬದ ಹಿಂದಿನ ದಿನ ನೀರು ತುಂಬುವ ಹಬ್ಬವನ್ನು ಮಾಡುತ್ತಿದ್ದರು. ಅಂದರೆ ಅಂದಿನ ದಿವಸ ಮೊದಲಿದ್ದ ನೀರನ್ನು ಚೆಲ್ಲಿ ನೀರು ತುಂಬುವ ಪಾತ್ರೆಗಳನ್ನು ಸ್ವಚ್ಛಗೊಳಿಸಿ ಅವುಗಳ ಮೇಲೆ ಸುಣ್ಣ

ಬಣ್ಣಗಳಿಂದ ಚಿತ್ರಬಿಡಿಸಿ ನೀರು ತುಂಬುತ್ತಿದ್ದರು. ಅದೇ ನೀರನ್ನು ತೆಗೆದುಕೊಂಡು ಅಡುಗೆ ಮಾಡುತ್ತಿದ್ದರು. ಆದರೆ ಈಗ ೧೫ ದಿವಸ ೧೦ ದಿವಸ ೮ ದಿವಸಕ್ಕೊಮ್ಮೆ ನೀರು ನಲ್ಲಿಯಿಂದ ಬರುತ್ತದೆ. ನೀರನ್ನು ಸಿಮೆಂಟಿನ ತೊಟ್ಟಿಯಲ್ಲಿ ಸಿಂಟೆಕ್ಸಿನಲ್ಲಿ ಸಂಗ್ರಹ ಮಾಡಿಟ್ಟುಕೊಳ್ಳುತ್ತಾರೆ. ಅವುಗಳನ್ನು ಖಾಲಿ ಮಾಡುವ ಹಾಗೆಯೇ ಇಲ್ಲ. ಮೊದಲಾದರೆ ಬಾವಿಯಿಂದ ನೀರು ತರುತ್ತಿದ್ದರು. ಆದರೆ ಈಗ ಬಾವಿಗಳೇ ಇಲ್ಲ. ಎಲ್ಲರೂ ನಲ್ಲಿಯನ್ನೇ ಅವಲಂಬಿಸಿರುವುದರಿಂದ ಈ ಪದ್ಧತಿಯೂ ಕೂಡಾ ಕಡಿಮೆಯಾಗಿದೆ.

ಯುಗಾದಿ ಪಾಡ್ಯದ ದಿವಸ ನೀರಿನಲ್ಲಿ ಬೇವಿನ ಸೊಪ್ಪನ್ನು ಹಾಕಿ, ಮೈಯಿಗೆ ಎಣ್ಣೆಯನ್ನು ಹಚ್ಚಿಕೊಂಡು ಸ್ನಾನಮಾಡುವ ಪದ್ಧತಿ ಇತ್ತು. ಆದರೆ ಇಂದು ಸ್ವಲ್ಪ ಮಟ್ಟಿಗೆ ಕಾಣದಿರುವುದನ್ನು ಕಾಣುತ್ತೇವೆ. ಇದರಿಂದ ನಾವು ಕಾಣುವ ಅಂಶವೇನೆಂದರೆ ಕಾಲದಿಂದ ಕಾಲಕ್ಕೆ ಜನರಿಂದ ಜನರಿಗೆ ಸಾಂಸ್ಕೃತಿಕ ಸ್ಥಿತ್ಯಂತರವಾಗುವುದು ಕಂಡುಬರುತ್ತದೆ.

ಧಾರ್ಮಿಕವಾಗಿ, ನೈಸರ್ಗಿಕವಾಗಿ, ಸಾಮಾಜಿಕವಾಗಿ ನಡೆಯುವ ಇಲ್ಲಿಯ ಆಚರಣೆಗಳು ಸಂಕೀರ್ಣತೆಯಿಂದ ಕೂಡಿಕೊಂಡಿದ್ದು, ಅವುಗಳ ಹಿಂದಿರುವ ನಂಬಿಕೆ, ಸಂಕೇತಗಳು ಕಾಲ ಕಳೆದಂತೆ ಕಣ್ಮರೆಯಾಗುತ್ತಾ ಬಂದಿರುವುದನ್ನು ಕಾಣುತ್ತೇವೆ. ಇದರಿಂದ ಪರಸ್ಪರರಲ್ಲಿ ನಂಬಿಕೆ, ವಿಶ್ವಾಸ ಹೊರಟು ಹೋಗಿರುವುದು ಕಂಡುಬರುತ್ತದೆ. ಹಬ್ಬ ಹರಿದಿನಗಳು, ಆಚರಣೆಗಳು ಪರಸ್ಪರರಲ್ಲಿ ನಂಬಿಕೆ, ವಿಶ್ವಾಸ, ಪ್ರೀತಿಯನ್ನು ತುಂಬುತ್ತವೆ. ಅವುಗಳನ್ನೇ ನಾವೆಲ್ಲರೂ ಮರೆತು ಬರೀ ನೆಮ್ಮದಿ ಇಲ್ಲದ ಜೀವನವನ್ನು ನಡೆಸಿ ಬರೀ ಯಾಂತ್ರಿಕವಾಗಿ ಬದುಕುತ್ತಿದ್ದೇವೆ. ಇಲ್ಲಿಯವರೆಗೆ ಆಚರಣೆಗಳಲ್ಲಾದ ಸ್ಥಿತ್ಯಂತರಗಳನ್ನು ನೋಡಿದೆವು. ಇನ್ನು ಸಮಾಜದಲ್ಲಿ ಬದುಕುವ ಸಮುದಾಯದಲ್ಲಾದ ಸ್ಥಿತ್ಯಂತರಗಳನ್ನು ನೋಡೋಣ.

ಯಾವುದೇ ಒಂದು ಸಮಾಜ, ಸಮುದಾಯ ಮೇಲ್ನೋಟಕ್ಕೆ ಅತಿ ಸರಳವೆನ್ನುವಂತೆ ಕಂಡು ಬಂದರೂ, ಅದು ತನ್ನೊಡಲ ಒಳಗೆ ತನಗೇ ಅರಿವಾಗದಂತೆ, ಸೂಕ್ಷ್ಮವೂ ಸಂಕೀರ್ಣವೂ ಆದ ಸಾಮಾಜಿಕ ಸ್ವರೂಪಗಳನ್ನು ಹೊಂದಿರುತ್ತದೆ. ವ್ಯವಸ್ಥೆಯೊಳಗೆ ಸುಭದ್ರತೆಯನ್ನು ಕಾಯ್ದುಕೊಳ್ಳುವುದಕ್ಕಾಗಿ ಸಾಮಾಜಿಕ ಜೀವನದಲ್ಲಿ ತನ್ನದೇ ಆದ ವರ್ಗ, ಕುಟುಂಬ ಪದ್ಧತಿ, ಮನೆನಿರ್ಮಾಣ, ಗೃಹಪ್ರವೇಶ, ನ್ಯಾಯಪದ್ಧತಿ, ಆಹಾರ ಪದ್ಧತಿ, ಉಡುಗೆ ತೊಡುಗೆ, ಆಚಾರ ವಿಚಾರ ಸಮುದಾಯದಿಂದ ಸಮುದಾಯಕ್ಕೆ ಬದಲಾವಣೆ ಹೊಂದಿರುವುದನ್ನು ಕಾಣುತ್ತೇವೆ.

ಲಿಂಗಾಯತ ಸಮುದಾಯದವರು ಮೇಲ್ಜಾತಿಯವರೆಂದು ನಂಬಿಕೆ. ಇವರು ಕೆಳಜಾತಿಯವರ ಕಡೆಯಿಂದ ಅಂಗಳಕಸ ಗುಡಿಸುವುದು, ಸೆಗಣಿ ಬಳಸುವುದನ್ನು ಮಾಡಿಸುತ್ತಿದ್ದರು. ಮತ್ತು ಹರಿದಿರುವ ಚಪ್ಪಲಿಗಳನ್ನು ಹೊಲೆದುಕೊಡುತ್ತಿದ್ದರು. ತಾವೇ ಅವರ ಮನೆಗೆ ಬಂದು ಅವರ ಚಪ್ಪಲಿಗಳನ್ನು ತೆಗೆದುಕೊಂಡು ಅವುಗಳನ್ನು ಬಗಲಲ್ಲಿ ಇಟ್ಟುಕೊಂಡು ಹೋಗುವುದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ಆದರೆ ಈಗ ಅದೆಲ್ಲವೂ ಸಂಪೂರ್ಣ ಬದಲಾವಣೆಯಾಗಿರುವುದನ್ನು ಕಾಣುತ್ತೇವೆ. ಏಕೆಂದರೆ ಚರ್ಮದ ಚಪ್ಪಲಿ ಯಾರೂ ಹಾಕಿಕೊಳ್ಳುವುದಿಲ್ಲ. ಹಾಗೂ ಅವರು ಈ ಕೆಲಸ ಮಾಡುವುದನ್ನು ಬಿಟ್ಟಿದ್ದಾರೆ. ಅವರು ಈಗ ಎಲ್ಲರಂತೆ ಬದುಕಬೇಕೆಂಬ ಬಲವಾದ ಆಸೆಯನ್ನು ಹೊಂದಿದ್ದಾರೆ.

ಯಾರಾದರೂ ಮನೆಯಲ್ಲಿ ಪ್ರಾಣಿಗಳು ಸತ್ತರೆ (ಎತ್ತು ಎಮ್ಮೆ ಆಕಳು) ಮಾದರು ಬಂದು ಅವುಗಳನ್ನು ತೆಗೆದುಕೊಡು ಹೋಗುತ್ತಿದ್ದರು. ಅವರು ಬರುವವರೆಗೂ ಅವನ್ನು ಯಾರೂ ಮುಟ್ಟುತ್ತಿರಲಿಲ್ಲ. ಆದರೆ ಈಗ ಪ್ರಾಣಿಗಳು ಸಾಯುವ ಮುನ್ಸೂಚನೆ ಗೊತ್ತಾದ ಕೂಡಲೇ ಕಟಗರು ಬಂದು ಒಯ್ಯುತ್ತಾರೆ. ಮನೆಯಲ್ಲಿ ಯಾರಾದರೂ ಸತ್ತರೆ ಬೇರೆ ಊರಿಗೆ ಸುದ್ದಿ ಮುಟ್ಟಿಸುವ ಕಾಯಕ ಮಾಡುತ್ತಿದ್ದರು. ಹೇಗೆಂದರೆ ಯಾರಾದರೂ ಹೊಲೆಯ ಊರಿಗೆ ಬಂದರೆ ಸತ್ತ ಸುದ್ದಿಯೇ ತಂದಿದ್ದಾನೆಂದು ಕಂಡುಹಿಡಿಯುತ್ತಿದ್ದರು. ಆದರೆ ಈಗ ಮೊಬೈಲ್ ಬಂದಿರುವುದರಿಂದ ತಕ್ಷಣವೇ ವಿಷಯ ನೆಂಟರಿಷ್ಟರಿಗೆ ತಿಳಿದುಬಿಡುತ್ತದೆ. ಮೊದಲು ಇವರು ಚರ್ಮದ ಹಗ್ಗ, ಚರ್ಮದ ಮಿಣಿ, ಚಾವಟಿ, ಎತ್ತಿನ ಕೊರಳಿಗೆ ಹಾಕುವ ಪಟಕಾಣಿ, ಘಂಟಿಸರವನ್ನು ತಯಾರಿಸಿ ಲಿಂಗಾಯತರ ಅಥವಾ ವಕ್ಕಲಿಗರ ಮನೆಗೆ ಕೊಂಡೊಯ್ಯುತ್ತಿದ್ದರು. ಆದರೆ ಈಗ ಅವರು ಕೂಲಿ ಮಾಡುವುದು, ಸ್ವಂತಬೇಸಾಯ ಮಾಡುವುದು, ಸರ್ಕಾರದ ಉದ್ಯೋಗ ಕೈಗೊಳ್ಳುವುದರಿಂದ ಈ ಎಲ್ಲ ಮೂಲಭೂತ ಸಾಮಗ್ರಿಗಳನ್ನು ಕ್ಕಲಿಗರ ಮನೆಯ ಮಕ್ಕಳಾಗಿ ನಡೆದುಕೊಳ್ಳುತ್ತಿದ್ದರು. ಮತ್ತು ಕಣದಲ್ಲಿ ರಾಶಿಮಾಡುವಾಗ ರಾಶಿಯಾದ ಮೇಲೆ ದೇವರಿಗೆ ಅರ್ಪಿಸಿ ಮನೆಯ ಮಾದಿಗನಿಗೆ ಕಾಳುಗಳನ್ನು ಕೊಡುತ್ತಿದ್ದರು. ಆದರೆ ಈಗ ಆ ಸಂಪ್ರದಾಯ ಕಣ್ಮರೆಯಾಗಿ ಹೋಗಿದೆ.

ಮೊದಲು ಜಾತಿಪದ್ಧತಿ ಬಹಳ ಇತ್ತು. ೧೨ನೇ ಶತಮಾನಕ್ಕೆ ಹೋದಾಗ ಅಸ್ಪೃಶ್ಯರು ಓಣಿಯಲ್ಲಿ ಬಂದಾಗ ಸಂಬೋಳಿ, ಸಂಬೋಳಿ ಎನ್ನುತ್ತಾ ಬರುತ್ತಿದ್ದರು. ಅಂದರೆ ಮೇಲ್ಜಾತಿಯವರು ಅವರನ್ನು ನೋಡಿ ಹಿಂದೆ ಸರಿಯುತ್ತಿದ್ದರು. ಅವರ ನೆರಳನ್ನು ತಮ್ಮ ಮೇಲೆ ಬೀಳಿಸಿಕೊಳ್ಳುತ್ತಿರಲಿಲ್ಲ. ಆದರೆ ಯಮನೂರಿನ ಪರಿಸರಕ್ಕೆ ಬಂದಾಗ ಇದೆಲ್ಲ ಮಾಯವಾಗಿ ಎಲ್ಲರೂ ಒಂದೇ ಎನ್ನುವ ಭಾವನೆಯಿಂದ ಬಾಳುತ್ತಿರುವುದು ಕಂಡುಬರುತ್ತದೆ. ಮೊದಲು ಅವರು ದೇವರ ಗುಡಿಯಲ್ಲಿ ಹೋಗಲು ಅನುಮತಿ ಇರಲಿಲ್ಲ. ನೀರನ್ನು ತರುವ ಬಾವಿಯ ಮೇಲೆ ಅವರನ್ನು ಮುಟ್ಟಿಕೊಳ್ಳುತ್ತಿರಲಿಲ್ಲ, ಕೆರೆಯಲ್ಲಿ ನೀರು ತುಂಬಲು ಬರುವ ಹಾಗಿಲ್ಲ. ಆದರೆ ಯಮನೂರಿನ ಚಾಂಗದೇವನ ಸನ್ನಿಧಿಯಲ್ಲಿ ಇಂತಹ ತಾರತಮ್ಯ ಸಂಪೂರ್ಣವಾಗಿ ಮಾಯವಾಗಿದೆ. ಎಲ್ಲ ಜಾತಿಯವರು ಚಾಂಗದೇವರಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ಮೊದಲಿದ್ದ ಜಾತೀಯತೆ ಮಾಯವಾಗಿ ಸ್ನೇಹ ಸೌಹಾರ್ಧತೆಯಿಂದ ಕೂಡಿಕೊಂಡು ಬಾಳುವುದನ್ನು ಕಾಣುತ್ತೇವೆ.

ವಡ್ಡರನ್ನು ತೆಗೆದುಕೊಂಡಾಗ ಅವರ ಮುಖ್ಯ ವೃತ್ತಿ ಕಲ್ಲು ಕುಟ್ಟುವುದು, ಬಂಡೆಗಲ್ಲು ಅಗೆಯುವುದು, ಸುಣ್ಣ ಮಾರುವುದು. ಆದರೆ ಇಂದು ಸಂಪೂರ್ಣವಾಗಿ ಇದನ್ನು ಮಾಡದೇ ಕೃಷಿ, ವ್ಯಾಪಾರ ಉದ್ಯೋಗದಲ್ಲಿ ತೊಡಗಿರುತ್ತಾರೆ. ನಾವು ವಡ್ಡರು ಎನ್ನುವ ಭಾವನೆಯನ್ನೇ ಮರೆತು ಎಲ್ಲರೊಂದಿಗೆ ಬೆರೆತು ಬದುಕುವುದನ್ನು ಕಾಣುತ್ತೇವೆ.

ಕೆಲವು ಹಿಂದುಳಿದ ಸಮುದಾಯದವರು ಮೇಲ್ವರ್ಗದ ಜನರೊಡನೆ ಹೊಂದಿಕೊಂಡು ಬದುಕುವುದನ್ನು ಕಾಣುತ್ತೇವೆ. ಎಲ್ಲರೂ ಹೆಚ್ಚು ಹೆಚ್ಚು ಶಿಕ್ಷಣ ಪಡೆದುಕೊಂಡಿರುವುದರಿಂದ, ಅವರು ಕೂಡಾ ಒಳ್ಳೆಯ ರೀತಿಯ ಬದುಕನ್ನು ಸಾಗಿಸುತ್ತಾ ಬಂದಿದ್ದಾರೆ.

ಮನೆಗಳ ನಿರ್ಮಾಣಕ್ಕೆ ಬಂದಾಗ ನಗರ ಪ್ರದೇಶಗಳಲ್ಲಿ ಆಧುನಿಕ ರೀತಿಯ ಮನೆಗಳು, ಮಹಡಿ ಮನೆಗಳು, ಸಿಮೆಂಟ್, ಕಾಂಕ್ರೀಟ್, ಮೇಲ್ಛಾವಣಿ ಮತ್ತು ಮೊಝಾಯಿಕ್ ನೆಲ ಹೊಂದಿರುವ ಮನೆಗಳನ್ನು ಕಾಣಬಹುದು. ಆದರೆ ಸ್ವಲ್ಪ ಮಟ್ಟಿಗೆ ನಗರದ ಪ್ರಭಾವ ಅಂದರೆ ಛೋಟಾಬಾಂಬೆ ಎನಿಸಿರುವ ಹುಬ್ಬಳ್ಳಿ, ಬಿಜಾಪುರ ಹೆದ್ದಾರಿಯು ಯಮನೂರಿನಲ್ಲಿ ಹಾಯ್ದುಹೋಗಿರುವುದರಿಂದ ನಗರ ಪ್ರದೇಶದ ಪ್ರಭಾವವಾಗಿರುವುದರಿಂದ ಮನೆಗಳ ಮಾದರಿಯಲ್ಲಿ ಸ್ವಲ್ಪ ಬದಲಾವಣೆಯನ್ನು ಕಾಣಬಹುದಾಗಿದೆ. ಒಟ್ಟಿನಲ್ಲಿ ಮನೆಯ ಕಟ್ಟಡವು ಆಯಾ ಸಮುದಾಯದ ಆರ್ಥಿಕ ನೆಲೆಗಟ್ಟಿನ ಮೇಲೆ ನಿರ್ಮಿತವಾಗಿರುತ್ತವೆ. ಆದರೆ ತೀರ ಬಡವರ ಮನೆಗಳನ್ನು ನೋಡಿದಾಗ ಸಾಲು ಮನೆಗಳಿರುವುದು ಕಂಡುಬರುತ್ತಿದ್ದು, ಗಾಳಿ ಮತ್ತು ಹೆಚ್ಚಿನ ಬೆಳಕಿಗೆ ಅವಕಾಶ ಕಂಡುಬರುವುದಿಲ್ಲ. ಮುಂದುವರೆದು ಹೇಳಬೇಕೆಂದರೆ ಸ್ನಾನದ ಮನೆ, ಶೌಚಾಲಯ, ದೇವರಕೋಣೆ ಬೇರೆಯಾಗಿಲ್ಲ, ಅಡುಗೆ ಮನೆಯಲ್ಲೇ ಬಚ್ಚಲು ಮನೆ, ದೇವರಮನೆ ಇರುವುದು ಕಂಡುಬರುತ್ತದೆ.

ವಿದ್ಯುಚ್ಛಕ್ತಿ ಸೌಲಭ್ಯಗಳು ಹೆಚ್ಚುತ್ತಿದ್ದರೂ ಗ್ರಾಮೀಣ ಪ್ರದೇಶ ಅಥವಾ ಯಮನೂರಿನಲ್ಲಿ ಮಾತ್ರ ಸಿಂಗಲ್ ಫ್ಯೂಜ್ ಇರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ವಯಕ್ತಿಕವಾಗಿ ಸಂಬಂಧಗಳು ನಗರ ಪ್ರದೇಶಕ್ಕಿಂತ ಯಮನೂರಿನಲ್ಲಿ ಉಳಿದುಕೊಂಡು ಬಂದಿವೆ.

ಜೋಗೇರು, ಡೊಂಬರು, ಹೆಳವರು, ದುರುಗಮುರುಗೆಯರು, ಬುಡುಬುಡುಕೇರು, ಕರಡಿ ಆಡಿಸುವವರು ಇವರೆಲ್ಲರೂ ಊರ ಹೊರಗಿನ ದೇವಸ್ಥಾನದಲ್ಲಿ ಬಂದು ವಾಸಿಸುತ್ತಿದ್ದರು. ಬರಬರುತ್ತಾ ಸ್ಟೇಷನರಿ ಅಂಗಡಿಗಳು ಹೇರಳವಾಗಿರುವುದರಿಂದ ಜೋಗೇರ ಸಂಖ್ಯೆ ಕಡಿಮೆಯಾಗಿವೆ. ಮೊದಲು ಯಾವುದೇ ರೀತಿಯ ಟಿ.ವಿ, ಸಿನೆಮಾಗಳು ಇರಲಿಲ್ಲ. ಜನರಿಗೆ ಮೋಜಿನಾಟ ಬಹಳ ಇಷ್ಟವಾಗಿತ್ತು. ಅದಕ್ಕಾಗಿ ಡೊಂಬರಾಟದವರು ಹಾವು ಆಡಿಸುವ ಹಾವಾಡಿಗರು, ಊರೊಳಗೆ ಬಂದು ಅತ್ಯಾಕರ್ಷಕವಾದ ಆಟವಾಡಿ ಆ ಓಣಿಯಿಂದ ಹಣವನ್ನೋ, ದವಸ ಧಾನ್ಯವನ್ನೋ ಪಡೆದುಕೊಳ್ಳುತ್ತಿದ್ದರು. ಆದರೆ ಟಿ.ವಿಯಲ್ಲಿ ಬರುವ ಧಾರಾವಾಹಿ ಸಿನೇಮಾಕ್ಕೆ ಮರುಳಾಗಿ ಜನರು ಇಂತಹ ಆಟದ ಕಡೆಗೆ ಗಮನಹರಿಸುವುದು ಕಡಿಮೆಯಾಗಿದೆ.

ಈ ಗ್ರಾಮದ ಪ್ರದೇಶದಲ್ಲಿ ವಿವಿಧ ಸಮುದಾಯ ಧರ್ಮದ ಜನ ನೆಲೆಸಿದ್ದಾರೆ. ಈ ದೃಷ್ಟಿಯಿಂದ ಜಾತ್ಯಾತೀತ ಪ್ರದೇಶವೆಂದು ಕರೆಯಬಹುದಾದರೂ ಸಾಂಪ್ರದಾಯಿಕವಾದ ಜಾತಿ ಪದ್ಧತಿ ಹಸಿರಾಗಿಯೇ ಇದೆ. ಆಧುನಿಕತೆಯ ಅನುಕೂಲಗಳ ಕಾರಣವಾಗಿ ಸಾಮುದಾಯಿಕ ಜೀವನ ಪದ್ಧತಿ ಬದಲಾಗಿದ್ದು, ಜಾತಿಯ ಬಂಧಗಳು ಸಡಿಲಗೊಂಡಿದ್ದರೂ, ಅಂತರಂಗದಲ್ಲಿನ ಅಸಮಾಧಾನಗಳಿಂದಾಗಿ ಜನರಲ್ಲಿನ ವಿಶ್ವಾಸ ನಂಬಿಕೆಗಳು ದೂರವಾಗಿವೆ. ಸಾಮಾಜಿಕ ವಿಘಟನೆ, ತಾರತಮ್ಯಗಳ ನಡುವೆಯೂ ಸಾಂಸ್ಕೃತಿಕವಾಗಿ ಸಾಮರಸ್ಯದ ಮನೋಭಾವನೆಗಳು ಜೀವನ ವಿಧಾನವನ್ನು ರೂಪಿಸುತ್ತವೆ.

ಕುರುಬ ಸಮುದಾಯದವರು ಲಿಂಗಾಯತ ಮನೆಯವರೊಂದಿಗೆ ಎಷ್ಟೇ ಅನ್ಯೋನ್ಯವಾಗಿದ್ದರೂ ಅವರನ್ನು ಅಡಿಗೆಮನೆ ಹಾಗೂ ದೇವರ ಮನೆಯವರೆಗೂ ಕರೆದುಕೊಳ್ಳುವುದಿಲ್ಲ. ಅವರು ಪಡಸಾಲೆಯವರೆಗೆ ಮಾತ್ರ ಬರುತ್ತಾರೆ. ಇನ್ನು ತಳವಾರರನ್ನು ತೆಗೆದುಕೊಂಡಾಗ ಅದಕ್ಕಿಂತ ಕೆಳಗಿನ ಭಾಗದವರೆಗೆ ಮಾತ್ರ

ಬರುತ್ತಾರೆ. ಯಾವುದೇ ಪೂಜೆ, ವಿಧಿ ವಿಧಾನಗಳಲ್ಲಿ ಅವರು ಬರುವ ಹಾಗಿಲ್ಲ. ಅದೇ ರೀತಿ ಹರಿಜನರು ಕೇವಲ ಬಾಗಿಲದ ಹತ್ತಿರ ಅಥವಾ ಹೊಸ್ತಿಲದ ಹತ್ತಿರ ಮಾತ್ರ ಕುಳಿತುಕೊಳ್ಳಲು ಅವಕಾಶವಿತ್ತು. ಆದರೆ ಈಗ ಸಭೆ ಸಮಾರಂಭಗಳಲ್ಲಿ ಒಟ್ಟಾಗಿ ಸೇರುತ್ತಾರೆ. ಒಟ್ಟಾಗಿ ಊಟ ಮಾಡುತ್ತಾರೆ. ಬಹಳ ಅನ್ಯೋನ್ಯತೆಯಿಂದ ಪ್ರೀತಿಯಿಂದ ಸೇರುತ್ತಾರೆ. ಹಬ್ಬ ಹರಿದಿನಗಳನ್ನು ಆಚರಿಸುತ್ತಾರೆ. ಆದರೂ ಸ್ವಲ್ಪಮಟ್ಟಿಗೆ ಮೇಲ್ಜಾತಿಯವರ ಮನಸ್ಸಿನಲ್ಲಿ ಅವರು ಕೆಳವರ್ಗದವರು ಎನ್ನುವ ಭಾವನೆ ಮಾತ್ರ ಹೋಗಿಲ್ಲ ಎಂದು ಹೇಳಬಹುದು.

ಒಟ್ಟಾರೆಯಾಗಿ ಹೇಳುವುದಾದರೆ ಎಲ್ಲ ಸಮುದಾಯಗಳನ್ನು ನೋಡಿದಾಗ ಅವರು ಆಚರಿಸುವ ಆಚರಣೆಗಳಲ್ಲಿ ಬದಲಾವಣೆ ಸ್ವಲ್ಪಮಟ್ಟಿಗೆ ಕಂಡುಬರುತ್ತದೆ. ಉಡಿಗೆ, ತೊಡುಗೆ, ಊಟ, ಉಪಹಾರ, ಜೀವನ ಪದ್ಧತಿಯನ್ನು ಬದಲಿಸಿಕೊಂಡಿದ್ದಾರೆ. ಮೊದಲು ಅವಿಭಕ್ತ ಕುಟುಂಬಗಳು ಇರುತ್ತಿದ್ದವು. ಇದರಿಂದ ಹಬ್ಬ ಹರಿದಿನ ಆಚರಣೆ ಯಾವುದೇ ಸಭೆ ಸಮಾರಂಭಗಳನ್ನು ಅತ್ಯಂತ ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಆದರೆ ಈಗ ವಿಭಕ್ತ ಕುಟುಂಬಗಳಿದ್ದು ತಮ್ಮಷ್ಟಕ್ಕೆ ತಾವೇ ಹಬ್ಬಗಳನ್ನು ಆಚರಿಸಿ ಮುಗಿಸಿಬಿಡುತ್ತಾರೆ. ಇದರಿಂದ ಪರಸ್ಪರರಲ್ಲಿ ನಂಬಿಕೆ ಹೊರಟು ಹೋಗಿರುವುದನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಯಮನೂರಿನಲ್ಲಿ ಕಂಡುಕೊಂಡ ಅಂಶವೇನೆಂದರೆ ಯಾವುದೇ ಜಾತಿ ಮತ ಪಂಥ ವಿವಿಧ ಸಮುದಾಯದವರು ಚಾಂಗದೇವರ ಉರುಸಿನಲ್ಲಿ ಪಾಲ್ಗೊಳ್ಳುತ್ತಾರೆ. ಇದರಿಂದ ಇಲ್ಲಿ ಸರ್ವಧರ್ಮ ಸಮನ್ವಯವನ್ನು ಕಾಣಬಹುದು. ರಾಜಾಭಾಗಸವಾರ ಚಾಂಗದೇವರು ಇಲ್ಲಿನ ಪ್ರತಿಯೊಂದು ಸಮುದಾಯದವರ ಮೇಲೆ ಗಾಢವಾದ ಪ್ರಭಾವ ಬೀರಿರುವದನ್ನು ಕಾಣಬಹುದು.

## ಭವಿಷ್ಯತ್ತಿನ ಯಮನೂರು

ಭವಿಷ್ಯ ಎಂದ ಕೂಡಲೇ ನೆನಪಾಗುವುದು ಬದಲಾವಣೆ. ಬದುಕು ಬದಲಾಗುತ್ತಿದೆ. ಕಾರಣ ಬದುಕಿನ ಸ್ವಭಾವವೇ ಬದಲಾವಣೆ. ಏಕೆಂದರೆ ಪರಿವರ್ತನೆ ಎನ್ನುವುದು ಜಗದ ನಿಯಮವಾಗಿದೆ. ಈ ಪರಿವರ್ತನೆ ಕೇವಲ ಮನುಷ್ಯನಲ್ಲಿ ಅಷ್ಟೇ ಅಲ್ಲ ಪ್ರಾಣಿ-ಪಕ್ಷಿಗಳು, ಕ್ರಿಮಿ-ಕೀಟಗಳು, ತರು-ಲತೆಗಳು ಇವಕ್ಕೂ ಬದುಕು ಇದೆ. ಇಷ್ಟೇ ಅಲ್ಲ ಬದಲಾವಣೆಯನ್ನೇ ಕೇಂದ್ರವಾಗಿರಿಸಿಕೊಂಡರೆ ಜಡವಸ್ತುವೆಂದು ತಿಳಿದ ಕಲ್ಲು-ಮಣ್ಣು, ಗಾಳಿ ಬೆಳಕು, ಗೃಹ-ನಕ್ಷತ್ರಗಳು ಇತ್ಯಾದಿ ಕೂಡಾ ಪರಿವರ್ತನೆಯ ಪ್ರಕ್ರಿಯೆಯಲ್ಲಿ ಸಿಕ್ಕಿಕೊಂಡಿವೆ.

ಹಾಗೆಯೇ ಮಾನವನ ಬದುಕು ಮೇಲೆ ಹೇಳಿದ ಜಡ ಜೀವಿಗಳ ಮಿಡಿತದ ಮೇಲೆ ಅವಲಂಬಿಸಿದೆ ಎಂದರೆ ಅತಿಶಯೋಕ್ತಿ ಎನಿಸಲಾರದು. ಏಕೆಂದರೆ ಈ ಜೀವ ಜಗತ್ತಿಗೆ ಅಷ್ಟೊಂದು ಅಂಟಿಕೊಂಡಿದೆ. ಗ್ರಾಮೀಣ ಜನರ ಬದುಕು, ಹಕ್ಕಿಗಳ ಇಂಚರದಿಂದ ಬೆಳಗಾಗುವ ಇವತ್ತಿನ ದಿನ ಮುಂದೊಂದು ದಿವಸ ಈ ಪ್ರಾಣಿ ಪಕ್ಷಿಗಳನ್ನು ನಾವು ಪ್ರಾಣಿ ಸಂಗ್ರಹಾಲಯದಲ್ಲಿ ನೋಡಬೇಕಾದ ಪರಿಸ್ಥಿತಿ ಬಂದೊದಗಬಹುದು.

ಸಮಾಜ ಶಾಸ್ತ್ರೀಯವಾಗಿ ಬದಲಾವಣೆಯನ್ನು, ಅದರಲ್ಲೂ ಪರಿವರ್ತನೆಯ ಕಾರಣಗಳನ್ನು ವಿಶ್ಲೇಷಿಸುವಾಗ ಕೆಲವು ನೇರವಾಗಿಯೂ ಕೆಲವು ಪರೋಕ್ಷವಾಗಿಯೂ ಸಮಾಜದ ಮೇಲೆ ಪ್ರಭಾವ ಬೀರುತ್ತವೆ. ಭೌತ ಅಥವಾ ಪ್ರಾಕೃತಿಕ ವಿಷಯಗಳಲ್ಲಾಗುವ ಸಹಜ ಬದಲಾವಣೆಗಳೇ ಜನರ ಆರ್ಥಿಕ ಸ್ಥಿತಿಯ ಮೇಲೆ

ಪ್ರಭಾವ ಬೀರುತ್ತವೆ. ಅತಿವೃಷ್ಟಿ-ಅನಾವೃಷ್ಟಿಗಳು, ಬಿರುಗಾಳಿ-ಭೂಕಂಪಗಳು, ಸೀತೋಷ್ಣಗಳ ಪರಿಳಿತಗಳು, ಕೆರೆ-ಕಾಲುವೆಗಳು, ಆಣೆಕಟ್ಟು-ಸೇತುವೆಗಳು, ವಿವಿಧ ಸಂಪರ್ಕ ಸಾದನಗಳ ಹೆಚ್ಚಳವನ್ನು ಕಾಣಬಹುದು. ಅರಣ್ಯನಾಶ-ಅಭಿವೃದ್ಧಿ, ಸ್ವಾಭಾವಿಕ ಇಂಧನಗಳ ಶೋಧ-ಉಪಯೋಗಗಳು ಇತ್ಯಾದಿಗಳೆಲ್ಲಾ ಭೌತಿಕ ಪರಿಸರವನ್ನು ಪರಿವರ್ತಿಸುವುದರ ಮೂಲಕ ಗ್ರಾಮದ ಆರ್ಥಿಕ ವ್ಯವಸ್ಥೆಯಲ್ಲಿಯೂ ಬದಲಾವಣೆಯನ್ನು ಕಾಣಬಹುದು. ಸಾಮಾಜಿಕ ಅಂಶಗಳಾದ ಶಿಕ್ಷಣ, ಧರ್ಮ, ಕಾನೂನು, ಆರ್ಥಿಕತೆ, ಜಾತಿವ್ಯವಸ್ಥೆ ಇತ್ಯಾದಿಗಳು ಪರಂಪರೆಯ ಮೂಲಕ ಬದಲಾಗಬಹುದು. ಇದರ ಜೊತೆಗೆ ಆಧುನಿಕ ಶಕ್ತ್ಯಂಶಗಳಿಂದ ತೀವ್ರಗತಿಯಲ್ಲಿ ಬದಲಾಗಬಹುದು.

ಸ್ವಾತಂತ್ರ್ಯ ಬಂದ ಮೇಲೆ ಭಾರತ ಬದಲಾಗುತ್ತ ಬಂದಿರುವುದನ್ನು ಕಾಣುತ್ತೇವೆ. ಗ್ರಾಮೀಣ ಸಮುದಾಯವೂ ಈ ಬದಲಾವಣೆಯ ಪ್ರಕ್ರಿಯೆಗೆ ಒಳಗಾಗಿದೆ. ಗ್ರಾಮೀಣ ಸಮುದಾಯವು ಎಷ್ಟರಮಟ್ಟಿಗೆ ಬದಲಾಗುತ್ತದೆ ಎಂದರೆ ಚುನಾವಣೆಗಳು, ಸಾರಿಗೆ ಸಂಪರ್ಕ, ಹಣಕಾಸಿನ ಸಾಂಸ್ಥಿಕ ವ್ಯವಸ್ಥೆ, ಶೈಕ್ಷಣಿಕ ಸಂಸ್ಥೆಗಳು, ಪಂಚವಾರ್ಷಿಕ ಯೋಜನೆಗಳು, ಸಮಾಜಕಲ್ಯಾಣ ಕಾರ್ಯಕ್ರಮಗಳು, ಪ್ರಾಗತಿಕ ಕಾಯದೆ-ಕಾನೂನುಗಳು ಇತ್ಯಾದಿ ಅಂಶಗಳು ಸಂಪ್ರದಾಯಬದ್ಧವಾದ, ಜಡವೆಂಬ ಕುಖ್ಯಾತಿಗೆ ಪ್ರಸಿದ್ಧವಾಗಿದ್ದ ಗ್ರಾಮವು ಮುಂದೊಂದು ದಿನ ಪರಿವರ್ತನೆಯ ವರ್ತುಲಕ್ಕೆ ಸಿಕ್ಕಿಕೊಂಡು, ರಾಜಕೀಯ ಸ್ವಾತಂತ್ರ್ಯದಿಂದ ಪ್ರಜಾಪ್ರಭುತ್ವದ ಅನುಷ್ಠಾನಕ್ಕೆ ಉಂಟಾಗಿ ಈ ಗ್ರಾಮಕ್ಕೂ ರಾಜಕೀಯ ಪಕ್ಷಗಳು ತಮ್ಮ ಪ್ರಣಾಳಿಕೆಗಳನ್ನು ಹಿಡಿದು, ಮತದಾರರ ಮನ ಒಲಿಸಲು ಪ್ರಚಾರವನ್ನು ಕೈಗೊಂಡು ಹೆಚ್ಚಿನ ಮಟ್ಟದಲ್ಲಿ ರಾಜಕೀಯ ಪ್ರಜ್ಞೆಯನ್ನು ಬೆಳೆಸಲು ಕಾರಣವಾಗಬಹುದು. ಇಂತಹ ಅಪಕ್ವ ರಾಜಕೀಯ ಚಟುವಟಿಕೆಗಳಿಂದ ಜನರ ಗುಂಪುಗಳು ಒಡೆದು, ಹೋರಾಟದ ಗುಂಪುಗಳಾಗಿ ಹಳೆಯ ಮಧುರ ಬಾಂಧವ್ಯ ಅಳಿದು ಹೋಗುತ್ತದೆ. ಈ ರೋಗದಿಂದ ಕಲಿತವರು, ಸಾಹಸಿಗಳು, ಹೊಡೆದಾಟದ ವಾತಾವರಣಕ್ಕೆ ಹೇಸಿದವರು, ಉದ್ಯೋಗವಿಲ್ಲದವರು ನಗರಗಳಿಗೆ ವಲಸೆ ಹೋಗಬಹುದು. ಇದರಿಂದ ಹಳ್ಳಿಗಳು ಮುಂದೊಂದು ದಿನ ಚೇತನವಿಹೀನವಾಗುತ್ತಿವೆ.

ಹಿಂದೆ ಎಷ್ಟರ ಮಟ್ಟಿಗೆ ಧರ್ಮಶ್ರದ್ಧೆ ಶುದ್ಧವಾಗಿತ್ತೊ ಹೇಳಲಾಗದಿದ್ದರೂ ತೋರಿಕೆಗಂತೂ ಸ್ಪಷ್ಟವಾಗಿತ್ತು. ಆದರೆ ಮುಂದೆ ಕೇವಲ ಧಾರ್ಮಿಕ ಡಂಭಾಚಾರ ಎಲ್ಲೆಲ್ಲೂ ಕಾಣಬಹುದು. ಗ್ರಾಮೀಣ ಜನರಲ್ಲಿ ಹಿಂದೆ ಇದ್ದ ಒಗ್ಗಟ್ಟು ಒಡೆದು ಮನೆಮನೆಗಳೂ ರಾಜಕೀಯದ ರಣಕ್ಷಣಗಳಾಗಿ ಮಾರ್ಪಡಬಹುದು. ಗ್ರಾಮೀಣ ಪ್ರದೇಶದ ಜನರು ದುಡಿಯದೆಯೇ ಬದುಕಬೇಕೆಂಬ ಭಾವನೆಯನ್ನು ಹೊಂದಬಹುದು. ಏಕೆಂದರೆ ಮತ ಚಲಾಯಿಸಲು ಹಣ, ಹೆಂಡದ ಆಮಿಷ ಒಡ್ಡುವುದರಿಂದ ಪ್ರಜಾಪ್ರಭುತ್ವದ ಪ್ರಾಣವಾಗಿರುವ ಮತ ಚಲಾವಣೆಯನ್ನು ಕಲುಷಿತಗೊಳಿಸಿ ಪ್ರಾಮಾಣಿಕತೆಯನ್ನು ಸತ್ವಹೀನವಾಗಿಸುತ್ತಾರೆ. ಇದರಿಂದ ಮುಂದೊಂದು ದಿನ ಜನರು ಪುಕ್ಕಟೆಯಾಗಿ ಏನೆ(ವಿಷ ಕೊಟ್ಟರೂ) ಕೊಟ್ಟರೂ ತೆಗೆದುಕೊಳ್ಳುವಂಥ ಪರಿಸ್ಥಿತಿಗೆ ಬಂದು ತಲುಪುತ್ತಾರೆ.

ಗ್ರಾಮೀಣ ಪ್ರದೇಶದಲ್ಲಿ ಅನೇಕ ಕಲ್ಯಾಣ ಮತ್ತು ಅಭ್ಯುದಯ ಕಾರ್ಯಕ್ರಮಗಳು ವಿದೇಶಿ ಧನ ಆಯೋಗಗಳ ಮೂಲಕ ನಡೆದು, ಹಣದ ನೆರವಿನಿಂದ ಇಲ್ಲಿನ ಅನೇಕ ಸ್ವಯಂಸೇವಾ ಸಂಸ್ಥೆಗಳು ವ್ಯಾಪಕವಾಗಿ

ಜನರೊಡನೆ ಬೆರೆತು ಕಾರ್ಯನಿರತವಾಗಿವೆ. ಆದರೆ ಮುಂದೆ ಈ ಸೇವಾ ಸಂಸ್ಥೆಗಳು ಕೇವಲ ಹಣಕ್ಕಾಗಿ ಮಾತ್ರ ಕಾರ್ಯನಿರ್ವಹಿಸಬಹುದು. ಸ್ವಯಂ ಸೇವೆಯ ಹೆಸರಿನಲ್ಲಿ ಕೆಲವು ದುಷ್ಟಸಕ್ತಿಗಳು ಸಂಪತ್ತನ್ನುಗಳಿಸುವಲ್ಲಿ ನಿರತವಾಗಬಹುದು.

ಗ್ರಾಮೀಣ ಪ್ರದೇಶದ ಆರ್ಥಿಕತೆಯು ಮುಖ್ಯವಾಗಿ ಕೃಷಿಯನ್ನು ಮತ್ತು ಕೃಷಿಯಾಧಾರಿತ ಕೈಗಾರಿಕೆಗಂದ ರೂಪಿತವಾಗಿದೆ. ಭೂಮಿಯೇ ಜೀವನದ ಮೂಲ ಸಾಮಗ್ರಿಯಾಗಿರುವುದರಿಂದ ಜನರ ಬಡತನ ಪ್ರತಿಯೊಂದು ಕುಟುಂಬಕ್ಕೂ ಇರುವ ಪ್ರಮಾಣ, ಭೂಮಿಯ ಸಾರದ ಪ್ರಮಾಣ, ಕೃಷಿಗೆ ಅಗತ್ಯವಾಗಿರುವ ನೀರು, ಗೊಬ್ಬರ, ಬೀಜ, ಕ್ರಿಮಿನಾಶಕಗಳು, ಉಪಕರಣಗಳು, ಗ್ರಾಮೀಣ ಕಸಬುದಾರರ ಸೇವಾಸೌಲಭ್ಯ ಇತ್ಯಾದಿಗಳು ಆ ಸಮುದಾಯದ ಆರ್ಥಿಕತೆಯ ಚೌಕಟ್ಟನ್ನು ನಿರ್ಧರಿಸುತ್ತವೆ. ಇವುಗಳ ಜೊತೆಗೆ ಸಾರಿಗೆ ಸಂಪರ್ಕ, ಮಾರುಕಟ್ಟೆಗಳ ಲಭ್ಯತೆ, ಹಣದೊರೆಯುವ ಸವಲತ್ತು ಇತ್ಯಾದಿಗಳು ಆರ್ಥಿಕತೆಯ ರಕ್ತಮಾಂಸಗಳಾಗುತ್ತವೆ.

ಕೃಷಿಕರು ಹಳ್ಳಿಯಲ್ಲಿನ ಪ್ರಮುಖ ಗುಂಪಾಗಿರುತ್ತಾರೆ. ಅವರ ಸುತ್ತಲೂ ಸೇವಾನೆರವನ್ನು ನೀಡತಕ್ಕಂತ ಬಡಗಿ, ಕಮ್ಮಾರ, ಮೇದಾರ ಮುಂತಾದ ಕಸಬುದಾರರು, ಅನಂತರದಲ್ಲಿ ಅಕ್ಕಸಾಲಿಗ ಕ್ಷೌರಿಕ, ಕುಂಬಾರ, ನೇಕಾರ, ಬಡಗಿ ಮುಂತಾದವರು ಅವರವರ ಕಾಯಕದಲ್ಲಿ ನಿರತರಾಗಿರುತ್ತಿದ್ದರು. ಹಳ್ಳಿಯು ಮುಖ್ಯವಾಗಿ ಮುಖಾಮುಖಿಯಾದ ಪ್ರಾಥಮಿಕ ಸಂಬಂಧಗಳನ್ನೇ ಹೆಚ್ಚಾಗಿ ಹೊಂದಿದ ಸಮುದಾಯವಾದುದರಿಂದ ಆರ್ಥಿಕ ಸಂಬಂಧ ಕ್ರಿಯೆಗಳೆಲ್ಲವೂ ಸಾಮಾಜಿಕ ಸಂಬಂಧದ ಬಲೆಯಲ್ಲಿ ಅವಿನಾಭಾವದಿಂದ ಸೇರಿಕೊಂಡಿರುತ್ತವೆ. ಪರಂಪರೆಯ ಪ್ರಕಾರ ಗ್ರಾಮೀಣ ಆರ್ಥಿಕತೆಯು ಪ್ರಮುಖವಾಗಿ ಸ್ಥಳೀಯ ಅವಶ್ಯಕತೆಗಳನ್ನು ಪೂರೈಸುವ ವಸ್ತುಗಳನ್ನು ಉತ್ಪಾದಿಸುವುದಕ್ಕೆ ಒತ್ತನ್ನು ಕೊಡುತ್ತಿತ್ತೇ ಹೊರತು ಹೊರಗಿನ ಮಾರುಕಟ್ಟೆಗೆ ಹೆಚ್ಚು ಗಮನ ಕೊಡುತ್ತಿರಲಿಲ್ಲ.

ಆದರೆ ಔದ್ಯೋಗೀಕರಣ, ವಾಣಿಜ್ಯೀಕರಣ ಹಾಗೂ ನಗರೀಕರಣದಿಂದಾಗಿ ಗ್ರಾಮೀಣ ಪರಿಸರದಲ್ಲಿ ಮಹತ್ತರ ಬದಲಾವಣೆ ಕಾಣಬಹುದು. ಭೂಮಿ ಮತ್ತಿತರ ವಿಶೇಷಗಳು ಹಣದಮಾನದಿಂದ ಅಳೆಯಲ್ಪಡಬಹುದು. ಕೃಷಿಯು ಯಾಂತ್ರೀಕರಣಕ್ಕೆ ಒಳಗಾಗುತ್ತ ಹೊರಗಿನ ಮಾರುಕಟ್ಟೆಗೆ ಉತ್ಪನ್ನವನ್ನು ರೂಢಿಸಿ ಕೊಳ್ಳತೊಡಗಿದ್ದುದು ಹಣದ ಮಹತ್ವವನ್ನು ಹೆಚ್ಚಿಸಲು ಕಾರಣವಾಯಿತು. ಇದರಿಂದಾಗಿ ಮುಂದೆ ಮಾಧ್ಯಮಿಕ ಸಂಬಂಧಗಳು ಪ್ರವೇಶ ಪಡೆಯಲು ಅವಕಾಶವಾಗಬಹುದು.

ದಿನ ಕಳೆದ ಹಾಗೆಲ್ಲ ಮಾನವ ಜೀವನವು ಕ್ಲಿಷ್ಟವಾಗುತ್ತಿದೆ. ಸಂಕೀರ್ಣವಾಗುತ್ತಿದೆ. ಸಮಸ್ಯೆಗಳು ಸಂಖ್ಯೆಯಲ್ಲಿಯೂ, ತೀಕ್ಷ್ಣತೆಯಲ್ಲಿಯೂ ಹೆಚ್ಚಳಗೊಳ್ಳುತ್ತಿವೆ. ಮನುಷ್ಯರೊಳಗೆ ಪಾರಸ್ಪರಿಕವಾಗಿ ಇರಬೇಕಾದ ಸಮರಸಭಾವವು ವೃದ್ಧಿಗೊಳ್ಳದೆ, ಅವನತಿಗೊಳ್ಳುತ್ತಿರುವುದು ದುರಂತಕ್ಕೆ ಹಾದಿ ಮಾಡಿಕೊಡುತ್ತದೆ. ಗ್ರಾಮೀಣ ಬದುಕಿನಲ್ಲಿ ಸಾಮರಸ್ಯ ಜೀವನ ಮಾಯವಾಗಬಹುದು.

ಆಧುನೀಕರಣಗೊಳ್ಳುತ್ತಿರುವ ಭಾರತೀಯ ಸಮಾಜವು ಕೆಲವು ದಿಕ್ಕುಗಳಲ್ಲಿ ಕೆಲವು ದೃಷ್ಟಿಗಳಿಂದ ಪ್ರಾಗತಿಕ ಹೆಜ್ಜೆಯನ್ನು ಹಾಕುತ್ತಿರುವುದು ನಿಜವಾದರೂ ಹಲವಾರು ರೀತಿಗಳಲ್ಲಿ ಇದು ಅಧೋಗತಿಗೆ ಇಳಿಯುತ್ತಲಿದೆ. ಆಧುನಿಕತೆಯ ಹೆಸರಿನಲ್ಲಿ ಹೊಸ ಮೌಲ್ಯಗಳನ್ನು ಸ್ವೀಕರಿಸುವ ಭರದಲ್ಲಿ ಅತ್ಯುತ್ಕೃಷ್ಟವಾದ

ಹಲವಾರು ಮೌಲ್ಯಗಳನ್ನು ಕೈಬಿಡುವಂಥ ಪರಿಸ್ಥಿತಿ ಒದಗಬಹುದು. ಪ್ರಜಾತಂತ್ರದಂತಹ ಅತ್ಯುತ್ತಮ ಜೀವನ ರೀತಿಯನ್ನು ಸರಿಯಾದ ದೃಷ್ಟಿಯಲ್ಲಿ ಅಳವಡಿಸಿಕೊಳ್ಳದೆ ವೈಯಕ್ತಿಕ ಪ್ರತಿಷ್ಠೆಯನ್ನು ಮೆರೆಯುವಂತಹ ಅನಿಯಂತ್ರಿತ ಜೀವನ ಶೈಲಿಯು ಸಾರ್ವತ್ರಿಕವಾಗುತ್ತದೆ. ಅನ್ಯರ ಅದರಲ್ಲೂ ಹಿರಿಯರ ಮುಖಂಡರ ಮಾರ್ಗದರ್ಶನದಲ್ಲಿ ನಡೆಯುತ್ತಿದ್ದ ವ್ಯಕ್ತಿಗಳು, ಅವರ ಕಪಿಮುಷ್ಟಿಯಿಂದ ಬಿಡುಗಡೆಹೊಂದಿ ಸರ್ವತಂತ್ರ ಸ್ವತಂತ್ರ ಜೀವನ ನಡೆಸಲು ಹೆಚ್ಚಿನ ಆಸಕ್ತಿಯನ್ನು ಹೊಂದುವವರಾಗುತ್ತಾರೆ. ತಮಗೆ ತೋಚಿದ ಹಾಗೆ ಆಲೋಚಿಸುವ, ಮಾತನಾಡುವ ಹಾಗೂ ಕಾರ್ಯವನ್ನು ಮಾಡುವ ಜನರ ಜನಸಂಖ್ಯೆಯು ಹೆಚ್ಚಾಗುತ್ತಲಿದೆ. ತಾನು ಏನು ಮಾಡಿದರೂ, ತನ್ನನ್ನು ಕೇಳುವವರು ಯಾರೂ ಇಲ್ಲ. ತನ್ನ ಇಚ್ಛೆಗೆ ಅಡ್ಡಿ ಬರುವುದಕ್ಕೆ ಯಾರಿಗೂ ಅಧಿಕಾರವಿಲ್ಲ ಎಂಬಂತೆ ನಡೆದುಕೊಳ್ಳುವುದು ವ್ಯಾಪಕವಾಗುತ್ತದೆ. ತಾತ್ಕಾಲಿಕ ಸಂತೋಷಕ್ಕಾಗಿ ಸಮೂಹಕ್ಕೂ ಸಮುದಾಯಕ್ಕೂ ಆಗುವ ಹಾನಿಯನ್ನು ಲೆಕ್ಕಿಸದೆ ಎಂಥ ಸಂಬಂಧಗಳನ್ನಾದರೂ ಕಡಿದುಕೊಳ್ಳಲು ಹಿಂದು ಮುಂದು ಹೋಗುವುದು ವ್ಯಕ್ತಿಗಳ ಜೀವನ ಶೈಲಿಯಾಗುತ್ತಲಿದೆ.

ಮುಂದೊಂದು ದಿನ ಯುವಕರು ದುಡಿಯದೆ, ಬೀದಿ ಬೀದಿಯಲ್ಲಿ ತಿರುಗುವವರ ಸಂಖ್ಯೆಯು ಹೆಚ್ಚುತ್ತ ಸಾಗುತ್ತಿದೆ. ದುಡಿಯದೇ ತಿನ್ನುವುದು ತಪ್ಪು ಎಂದು ಗೊತ್ತಿದ್ದರು ಪುಕ್ಕಟೆಯಾಗಿ ಏನು, ಹೇಗೆ ದೊರೆತರೂ ತೆಗೆದುಕೊಂಡು ಕಾಲ ಹಾಕುವುದೇ ಸಾಮಾನ್ಯ ಸ್ಥಿತಿಯಾಗುತ್ತಿದೆ. ಗ್ರಾಮಗಳಲ್ಲಿ ಗುಂಪುಗಾರಿಕೆ, ಸೌಹಾರ್ದತೆ ಮಾಯವಾಗಿ ಏಕಾಕಿತನ ಮೊಗದೋತ್ತಿರುವಂತೆಯೇ ಹೊಲಬುಗೇಡಿಗಳ ಅಥವಾ ಪುಂಡರ ಗುಂಪುಗಳು ಹೆಚ್ಚುತ್ತಲಿವೆ.

ಒಟ್ಟಾರೆಯಾಗಿ ಹೇಳುವುದಾದರೆ ಗ್ರಾಮದಲ್ಲಿ ಸಮರಸ ಜೀವನ, ಮಧುರ ಬಾಂದವ್ಯ, ಶುದ್ಧಕಾಯಕ, ಪರಿಪೂರ್ಣ ಆರೋಗ್ಯ ಕಲ್ಪನೆ, ಜ್ಞಾನದ ವಿಸ್ತಾರತೆ, ಅಭ್ಯುದಯದ ಗುರಿಗಳ ಕಲ್ಪನೆ, ಸಮುದಾಯದಲ್ಲಿ ಮೂಡದೇ ಸಂಕುಚಿತ ಮನೋಭಾವನೆ, ಪರಸ್ಪರ ಕಚ್ಚಾಡುವುದು, ಕಾಯಕದಲ್ಲಿ ಅಶುದ್ಧತೆ, ಅನಾರೋಗ್ಯ, ತಾಂಡವವಾಡಿ ಸಮಾಜದಲ್ಲಿ ಸಂಪೂರ್ಣವಾಗಿ ಸಮಸ್ಯೆಗಳ ಸರಮಾಲೆಯೇ ಮುಂದೆ ತೋರಿ ಗಾಂಧೀಜಿಯವರ ರಾಮರಾಜ್ಯ ಕಲ್ಪನೆ ಬರೀ ಕಲ್ಪನೆಯಾಗಿಯೇ ಉಳಿಯಬಹುದು.

## ಅಧ್ಯಾಯ ಎಂಟು

# ಉಪಸಂಹಾರ ಮತ್ತು ಅಧ್ಯಯನದಲ್ಲಿ ಕಂಡುಕೊಂಡ ಅಂಶಗಳು

ಭಾರತವು ಗ್ರಾಮಗಳ ದೇಶವಾಗಿದೆ. ಗ್ರಾಮಗಳು ನಮ್ಮ ನಾಡಿನ ಜೀವನಾಡಿಯಿದ್ದಂತೆ. ಒಟ್ಟು ಜಾಗತಿಕ ಮಟ್ಟದ ಜನಸಂಖ್ಯೆಯನ್ನು ನೋಡಿದಾಗ ಒಟ್ಟು ಜನಸಂಖ್ಯೆಯ ೨/೩ಭಾಗದಷ್ಟು ಜನ ಇಂದಿಗೂ ಗ್ರಾಮಗಳನ್ನೇ ಆಶ್ರಯಿಸಿ ಬದುಕುತ್ತಿದ್ದಾರೆ. ಆ ಗ್ರಾಮದಲ್ಲಿ ವಾಸಿಸುವ ವಿವಿಧ ಸಮುದಾಯದವರ ಆಚಾರ-ವಿಚಾರ, ನಡೆ-ನುಡಿ, ಬದುಕುವ ಜೀವನ ವಿಧಾನ, ಹಬ್ಬಗಳ ಆಚರಣೆಯಲ್ಲೂ ವೈವಿಧ್ಯತೆ, ಜನನದಿಂದ ಹಿಡಿದು ಸಾಯುವವರೆಗೆ ಅವರು ಅನುಸರಿಸುವ ಸಂಸ್ಕಾರಗಳ ವೈಶಿಷ್ಟ್ಯತೆ ಭಿನ್ನವಾಗಿರುತ್ತದೆ.

ಹೇಗೆಂದರೆ ಶಾಲೆಗಳಲ್ಲಿ ಒಂದೇ ವಯಸ್ಸಿನ ಹತ್ತಾರು ಮಕ್ಕಳು ಇರುತ್ತಾರೆ. ವಯಸ್ಸಿನ ಸಾಮ್ಯ ಇದ್ದರೂ ಮುಖ ಲಕ್ಷಣಗಳಲ್ಲಿ, ಆಕೃತಿಯಲ್ಲಿ, ಗಾತ್ರ-ತೂಕಗಳಲ್ಲಿ ಒಂದೇ ರೀತಿ ಇರುವುದಿಲ್ಲ. ಹೀಗೆ ಗ್ರಾಮಗಳಲ್ಲಿ ವಾಸಿಸುವ ಜನರು ಅಚ್ಚು ಹಾಕಿದ ಮಾದರಿಯಲ್ಲಿ ಒಂದೇ ರೀತಿಯಲ್ಲಿ ಇರುವುದಿಲ್ಲ. ಅದು ಪರಿಸ್ಥಿತಿಯ ಅನುಕೂಲತೆ ಮತ್ತು ಅನಾನುಕೂಲತೆಗಳನ್ನು ಹೊಂದಿಕೊಂಡು ಇರುವುದು. ಹೀಗಾಗಿ ವಿವಿಧ ಸಮುದಾಯಗಳ ಸಂಸ್ಕೃತಿಯೂ ಕೂಡಾ ಒಂದೇ ತೆರನಾಗಿರುವುದಲ್ಲ. ವಿಭಿನ್ನತೆಯಿಂದ ಕೂಡಿರುತ್ತದೆ.

ಅಂದು ರಾತ್ರಿ ಕತ್ತಲೆಗೆ ಹೆದರಿ ಮರದ ಕವಲುಗಳ ನಡುವೆ ಮುದ್ದೆಯಾಗಿ ಮಲಗಿಕೊಂಡು, ಚಳಿಯಲ್ಲಿ ಗಡಗಡ ನಡುಗುತ್ತಾ ಬೆಳಗಾಗುವುದನ್ನು ತವಕದಿಂದ ನಿರೀಕ್ಷಿಸುತ್ತಿದ್ದ ಆ ಮನುಷ್ಯನೂ, ಇಂದು ರಾತ್ರಿಯಲ್ಲಿ ಹವಾನಿಯಂತ್ರಿತ ಕೋಣೆಯಲ್ಲಿ ಹಿತಕರವಾದ ಮಂದಪ್ರಕಾಶದಲ್ಲಿ ಬೆಚ್ಚಗೆ ಮಲಗುವ ಮನುಷ್ಯನೂ ಒಂದೇ ಕುಲದವರೇ ಆದರೂ, ಅಂದಿಗೂ, ಇಂದಿಗೂ ಎಂಥ ಅದ್ಭುತ ವ್ಯತ್ಯಾಸ! ನೋಡಿದವರಿಗೆ ಭ್ರಮೆಯಾಗುವಷ್ಟು ಅಚ್ಚರಿಯಾಗುತ್ತದೆ. ಇಂದಿನ ನಮ್ಮ ನಡೆ-ನುಡಿ, ಆಹಾರ-ವಿಹಾರ, ಆಚಾರ-ವಿಚಾರ, ಎಲ್ಲವುಗಳಲ್ಲಿಯೂ ಸಹಸ್ರಾರು, ಲಕ್ಷಾಂತರ ವರ್ಷಗಳ ಕ್ರಮಬದ್ಧ ವಿಕಾಸದಿಂದಾಗಿ ಈ ಅದ್ಭುತ ವ್ಯತ್ಯಾಸ ಕಂಡುಬರುತ್ತದೆ. ಇದಕ್ಕೆ ಯಮನೂರಿನ ಪರಿಸರವೂ ಹೊರತಾಗಿಲ್ಲ.

ಸಮುದಾಯದ ಎಲ್ಲ ಸ್ತರಗಳನ್ನು ಗಮನಿಸುವುದು ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಸಿದ ಹಾಗೆಯೇ, ಲಕ್ಷಾಂತರ ವರ್ಷಗಳಿಂದ ಕೋಟ್ಯಾಂತರ ವ್ಯಕ್ತಿಗಳ ಮೂಲಕ ಹನಿಹನಿಯಾಗಿ ಕೂಡಿದ ಸಂಸ್ಕೃತಿಯನ್ನು ವಿವರವಾಗಿ ತಿಳಿಯುವುದು ಅಸಾಧ್ಯದ ಮಾತಾದರೂ ಅಧ್ಯಯನದ ದೃಷ್ಟಿಯಿಂದ ಮಾಡಲೇಬೇಕಾಗಿದೆ.

ಸಮಾಜವು ನಿತ್ಯ ಪರಿವರ್ತನಶೀಲವಾದುದು. ಅದು ದಿನದಿಂದ ದಿನಕ್ಕೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ ಹೋಗುತ್ತದೆ. ಇದರಿಂದ ಸಮುದಾಯದವರ ಆಧುನಿಕ ಜೀವನ ವಿಧಾನಗಳು

ಪರಂಪರಾನುಗತವಾದ ಬದುಕಿನ ಶೈಲಿಯನ್ನು ವಿಘಟಿಸುವುದರಿಂದ ಅನೇಕ ವೈರುಧ್ಯಗಳ ನಡುವೆಯೂ ಸೌಹಾರ್ಧಯುತವಾದ ಸಹಬಾಳ್ವೆಗೆ ತುಡಿಯುವ ಜೀವನೋತ್ಸಾಹ ಕಡಿಮೆಯಾಗಿಲ್ಲ ಎಂಬುದು ಯಮನೂರಿನ ಪರಿಸರದಿಂದ ತಿಳಿಯುತ್ತದೆ. ಏಕೆಂದರೆ ಸಮುದಾಯದಲ್ಲಿ ನಗರದ ಕೃತ್ರಿಮತೆ, ತೋರಿಕೆಯ ಜೀವನ ಕ್ರಮ, ಗ್ರಾಮದ ಜನರಿಗೆ ತಿಳಿಯುವುದಿಲ್ಲ. ಗ್ರಾಮದ ಜನಸಂಖ್ಯೆ ಕಡಿಮೆ ಇರುವುದರಿಂದ ಎಲ್ಲರೂ ಪರಸ್ಪರ ಪರಿಚಿತರಾಗಿರುವರು. ಯಾರೂ ಅಪರಿಚಿತರಲ್ಲ. ಹೊಸಬರೆನಿಸುವುದಿಲ್ಲ. ಜನರ ನಡುವಿನ ಸಂಬಂಧವು ವೈಯಕ್ತಿಕವೂ, ಪ್ರತ್ಯಕ್ಷ ಸ್ವರೂಪದ್ದು, ಸಮಗ್ರವಾಗಿರುತ್ತದೆ. ಪರಸ್ಪರ ಪ್ರೀತಿ ವಿಶ್ವಾಸದಿಂದ ಬದುಕುತ್ತಾರೆ. ಜನರು ತಮ್ಮ ಮಾತುಕತೆ, ವ್ಯವಹಾರಗಳಲ್ಲಿ ಪ್ರಾಮಾಣಿಕರು ಹಾಗೂ ಮುಚ್ಚುಮರೆಯಿಲ್ಲದೆ, ತಮ್ಮ ಸಮುದಾಯದೊಂದಿಗೆ ಅನ್ಯೋನ್ಯತೆಯಿಂದ ಬಾಳುತ್ತಾರೆ.

ಗ್ರಾಮದ ಜನರ ಜೀವನದಲ್ಲಿ ಏಕತೆಯನ್ನು ಕಾಣಬಹುದು. ಜನರ ಜೀವನ ಕ್ರಮಗಳಲ್ಲಿ, ಚಿಂತನೆ-ಭಾವನೆಗಳಲ್ಲಿ ಊಟ-ಉಪಚಾರಗಳಲ್ಲಿ ಉಡುಗೆ-ತೊಡುಗೆಗಳಲ್ಲಿ, ಆಲೋಚನೆ ಅಭಿಪ್ರಾಯಗಳಲ್ಲಿ ಏಕರೂಪತೆ ಕಂಡುಬರುತ್ತದೆ. ಒಂದೇ ಬಗೆಯ ಧಾರ್ಮಿಕ ನಂಬಿಕೆಗಳು, ಆಚರಣೆಗಳು, ನೈತಿಕ ನಿಯಮಗಳು, ಲೋಕಾಚಾರಗಳು, ರೂಢಿ ಸಂಪ್ರದಾಯಗಳಲ್ಲಿ ಸಮುದಾಯದ ಜನರು ಕೂಡಿಬಾಳುವ ಸಾಮರಸ್ಯದ ಬದುಕನ್ನು ಸಾಗಿಸುತ್ತಿದ್ದಾರೆ.

ಗ್ರಾಮೀಣ ಜನರಲ್ಲಿ ಆಡಂಬರತೆ ಇಲ್ಲದಿರುವುದು ಕಂಡುಬರುತ್ತದೆ. ಅಂದರೆ ಇವರು ಸರಳರು, ಮುಗ್ಧರು, ಅಮಾಯಕರು, ಕಪಟತೆ, ಆಡಂಬರದ ವರ್ತನೆ ಅವರಲ್ಲಿ ಕಂಡುಬರುವುದಿಲ್ಲ. ಅವರು ಸ್ನೇಹಮಯಿಗಳು, ಕಷ್ಟಸಹಿಷ್ಣುಗಳು, ಅತಿಥಿ ಸತ್ಕಾರದಲ್ಲಿ ಆಸೆಯುಳ್ಳವರು ಆಗಿದ್ದಾರೆ. ನಗರದಲ್ಲಿ ಕಾಣುವ ವೈಯಕ್ತಿಕತೆ, ಸ್ವಾರ್ಥಪರತೆ, ವ್ಯಾವಹಾರಿಕತೆ, ಸ್ಪರ್ಧಾತ್ಮಕತೆ, ಪ್ರಾಪಂಚಿಕತೆ ಮುಂತಾದ ಗುಣಗಳಿಂದ ದೂರ ಇದ್ದು, ನೆಮ್ಮದಿಯ ಜೀವನ ನಡೆಸುವರು ಎಂಬುದು ನಾನು ಕ್ಷೇತ್ರಕಾರ್ಯಕ್ಕೆ ಹೋದಾಗ ತಿಳಿದುಬಂದಿತು. ಅದಕ್ಕಾಗಿ ಗಾಂಧೀಜಿಯವರು 'Back to the village' ಎಂದಿದ್ದಾರೆ.

ಇಲ್ಲಿನ ಗ್ರಾಮಸ್ಥರು, ಸಮುದಾಯದ ನೀತಿ ನಿಯಮಗಳಿಗೆ ಗೌರವ ಮನ್ನಣೆ ನೀಡುತ್ತಾರೆ. ಇಲ್ಲಿನ ಜನರು ಸಂಪ್ರದಾಯವಾದಿಗಳು. ರೂಢಿಸಂಪ್ರದಾಯವಾದಿಗಳಿಗೆ ಇಲ್ಲಿನ ಪ್ರತಿಯೊಂದು ಆಚರಣೆಗಳಿಗೆ ತಲೆಬಾಗಿ ಜೀವನ ನಡೆಸುವ ಪ್ರವೃತ್ತಿ ಇಲ್ಲಿನ ಸಮುದಾಯದ್ದಾಗಿದೆ. ಬಿಟ್ಟುಬಿಡದೆ ನಡೆದುಕೊಂಡು ಬಂದ ಪದ್ಧತಿಗಳು, ನಂಬಿಕೆಗಳು ಹಾಗೂ ಆದರ್ಶಗಳು, ಜನರ ನಡವಳಿಕೆಗೆ ಆಧಾರಗಳು. ಇಲ್ಲಿ ಪ್ರತಿವರ್ಷ ನಡೆಯುವ ಚಾಂಗದೇವರ ಉರುಸು, ಮೂರುವರ್ಷಕ್ಕೊಮ್ಮೆ ನಡೆಯುವ ಗ್ರಾಮದ ಹನುಮಂತ ದೇವರ ಜಾತ್ರೆಯಲ್ಲಿ ಪ್ರತಿಯೊಂದು ಸಮುದಾಯದವರು ನಂಬಿಕೆ ಇಟ್ಟಿರುವುದು, ಆ ಜಾತ್ರೆಯ ಸಂದರ್ಭದಲ್ಲಿ ಸೇರಿದ ಜನದಟ್ಟಣೆಯಿಂದ ತಿಳಿಯುತ್ತದೆ. ಇಲ್ಲಿನ ಸಮುದಾಯದ ಜನಸಂಖ್ಯೆಯೂ, ಕಡಿಮೆಯಿರುವುದರಿಂದ ಹಾಗೂ ಮುಖಾ-ಮುಖಿ ಸಂಬಂಧಗಳು ಅಸ್ತಿತ್ವದಲ್ಲಿರುವುದರಿಂದ ಯಾವುದೇ ಒಬ್ಬ ವ್ಯಕ್ತಿಯೂ ಉಲ್ಲಂಘಿಸುವುದಿಲ್ಲ. ಏಕೆಂದರೆ "ಜನರ ಬಾಯಿಗೆ ಬೀಳಬಾರದು" ಅಥವಾ ಜನರು ಆಡಿಕೊಳ್ಳುವ ವಸ್ತುವಾಗಬಾರದು ಎಂಬ ನೈತಿಕ ಭಯ ಈ ಗ್ರಾಮಸ್ಥರ ಮುಗ್ಧ ಮನಸ್ಸಿನಲ್ಲಿರುವುದು ಕಂಡುಬರುತ್ತದೆ.

ಇತ್ತೀಚಿನ ವರ್ಷಗಳಲ್ಲಿ ಮಾತ್ರ ಆಸ್ತಿ, ಜಮೀನು, ಜಾತೀಯತೆ, ಪಕ್ಷರಾಜಕಾರಣ, ನಗರ-ಹಳ್ಳಿ, ಅಕ್ಷರಸ್ಥ-ಅನಕ್ಷರಸ್ಥ ಬುದ್ಧಿ-ಶ್ರಮ ಇವುಗಳ ನಡುವಿನ ಹೊಂದಾಣಿಕೆ ಸಾಧ್ಯವಾಗದೆ ಅಂತರಗಳು

ವಿಸ್ತಾರಗೊಂಡು ಗ್ರಾಮಸ್ಥರ ನಡುವೆ ಆಗಾಗ ಸ್ವಲ್ಪ ಮಟ್ಟಿಗೆ ಸಂಘರ್ಷ ನಡೆಯುವುದು ತಿಳಿಯುತ್ತದೆ. ಈ ಸಂಘರ್ಷ ಅತಿರೇಕಕ್ಕೆ ಹೋಗದೆ ಊರಿನ ಹಿರಿಯರ ಸಮ್ಮುಖದಲ್ಲಿ ಇತ್ಯರ್ಥವಾಗಿಬಿಡುತ್ತದೆ.

ಗ್ರಾಮದ ಜೀವನವು ಕುಟುಂಬದ ಆಧಾರದ ಮೇಲೆ ನಿರ್ಧರಿಸಲ್ಪಡುತ್ತದೆ. ಗ್ರಾಮದ ಜನರ ನೋವು-ನಲಿವು, ಕೆಲಸ-ಕಾರ್ಯ, ವ್ಯವಹಾರ, ವಿಹಾರ ಎಲ್ಲವುಗಳಲ್ಲಿ ಕುಟುಂಬದ ಪಾತ್ರ ಹಿರಿದಾದುದು. ಇಲ್ಲಿ ವ್ಯಕ್ತಿಗಿಂತ ಕುಟುಂಬವೇ ಮುಖ್ಯ. ಏಕೆಂದರೆ ವ್ಯಕ್ತಿಯ ಹಿತಾಸಕ್ತಿಗಳು ಕುಟುಂಬಕ್ಕೆ ಅಧೀನವಾಗಿರುತ್ತವೆ. ಸಾಮಾನ್ಯವಾಗಿ ಇಲ್ಲಿನ ಕುಟುಂಬಗಳು ಪಿತೃಪ್ರಧಾನವಾಗಿರುತ್ತವೆ. ಅಂದರೆ ತಂದೆಯೇ ಕುಟುಂಬದ ಹಿರಿಯ ಯಜಮಾನ. ಎಲ್ಲರೂ ಆತನಿಗೆ ತಲೆಬಾಗಿ ನಡೆಯುವುದು ಒಳ್ಳೆಯ ಕುಟುಂಬದ ಲಕ್ಷಣ ಅಂತಹ ಪದ್ಧತಿಯನ್ನು ಯಮನೂರಿನ ಗ್ರಾಮ ಸಮುದಾಯದಲ್ಲಿ ಕಾಣಬಹುದು.

ಗ್ರಾಮೀಣ ಪರಿಸರದಲ್ಲಿ ಕೃಷಿಕಾರ್ಯಗಳಿಗೆ ಹೆಚ್ಚಿನ ಜನಬಲಬೇಕಾಗಿರುವುದರಿಂದ ಹೆಚ್ಚಿನ ಸದಸ್ಯರುಗಳನ್ನು ಹೊಂದಿರುವ ಅವಿಭಕ್ತ ಕುಟುಂಬಗಳು ಬೇಕು. ಕುಟುಂಬದ ಕೆಲಸಕಾರ್ಯಗಳನ್ನು ಸ್ತ್ರೀಯರು, ಪುರುಷರು, ಮಕ್ಕಳು, ಹಿರಿಯರು ಆಯಾ ಕೆಲಸದ ಆಧಾರದ ಮೇಲೆ ಹಂಚಿಕೊಂಡು ಮಾಡುವರು. ಮನೆಯ ಹೊರಗಿನ ಕೃಷಿಕಾರ್ಯಗಳನ್ನು, ವ್ಯವಹಾರಗಳನ್ನು ಪುರುಷರು ನೋಡಿಕೊಂಡರೆ ಮನೆಯೊಳಗಿನ ಕೆಲಸಗಳನ್ನು ಮತ್ತು ಮಕ್ಕಳ ಲಾಲನೆ-ಪಾಲನೆ-ಪೋಷಣೆಯ ಕೆಲಸವನ್ನು ನೋಡಿಕೊಳ್ಳುವುದರ ಜೊತೆಗೆ ಹೊಲದ ಕೆಲಸವನ್ನು ಮಹಿಳೆಯರು ಇಂದಿಗೂ ಗ್ರಾಮದಲ್ಲಿ ಮಾಡುವುದು ಕಂಡುಬರುತ್ತದೆ. ಹೆಣ್ಣು ಮಕ್ಕಳು ತಾಯಂದಿರ ಕೆಲಸ ಕಾರ್ಯಗಳಲ್ಲಿ ನೆರವಾದರೆ ಗಂಡು ಮಕ್ಕಳು ತಂದೆಯವರಿಗೆ ಅವರವರ ಕೆಲಸಗಳಲ್ಲಿ ನೆರವಾಗುವುದು ಸಾಮಾನ್ಯವಾಗಿದೆ. ಹೀಗಾಗಿ ಪ್ರತಿಯೊಂದು ಗ್ರಾಮಗಳಲ್ಲಿ ಅನಕ್ಷರತೆ ತಲೆದೋರುತ್ತದೆ. ಶಿಕ್ಷಣಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಡುವುದಿಲ್ಲ. ಆದ್ದರಿಂದ ಯಮನೂರಿನಲ್ಲಿ ೧೯೧೧ರಲ್ಲಿ ಸ್ಥಾಪನೆಯಾದ ಒಂದೇ ಒಂದು ಶಾಲೆಯಿರುವುದು ಕಂಡುಬಂದಿದೆ. ನಗರಪ್ರದೇಶಕ್ಕೆ ಹೋಲಿಕೆ ಮಾಡಿದರೆ ಶಾಲೆಗಳು ನಾಯಿಕೊಡೆಗಳಂತೆ ಹುಟ್ಟಿಕೊಂಡಿವೆ. ಗ್ರಾಮದ ಜನರು ಕೃಷಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಾರೆ.

ಗ್ರಾಮೀಣ ಸಮುದಾಯದ ಸ್ತ್ರೀಯರ ಬಗೆಗೆ ಹೇಳುವುದಾದರೆ, ಅವರಿಗೆ ಪ್ರತ್ಯೇಕ ಅಸ್ತಿತ್ವವಿದೆ ಎಂದು ಅನ್ನಿಸುವುದೇ ಇಲ್ಲ. ಏಕೆಂದರೆ ಪುರುಷರ ಜೀವನದ ಒಂದು ಭಾಗದಂತೆಯೇ ಕೆಲಸ ಮಾಡುತ್ತಾರೆ. ಪುರುಷರಿಗೆ ಅಧೀನರಾಗಿ, ವಿಧೇಯರಾಗಿ ಅವರು ನಡೆದುಕೊಳ್ಳುತ್ತಾರೆ. ಭಾರತೀಯ ಪರಂಪರೆಯಲ್ಲಿ ವೈಭವೀಕರಿಸಲಾಗಿರುವ ಪತಿವ್ರತದ ಕಲ್ಪನೆ ಅವರಲ್ಲಿ ಬೇರೂರಿದೆ. ಇತ್ತೀಚಿಗೆ ಸ್ತ್ರೀಯರು ಸ್ವ-ಸಹಾಯ ಸಂಘಗಳಲ್ಲಿ, ಸ್ತ್ರೀ ಶಕ್ತಿಗುಂಪಿನಲ್ಲಿ ಸೇರಿಕೊಂಡು ಸ್ವಲ್ಪ ಮಟ್ಟಿಗೆ ಹೊರಗಿನ ಪ್ರಪಂಚದ ಜ್ಞಾನವನ್ನು ಆಗು-ಹೋಗುಗಳನ್ನು, ಆರ್ಥಿಕ ಪರಿಸ್ಥಿತಿಯನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದಾರೆ.

ಇನ್ನೊಂದು ದೃಷ್ಟಿಯಲ್ಲಿ ನೋಡುವುದಾದರೆ ಸ್ತ್ರೀಯರು ಕುಟುಂಬದ ಬೆನ್ನೆಲುಬಿದ್ದಂತೆ. ಕುಟುಂಬದ ನಿತ್ಯ ವ್ಯಹಾರಗಳಿಗಾಗಿ ತಮ್ಮ ಜೀವನವನ್ನು ಬಿಡುವಿಲ್ಲದಂತೆ ಅವರು ತೇಯುವರು. ಗೃಹಕೃತ್ಯಗಳನ್ನು ಪುರುಷರು ಹಂಚಿಕೊಂಡು ಮಾಡುವ ಕ್ರಮವೇ ಭಾರತದ ಗ್ರಾಮಗಳಲ್ಲಿ ಇಲ್ಲ. ಅದು ಸಂಪೂರ್ಣವಾಗಿ ಸ್ತ್ರೀಯರ ಕೆಲಸವೇ ಆಗಿರುತ್ತದೆ. ಆದರೆ ನಗರ ಪ್ರದೇಶಗಳಲ್ಲಿ ಹಾಗಲ್ಲ ಗಂಡ ಹೆಂಡತಿ ಇಬ್ಬರೂ ವೃತ್ತಿಯಲ್ಲಿರುವುದರಿಂದ ಸಮನಾಗಿ ಗೃಹಕಾರ್ಯಗಳನ್ನು ಹಂಚಿಕೊಂಡು ಮಾಡುತ್ತಾರೆ. ಅಂದಾಗ ವೇಳೆಗೆ

ಸರಿಯಾಗಿ ಕಛೇರಿಗೆ ಹೋಗಲು ಶಾಲೆಗೆ ಹೋಗಲು ಅನುಕೂಲವಾಗುತ್ತದೆ. ನಗರ ಮತ್ತು ಗ್ರಾಮಕ್ಕೆ ಹೋಲಿಸಿದಾಗ ಅವರ ಜೀವನ ಶೈಲಿಯಲ್ಲಿ ತುಂಬಾ ವಿಭಿನ್ನತೆ ಇರುವುದು ಕಂಡುಬರುತ್ತದೆ.

ಗ್ರಾಮದಲ್ಲಿ ಸ್ತ್ರೀಯರು ಅಗತ್ಯ ಬಿದ್ದಾಗ, ಗೃಹ ಕೆಲಸಗಳನ್ನು ಮುಗಿಸಿಕೊಂಡು ಹೊಲಗಳಲ್ಲಿ ಪುರುಷರೊಂದಿಗೆ ಸೇರಿಕೊಂಡು ಕೃಷಿಕಾರ್ಯಗಳಲ್ಲೂ ಭಾಗಿಗಳಾಗುತಾರೆ. ಆರ್ಥಿಕವಾಗಿ ಕೆಳವರ್ಗದಲ್ಲಿರುವ ಕೃಷಿ ಕುಟುಂಬಗಳಿಗೆ ಸೇರಿದ ಸ್ತ್ರೀಯರಿಗಂತೂ ಕೃಷಿಕಾರ್ಯಗಳು ಅವರ ದೈನಂದಿನ ಕಾರ್ಯಗಳಾಗಿ ಬಿಟ್ಟಿವೆ. ಮಳೆ, ಛಳಿ, ಬಿಸಿಲೆನ್ನದೇ ಹಗಲು ರಾತ್ರಿ ದುಡಿಯುವ ಶ್ರಮ ಜೀವಿಗಳು ಸ್ತ್ರೀಯರು. ಇದರ ಜೊತೆಗೆ ದನಕರು, ಮತ್ತು, ಎಮ್ಮೆ, ಕುರಿ, ಕೋಣ, ಕೋಳಿ ಮುಂತಾದವುಗಳನ್ನು ಸಾಕುವ ಕೆಲಸದಲ್ಲಿಯೂ ಸ್ತ್ರೀಯರು ಆಸಕ್ತಿವಹಿಸುತ್ತಾರೆ. ಒಟ್ಟಿನಲ್ಲಿ ಸ್ತ್ರೀಯರದು "ದಣಿಯದ ಜೀವ".

ಕೃಷಿಕಾರ್ಯಗಳ ಜೊತೆ ಜೊತೆಗೆ ಬುಟ್ಟಿ ಹೆಣೆಯುವುದು, ಚಾಪೆ ತಯಾರಿಸುವುದು, ನೂಲುವುದು, ನೇಯುವುದು, ಕಮ್ಮಾರಿಕೆ, ಚಮ್ಮಾರಿಕೆ, ಮರಕೆಲಸ, ಮನೆಕಟ್ಟುವುದು, ಅದು ರಿಪೇರಿ ಕೆಲಸ ಮಕ್ಕಳ ಆಟಿಕೆ, ಬೊಂಬೆಗಳನ್ನು ತಯಾರಿಸುವುದು, ಹಾಲು ಹೈನುಗಾರಿಕೆ ಇವೆಲ್ಲವೂ ಗ್ರಾಮೀಣ ಪ್ರದೇಶದಲ್ಲಿ ಕಂಡುಬರುವ ಆರ್ಥಿಕ ಅಭಿವೃದ್ಧಿಗಾಗಿ ಕೈಗೊಂಡ ವೃತ್ತಿಗಳು. ನಗರ ಪ್ರದೇಶಗಳಲ್ಲಿ ಸರ್ಕಾರಿ ಕೆಲಸ ಮಾಡುವುದು, ಕಂಪ್ಯೂಟರ್ ಶಿಕ್ಷಣ, IAS, KAS, D.Ed, B.Ed ಕೋರ್ಸಿಗಾಗಿ ತರಬೇತಿ ಕೊಡುವುದು. ಸ್ಪರ್ಧಾತ್ಮಕ ಪರೀಕ್ಷೆಗೆ ವಿದ್ಯಾರ್ಥಿಗಳನ್ನು ತಯಾರಿಮಾಡಲು ಕೋಚಿಂಗ್ ಸೆಂಟರ್ ಆರಂಭಿಸಿ ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುದಾರಿಸಿಕೊಳ್ಳುತ್ತಾರೆ. ಆದರೆ ಗ್ರಾಮೀಣ ಪ್ರದೇಶದಲ್ಲಿ ಕೃಷಿಯ ಜೊತೆ ಜೊತೆಯಲ್ಲಿ ಈ ಮೇಲಿನ ಗೃಹಕೈಗಾರಿಕೆಗಳನ್ನು ಅವಲಂಬಿಸಿರುತ್ತಾರೆ.

ನಗರ ಪರಿಸರದಲ್ಲಿ ಕಾಣುವ ವಿಶೇಷ ಪರಿಣತಿ (Specialisation) ಹಾಗೂ ಕ್ರಮಬದ್ಧವಾದ ಶ್ರಮವಿಭಜನೆ ಗ್ರಾಮದಲ್ಲಿ ಕಾಣುವುದಿಲ್ಲ. ಏಕೆಂದರೆ ವಿಶೇಷವಾದ ಪ್ರತಿಭೆಗೆ ಹಳ್ಳಿಯಲ್ಲಿ ಅವಕಾಶವಿರುವುದಿಲ್ಲ. ಗ್ರಾಮದ ಜನರಿಗೆ "ಎಲ್ಲಾ ಕೆಲಸಗಳೂ ಅಲ್ಪಸ್ವಲ್ಪ ತಿಳಿದಿರುತ್ತವೆ. ಆದರೆ ಯಾವುದರ ಮೇಲೂ ಪ್ರಾವೀಣ್ಯತೆ ಇರುವುದಿಲ್ಲ. ಕೃಷಿಯ ಹೊರತಾಗಿ ಬೇರೆ ಉದ್ದಿಮೆಗಳನ್ನು ಮಾಡಲು ಗ್ರಾಮೀಣ ಪರಿಸರದಲ್ಲಿ ಅವಕಾಶಗಳು ಕಡಿಮೆ ಇರುವುದರಿಂದ ಇಲ್ಲವೆ ಇಲ್ಲವಾದ್ದರಿಂದ ಅಂತಹ ಪ್ರತಿಭೆಯನ್ನು ಹೊಂದಿದವರು ನಗರಗಳ ಕಡೆಗೆ ಹೋಗುವುದು ಅನಿವಾರ್ಯವಾಗಿದೆ. ಉದಾಹರಣೆಗೆ ಶ್ರೀ ಹನುಮಂತ ಸುಣಗಾರ ಇವರು ಒಳ್ಳೆಯ ಕವಿಗಳು. ಇವರು ಚಾಂಗದೇವರ ಮಹಿಮೆ, ಪವಾಡ ಕುರಿತು ಸಾಕಷ್ಟು ಹಾಡುಗಳನ್ನು ಬರೆದಿದ್ದಾರೆ. ಮತ್ತು ಖ್ಯಾತ ಹಿನ್ನಲೆ ಧ್ವನಿಸಹಾಯಕರು ಹೌದು. ಅವರ ಈ ಪ್ರತಿಭೆಗೆ ಸರಿಯಾದ ಮನ್ನಣೆ ಸಿಗದೇ ಇರುವುದರಿಂದ ಪ್ರಸ್ತುತ ಬೆಂಗಳೂರಿನಲ್ಲಿ ಪರಿವಾರ ಸಮೇತ ವಾಸಿಸಿದ್ದಾರೆ.

ಇನ್ನೋರ್ವ ಹಾಸ್ಯ ಕಲಾವಿದರಾದ ಶ್ರೀ ಶರಣು ಕಮ್ಮಾರ ತಮ್ಮಲ್ಲಿರುವ ಹಾಸ್ಯಪ್ರವೃತ್ತಿಯನ್ನು ಇನ್ನಷ್ಟು ಬೆಳೆಸಿಕೊಳ್ಳಲು ಈಗ ಸಧ್ಯ ಬೆಂಗಳೂರಲ್ಲಿ ವಾಸಿಸುತ್ತಿದ್ದಾರೆ. ಆದರೆ ಗ್ರಾಮಸ್ಥರಿಗೆ ಈ ಪ್ರತಿಭೆಗಳು ಅಷ್ಟೊಂದು ಮುಖ್ಯ ಎನಿಸುವುದಿಲ್ಲ. ಅವರ ಮಾತಿನಲ್ಲೇ ಹೇಳುವುದಾದರೆ ಅದೇನು ಹೊಟ್ಟೆಗೆ ಊಟ ಹಾಕತೈತೇನು ಎನ್ನುತ್ತಾರೆ. ಅದಕ್ಕಾಗಿ ಕೃಷಿಯೇ ಅವರ ಮುಖ್ಯ ಉದ್ಯೋಗವಾಗಿದೆ.

ಇನ್ನೊಂದು ಮುಖ್ಯವಾದ ಗುಣ ಈ ಸಮುದಾಯದವರಲ್ಲಿ ಕಂಡುಬರುತ್ತದೆ. ಅದೇನೆಂದರೆ ಕಡಿಮೆ ಕುಟುಂಬಗಳಿರುವ ಗ್ರಾಮಗಳಲ್ಲಿ ನೆರೆಹೊರೆ ಎಂಬುದು ಬಹಳ ಮುಖ್ಯವಾಗಿಬಿಡುತ್ತದೆ. ಏಕೆಂದರೆ ಗ್ರಾಮದ

ಜನರು ನೋವು-ನಲಿವುಗಳನ್ನು, ಸಂತೋಷ ಸಂಭ್ರಮಗಳನ್ನು ಪರಸ್ಪರ ಹಂಚಿಕೊಂಡು ಸಹೋದರ ಸಹೋದರಿಯರಂತೆ ಜೀವಿಸುತ್ತಾರೆ. ನೆರೆ-ಹೊರೆಯವರ ಆಸಕ್ತಿ-ಅಭಿರುಚಿಗಳನ್ನು, ಭಾವನೆ-ಬಾಂಧವ್ಯಗಳನ್ನು ಆಸೆ-ನಿರೀಕ್ಷೆಗಳನ್ನು ಕುಹಕತನದಿಂದ ನೋಡುವ ಸಣ್ಣತನ ಗ್ರಾಮದ ಜನತೆಯಲ್ಲಿ ಕಾಣಿಸುವುದಿಲ್ಲ. ಮುಖ್ಯವಾದ ಹಬ್ಬ-ಹರಿದಿನಗಳಲ್ಲಿ, ವಿವಾಹ-ಧಾರ್ಮಿಕ ಸಮಾರಂಭಗಳಲ್ಲಿ ಸಮುದಾಯದವರು ಪರಸ್ಪರ ಕೂಡಿಕೊಂಡು ಕೆಲಸ ಕಾರ್ಯಗಳನ್ನು ಹಂಚಿಕೊಂಡು ಮಾಡುವುದು ಕಂಡುಬರುತ್ತದೆ. ನಮ್ಮ ಕಷ್ಟ ಕಾಲಕ್ಕೆ ಅವರಲ್ಲದೇ ಬೇರೆ ಯಾರಿದ್ದಾರೆ ಎಂದು ತಮ್ಮ ಅಕ್ಕ ಪಕ್ಕದವರನ್ನು ನಂಬಿಕೊಂಡು ಜೀವಿಸುವ ಸಮುದಾಯದವರಿದ್ದಾರೆ.

ಗ್ರಾಮದ ಜನರು ಸಾಮಾನ್ಯವಾಗಿ ನಗರವಾಸಿಗಳಿಗಿಂತ ಹೆಚ್ಚಾಗಿ ದೈವ ದೇವರುಗಳಲ್ಲಿ ನಂಬಿಕೆಯುಳ್ಳವರು. ಇದಕ್ಕೆ ಕಾರಣ ಗ್ರಾಮದಲ್ಲಿ ಕಂಡಬರುವ ಗುಡಿ ಗುಂಡಾರಗಳು, ಕೆಲವು ದೇವರುಗಳು ನಿರ್ದಿಷ್ಟ ಜಾತಿಯವರಿಂದ ಪೂಜಿಸಲ್ಪಡುವುದಾದರೂ ಬೇರೆ ಜಾತಿಯವರು ಯಾವ ದೇವರನ್ನು ತಿರಸ್ಕಾರ ಭಾವನೆಯಿಂದ ಕಾಣುವುದಿಲ್ಲ. ದೇವರು ಮತ್ತು ದೈವಿಕ ಶಕ್ತಿಗಳಲ್ಲಿ ಅವರಿಗೆ ಆಳವಾದ ಶ್ರದ್ಧೆ ನಂಬಿಕೆಗಳಿವೆ. ಜೊತೆಗೆ ಭಯ ಭಕ್ತಿಯೂ ಇದೆ. ಮತ್ತೊಂದು ವಿಚಿತ್ರವಾದ ಸ್ವಭಾವವೆಂದರೆ ಉತ್ತಮ ಬೆಲೆ ಬರದಿದ್ದಾಗ ಹಾಗೆಯೇ ಬೆಳೆ ಬಾರದೇ ಇದ್ದಾಗ ತಮ್ಮ ಗ್ರಾಮದ ದೇವರುಗಳಿಗೆ ಹರಕೆ ಹೊತ್ತು ತಮ್ಮ ವ್ಯವಸಾಯದ ಕಾಯಕ ನಡೆಸುವುದು ಅವರ ಅಭ್ಯಾಸವಾಗಿದೆ.

ಜೂನ್-ಜುಲೈನಲ್ಲಿ ಆಗಬೇಕಾದ ಮಳೆ ಬರಲಿಲ್ಲ. ನಮ್ಮ ಅಣ್ಣಿಗೇರಿಯ ಹೊರಕೇರಿ ಓಣಿಯ ಎಲ್ಲ ಸದಸ್ಯರು ಸೇರಿಕೊಂಡು, ಅದೇ ಓಣಿಯಲ್ಲೇ ಇರುವ ಉಳವಿಚನ್ನ ಬಸವೇಶ್ವರ ದೇವಸ್ಥಾನದಲ್ಲಿ ೭ ದಿನಗಳಪರ್ಯಂತ ಒದ್ದೆಬಟ್ಟೆಯಿಂದ ಎದ್ದುನಿಂತುಕೊಂಡೆ "ಓಂ ನಮಃ ಶಿವಾಯ" ಎಂಬ ಮಂತ್ರೋಚ್ಚಾರಣೆ ಮಾಡಿದರು. ಆಗ ಮಳೆಯಾಯಿತು. ಇದು ಬಹಳ ದಿವಸಗಳಿಂದ ರೂಢಿಯಲ್ಲಿದೆ. ಇಂತಹ ಸಂಪ್ರದಾಯ ಆಚರಣೆಗಳು ಯಮನೂರಿನಲ್ಲಿ ಕಂಡುಬರುತ್ತವೆ.

ಗ್ರಾಮದ ಜನರು ಸಾಂಪ್ರದಾಯಿಕತೆ ನಮ್ಮ ಜೀವನದ ತತ್ವ ಎಂಬಂತೆ ಸ್ವೀಕರಿಸಿಕೊಂಡು ಬರುತ್ತಾರೆ. ರೂಢಿಸಂಪ್ರದಾಯಗಳಿಗೆ, ಕಟ್ಟಳೆಗಳಿಗೆ, ಜಾತಿಯ ಧರ್ಮದ ನಿಯಮಗಳಿಗೆ ಚಾಚೂ ತಪ್ಪದಂತೆ ನಡೆದುಕೊಂಡು ಬರುತ್ತಾರೆ. ಯಾರೇ ಏನೇ ಹೇಳಿದರೂ ಯಾವುದೇ ಬದಲಾವಣೆಗೆ ಅವರು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಹೊಸ ವಿಚಾರಗಳು, ವ್ಯಕ್ತಿಗಳು, ವಸ್ತುಗಳು, ಕ್ರಮಗಳು, ಅವರಲ್ಲಿ ಬಹಳ ಬೇಗ ಸಂಶಯವನ್ನು ಹುಟ್ಟಿಸುತ್ತವೆ. ಆದ್ದರಿಂದ ಹೊಸ ವಿಚಾರಗಳನ್ನು ಕ್ರಮ ಅಥವಾ ಯೋಜನೆಗಳನ್ನು ಕೂಡಲೇ ಸ್ವಾಗತಿಸುವುದಿಲ್ಲ. ಎಲ್ಲವನ್ನೂ ಕಾದು ನೋಡುವ (Wait and see) ಅವರ ಸ್ವಭಾವದಿಂದಾಗಿ ಗ್ರಾಮೀಣ ಪರಿಸರದಲ್ಲಿ ಪರಿವರ್ತನೆ ಆನೆಯ ನಡಿಗೆಯಂತೆ ಸಾಗುತ್ತದೆ.

ನಾವೇ ಯಮನೂರಿನ ಕ್ಷೇತ್ರಕಾರ್ಯಕ್ಕೆಂದು ಮೊದಲು ಹೋದಾಗ ನಮ್ಮನ್ನೆ ಅನುಮಾನದ ದೃಷ್ಟಿಯಿಂದ ನೋಡಿದರು. ಮತ್ತು ಅಷ್ಟು ಸುಲಭವಾಗಿ ಮಾಹಿತಿಯನ್ನು ನಮಗೆ ಕೊಡಲಿಲ್ಲ. ಆ ವಿಷಯವಾಗಿ ನಾವು ಬಹಳ ಕಷ್ಟಪಟ್ಟಿದ್ದೇವೆ. ಆನಂತರ ಅಂದರೆ ಸ್ವಲ್ಪದಿನ ಕಳೆದ ಮೇಲೆ ನಮ್ಮನ್ನು ಸ್ವಲ್ಪ ನಂಬಿದರು. ಆಮೇಲೆ ನಾವು ಕೇಳಿದ ವಿಷಯದ ಮಾಹಿತಿಕೊಟ್ಟು ನಮ್ಮ ಜೊತೆಗೆ ಸಹಕರಿಸಿದರು. ಆಗ ನನಗೆ ಅಧ್ಯಯನ ಕೈಗೊಳ್ಳಲು ಅನುವು ಮಾಡಿಕೊಟ್ಟರು. ಈ ಸಮಸ್ಯೆಯನ್ನು ನನ್ನ ಮಾರ್ಗದರ್ಶಕರಿಗೂ

ತಿಳಿಸಿದ್ದೆ. ಅವರು ನನಗೆ ಸೂಕ್ತ ಸಲಹೆ ನೀಡಿದರು. ಆ ಪ್ರಕಾರ ಅವರನ್ನು ಭೇಟಿ ಮಾಡಿದ ಮೇಲೆ ಒಂದೊಂದೇ ವಿಷಯವನ್ನು ಹೇಳಿದರು. ಹೀಗೆ ಗ್ರಾಮದ ಜನರು ಕೂಡಲೇ ಸುಲಭವಾಗಿ ಒಪ್ಪಿಕೊಳ್ಳುವ ಜಾಯಮಾನದವರಲ್ಲ.

ಒಂದು ಚಿಕ್ಕ ಮಗುವನ್ನು ನೋಡಿದರೆ ಎಲ್ಲವೂ ದೊಡ್ಡವರ ಹಾಗೆಯೇ ಇರುತ್ತವೆ. ಅಂದರೆ ಕೈಕಾಲುಗಳು, ಕಣ್ಣುಗಳು, ಮೂಗು ಎಲ್ಲವೂ ದೊಡ್ಡ ಮನುಷ್ಯರಂತೆಯೇ ಇರುತ್ತವೆ. ಆದರೆ ಒಂದೇ ಒಂದು ವ್ಯತ್ಯಾಸ ಎಂದರೆ ಮಗುವಿನ ಗಾತ್ರ ಹಾಗೂ ಆಕೃತಿ ಚಿಕ್ಕದಾಗಿರುತ್ತದೆ. ಅದರ ಅಂಗಗಳೆಲ್ಲವೂ ಚಿಕ್ಕವು. ಆದರೆ ಆ ಮಗು ಹಾಗೆಯೇ ಉಳಿಯುವುದಿಲ್ಲ. ದಿನಕಳೆದಂತೆ, ಅದರ ಅಂಗಾಂಗಲೆಲ್ಲವೂ ದೊಡ್ಡವಾಗುವವು. ಇಂದಿನಿಂದ ಇನ್ನು ತಿಂಗಳಿಗೆ ವರ್ಷಕ್ಕೆ ಕ್ರಮಕ್ರಮವಾಗಿ ಬೆಳೆದು ಕೆಲವು ವರ್ಷಗಳ ನಂತರ ಯುವಕನೋ ಯುವತಿಯೋ ಆಗುವುದು. ಅದೇ ರೀತಿಯಲ್ಲಿ ನಮ್ಮ ಮಾನವ ಕುಲವು ಸಹ ಅಭಿವೃದ್ಧಿಗೊಳ್ಳುವುದು. ಸಹಸ್ರಾರು ವರ್ಷಗಳ ಹಿಂದೆ ಆದಿಮಾನವನು ಕಪಿಯಾಗಿ ಕೈಕಾಲು ಊರಿಕೊಂಡು ಮರದಿಂದ ಮರಕ್ಕೆ ಹಾರುತ್ತಿದ್ದನು. ಅವನ ಇಚ್ಚೆಯನ್ನು, ಭಾವವನ್ನು ಮತ್ತೊಬ್ಬನಿಗೆ ತಿಳಿಸುತ್ತಿದ್ದನು. ಕ್ರಮೇಣ ತನ್ನನ್ನೂ ತನ್ನ ಪರಿಸ್ಥಿತಿಯನ್ನೂ ಇತರ ವಸ್ತುಗಳು ಮತ್ತು ಪ್ರಾಣಿಗಳನ್ನೂ ಗಮನಿಸಿ ಸ್ವಲ್ಪ ಸ್ವಲ್ಪವಾಗಿ ಉತ್ತಮಪಡಿಸಿಕೊಳ್ಳುತ್ತಾ ಇಂದು ತನ್ನ ಜೀವನವನ್ನೇ ಬದಲಿಸಿಕೊಂಡು ಆಧುನಿಕ ವ್ಯಕ್ತಿಯಾಗಿದ್ದಾನೆ.

ಹೀಗೆ ಮನುಕುಲದ ಸಂಸ್ಕೃತಿಯು ಮೌಲ್ಯಾಧಾರಿತವಾಗಿದ್ದು, ಭಾಷೆ ಶಿಷ್ಟಸಾಹಿತ್ಯ, ಜನಪದ ಸಾಹಿತ್ಯ, ಜನಪದ ಗೀತೆ, ಕಥೆ, ಗಾದೆ, ಒಡಪು, ಒಗಟುಗಳು ಮುಂತಾದ ಸಾಹಿತ್ಯ ಪ್ರಕಾರಗಳನ್ನು ಈ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದಿ ಕಾಲದಲ್ಲಿದ್ದ ಮಾನವ ಅಂದ್ರೆ ಕೈ ಸನ್ನೆ ಮಾಡಿ ಕರೆಯುವ ಮಟ್ಟದಲ್ಲಿ ಇದ್ದಿರುವಂತ ಮಾನವ ಸಾಹಿತ್ಯ ರಚನೆ ಮಾಡುವ ಮಟ್ಟಕ್ಕೆ ತಲುಪಿದ್ದಾನೆ. ಆದಿಮಾನವನ ಮೊದಲನೆಯ ಉಸಿರಿನಿಂದ ಹೊರಹೊಮ್ಮಿದ ಈ ಹಾಡುಗಳು ಆಧುನಿಕ ಮಾನವನವರೆಗೂ, ಆತನೊಡನೆ ಬೆಳೆದುಕೊಂಡು ಬಂದಿವೆ. ನಿತ್ಯ ಪರಿವರ್ತನಶೀಲವಾದ ಸಮಾಜದ ಪ್ರಗತಿಪಥದಲ್ಲಿ ಮುನ್ನಡೆದಿವೆ. ಅಂದಂದಿನ ಅವನ ಸಮಸ್ಯೆಗಳಿಗೆ ಸಾಹಸಗಳಿಗೆ, ಸಾಧನೆಗಳಿಗೆ ಆಶೋತ್ತರಗಳಿಗೆ ಅನುಗುಣವಾಗಿ ಅವು ರಚನೆಯಾಗುವಂತೆ ಇವು ಜನಜೀವನದಿಂದಲೇ ಮೂಡಿದ್ದರೂ ಜನಪದರ ಅಂತರಂಗದ ದರ್ಶನವೇ ಆಗಿವೆ.

ಜನಪದ ಸಾಹಿತ್ಯ ಸೃಷ್ಟಿಗೆ ಮುಖ್ಯವಾಗಿ ಹಿನ್ನಲೆಯಾದ ಪರಿಸರವೆಂದರೆ ಹಳ್ಳಿಯ ಜೀವನ, ಸಮಾಜವೆಂದೊಡನೆ ಸಂಕೀರ್ಣತೆ ವೈವಿಧ್ಯಗಳು ಅನಿವಾರ್ಯವಾಗಿರುತ್ತವೆ. ಏಕೆಂದರೆ ಅನೇಕ ಮನೋಧರ್ಮಗಳ, ಸಂಸ್ಕಾರಗಳ ಜನರು ಅಲ್ಲಿ ಇರುತ್ತಾರೆ. ಅನೇಕ ಉದ್ಯೋಗಗಳನ್ನು ಕೈಗೊಂಡಿರುತ್ತಾರೆ. ಸಹ ಜೀವನದ ತತ್ವವನ್ನು ಅವಲಂಬಿಸಿ ಒಂದೇ ಕಡೆ ಬಾಳುತ್ತಾರೆ. ಈ ಎಲ್ಲ ವೈವಿಧ್ಯಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತದೆ ಜನಪದ ಸಾಹಿತ್ಯ.

ಸಾಹಿತ್ಯ ಒಂದು ಸಮುದಾಯದ ಸಂಸ್ಕೃತಿಯ ಪ್ರತಿಬಿಂಬ. ವ್ಯಕ್ತಿಯ ಸಂಸ್ಕೃತಿಯನ್ನು ಅವನ ಆಚರಣೆಯಲ್ಲಿ ನೋಡಬಹುದು. ಆ ಆಚರಣೆಯ ಅನುಭವದ ಅಭಿವ್ಯಕ್ತಿಯೇ ಜನಪದ ಸಾಹಿತ್ಯ. ಜೀವನದ

ಆದರ್ಶವನ್ನು ಹೇಳಲು ಜನಪದ ಹಾಡುಗಳು ಸಹಾಯಕವಾದವು. ದುಡಿದು ಬೇಸತ್ತಾಗ ಅವುಗಳ ಹಿನ್ನಲೆಯಲ್ಲಿ ತಮ್ಮ ಅನುಭವಗಳನ್ನು ಹಾಡಿನಲ್ಲಿ ತೋಡಿಕೊಂಡರು. ಹಿಡಿದುದು ಕೈಗೂಡಿದಾಗ ಹಿಗ್ಗಿನಿಂದ ದನಿಯೆತ್ತಿ ಹಾಡುತ್ತಿದ್ದರು. ಸುಖದುಃಖಗಳೆರಡೂ ಅವರ ಹಾಡಿನ ವಸ್ತುಗಳಾದವು.

ಜನಪದ ಸಾಹಿತ್ಯದಲ್ಲಿ ಕಂಡುಬರುವ ಅಜ್ಞಾತ ಕವತ್ರಿಯರ ಸಂಖ್ಯೆಗೂ ಲೆಕ್ಕವಿಲ್ಲ. ಹಾಡುವವರು ಪ್ರತಿಗ್ರಾಮದಲ್ಲಿ ಅಸಂಖ್ಯಾತರಿದ್ದಾರೆ. ನಾವು ಕ್ಷೇತ್ರಕಾರ್ಯಕ್ಕೆ ಹೋದಾಗ ಒಂದು ಓಣಿಯಲ್ಲಿ ವಾಸಿಸುವ ಜನರೆಲ್ಲಾ ಹಾಡುತ್ತಾರೆ ಎಂದು ತಿಳಿದು ಬಂದಿತು. ಅಲ್ಲಿ ಹೋಗಿ ಸಂದರ್ಶಿಸಿದಾಗ ಒಂದು ಕಡೆ ಬಂದು ಸುಮಾರು ಜನ ಹಾಡು ಹೇಳಿದರು. ಅವರ ಹೆಸರನ್ನು ಹಿಂದಿನ ಅಧ್ಯಾಯದಲ್ಲಿ ಸೂಚಿಸಿದ್ದೇನೆ. ಮುಗಿದಾವು ಕಾಳು ಉಳಿದಾವು ಹಾಡು ಎನ್ನುವ ಹಾಗೆ ಸಮಯದ ಅಭಾವದಿಂದ ನಾವು ಊರಿಗೆ ಮರಳಿದೆವು. ಜನಪದ ಸಾಹಿತ್ಯ ಅಸಂಖ್ಯ ಹಾಗೂ ಅಗಣಿತವಾದುದು.

ಧರ್ಮ ಸಂಸ್ಕೃತಿಯ ಬೆನ್ನೆಲುಬು, ಜೀವನದ ಎಲ್ಲ ಆಚಾರ ವ್ಯವಹಾರಗಳನ್ನೂ ಚಲನವಲನಗಳನ್ನೂ ಅದು ವ್ಯಾಪಿಸಿದೆ. ಇಹಪರಗಳೆರಡರ ಸಮನ್ವಯ ಸಿದ್ಧಾಂತ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. ಪರಂಪರೆಯಿಂದ ಬಂದ ಧಾರ್ಮಿಕ ಶ್ರದ್ಧೆಯೇ ಹಳ್ಳಿಗಳ ಬಾಳಿನ ಆಧಾರ. ಅದೇ ಅವರ ಜೀವನದ ಊರುಗೋಲು. ಜೀವನದಲ್ಲಿ ಬರುವ ಕಷ್ಟ ಸುಖಗಳಿಗೂ ಒಳಿತು ಕೆಡಕುಗಳಿಗೂ ಕಾರಣವಾದ ಒಂದು ಶಕ್ತಿ ಇದೆ ಎಂದು ನಂಬಿದವರು ಈ ಗ್ರಾಮದ ಜನರು. ಆಸಕ್ತಿಯ ವಿರುದ್ಧ ಹೋಗುವುದು ಸಾಧ್ಯವಿಲ್ಲ ಎಂಬುದು ಗ್ರಾಮದ ಪ್ರತಿಯೊಂದು ಸಮುದಾಯದವರಲ್ಲಿ ರಕ್ತಗತವಾಗಿ ಮೂಡಿದೆ. ತತ್ವವಾದವಾಗಿದೆ. ಮುಂಜಾನೆ ಎದ್ದು ದಿನದಿನದ ಕರ್ತವ್ಯಭಾರಕ್ಕೆ ಹೆಗಲು ಕೊಡುವುದರಿಂದ ಹಿಡಿದು, ರಾತ್ರಿ ದಣಿದು ಮಲಗುವವರೆಗೂ ಜನಪದ ಹಾಡುಗಳಿವೆ.

ಮುಂಜಾವಿನಲ್ಲಿ ಏಳುತ್ತಿದ್ದಂತೆಯೇ ದೇವರನ್ನು ಸ್ಮರಿಸಿಕೊಂಡು ತಮ್ಮ ಕೆಲಸದಲ್ಲಿ ತೊಡಗುವುದು ಗ್ರಾಮದ ಜನರ ಪದ್ಧತಿಯಾಗಿದೆ. ನಾವು ಯಮನೂರಿಗೆ ಹೋದಾಗ ಒಬ್ಬ ಅಜ್ಜಿಯನ್ನು ಭೇಟಿಯಾದೆವು. ಅಜ್ಜಿ ನಿನಗೆ ಚಾಂಗದೇವರ ಮೇಲೆ ಹಾಡು ಹಾಡೋಕೆ ಬರುತ್ತಾ ಎಂದೆವು. ಆಕೆ ನಾವು ರಸ್ತೆಯಲ್ಲಿ ಪರಸ್ಪರ ಭೇಟಿಯಾದೆವು. ಆ ಅಜ್ಜಿ ಹೇಳಿದಳು ಹುನ್ರಿ ಎಂದಾಕೆ ಅಲ್ಲಿಯೇ ಹಾಡುವುದಕ್ಕೆ ಪ್ರಾರಂಭಿಸಿದಳು. ಇಷ್ಟು ಅವರಲ್ಲಿ ಜನಪದ ಗೀತೆ ಹಾಸುಹೊಕ್ಕಾಗಿದೆ. ನಾವಾದರೆ ಹಾಡು ಬರುತ್ತಾ ಎಂದು ಕೇಳಿದರೆ ಕಂಠಪಾಠ ಬರುವುದಿಲ್ಲ. ಡೈರಿಯಲ್ಲಿ ಬರೆದಿದ್ದೇನೆ, ನೋಡಿ ಹಾಡೋಕೆ ಬರುತ್ತದೆ ಎನ್ನುತ್ತೇವೆ. ಹೀಗೆ ಜನಪದ ಸಂಸ್ಕೃತಿ ಹಳ್ಳಿಗರಲ್ಲಿ ಹಾಸುಹೊಕ್ಕಾಗಿದೆ. ಅದೆಲ್ಲವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಪ್ರಮುಖವಾಗಿ ಎಂಟು ಅಧ್ಯಾಯಗಳ ಹರವುವುಳ್ಳ ಈ ಮಹಪ್ರಬಂಧವು ಒಂದೊಂದು ಅಧ್ಯಾಯದಲ್ಲೂ ಅದರ ವ್ಯಾಪ್ತಿಗೆ ಸಂಬಂಧಿಸಿದ ವಿಷಯದ ಪದರುಗಳು ಉಪ ವಿಭಾಗಗಳಾಗಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಅಧ್ಯಯನದ ಗುರಿ ಉದ್ದೇಶಗಳು ಖಚಿತವಾಗಿವೆ.

ಯಾವುದೇ ಒಂದು ವಿಷಯಕ್ಕೆ ಸಂಬಂದಿಸಿದಂತೆ ಅದರ ಸಾಂಸ್ಕೃತಿಕ ಅಧ್ಯಯನ ನಡೆಸುವಾಗ ಅದರ ಆಳ ವಿಸ್ತಾರತೆಯನ್ನು ತಿಳಿದುಕೊಂಡು ಅಧ್ಯಯನ ಮಾಡಬೇಕಾಗುತ್ತದೆ. ಹಾಗಾಗಿ ಈ ಅಧ್ಯಯನದಲ್ಲಿ ಒಂದು ವ್ಯಾಪ್ತಿಯನ್ನು ನಿರ್ಮಿಸಿಕೊಂಡು ಅನುಕೂಲಕ್ಕಾಗಿ ಹಲವು ಭಾಗಗಳನ್ನಾಗಿ ವಿಭಾಗಿಸಿದ್ದೇನೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಎಂದಿದ್ದು, ಅಧ್ಯಯನದ ಸ್ವರೂಪದೊಂದಿಗೆ ಅಧ್ಯಯನ ಕ್ರಮವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನಲೆ ಎಂದಿದ್ದು, ಇದರಲ್ಲಿ ಗ್ರಾಮದ ವಾಯುಗುಣ, ಭೂವಿವರ, ಸಾರಿಗೆ ಸಂಪರ್ಕ, ಗ್ರಾಮದ ಅಂಕಿ ಅಂಶಗಳ ಕೋಷ್ಟಕ ಹಾಗೂ ಚಾರಿತ್ರಿಕ ಹಿನ್ನಲೆ, ಯಮನೂರು ಸ್ಥಳನಾಮ, ಪದನಿಷ್ಪತ್ತಿ, ಗ್ರಾಮದ ಪ್ರಾಚೀನತೆಯನ್ನು ಮುಂತಾದ ವೈಶಿಷ್ಟ್ಯಗಳನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸಾಮಾಜಿಕ ಜೀವನ ಎಂಬುದಾಗಿ ಮಾಡಿಕೊಂಡು ಇದರಲ್ಲಿ ಗ್ರಾಮದಲ್ಲಿನ ಸಮುದಾಯಗಳು, ಕುಟುಂಬ ಪದ್ಧತಿ, ಮನೆಗಳ ಮಾದರಿ, ಆಹಾರ ಪದ್ಧತಿ, ಉಡುಗೆ ತೊಡುಗೆ, ಜನಪದ ವೈದ್ಯ, ನ್ಯಾಯ ವ್ಯವಸ್ಥೆ, ಅತಿಥಿ ಸತ್ಕಾರ, ಆರ್ಥಿಕ ವ್ಯವಸ್ಥೆ ಜನಪದ ಆಟಗಳು, ಜನಪದ ಕಲೆಗಳು ಮತ್ತು ಕಲಾವಿದರು, ಶೈಕ್ಷಣಿಕ ವ್ಯವಸ್ಥೆ ಮುಂತಾದವುಗಳನ್ನು ಗಮನಿಸಲಾಗಿದೆ. ಗ್ರಾಮದಲ್ಲಿರುವ ವಿವಿಧ ಸಮುದಾಯಗಳನ್ನು ಸಾಂಸ್ಕೃತಿಕವಾಗಿ ಅವರ ಹಿನ್ನಲೆ, ಪ್ರಸ್ತುತ ಸ್ಥಿತಿಗತಿ ಜೀವನದ ರೀತಿ ನೀತಿ, ಸಾಮಾಜಿಕವಾಗಿ ಅವರ ಸ್ಥಾನಮಾನಗಳನ್ನು ಗಮನಿಸಲಾಗಿದೆ. ಪ್ರಮುಖವಾಗಿ ಬಹುಸಂಖ್ಯಾತರಾದ ಕುರುಬ, ರಡ್ಡಿ, ಬಾರಕೇರ ಹಾಗೂ ಮುಸ್ಲಿಂ, ಬಣಜಿಗ, ತಳವಾರ, ಬ್ರಾಹ್ಮಣ, ಮರಾಠ ಮುಂತಾದ ಸಮುದಾಯಗಳ ಉದ್ಯೋಗ ಹಾಗೂ ಅವರ ಸ್ಥಿತಿಗತಿಗಳ ವಿವರವನ್ನು ಈ ಅಧ್ಯಾಯದಲ್ಲಿ ದಾಖಲಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ 'ಆಚರಣೆಗಳು' ಎಂದಿದ್ದು, ಆಚರಣೆಗಳೆಂದರೇನು, ಆಚರಣೆಯ ಪ್ರಕಾರಗಳು, ಜೀವನಾವರ್ತನದ ಆಚರಣೆಗಳಾದ ಸೀಮಂತ, ಜನನ, ನಾಮಕರಣ, ಮದುವೆ, ಶವಸಂಸ್ಕಾರ ಮೊದಲಾದ ಇತರ ಸಂಪ್ರದಾಯಗಳು ಹಾಗೂ ವಾರ್ಷಿಕಾವರ್ತನದ ಆಚರಣೆಗಳನ್ನು ಸವಿವರವಾಗಿ ಗಮನಿಸಲಾಗಿದೆ. ಜೀವನಾವರ್ತನ ಆಚರಣೆ ಎಂದರೇನು? ವಾರ್ಷಿಕಾವರ್ತನಾ ಆಚರಣೆಗಳೆಂದರೇನು? ಎಂಬುದನ್ನು ಕುರಿತು ವಿಶೇಷವಾಗಿ ಗಮನಿಸಲಾಗಿದೆ.

ಅಧ್ಯಾಯ ಐದರಲ್ಲಿ ಭಾಷೆ ಮತ್ತು ಸಾಹಿತ್ಯಕ್ಕೆ ಮೀಸಲಿರಿಸಲಾಗಿದೆ. ಅಲ್ಲಿನ ಪರಿಸರದಲ್ಲಿ ಭಾಷೆ ಶಿಷ್ಟಸಾಹಿತ್ಯ, ಜನಪದ ಸಾಹಿತ್ಯ, ಜನಪದ ಗೀತೆಗಳು, ಕಥೆಗಳು, ಗಾದೆಮಾತುಗಳು, ಒಡಪುಗಳು, ಒಗಟುಗಳು ಮೊದಲಾದ ಗ್ರಾಮದ ಜನಪದ ಸಾಹಿತ್ಯವನ್ನು ವಿಸ್ತೃತವಾದ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಅಧ್ಯಾಯ ಆರರಲ್ಲಿ ಯಮನೂರಿನ ಚಾಂಗದೇವರ ಬಾಲ್ಯ ಜೀವನ ಹಾಗೂ ಅವರ ಸಾಧನೆಗಳು ಪವಾಡ ಸಾದೃಶ್ಯಗಳು, ಪವಾಡ ಪದದ ಅರ್ಥ, ಚಾಂಗದೇವರ ಪವಾಡಗಳು ಮತ್ತು ಅದಕ್ಕೆ ಪೂರಕವಾದ ಇನ್ನಿತರ ಮಹಾಮಹಿಮರ ಪವಾಡಗಳನ್ನು ನಿದರ್ಶಿಸಲಾಗಿದೆ. ಮತ್ತು ಪವಾಡಗಳ ತಾತ್ವಿಕ ಅನುಸಂಧಾನದ ಕೂಲಂಕುಶವಾಗಿ ವಿವೇಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ಯಮನೂರು ಸಾಮಾಜಿಕ ಸಾಂಸ್ಕೃತಿಕ ಸ್ಥಿತ್ಯಂತರಕ್ಕೆ ಒಳಗಾದ ಬಗೆಯನ್ನು ಹಂತಹಂತವಾಗಿ ವಿವರಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಸಮಾರೋಪದ ಕುರಿತು ಅಧ್ಯಯನದ ಒಟ್ಟು ನೋಟ, ಕ್ಷೇತ್ರಕಾರ್ಯದ ಒಟ್ಟು ಅನುಭವಗಳು, ಉಪಸಂಹಾರ ಮಹಾಪ್ರಬಂಧದಲ್ಲಿ ಪ್ರಸ್ತಾಪಿತವಾಗಿರುವ ಹಲವಾರು ವಿಷಯಗಳ

ಸಾಂಸ್ಕೃತಿಕ ಮಹತ್ವ, ಸಾಮಾಜಿಕ ಸಂದರ್ಭದಲ್ಲಿ ಕಂಡುಬಂದ ಅಂಶಗಳು ಹಾಗೂ ಸಮಕಾಲೀನ ಯಮನೂರು ಮುಂತಾದ ವಿಷಯವನ್ನು ಕುರಿತು ವಿವರಿಸಲಾಗಿದೆ.

ಯಮನೂರು ಗ್ರಾಮವು ಒಂದು ಸಣ್ಣಗ್ರಾಮವಾಗಿದ್ದು ಯಾವುದೇ ರೀತಿಯ ಶಾಸನಗಳು, ಗ್ರಾಮದ ಕುರಿತು ವಿಸ್ತೃತವಾದ ಯಾವುದೇ ಕೃತಿಗಳು ಲಭ್ಯವಿಲ್ಲದ್ದರಿಂದ ಬಹುಪಾಲು ಕ್ಷೇತ್ರಕಾರ್ಯದ ಆಧಾರದ ಮೇಲೆಯೇ ಈ ಪ್ರಬಂಧದ ಅಧ್ಯಯನದ ಅವಲಂಬಿತವಾಗಿದೆ. ಅದಕ್ಕಾಗಿ ವಕ್ತೃಗಳಿಂದ ಸಾಕಷ್ಟು ಸಹಾಯ ಸಹಕಾರಗಳನ್ನು ಪಡೆಯಲಾಗಿದೆ. ಹೀಗಾಗಿ ವಕ್ತೃಗಳ ಪರಿಚಯ ಪಟ್ಟಿಯನ್ನು ಅಳವಡಿಸಿದ್ದೇನೆ. ವಿಷಯಕ್ಕೆ ಸಂಬಂದಿತವಾದ ಛಾಯಾಚಿತ್ರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಜೊತೆಗೆ ಜನಪದ ಹಾಡು, ಒಗಟು, ಗಾದೆಗಳು ಮುಂತಾದವುಗಳನ್ನು ಸೂಚಿಸಲಾಗಿದೆ. ಒಟ್ಟಿನಲ್ಲಿ ಈ ಕೃತಿಯು ಸಾಂಸ್ಕೃತಿಕ ಅದ್ಯಯನದಿಂದ ಕೂಡಿದೆ.

## ಅಧ್ಯಯನದಲ್ಲಿ ಕಂಡುಬರುವ ಅಂಶಗಳು

೧. ಜಾನಪದ, ಧಾರ್ಮಿಕ, ಐತಿಹಾಸಿಕ ಹಿನ್ನಲೆಯುಳ್ಳ ಯಮನೂರು ಗ್ರಾಮ ಒಂದು ಸಾಂಸ್ಕೃತಿಕ ಕೇಂದ್ರವೂ ಹೌದು.

೨. ಯಮನೂರಿನ ಜನಪದರು ಆಧುನಿಕ ಸ್ಥಿತ್ಯಂತರಕ್ಕೆ ಒಳಗಾದರೂ ಮೂಲವನ್ನು ಬಿಡದೆ ಆಧುನಿಕತೆಯನ್ನು ತಿರಸ್ಕರಿಸದೆ ಸಮಾನವಾಗಿ ಕಾಣುವ ಮನೋಧೋರಣೆಯನ್ನು ಬೆಳೆಸಿಕೊಂಡಿದ್ದಾರೆ.

೩. ಯಮನೂರಿನ ಜಾತ್ರೆಗಳು, ಉತ್ಸವಗಳು, ಹಬ್ಬ ಹರಿದಿನಗಳು ಸಾಂಸ್ಕೃತಿಕ ಸಾಮರಸ್ಯದಿಂದ ಕೂಡಿವೆ.

೪. ಇಲ್ಲಿ ಕೋಲಾಟ, ಸೋಬಾನ ಪದಗಳು, ಜೋಗುಳ ಪದಗಳನ್ನು ಒಗಟು, ಒಡಪುಗಳನ್ನು ನಿರರ್ಗಳವಾಗಿ ಹೇಳುವ ಜನರಿರುವುದು ತಿಳಿದು ಬಂದಿದೆ.

೫. ಯಮನೂರಿನ ರಾಜಾಭಾಗಸವಾರ ರಾಜಾ ಚಾಂಗದೇವರ ಉರುಸಿನಲ್ಲಿ ಜಾತಿ ಮತ ಧರ್ಮವನ್ನು ಮೀರಿ ಭಾವೈಕ್ಯತೆಯನ್ನು ಸಾರುವ ಉತ್ಸವಗಳಾಗಿವೆ.

೬. ಆಂಜನೇಯನ ದೇವಾಲಯದಲ್ಲಿ ಮೂರು ವರ್ಷಕ್ಕೊಮ್ಮೆ ಜಾತ್ರೆ ನಡೆಯುತ್ತದೆ. ಇದರಲ್ಲಿ ಸ್ತ್ರಿ ಪುರುಷರಿಬ್ಬರೂ ಓಕುಳಿ ಆಡುವ ಸಂಪ್ರದಾಯವಿದೆ.

೭. ಕೆಳವರ್ಗದ ಸಮುದಾಯದವರು ಆರ್ಥಿಕವಾಗಿ, ಶೈಕ್ಷಣಿಕವಾಗಿ ಸ್ವಲ್ಪಮಟ್ಟಿನ ಸುಧಾರಣೆ ಕಾಣತೊಡಗಿದ್ದಾರೆ.

೮. ಆಧುನಿಕ ಕಾಲದ ದೇವಾಲಯಗಳಿವೆ. ಇವುಗಳು ಅನೇಕ ಸಮುದಾಯಗಳ ಉಸ್ತುವಾರಿಯಲ್ಲಿ ಜಾತ್ರೆ, ಉತ್ಸವ ಹಾಗೂ ನಿತ್ಯಪೂಜೆಗೊಳ್ಳುತ್ತವೆ.

೯. ಎಲ್ಲ ಸಮುದಾಯದ ಮಹಿಳೆಯರು ಬದಲಾದ ಕಾಲಕ್ಕೆ ತಕ್ಕಂತೆ ಸ್ಥಾನಮಾನವನ್ನು ಕಂಡುಕೊಂಡಿದ್ದಾರೆ.

೧೦. ಇಲ್ಲಿ ಸಮುದಾಯಗಳಿಗನುಗುಣವಾಗಿ ನ್ಯಾಯ ತೀರ್ಮಾನವಾದರೂ ಬೇರೆ ಸಮುದಾಯದ ಮುಖ್ಯಸ್ಥರು ಅದರಲ್ಲಿ ಭಾಗವಹಿಸುತ್ತಾರೆ.

೧೧. ಯಮನೂರಿನಲ್ಲಿ ವಿಭಕ್ತ ಕುಟುಂಬಗಳೇ ಜಾಸ್ತಿ.

೧೨. ನಾಟಕ, ಬಯಲಾಟಗಳು, ಜಾತ್ರೆ, ಉತ್ಸವ, ಹಬ್ಬ ಹರಿದಿನಗಳಲ್ಲಿ ಪ್ರದರ್ಶನಗೊಳ್ಳುತ್ತವೆ.

೧೩. ಸರಳ ವಿವಾಹ ಪದ್ಧತಿಯು ಈ ಗ್ರಾಮದಲ್ಲಿ ಕಂಡುಬರುತ್ತದೆ.

೧೪. ಈ ಗ್ರಾಮದಲ್ಲಿ ಬಹುತೇಕ ಕುಟುಂಬಗಳು ಆರ್ಥಿಕವಾಗಿ ಹಿಂದುಳಿದಿವೆ.

೧೫. ವರದಕ್ಷಿಣೆಯಂತಹ ಸಾಮಾಜಿಕ ಪಿಡುಗಿನಿಂದ ಗ್ರಾಮವು ಹೊರತಾಗಿಲ್ಲ.

೧೬. ಯಮನೂರು ಗ್ರಾಮದಲ್ಲಿ ದೇವದಾಸಿ ಪದ್ಧತಿ ಅಷ್ಟಾಗಿ ಕಂಡುಬರುವುದಿಲ್ಲ.

೧೭. ಉಡುಗೆ ತೊಡುಗೆಗಳಲ್ಲಿ ಸಾಂಪ್ರದಾಯಿಕತೆಯಿದ್ದು, ಆಧುನಿಕತೆಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಾರೆ.

೧೮. ಯಮನೂರು ಗ್ರಾಮ ಸಂತ ಜ್ಞಾನೇಶ್ವರರ ಸಲಹೆಯಂತೆ ಮಾರ್ಕಂಡೇಯ ಮುನಿಯು ತಪಗೈದ ಪುಣ್ಯಭೂಮಿ.

೧೯. ರಟ್ಟರು ಚಾಲುಕ್ಯರ ಸಾಮಂತರು ಇಲ್ಲಿ ಆಳುತ್ತಿದ್ದರು.

೨೦. ಬಿಜಾಪುರದ ಆದಿಲ್‌ಶಾಹಿಗಳ ಕಾಲಕ್ಕೆ ಸುಲ್ತಾನರು ಈ ಕ್ಷೇತ್ರಕ್ಕೆ ನಡೆದುಕೊಳ್ಳುತ್ತಿದ್ದರಂತೆ.

೨೧. ತೊನ್ನು ರೋಗು, ಹುರುಕು, ಕಜ್ಜಿ ಇರುವ ರೋಗಿಗಳು ಬೆಣ್ಣಿಹಳ್ಳದಲ್ಲಿ ಮಿಂದರೆ ರೋಗವಾಸಿಯಾಗುವುದು.

೨೨. ಗ್ರಾಮದ ಎಲ್ಲ ಸಮುದಾಯಗಳಲ್ಲಿ ಅಪಘಾತಕ್ಕೊಳಗಾಗಿ ಮರಣ ಹೊಂದಿದರೆ ವ್ಯಕ್ತಿಯ ಶವವನ್ನು ಸುಡುತ್ತಾರೆ.

೨೩. ಸ್ತ್ರೀ ಸಂಘಗಳ ಮೂಲಕ ಹೆಣ್ಣು ಮಕ್ಕಳು ಸಂಘಟಿತರಾಗಿ ಆರ್ಥಿಕವಾಗಿ ಸಬಲರಾಗಿದ್ದಾರೆ.

೨೪. ಮಾಟ ಮಂತ್ರಗಳಲ್ಲಿ ಜನರು ಇನ್ನೂ ನಂಬಿಕೆ ಇಟ್ಟಿರುವುದು ಕಂಡುಬರುತ್ತದೆ.

೨೫. ಗ್ರಾಮದ ಸಮುದಾಯದವರಲ್ಲಿ ಜನನವಾದ ಐದನೇ ದಿನ ಶೆಟಗೆವ್ವನ ಪೂಜೆ ಮಾಡುತ್ತಾರೆ. ನಂತರ ೧೩ನೇ ದಿವಸಕ್ಕೆ ನಾಮಕರಣ ಮಾಡುತ್ತಾರೆ.

೨೬. ಮನೆ ಕಟ್ಟುವಾಗ ವಾಸ್ತುವಿನ ಮೊರೆ ಹೋಗುತ್ತಾರೆ. ಆ ಪ್ರಕಾರ ಮನೆ ಕಟ್ಟುತ್ತಾರೆ.

೨೭. ಗ್ರಾಮದ ಬ್ರಾಹ್ಮಣ, ಬಡಿಗೇರ, ಕಮ್ಮಾರ, ಮುಸ್ಲಿಂ ಸಮುದಾಯದವರು ಶವವನ್ನು ಮಲಗಿಸಿ ಸ್ಮಶಾನಕ್ಕೆ ಸಾಗಿಸುತ್ತಾರೆ.

೨೮. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂದರ್ಶನ ಮಾಡಲು ಹೋದರೆ ಕೆಲವೊಂದು ಜನಪದರು ಭಯಭೀತಿಗೆ ಒಳಗಾದ ಸಂದರ್ಭ ಕಂಡುಬಂದಿತು.

೨೯. ಪ್ರಾಣಿಬಲಿಯಂತಹ ಅನಿಷ್ಠ ಪದ್ಧತಿ ಗ್ರಾಮದಲ್ಲಿ ಜಾರಿಯಲ್ಲಿರುವುದು ಕಂಡುಬರುತ್ತದೆ.

೩೦. ಈ ಗ್ರಾಮದ ಜನಪದರಿಗೆ ತಮ್ಮ ಬಗೆಗೆ ಕೀಳರಿಮೆ ಇದೆ.

೩೧. ಯಮನೂರಿನ ಉರುಸಿನ ಸಂದರ್ಭದಲ್ಲಿ ಬೆಣ್ಣಿಹಳ್ಳದ ನೀರನ್ನು ತಂದು ದೀಪಕ್ಕೆ ಹಾಕಿ ದೀಪ ಹಚ್ಚುವ ಪದ್ಧತಿ ಇಂದಿಗೂ ಕಂಡುಬರುತ್ತದೆ.

೩೨. ಈ ಗ್ರಾಮದಲ್ಲಿ ಬಾಲಕಾರ್ಮಿಕತೆ, ಜೀತಪದ್ಧತಿ, ಅಸ್ಪೃಶ್ಯತೆ, ಬಾಲ್ಯ ವಿವಾಹ ಇತ್ಯಾದಿ ಸಾಮಾಜಿಕ ಸಮಸ್ಯೆಗಳ ಪ್ರಮಾಣ ಕಡಿಮೆ ಇದ್ದು ಗ್ರಾಮಗಳಲ್ಲಿ ಸಾಮರಸ್ಯವಿದೆ.

೩೩. ಪ್ರತಿ ಗುರುವಾರ, ರವಿವಾರ ಮತ್ತು ಅಮವಾಸ್ಯೆ ಹಾಗೂ ಪ್ರತಿವರ್ಷ ನಡೆಯುವ ಉರುಸಿನಲ್ಲಿ ಚಾಂಗದೇವರ ನೈವೇಧ್ಯಕ್ಕೆ ಮಾದಲಿ ಮಾಡುವುದು ವಿಶಿಷ್ಟವಾಗಿದೆ.

೩೪. ಸರ್ವಧರ್ಮ ಸಮನ್ವಯದಿಂದ ಕೂಡಿದ್ದು, ಭಾವೈಕ್ಯತೆಗೆ ಉತ್ತಮ ಮಾದರಿಯ ಗ್ರಾಮ ಯಮನೂರಾಗಿದ್ದು, ಎಲ್ಲಕ್ಕೂ ಬಹುಮುಖ್ಯವಾದ ವಿಶಿಷ್ಟವಾಗಿದೆ.

೩೫. ಈ ಗ್ರಾಮದ ಇನ್ನೊಂದು ವಿಶೇಷವೇನೆಂದರೆ ಪ್ರತಿದಿನವೂ ದೇವಾಲಯದ ಮುಂದಿರುವ ರಸ್ತೆಯ ಅಕ್ಕಪಕ್ಕದಲ್ಲಿ ಓದಿಕೆ ಸಕ್ಕರೆ ಮಾರುವುದು ವೈಶಿಷ್ಟ್ಯ.

೩೬. ಕಟ್ಟಿಗೆಯಿಂದ ತಯಾರಿಸಲಾದ ವಿಶಿಷ್ಟ್ಯ ಕುಸುರಿ ಕೆಲಸದಿಂದ ಕೆತ್ತಿದ ಬಾಗಿಲು ಕಿಟಗಿ ನಾಡಿನ ವಿವಿಧ ಪ್ರದೇಶಗಳಿಗೆ ಮಾರಾಟ ಮಾಡುವುದು ವಿಶೇಷ.

೩೭. ಪ್ರಗತಿಪರ ರೈತರಿಂದ ಕೂಡಿದ ಈ ಗ್ರಾಮ ಗೋವಿನ ಜೋಳ ಬೆಳೆಗೆ ಹೆಸರುವಾಸಿಯಾಗಿದೆ.

೩೮. ಯಮನೂರು ಗ್ರಾಮ ವಿಭಿನ್ನ ಜನಪದ ಸಮುದಾಯಗಳನ್ನು ಹೊಂದಿದೆ.

೩೯. ಶ್ರಾವಣ ಮಾಸದಲ್ಲಿ ಪ್ರತಿ ಮಂಗಳವಾರ ಗುಳ್ಳವ್ವನ ಆಚರಣೆ ಮಾಡುತ್ತಾರೆ.

## ಅನುಬಂಧ-೧

# ಸಾಂಸ್ಕೃತಿಕ ಪದಕೋಶ

೧. ಮಾದಲಿ - ದಪ್ಪನೆಯ ಬೇಯಿಸಿದ ಚಪಾತಿಯನ್ನು ಸಾಣಿಗೆಗೆ ಹಾಕಿ ತುರಿದು ಅದಕ್ಕೆ ಬೆಲ್ಲ, ಏಲಕ್ಕಿ ಕೊಬ್ಬರಿ ಹಾಕಿ ಕುಟ್ಟಿ ತಯಾರಿಸಿದ ಸಿಹಿ ಪದಾರ್ಥ.

೨. ಚಕ್ಕಡಿ - ಬಂಡಿಗಾಲಿ

೩. ಪಾಟ್ಲಿ - ಕೈಗಳಿಗೆ ಹಾಕುವ ಬಂಗಾರದ ಬಳೆ

೪. ಉರುಸು - ಜಾತ್ರೆ, ಉತ್ಸವ

೫. ಬಾಸಿಂಗ - ಮದುವೆಯಲ್ಲಿ ಮದುಮಗ/ಳ ಹಣೆಗೆ ಕಟ್ಟುವ ಸಾಧನ

೬. ಪಲಾವ್ - ಅಕ್ಕಿಯ ಜೊತೆಗೆ ಎಲ್ಲಾ ತರಕಾರಿ ಹಾಕಿ ತಯಾರಿಸಿದ ಅನ್ನ

೭. ಕಾಡಾಟ - ಕಷ್ಟಗಳ ಮೇಲೆ ಕಷ್ಟ ಬರುವುದು

೮. ಚರಗ - ಸೀಗೆ ಹುಣ್ಣಿಮೆಯ ದಿನ ಮನೆಯಲ್ಲಿ ಮಾಡಿದ ಕಡುಬು, ಉಂಡಗಡುಬು ಕುಚ್ಚಿದ ಕಾರ ಎಲೆಯಲ್ಲಿ ಇಟ್ಟು ಬನ್ನಿ ಗಿಡದ ಸುತ್ತ ಸುತ್ತುತ್ತು ಅದನ್ನು ಚೆಲ್ಲುವುದು.

೯. ಅಗಸಿ - ಊರಿನ ಪ್ರವೇಶದ್ವಾರ

೧೦. ಆಹೇರ - ಬಟ್ಟೆ ಬರೆ, ಬಂಗಾರ, ಹಣ, ಉಡುಗೊರೆ ಕೊಡುವುದು

೧೧. ಧೂಳಪಾದ - ಸ್ವಾಮಿಗಳ ಪಾಜಪೂಜೆ ಮಾಡಿ ಸಗ್ರಹಿದ್ಧ ತೀರ್ಥ.

೧೨. ಹೋಳಿಗೆ - ಕಡಲೆಬೇಳೆ ಕುದಿಸಿ, ಅದಕ್ಕೆ ಬೆಲ್ಲ ಏಲಕ್ಕಿ ಹಾಕಿ ಅರೆದು ಮೈದಾಹಿಟ್ಟಿನಲ್ಲಿ ತುಂಬಿ ಮಾಡಿದ ಸಿಹಿ ಪದಾರ್ಥ.

೧೩. ಐದೇಶಿ - ಜನನದ ನಂತರ ಐದನೇ ದಿನದ ಆಚರಣೆ

೧೪. ಹದಿಮೂರದೇಶಿ ಹದಿಮೂರನೆಯ ದಿನ ಮಗೂಗೆ ನಾಮಕರಣ

೧೫. ಕುಬಸ - ಸೀಮಂತ

೧೬. ನಡುಮನೆ - ಇದು ದೇವರ ಮನೆ, ಅಡಿಗೆ ಮನೆಯ ಮಧ್ಯೆ ಇರುತ್ತದೆ. ಇದನ್ನು ಊಟ ಮಾಡಲು ಬಳಸುತ್ತಾರೆ.

| | |
|---|---|
| ೧೭. ನಿವಾಳಿಸು - | ಮುಖದ ಮೇಲೆ ಉಪ್ಪು ಕಸಬರಿಗೆ ಕಡ್ಡಿ ಸಾಸಿವೆ ಕಾಳಿನಿಂದ ದೃಷ್ಟಿ ತೆಗೆಯುವುದು. |
| ೧೮. ತಾಟು - | ತಟ್ಟೆ, ಗಂಗಾಳ |
| ೧೯. ಗೋತ್ರ - | ಬೆಡಗು |
| ೨೦. ಬಾನ - | ಅನ್ನ |
| ೨೧. ಕೊಟ್ಟಿಗೆ - | ದನ ಕರು ಕಟ್ಟುವ ಸ್ಥಳ |
| ೨೨. ಉಡದಾರ - | ಪುರುಷರು ಸೊಂಟದಲ್ಲಿ ಕಟ್ಟುವ ದಾರ |
| ೨೩. ಗಿಲಾವ್ - | ಸಿಮೆಂಟ್, ಸಣ್ಣ ಉಸುಕು ಸೇರಿಸಿ ಇಟ್ಟಂಗಿ ಗೋಡೆಗೆ ಸಮತಟ್ಟಾಗುವಂತೆ ಲೇಪಿಸುವುದು |
| ೨೪. ಮಕ್ಕುಂಮಕ್ಕರೆ/ ಓದಿಕೆ ಸಕ್ಕರೆ | ಚಾಂಗದೇವರ ದರ್ಶನಕ್ಕೆ ಹೋಗುವಾಗ ಪ್ರತಿಯೊಬ್ಬರು ನೈವೇದ್ಯಕ್ಕೆ ತೆಗೆದುಕೊಂಡು ಹೋಗುವ ಸಕ್ಕರೆ ಪುಡಿ ಹಾಗೂ ಪುಟಾಣಿ ಹಿಟ್ಟಿನ ಮಿಶ್ರಣ |
| ೨೫. ಜೋಳದ ನುಚ್ಚು | ಜೋಳದ ರವಾ ಹಿಂದಿನ ದಿನರಾತ್ರಿ ನೀರಿನಲ್ಲಿ ನೆನೆಹಾಕಿ ಸ್ವಲ್ಪ ಮೊಸರು ಹಾಕಿ ಬೆಳಿಗ್ಗೆ ನೀರಿನಲ್ಲಿ ಕುದಿಸಿ ಮಾಡುವ ಪದಾರ್ಥ. |
| ೨೬. ಸೀಕರಣೆ - | ಮಾವಿನ ಹಣ್ಣಿನಿಂದ ತಯಾರಿಸಿದ ಸಿಹಿ ಪದಾರ್ಥ |
| ೨೭. ವೀಳ್ಯೆದೆಲೆ - | ತಿನ್ನುವ ಎಲೆ |
| ೨೮. ಕೊಬ್ಬರಿ ಕಾರ | ಒಣಕೊಬ್ಬರಿ, ಉತ್ತುತ್ತಿ ತುರಿದು ಸಕ್ಕರೆಯ ಜೊತೆ ಸೇರಿಸಿ ಮಾಡುವ ಸಿಹಿ ಪದಾರ್ಥ |
| ೨೯. ಸುರ್ಮ - | ಕಣ್ಣಿಗೆ ಹಚ್ಚುವ ಕಾಡಿಗೆ |
| ೩೦. ಅಂಬಲಿ - | ಜೋಳದ ಹಿಟ್ಟಿನಿಂದ ತಯಾರಿಸಿದ ಖಾದ್ಯ. |

## ಅನುಬಂಧ-೨

# ವಕ್ತೃ ವಿವರ

| ಕ್ರ.ಸಂ. | ಹೆಸರು | ಜಾತಿ | ವಯಸ್ಸು | ಉದ್ಯೋಗ | ಗ್ರಾಮ |
|---|---|---|---|---|---|
| ೦೧. | ಶ್ರೀ ವೀರಯ್ಯ ಗುರುಶಾಂತಯ್ಯ ಹಿರೇಮಠ | ಲಿಂಗವಂತ | ೪೪ | ಕ್ಲಾರ್ಕ್ | ಸಾ.ಕುಮಾರಗೊಪ್ಪ |
| ೦೨. | ಶ್ರೀ ಬಸವರಾಜ ಶಿವಪುತ್ರಪ್ಪ ಗಿರಿಯಣ್ಣವರ | ಚಲವಾದಿ | ೩೫ | ಬಿಲ್ ಕಲೆಕ್ಟರ್ | ಸಾ.ಅರೆಕುರಹಟ್ಟಿ |
| ೦೩. | ಶ್ರೀ ಶಿವಕಲ್ಲಪ್ಪ ಜಿ.ಗೌರಿ | ಲಿಂಗವಂತ | ೪೦ | ಕಾರ್ಯದರ್ಶಿ ಗ್ರಾಮ ಪಂಚಾಯತಿ | ಸಾ.ಸುಳ್ಳ |
| ೦೪. | ಶ್ರೀ ಸಿದ್ದಯ್ಯಾ ಪಂಚಯ್ಯಾ ಹಿರೇಮಠ | ಲಿಂಗವಂತ | ೩೦ | ವಾಟರಮೆನ್ | ಸಾ.ಕುಮಾರಗೊಪ್ಪ |
| ೦೫. | ಶ್ರೀ ಸಿದ್ದಪ್ಪ ಶಿವಾನಂದ ಪೂಜಾರ | ಕುರುಬ | ೩೩ | ವಾಟರ್‌ಮೆನ್ | ಸಾ.ಯಮನೂರು |
| ೦೬. | ಶ್ರೀ ಯಲ್ಲಪ್ಪ ಫಕ್ಕೀರಪ್ಪ ಚುರಮರಿ | ಕುರುಬ | ೪೦ | ಸಿಪಾಯಿ | ಸಾ.ಯಮನೂರ |
| ೦೭. | ಶ್ರೀ ಅಡಿವೆಪ್ಪ ಫ.ಚುಳಕಿ | ಕುರುಬ | ೪೦ | ಶೇತಗಿ | ಸಾ.ಯಮನೂರ |
| ೦೮. | ಮಲ್ಲಿಕಾರ್ಜುನ ದ್ಯಾಮಣ್ಣ ಮುಂದಿನಮನಿ | ಹಿಂಚಲವಾದಿ | ೩೨ | ಕಾಕ ಬಂದು | ಸಾ.ಯಮನೂರ |
| ೦೯. | ಬಾಲಪ್ಪ ಸಣ್ಣಹನುಮಪ್ಪ ಸರಾವರಿ | ಕುರುಬ | ೪೮ | ರೈತ | ಸಾ.ಯಮನೂರ |
| ೧೦. | ನಿಂಗಪ್ಪ ಫಕ್ಕೀರಪ್ಪ ಸೂರೆಭಾನ | ಕುರುಬ | ೨೮ | ಗುತ್ತಿಗೆದಾರರು | ಸಾ.ಯಮನೂರ |
| ೧೧. | ವಿಶ್ವನಾಥ ಮ ಸರನಾಡಗೌಡರ | ಲಿಂಗವಂತ | ೫೫ | ಒಕ್ಕಲುತನ | ಸಾ.ಯಮನೂರ |
| ೧೨. | ನಿರೂಪಾಕ್ಷಪ್ಪ ಮಲ್ಲಪ್ಪ ರೋಗಣ್ಣವರ | ಲಿಂಗವಂತ | ೪೫ | ಕಂಡಕ್ಟರ್ | ಸಾ.ಯಮನೂರ |
| ೧೩. | ದೇವೇಂದ್ರಪ್ಪ ಬಸಪ್ಪ ಪತ್ತಾರ | ಪಂಚಾಳ | ೪೦ | ವ್ಯಾಪಾರ | ಸಾ.ಯಮನೂರ |
| ೧೪. | ರುದ್ರಯ್ಯ ಗದಿಗೆಯ್ಯಾ ಕರೆಣ್ಣವರ | ಲಿಂಗವಂತ | ೪೫ | ಒಕ್ಕಲುತನ | ಸಾ.ಯಮನೂರ |
| ೧೫. | ಬಸಪ್ಪ ಕಾಶಪ್ಪ ನಾಯ್ಕರ | ವಾಲ್ಮೀಕಿ | ೪೦ | ಒಕ್ಕಲುತನ | ಸಾ.ಯಮನೂರ |
| ೧೬. | ಅಶೋಕ ಹೊನ್ನಪ್ಪ ನಾಯ್ಕರ | ವಾಲ್ಮೀಕಿ | ೪೦ | ಒಕ್ಕಲುತನ | ಸಾ.ಯಮನೂರ |
| ೧೭. | ಮಾರುತಿ ರಂಗಪ್ಪ ನಾಯಕರ | ವಾಲ್ಮೀಕಿ | ೪೦ | ಒಕ್ಕಲುತಲ | ಸಾ.ಯಮನೂರ |
| ೧೮. | ಫಕೀರಪ್ಪ ಹೊನ್ನಪ್ಪ ನಾಯ್ಕರ | ವಾಲ್ಮೀಕಿ | ೬೫ | ನಿವೃತ್ತ ಶಿಕ,ಕರು | ಸಾ.ಯಮನೂರ |
| ೧೯. | ವಿನೋದರಾವ್.ಭಾಸ್ಕರರಾವ್ ಬರ್ಗೆ | ಮರಾಠ | ೪೬ | ಒಕ್ಕಲುತನ ಮತ್ತು ರಾಚಾ ಭಾಗಸವಾರ ಚಾಂಗದೇವರ ಪೂಜಾರಿಕೆ | ಸಾ.ಯಮನೂರ |
| ೨೦. | ಸುರೇಶ ದತ್ತಾಜಿರಾವ್ ಬರ್ಗೆ | ಮರಾಠ | ೪೮ | ಒಕ್ಕಲುತನ ಮತ್ತು ಚಾಂಗದೇವರ ಪೂಜಾರಿಕೆ | ಸಾ.ಯಮನೂರ |
| ೨೧. | ಪ್ರಭಾ ಶಿವಾಜಿ ಬೆಳ್ಳಿಕಟ್ಟಿ | ಮರಾಠ | ೪೦ | ಒಕ್ಕಲುತನ | ಸಾ.ಯಮನೂರ |
| ೨೨. | ಪ್ರಭಾಕರ ಚಂದ್ರಕಾಂತ್ ಮೋಹಿತೆ | ಮರಾಠ | ೪೪ | ಒಕ್ಕಲುತನ ಮತ್ತು ಬಾಡಿಗೆ ವಾಹನ ನಡೆಸುತ್ತಾರೆ | ಸಾ.ಯಮನೂರ |

| | | | | |
|---|---|---|---|---|
| ೨೩. | ಭುಜಂಗರಾವ್ ವೆಂಕಟರಾವ್ ಬರ್ಗೆ | ಮರಾಠ | ೩೧ | ಸೈನಿಕ ಶೌರ್ಯ ಪ್ರಶಸ್ತಿ ವಿಜೇತ | ಸಾ.ಯಮನೂರ |
| ೨೪. | ಶೇಷರಡ್ಡಿ ಬಸವರಡ್ಡಿ ಲಿಂಗರಡ್ಡಿ | ರಡ್ಡಿ | ೫೩ | ಒಕ್ಕಲುತನ | ಸಾ.ಯಮನೂರ |
| ೨೫. | ಗೋವಿಂದಪ್ಪ ಹನುಮರಡ್ಡಿ ಲಿಂಗರಡ್ಡಿ | ರಡ್ಡಿ | ೪೬ | ಒಕ್ಕಲುತನ | ಸಾ.ಯಮನೂರ |
| ೨೬. | ಮಡಿವಾಳಯ್ಯ ಮಲ್ಲಯ್ಯ ಕಂಬಿ | ಜಂಗಮ | ೪೫ | ಒಕ್ಕಲುತನ ಖಾಸಗಿಯಾಗಿ ವಾಹನ ಮಾರಾಟದಲ್ಲಿ ತೊಡಗಿಕೊಂಡಿದ್ದಾರೆ | ಸಾ.ಯಮನೂರ |
| ೨೭. | ಮಾಂತೇಶ ಪಂಚಾಕ್ಷರಯ್ಯಾ ಹಿರೇಮಠ | ಜಂಗಮ | ೩೪ | ಒಕ್ಕಲುತನ | ಸಾ.ಯಮನೂರ |
| ೨೮. | ಪಂಚಾಕ್ಷರಯ್ಯಾ ಸಿದ್ದಯ್ಯಾ ಹಿರೇಮಠ | ಜಂಗಮ | ೩೪ | ಒಕ್ಕಲುತನ | ಸಾ.ಯಮನೂರ |
| ೨೯. | ವಿಜಯಕುಮಾರ ಹೇಮರಡ್ಡಿ ಹಳ್ಳಿಕೇರಿ | ರಡ್ಡಿ | ೨೬ | ಗುತ್ತಿಗೆದಾರರು ಮತ್ತು ಒಕ್ಕಲುತನ | ಸಾ.ಯಮನೂರ |
| ೩೦. | ಬುಡನ್‌ಸಾಬ ಎಲಿಗಾರ | ಮುಸ್ಲಿಂ | ೫೮ | ಎಲಿ ವ್ಯಾಪಾರ | ಸಾ.ಯಮನೂರ |
| ೩೧. | ಸಿದ್ಧಲಿಗಪ್ಪ ದಾನಪ್ಪ ಕೆಸರಪ್ಪನವರ | ಬಣಜಿಗರು | ೪೨ | ಮಕ್ತುಮ್ ಸಕ್ಕರೆ ವ್ಯಾಪಾರಿ ಕಿರಾಣಿ | ಸಾ.ಯಮನೂರ |
| ೩೨. | ಬಾಬಾಜಾನ ಮಕಾನದಾರ | ಮುಸ್ಲಿಂ | ೪೫ | ಪಾನ್‌ಶಾಪ್ ಮತ್ತು ಫೋಟೊ ಅಂಗಡಿ | ಸಾ.ಯಮನೂರ |
| ೩೩. | ಶಿವರಡ್ಡಿ ಹನುಮರಡ್ಡಿ ಲಿಂಗರಡ್ಡಿ | ರಡ್ಡಿ | ೪೨ | ಪಾನ್‌ಶಾಪ್ ಮತ್ತು ಫೋಟೊ ಅಂಗಡಿ | ಸಾ.ಯಮನೂರ |
| ೩೪. | ಈಶ್ವರಪ್ಪ ಕೆಸರಪ್ಪನವರ | ಬಣಜಿಗರು | ೫೨ | ಕಿರಾಣಿ ವ್ಯಾಪಾರಿ | ಸಾ.ಯಮನೂರ |
| ೩೫. | ದೇವರಡ್ಡಿ ಹನುಮರಡ್ಡಿ ಲಿಂಗರಡ್ಡಿ | ರಡ್ಡಿ | ೪೪ | ಗ್ರಾಮದ ಗ್ರಂಥಾಲಯದಲ್ಲಿ | ಸಾ.ಯಮನೂರ |
| ೩೬. | ಕಾಶಪ್ಪ ಕೇಶವ್ ಕುಲಕರ್ಣಿ | ಬ್ರಾಹ್ಮಣ | ೫೦ | ಒಕ್ಕಲುತನ | ಸಾ.ಯಮನೂರ |
| ೩೭. | ದತ್ತಾತ್ರೇಯ ಶ್ರೀಪಾದ ಜೋಶಿ | ಬ್ರಾಹ್ಮಣ | ೪೪ | ಆಚಾರ್ಯರು ಮತ್ತು ಒಕ್ಕಲುತನ | ಸಾ.ಯಮನೂರ |
| ೩೮. | ಸಿದ್ಧಲಿಂಗಯ್ಯ ಸಿದ್ದರಾಮಯ್ಯ ಸುತಗಟ್ಟಿ | | ೬೦ | ಕೂಲಿ | ಸಾ.ಯಮನೂರ |
| ೩೯. | ಶ್ರೀಮತಿ ಸುವರ್ಣಾ ಸಿದ್ಧಲಿಂಗಯ್ಯ ಕಂಬಿ | ಜಂಗಮ | ೪೦ | ಮಕ್ತುಮ್ ಸಕ್ಕರೆ ಅಂಗಡಿ ಇದೆ | ಸಾ.ಯಮನೂರ |
| ೪೦. | ಶ್ರೀಮದಿ ದುಂಡಮ್ಮ ಜಂಗಮ ಸುತಗಟ್ಟಿ | | ೬೦ | ಕೂಲಿ | ಸಾ.ಯಮನೂರ |
| ೪೧. | ಶ್ರೀಮತಿ ನೀಲಮ್ಮ ಮೋಹನ ಕೋಳಿವಾಡ | ರಡ್ಡಿ | ೫೦ | ಅಂಗನವಾಡಿ ಕಾರ್ಯಕರ್ತೆ | ಸಾ.ಯಮನೂರ |
| ೪೨. | ಶ್ರೀ ಮಾಂತಪ್ಪ ಲಕ್ಷ್ಮಣ ಕಾಳಿ | ಹರಿಜನ | ೪೮ | ಅಂಗನವಾಡಿ ಕಾರ್ಯಕರ್ತೆ | ಸಾ.ಯಮನೂರ |

## ಅನುಬಂಧ-೩

# ಗ್ರಂಥ ಋಣ


೧. ಕರ್ನಾಟಕ ರಾಜ್ಯ-ಧಾರವಾಡ ಜಿಲ್ಲಾ ಗ್ಯಾಸೆಟಿಯರ್, ಮುಖ್ಯಸಂಪಾದಕರು-ಸೂರ್ಯನಾಥ ಕಾಮತ್

೨. ಕನಕಗಿರಿ ಸಂಕಥನ, ನಾರಾಯಣ ಗಿರಿಯಪ್ಪ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಕರ್ನಾಟಕ ದೇವಾಲಯಗಳ ಕೋಶ, ಧಾರವಾಡ ಜಿಲ್ಲೆ, ಡಾ.ಸಿ.ಮಹಾದೇವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಾ.ಎಚ್.ತಿಪ್ಪೇರುದ್ರಸ್ವಾಮಿ.

೫. ಕನ್ನಡ-ಕನ್ನಡ ಕಸ್ತೂರೀ ಕೋಶ-ಪಂಡಿತ ಕವಲಿ ಶ್ರೀರಾಮಾಶ್ರಯ ಪ್ರಕಾಶನ, ಧಾರವಾಡ

೬. ಕೃಷಿ ಪದ ಕೋಶ ಸಂಕಲನ ಸಂಯೋಜನೆ, ಕೆ.ವಿ.ನಾರಾಯಣ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಸಾರಾಂಗ.

೭. ಕೈವಲ್ಯದರ್ಪಣ, ಶ್ರೀನಿ, ಬಾಲಲೀಲಾ ಮಹಾಂತ ಶಿವಯೋಗಿ ವಿರಚಿತ-ಸಂಪಾದಕರು-ಷಣ್ಮುಖಯ್ಯ ಅಕ್ಕೂರಮಠ, ಶ್ರೀ ಸರ್ಪಭೂಷಣಮಠ, ಬೆಂಗಳೂರು

೮. ಕೊಟ್ಬಲಗಿ ಗ್ರಾಮ:ಸಾಂಸ್ಕೃತಿಕ ಸಂಕಥನ, ರಾಮಣ್ಣ ಸಿದರಾಮಪ್ಪ ದೊಡ್ನನಿಂಗಪ್ಪಗೋಳ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ಗುಳ್ಳವ್ವ ಆಚರಣೆ-ವಿಶ್ಲೇಷಣೆ, ಡಾ.ವೀರೇಶ ಬಡಿಗೇರ, ಮಯಪ್ರಕಾಶನ, ಕಮಲಾಪುರ

೧೦. ಗ್ರಾಮೋನ್ನತಿ, ಡಾ.ಎಚ್.ಎಂ.ಮರುಳಸಿದ್ದಯ್ಯ

೧೧. ಗೊಳಸಂಗಿ ಗ್ರಾಮ-ಒಂದು ಸಾಂಸ್ಕೃತಿಕ ಅಧ್ಯಯನ, ಡಾ.ಅರ್ಜುನ ಗೊಳಸಂಗಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೨. ಚೇಳಗುರಿಕೆ ಎರ್ರಿತಾತ-ಸಾಂಸ್ಕೃತಿಕ ಸಂಕಥನ, ಡಾ.ಎಚ್.ಮಲ್ಲಿಕಾರ್ಜುನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಜನಯೋಜನೆ-ಪಂಚವಾರ್ಷಿಕ ಅಭಿವೃದ್ಧಿ ಮುನ್ನೋಟ, ಯಮನೂರು ಗ್ರಾಮ ಪಂಚಾಯತ-ನವಲಗುಂದ ತಾಲೂಕು, ಸಂಪಾದಕರು-ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಲಲಿತ ಮಹಲ್ ರಸ್ತೆ, ಮೈಸೂರು ೨.

೧೪. ಜಾನಪದ ಕೈಪಿಡಿ, ಸಂಪಾದಕರು-ಡಾ.ಎಚ್.ಜೆ.ಲಕ್ಕಪ್ಪಗೌಡ, ಕನ್ನಡ ಪುಸ್ತಕ ಪ್ರಾಧಿಕಾರ ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು.

೧೫. ತಿಪ್ಪೇಸ್ವಾಮಿ, ಶರಣರು ಮತ್ತು ಸಂತರು, ಪುಟ.೧೫

೧೬. ಸಾ.ಶ್ರೀ.ರಾಜಪುರೋಹಿತರ, ಸಂಶೋಧನ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೭. ಪುಣ್ಯದಂತೆ ಬಂದವರು-ಡಾ.ಸಂಗಮೇಶ ಹಂಡಿಗಿ

೧೮. ಬಸವಣ್ಣನವರು, ಚಂದ್ರಶೇಖರ ವಸ್ತ್ರದ

೧೯. ಭಾರತದ ಹಳ್ಳಿಗಳು, ಸಂ.ಡಾ.ಹಿರೇಮಲ್ಲೂರ್ ಈಶ್ವರನ್.

೨೦. ಭಾರತೀಯ ಸಂಸ್ಕೃತಿಗೆ ಕರ್ನಾಟಕದ ಕೊಡುಗೆ (ಸಂ) ಡಾ.ಟಿ.ಎಸ್.ರಾಜಗೋಪಾಲ್, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೨೧. ಬೋರಲಿಂಗಯ್ಯ ಹಿ.ಚಿ, ಕರ್ನಾಟಕ ಜಾನಪದ ಕಲೆಗಳ ಕೋಶ, ಕವಿವಿ, ಹಿ, ೧೯೯೭.

೨೨. ಮಂಜುನಾಥ ಬೇವಿನಕಟ್ಟಿ, ಕನ್ನಡ ಜನಪದ ನಂಬಿಕೆಗಳು-ಜ್ಯೋತಿ ಪ್ರಕಾಶನ, ಮೈಸೂರು, ೨೦೦೭.

೨೩. ಯಮನೂರಿನ ರಾಜಾಭಾಗಸವಾರ, ಚಾಂಗದೇವ-ಸಂ.ವ್ಹಿ.ಜಿ.ದೀಕ್ಷಿತ

೨೪. ರಹಮತ್ ತರೀಕೆರೆ, ೨೦೦೬, ಕರ್ನಾಟಕ ನಾಥಪಂಥ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ರಹಮತ್ ತರೀಕೆರೆ, ೨೦೦೧, ಕರ್ನಾಟಕದ ಸೂಫಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ರಹಮತ್ ಕತರೀಕೆರೆ ೨೦೦೦ (ಸಂ), ಧರ್ಮಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೭. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪರಿಷ್ಕೃತ ಮುದ್ರಣ

೨೮. ಶ್ರೀ ಹನುಮಂತ ಸುಣಗಾರ-ಚಾಂಗದೇವರ ಕುರಿತ ಭಕ್ತಿ ಗೀತೆಗಳು

೨೯. ಸಮುದಾಯಗಳ ಕನ್ನಡ ಪರಂಪರೆ, ಡಾ.ಎ.ಮೋಹನ್‌ಕುಮಾರ್ .

೩೦. ಸಿದ್ಧಲಿಂಗಯ್ಯ, ೨೦೦೭, ಜನಸಂಸ್ಕೃತಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩೧. ಸುಧಾರಿತ ಬೇಸಾಯ ಕ್ರಮಗಳು-ಕೃಷಿ ವಿಶ್ವವಿದ್ಯಾಲಯ, ಧಾರವಾಡ ಮತ್ತು ಕರ್ನಾಟಕ ರಾಜ್ಯ ಕೃಷಿ ಇಲಾಖೆ, ಬೆಂಗಳೂರು.

೩೨. ಸೋಬಾನೆ ಬೆಳ್ಳುಳ್ಳಮ್ಮ-ಎಚ್.ಎನ್.ರಾಧ, ದೇ.ಜೆಗೌ, ಸಾಹಿತ್ಯ ಮಾಲೆ, ಕುಸುಮ-೯

೩೩. ಷಣ್ಮುಖಯ್ಯ ಅಕ್ಕೂರಮಠ, ಸೂಫಿ ಮತ್ತು ಶರಣರ ಅನುಭವ ಪಥ, ಪುಟ.೪

೩೪. ಹಿರೇಮಠ ಆರ್.ಸಿ, ೧೯೭೨, ಷಟ್‌ಸ್ಥಲ ಪ್ರಭೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## ಇಂಗ್ಲಿಷ ಕೃತಿ

Hindu- muslim religious synthesis in raja bag sawar

Temple of yamanur- Dr . v. c Hiremath- KUD

ನವಲಗುಂದ ತಾಲೂಕಾ ಕೇಂದ್ರ, ಗಡಿಭಾಗ, ಮುಖ್ಯರಸ್ತೆ, ರೇಲ್ವೆಮಾರ್ಗ ಹಳ್ಳಿಗಳು ಹಾಗೂ ನವಲಗುಂದ ತಾಲೂಕಿನ ನಕ್ಷೆ



# ರೇಖಾ ಚಿತ್ರಗಳು




ಬಂಡಿ




ಗಾಲಿ



ಅಚ್ಚು



ಗದ್ದಿಯಬಳಿ



ಗದ್ದಿ




ನೇಗಿಲು



ಕೊಟ್ಟನೇಗಿಲು



ಕಬ್ಬಿಣ ನೇಗಿಲು


ಈಚು
ಮೇಳಿ
ಮಡಕುಂಟೆ
ತಾಳು


ಎಡೆಕುಂಟೆ


ಮೇಳಿ
ದಿಂಡು
ಮೇಳಿ
ಈಚು
ತಾಳು
ಕುಡ


ಕುಡ
ದಿಂಡು
ಈಚು
ಕುಂಟೆ

ಕೆ. ವಿ ನಾರಾಯಣ, ಅಶೋಕಕುಮಾರ ರಂಜೇರೆ, ಸುಜ್ಞಾನಮೂರ್ತಿ, ಡಿ. ಪಾಂಡುರಂಗಬಾಬು, ಎಸ್.ಎಸ್. ಅಂಗಡಿ, ಸಾಂಬಮೂರ್ತಿಯವರು ಸಂಕಲನ, ಸಂಯೋಜನೆ ಮಾಡಿದ 'ಕೃಷಿಪದಕೋಶ'ದಿಂದ ಆಯ್ದುಕೊಂಡಿರುವ ಚಿತ್ರಗಳು- ಕನ್ನಡ ವಿಶ್ವವಿದ್ಯಾಲಯ ಹಂಪಿ.

# ಯಮನೂರಿನ ದೇವಾಲಯ



ರಾಜಾ ಬಾಗಸವಾರ ಯೋಗಿ ಚಕ್ರವರ್ತಿ ಚಾಂಗದೇವ



ಶ್ರೀ ಚಾಂಗದೇವರ ದೇವಸ್ಥಾನ ಯಮನೂರ



ಶ್ರೀ ಚಾಂಗದೇವರ ಗದ್ದುಗೆ



ದೇವಸ್ಥಾನದಿಂದ ಬೆಣ್ಣೆ ಹಳ್ಳಕ್ಕೆ ತೀರ್ಥ ತರಲು ಹೊರಟಿರುವದು



ಬೆಣ್ಣೆ ಹಳ್ಳದಲ್ಲಿ ಪೂಜೆ ನೆರವೇರಿಸುತ್ತಿರುವದು



ದೇವಸ್ಥಾನದಲ್ಲಿಯ ದೀಪಕ್ಕೆ ಬೆಣ್ಣೆ ಹಳ್ಳದ ತೀರ್ಥ ಹಾಕುತ್ತಿರುವುದು

# ಯಮನೂರಿನ ದೇವಾಲಯಗಳು



ಹನುಮಂತನ ಮತ್ತು ಬಸವಣ್ಣನ ದೇವಾಲಯ



ವಿಠ್ಠಲ ದೇವಾಲಯ



ಮಲ್ಲಿಕಾರ್ಜುನ ದೇವಾಲಯ



ವೀರಭದ್ರೇಶ್ವರ ದೇವಾಲಯ



ಉಡಚಮ್ಮದೇವಿ ದೇವಾಲಯ



ಮಲ್ಲಮ್ಮ ದೇವಾಲಯ




ಶ್ರೀ ಶರಣ ಬಸವೇಶ್ವರ ದೇವಾಲಯ



ಬೆಣ್ಣೆ ಹಳ್ಳದ ನೀರಿನಿಂದ ರೋಗನಿವಾರಣೆ ಮಾಡುವ ದೃಶ್ಯ

# ಛಾಯಾಚಿತ್ರಗಳು



ಕ್ಷತ್ರೋಜಿ ಬರ್ಗೆಯವರ ಗದ್ದುಗೆ



ನರಸೂಬಾಯಿಯವರ ಗದ್ದುಗೆ



ಉಪ್ಪಿನ ಹರಕೆ ತೀರಿಸುವುದು



ಕುಸುರಿ ಕೆತ್ತನೆಯ ಬಾಗಿಲುಗಳ ವಾಣಿಜ್ಯ ಮಳಿಗೆ



ಈಶ್ವರ ದೇವಸ್ಥಾನ ಹಾಗೂ ದೀಪಸ್ತಂಭ



ಉರುಸಿನ ದೃಶ್ಯ



ದೇವಿ ಪುರಾಣ ಮಂಗಲೋತ್ಸವ



ಐರಣಿ ತರುವುದು



ಮಣ್ಣೆತ್ತಿನ ಅಮವಾಸ್ಯೆಯಂದು ಮಣ್ಣಿನ ಬಸವಣ್ಣನ ಮೆರವಣಿಗೆ



ಮಗುವಿಗೆ ನಾಮಕರಣ ಮಾಡುವ ದೃಶ್ಯ

# ಛಾಯಾಚಿತ್ರಗಳು



ಮದುವೆ : ಹಂದರ ಹಾಲಗಂಬ ತರುವುದು



ಮದುವೆ : ಅರಿಶಿಣ ಹಚ್ಚುವುದು



ಮದುವೆ : ಒಳ್ಳುಕಲ್ಲು ಪೂಜೆ  ಮದುವೆ : ಬೀಸುವ ಕಲ್ಲು ಪೂಜೆ



ದಸರಾ ಹಬ್ಬದ ದಿವಸ ಕೂರಿಗಿ ಪೂಜೆ ಮಾಡಿದ ದೃಶ್ಯ



ಮದುವೆ : ಸೋದರ ಮಾವ ಮದುಮಗನನ್ನು ಹೊತ್ತುತರುವುದು



ಮದುವೆ : ವರನು ವಧುವಿಗೆ ತಾಳಿ ಕಟ್ಟುವುದು



ಮದುವೆ : ಅಕ್ಕಿ ಕಾಳು ಹಾಕುವ ದೃಶ್ಯ



ದಸರಾ ಹಬ್ಬದ ದಿವಸ ಕೂರಿಗಿ ಪೂಜೆ ಮಾಡಿದ ದೃಶ್ಯ

